# ಪುರೋಗಾಮಿ ಶಿಕ್ಷಕ






ಲೇಖಕರು :

ಶ್ರೀ. ಗಜೇಂದ್ರಗಡ ಶ್ಯಾಮರಾಯರು,

ಬಿ.ಎ., ಬಿ.ಟಿ.

ತಿದ್ದಿದ ಮತ್ತು ಬೆಳೆಸಿದ ಎರಡನೆಯ ಆವೃತ್ತಿ.

ಪ್ರಕಾಶಕರು :

ದಿ ಸ್ಟೂಡಂಟ್ಸ್ ಓನ್ ಬುಕ್ ಡಿಪೊ,

ಧಾರವಾಡ.

೧೯೫೧

## ಅರ್ಪಣ

ನನಗಾಗಿ ದೇಹ ಸವೆಯಿಸಿದ ಗತಿಸಿದ ನನ್ನ
ತಾಯಿತಂದೆಗಳಿಗೆ ಮತ್ತು ಮಗನಂತೆ
ನನ್ನನ್ನು ಪಾಲಿಸುವ ನನ್ನ ತಾಯಿಯ
ಅಣ್ಣತಮ್ಮಂದಿರಿಗೆ ಅಕ್ಕತಂಗಿ
ಯರಿಗೆ

—" ಶ್ಯಾಮ ".

# ಪರಿವಿಡಿ


| ಪರಿಚ್ಛೇದ | | ಪುಟಗಳು |
|---|---|---|
| | ಅರಿಕೆ | |
| ೧ | ಶಿಕ್ಷಣವೆಂದರೇನು ? | ೧ |
| ೨ | ಶಿಕ್ಷಣಕಲೆ | ೪ |
| ೩ | ಶಿಕ್ಷಣದಲ್ಲಿ ವಯೋವಿಭಾಗಗಳು | ೭ |
| ೪ | ಅಖಂಡಶಿಕ್ಷಣ | ೨೦ |
| ೫ | ಶಿಕ್ಷಣದ ಮೂಲಗಳು | ೨೬ |
| ೬ | ಭಾವಗಳೂ ಭಾವನೆಗಳೂ | ೩೫ |
| ೭ | ಮನೋವಿಭಜನೆ | ೪೩ |
| ೮ | ಬೇರೆ ಕೆಲವು ಮಾನಸಿಕ ಶಕ್ತಿಗಳು | ೪೮ |
| ೯ | ಮಗು ಹೇಗೆ ಕಲಿಯುವದು ? | ೬೩ |
| ೧೦ | ಬುದ್ಧಿಯ ಆಳತೆ | ೭೦ |
| ೧೧ | ವ್ಯಕ್ತಿ ವ್ಯಕ್ತಿಗಳಲ್ಲಿರುವ ವಿವಿಧ ವ್ಯತ್ಯಾಸಗಳು | ೭೫ |
| ೧೨ | ಶಿಕ್ಷಣದಲ್ಲಿ ವ್ಯಕ್ತಿಯೂ ವರ್ಗವೂ | ೮೫ |
| ೧೩ | ಕೆಲವು ಶಿಕ್ಷಣ ಸುಭಾಷಿತಗಳು | ೯೨ |
| ೧೪ | ಶಿಕ್ಷಣ ಮಂದಿರಗಳು | ೧೦೨ |
| ೧೫ | ವಿಷಯ ಯೋಜನೆ | ೧೧೦ |
| ೧೬ | ಶಿಕ್ಷಕನು | ೧೧೭ |
| ೧೭ | ಶಿಕ್ಷಣದ ನಿತ್ಯೋಪಕರಣಗಳು | ೧೨೫ |
| ೧೮ | ಶಿಸ್ತು-ಸಂಘಟನೆ | ೧೫೮ |
| ೧೯ | ವಿದ್ಯಾರ್ಥಿಗಳ ಪಠ್ಯೇತರ ಚಟುವಟಿಕೆಗಳು | ೧೬೯ |
| ೨೦ | ಶಿಕ್ಷಣದಲ್ಲಿ ಹಲವು ಹೊಸಪದ್ಧತಿಗಳು | ೧೮೭ |
| ೨೧ | ಶೀಲ ಸಂವರ್ಧನೆ | ೨೦೫ |
| ೨೨ | ಶಾರೀರಿಕ ಹಾಗೂ ಆರೋಗ್ಯ ಶಿಕ್ಷಣ | ೨೧೧ |
| ೨೩ | ವಿವಿಧ ವಿಷಯಗಳನ್ನು ಕಲಿಸುವ ಪದ್ಧತಿಗಳು | ೨೧೭ |
| ೨೪ | ಮೂಲಶಿಕ್ಷಣ | ೨೪೪ |

## ಪರಿಶಿಷ್ಟಗಳು


| | | |
|---|---|---|
| ೧ | ಸಾಮಾಜಿಕಶಿಕ್ಷಣ | ೩೦೫ |
| ೨ | ಸಹಶಿಕ್ಷಣ | ೩೨೮ |
| ೩ | ಧಾರ್ಮಿಕಶಿಕ್ಷಣ | ೩೩೨ |
| ೪ | ಮೂಲಶಿಕ್ಷಣದಲ್ಲಿ ಸಫಾಯಿ, ಸಾಂಘಿಕ ಜೀವನ, ಪ್ರಾರ್ಥನೆ | ೩೩೭ |
| ೫ | ಶಿಕ್ಷಣದಲ್ಲಿ ತಂದೆತಾಯಿಗಳ ಸಹಕಾರವು | ೩೪೭ |
| ೬ | ಮಕ್ಕಳ ದಿನ | ೩೫೦ |
| ೭ | ಸರ್ವೋದಯಸಮಾಜ | ೩೫೩ |
| ೮ | ಕಥೆ ಹೇಳುವದು | ೩೫೭ |
| ೯ | ಕೈಗಾರಿಕೆಯ ಶಿಕ್ಷಣ | ೩೬೧ |


## ಅಚ್ಚಿನ ದೋಷಗಳು

| ಪುಟ—ಸಾಲು | ತಪ್ಪು—ಸರಿಯಾದುದು |
|---|---|
| ೧೯—೧೦ | 'ಪ್ರಬದ್ಧ'—ಪ್ರಬುದ್ಧ |
| ೩೦—೧೩ | ಹಚ್ಚಾಗಿ—ಹೆಚ್ಚಾಗಿ |
| ೩೨—೬ | ಓಡುಂಬಡದನ್ನು—ಓಡು-ವದನ್ನು |
| ,,—೧೩ | ಅನುಕಣವೇ—ಅನುಕರಣವೇ |
| ೫೭—೧೬ | ಶಕ್ಯವಾಗಿದೆ—ಅಶಕ್ಯವಾಗಿದೆ. |
| ೬೩—೬ | ಕಲಿಯುವವರಿಗೆ—ಕಲಿಯುವವರೆಗೆ |
| ೬೪—೧೮ | ಹೆಳುವದುಂಟು ಹೇಳುವದುಂಟು |
| ೬೭—೩ | ವಹಿಸುವದು-ವಹಿಸದು |
| ೮೦—೨೦ | ಹಟ್ಟುವ—ಹುಟ್ಟುವ |
| ೮೧—೧೬ | ದಿರ್ಘವಾದುದು ದೀರ್ಘವಾದುದು |
| ೮೭ ೧೬ | ಪ್ರಾಮಾಣದಲ್ಲಿ-ಪ್ರಮಾಣದಲ್ಲಿ |
| ೧೦೫—೩ | ಆಘಾತಗಳ ಅಪಘಾತಗಳ |
| ೧೨೧—೨೦ | ಶಿಕ್ಷಣಜೀವನದಲ್ಲಿ—ಜೀವನಶಿಕ್ಷಣದಲ್ಲಿ |
| ೧೨೯—೨೨ | ಯೋಚನೆಯು ತೊಡಗಿರಲಿಲ್ಲ—ಯೋಚನೆಯು ತೊಡಕಿರಲಿಲ್ಲ. |
| ೧೩೮—೯ | ಪಶ್ನೆ—ಪ್ರಶ್ನೆ |
| ೧೮೧—೧೭ | ಶಂಕು ಸಿಂಪುಗಳು—ಶಂಖ ಸಿಂಪುಗಳು |

೧೮೩—೯ ಅಂದರೆ—ಆದೆಂದರೆ
೧೮೪—೨೪ ಪೌಢ—ಪ್ರೌಢ
೧೮೭—೧ ಪರಿಚ್ಛೇದದಲ್ಲಿ- ೩ನೆಯ ಪರಿಚ್ಛೇದದಲ್ಲಿರುವ ವಿವೇಚನೆಯಲ್ಲಿ
೨೦೩—೨೧ ಫಲಪ್ರದ ಫಲಪ್ರದ
೨೧೨ ೨೨ ಪರಿಸ್ಥಿಗೆ ಪರಿಸ್ಥಿತಿಗೆ
೨೩೪ ೨೦ ವಾಖ್ಯೆಯಿಂದ- ವ್ಯಾಖ್ಯೆಯಿಂದ
೨೩೪ -೨೪ ವಿಚಾರಗಳ- ವಿಭಾಗಗಳ
೨೩೫ -೫ ಸಹಾಸಗಳಿಗೂ ಸಾಹಸಗಳಿಗೂ
೨೪೬---೧೯ ವಿದ್ಯಾಪಿಠಗಳಲ್ಲಿ--ವಿದ್ಯಾಪೀಠಗಳಲ್ಲಿ
೨೬೬—೮ ಅಹಿಂಸೆಯನ್ನು--ಹಿಂಸೆಯನ್ನು
೨೭೦—(೧೮-೧೯), ಸಾಧ್ಯವಾಗುವದು ಸಾಧ್ಯವಾಗದು
೨೭೧---೮ ಮನೋವೃತ್ತಿಯೂ ಮನೋವೃತ್ತಿಯೂ
೨೭೪ - ೩ ಪರಿಸ್ಥಿಯು--ಪರಿಸ್ಥಿತಿಯು
೨೮೪—೨೪ ಕೊಟ್ಟಿರವದು ಕೊಟ್ಟಿರುವದು
೨೮೫ ೭ ಹೊಂದಿಕೊಳ್ಳುವದರಿಂದ ಹೊಂದಿಸಿಕೊಳ್ಳುವದರಿಂದ
೨೮೫ ೨೫ ಆವರ—ಅವರು
೨೮೯--೧೨ ಬೆಂಬಲವತ್ತು-ಬೆಂಬಲವು
೩೦೫ ೫ ತೊಡಕಿನಕ್ಕ್ತಿ—ತೊಡಕಿನಕ್ಕ್ತಿಯು
೩೧೨— ೮ ನೋಡಿದ ಮೂಡಿದ ನೋಡಿದ ಮಾಡಿದ
೩೧೪ ೨೨ ಪ್ರೆಮ ಪ್ರೇಮ
೩೨೦ ೯ ಸುಮಯು ಸಮಯು
೩೩೫ ೨೨ ಧರ್ಮಪ್ರಸಂಘದ- ಧರ್ಮ,ಸಂಘದ
೩೪೬—೯ ಬೋಧಸಿ--ಬೋಧಿಸಿ
೩೪೨--೮ ತಂದೆತಾಯಿಗಳಅವಶ್ಯಕತೆಯು--ತಂದೆತಾಯಿಗಳ ಸಹಕಾರದ ಅವಶ್ಯಕತೆಯು

ಮುದ್ರಕರು: ಆರ್. ಜಿ. ಮುಕ್ಕೇರಿ, ಅಕ್ಷರಂಜ ಪ್ರೆಸ್, ಧಾರವಾಡ.
ಪ್ರಕಾಶಕರು: ರಾ. ಗೋ. ಮುಕ್ಕೇರಿ, ದಿ ಸ್ಟೂಡಂಟ್ಸ್ ಬುಕ್ ಡಿಪೋ, ಧಾರವಾಡ.

## ಪರಿಶಿಷ್ಟಗಳು


| | | |
|---|---|---|
| ೧ | ಸಾಮಾಜಿಕಶಿಕ್ಷಣ | ೩೧೫ |
| ೨ | ಸಹಶಿಕ್ಷಣ | ೩೨೮ |
| ೩ | ಧಾರ್ಮಿಕಶಿಕ್ಷಣ | ೩೩೨ |
| ೪ | ಮೂಲಶಿಕ್ಷಣದಲ್ಲಿ ಸಫಾಯಿ, ಸಾಂಘಿಕ ಜೀವನ, ಪ್ರಾರ್ಥನೆ | ೩೩೭ |
| ೫ | ಶಿಕ್ಷಣದಲ್ಲಿ ತಂದೆತಾಯಿಗಳ ಸಹಕಾರವು | ೩೪೭ |
| ೬ | ಮಕ್ಕಳ ದಿನ | ೩೫೦ |
| ೭ | ಸರ್ವೋದಯಸಮಾಜ | ೩೫೩ |
| ೮ | ಕಥೆ ಹೇಳುವದು | ೩೫೭ |
| ೯ | ಕೈಗಾರಿಕೆಯ ಶಿಕ್ಷಣ | ೩೬೧ |


## ಅಚ್ಚಿನ ದೋಷಗಳು

| ಪುಟ—ಸಾಲು | ತಪ್ಪು—ಸರಿಯಾದುದು |
|---|---|
| ೧೯—೧೦ | 'ಪ್ರಬದ್ಧ'—ಪ್ರಬುದ್ಧ |
| ೩೦—೧೩ | ಹಚ್ಚಾಗಿ ಹೆಚ್ಚಾಗಿ |
| ೩೨—೬ | ಓಡುಬಡನ್ನು—ಓಡುವದನ್ನು |
| ,,—೧೩ | ಅನುಕಣವೇ—ಅನುಕರಣವೇ |
| ೫೭—೧೬ | ಶಕ್ಯವಾಗಿದೆ—ಅಶಕ್ಯವಾಗಿದೆ. |
| ೬೩—೬ | ಕಲಿಯುವವರಿಗೆ—ಕಲಿಯುವವರೆಗೆ |
| ೬೪—೧೮ | ಹೆಳುವದುಂಟು ಹೇಳುವದುಂಟು |
| ೬೭—೩ | ವಹಿಸುವದು ವಹಿಸದು |
| ೮೦—೨೦ | ಹಟ್ಟುವ—ಹುಟ್ಟುವ |
| ೮೧—೧೬ | ದಿರ್ಘವಾದುದು ದೀರ್ಘವಾದುದು |
| ೮೭ ೧೬ | ಪ್ರಾಮಾಣದಲ್ಲಿ-ಪ್ರಮಾಣದಲ್ಲಿ |
| ೧೦೫—೩ | ಆಘಾತಗಳ ಅಪಘಾತಗಳ |
| ೧೨೧—೨೦ | ಶಿಕ್ಷಣಜೀವನದಲ್ಲಿ—ಜೀವನಶಿಕ್ಷಣದಲ್ಲಿ |
| ೧೨೯—೨೨ | ಯೋಚನೆಯು ತೊಡಗಿರಲಿಲ್ಲ—ಯೋಚನೆಯ ತೊಡಕಿರಲಿಲ್ಲ. |
| ೧೩೮—೯ | ಪಶ್ನೆ- ಪ್ರಶ್ನೆ |
| ೧೮೧—೧೭ | ಶಂಕು ಸಿಂಪುಗಳು—ಶಂಖ ಸಿಂಪುಗಳು |

# ಅಭಿಪ್ರಾಯಂ.

ಮಾನಸ ಶಾಸ್ತ್ರದಲ್ಲಿ ಉಂಟಾದ ಪ್ರಗತಿಯಿಂದಾಗಿ ಶಿಕ್ಷಣಪ್ರಪಂಚದಲ್ಲಿ ಇತ್ತೀಚೆಗೆ ಅತ್ಯದ್ಭುತವಾದ ಮಾರ್ಪಾಟುಗಳಾಗಿವೆ. ಶಿಕ್ಷಣ ಕೊಡುವ ಶಿಕ್ಷಕನ ಹಾಗು ಅದನ್ನು ಪಡೆಯುವ ಬಾಲಕನ ಬಗೆಗೆ ಇದ್ದ ತಿಳಿವಳಿಕೆಯಲ್ಲಿ ಅನೇಕ ಬದಲಾವಣೆಗಳೂ ಉಂಟಾಗಿವೆ. ಶಿಕ್ಷಕ ಬಾಲಕ ಇವರಲ್ಲಿ ಪರಸ್ಪರರ ಸರಿಯಾದ ತಿಳಿವಳಿಕೆ ಸಹಕಾರಗಳಿಲ್ಲದೆ ಶಿಕ್ಷಣವು ಮುನ್ನಡೆಯಿಡದು, ಪೂರ್ತಿಯನ್ನು ಪಡೆಯದು. ಶಿಕ್ಷಕನು ಬಾಲಕರ ಬುದ್ಧಿ ಭಾವನೆ ಬಲಗಳಿಗೆ ಸಂಬಂಧಪಟ್ಟ ಅಂತರ್‌ಬಾಹ್ಯ ಸಂಗತಿಗಳನ್ನು ನಿರೀಕ್ಷಿಸಿ ಅವರಿಗೆ ತಕ್ಕುದಾದ ಶಿಕ್ಷಣ ಕೊಡಲು ಬಲ್ಲಿದನಾಗಿರಬೇಕು. ಮಗುವಿನ ಸಂಪೂರ್ಣ ವ್ಯಕ್ತಿತ್ವವು ಅರಳುವಂತೆ ನೋಡಿಕೊಳ್ಳುವ ಹೊಣೆಯನ್ನು ಹೊರಬಲ್ಲ ಶಿಕ್ಷಕನು ಶಿಕ್ಷಣದ ಹಲವಾರು ಸಮಸ್ಯೆಗಳನ್ನು ತಿಳಿದುಕೊಂಡವನಾಗಿರಬೇಕು. ಪಾಶ್ಚಾತ್ಯರ ಸಂಶೋಧನೆಯ ಫಲವಾಗಿ ಶಿಕ್ಷಣದ ಶಾಸ್ತ್ರ ಕಲೆಗಳನ್ನು ನಿರೂಪಿಸುವ ಅನೇಕ ಉದ್ಗ್ರಂಥಗಳು ಆಂಗ್ಲ ಭಾಷೆಯಲ್ಲಿ ಪ್ರಕಟವಾಗಿವೆ. ಕನ್ನಡದಲ್ಲಿಯೂ ಕೆಲವು ದಿನಗಳಿಂದೀಚೆಗೆ ಹಲಕೆಲವು ಗ್ರಂಥಗಳು ಹೊರಬೀಳತೊಡಗಿದುದು ಸಂತೋಷದ ಸಂಗತಿ. ವಿಜಾಪುರದ ಶ್ರೀಮಾನ್ ಶಾಮರಾವ ಗಜೇಂದ್ರಗಡ, ಬಿ.ಎ., ಬಿ.ಟಿ. ಅವರು "ಪುರೋಗಾಮಿ ಶಿಕ್ಷಕ" ಎಂಬ ಗ್ರಂಥವನ್ನು ಬರೆದು ಶಿಕ್ಷಣದ ಬಗೆಗೆ ಇಂತಹ ಅನೇಕ ಸಮಸ್ಯೆಗಳನ್ನು ವಿವರಿಸಿದ್ದಾರೆ; ಕನ್ನಡ ಜನಕ್ಕೆ ಮಹದುಪಕಾರ ಮಾಡಿದ್ದಾರೆ.

ಮೂಲ ಶಿಕ್ಷಣದ ಸಿದ್ಧಾಂತ, ಇತಿಹಾಸ, ವೈಶಿಷ್ಟ್ಯ, ಅದರಲ್ಲಿ ಪುರೋಗಾಮಿ ಶಿಕ್ಷಕನು ವಹಿಸಬೇಕಾಗಿದ್ದ ಪಾತ್ರ ಈ ಮೊದಲಾದವುಗಳನ್ನು ಕೂಲಂಕಷವಾಗಿ ವಿವರಿಸಿರುವುದನ್ನು ನೋಡಿದರೆ ಅದರ ಬಗೆಗೆ ಒಳ್ಳೇ ತಿಳಿವಳಿಕೆಯನ್ನು ಉಂಟುಮಾಡಿ ಕೊಡುವಂತಾಗಿದೆ. ಈ ವಿವರಣೆಗೆ ಗ್ರಂಥಕರ್ತರ ಶಿಕ್ಷಣದಲ್ಲಿಯ ಅನುಭವವು ಜೊತೆಗೂ ಕೊಂಡಿರುವುದರಿಂದ ಅದು ಚಿತ್ತಾಕರ್ಷಕವಾಗಿದೆ. ಈ ಪವಿತ್ರಮಕ್ಕಾಗಿ ಗ್ರಂಥಕರ್ತರು ತುಂಬ ಅಭಿನಂದನೀಯರಾಗಿದ್ದಾರೆ.

ನವಕಲ್ಯಾಣಮಠ,
ಧಾರವಾಡ.
೬—೧೧—೧೯೫೧

ಶ್ರೀ ಕುಮಾರಸ್ವಾಮೀಜಿ

# ಅರಿಕೆ

ಮೊದಲನೆಯ ಆವೃತ್ತಿಯಲ್ಲಿ ನಾನು ಅಪೇಕ್ಷಿಸಿದಂತೆ ಕನ್ನಡದಲ್ಲಿ ಶಿಕ್ಷಣಸಾಹಿತ್ಯವೂ ಬೆಳೆಯತೊಡಗಿದೆ. ಅದನ್ನು ಬೆಳೆಸುವ ಕಾರ್ಯದಲ್ಲಿ ಈ ಪುಸ್ತಕವು ನನ್ನದೊಂದು ಅಲ್ಪಪ್ರಯತ್ನವಾಗಿದೆ. ಈ ಬಗೆಯ ಶಾಸ್ತ್ರೀಯ ಗ್ರಂಥಗಳಿಗೆ ಸಾಮಾನ್ಯವಾಗಿ ಒಂದೇ 'ಅವತಾರ'. ವಿಳಂಬವಾದರೂ ಸರಿ, 'ಪುರೋಗಾಮಿ ಶಿಕ್ಷಕ'ವು ಎರಡನೆಯ ಆವೃತ್ತಿಯನ್ನು ತಾಳಿರುವುದು ಅದರ ಉಪಯುಕ್ತತೆಯ ದ್ಯೋತಕವೇ ಸರಿ. ೧೯೪೭ರಿಂದ ೧೯೫೧ ರವರೆಗೆ ಭಾರತದಲ್ಲಿ ಅಪೂರ್ವಕ್ರಾಂತಿಯ ಕಾಲ. ಅದ್ವಿತೀಯಮಹಾಪುರುಷನೊಬ್ಬನ ಪುಣ್ಯಪ್ರಭಾವದಿಂದ ಭಾರತವು ಸ್ವತಂತ್ರರಾಷ್ಟ್ರವಾಯಿತು. ಅದೇ ಮಹಾಪುರುಷನ ಮಾರ್ಗದರ್ಶನದಿಂದ ಇಲ್ಲಿಯ ಶಿಕ್ಷಣಕ್ರಮವೂ ವಿದೇಶೀಯವರ್ಚಸ್ಸಿನಿಂದ ಬಿಡುಗಡೆಹೊಂದಿತು. ಇಂದು ಮೂಲಶಿಕ್ಷಣವು ಸ್ವತಂತ್ರ ಭಾರತದ ರಾಷ್ಟ್ರೀಯಶಿಕ್ಷಣದ ಯೋಜನೆಯಾಗಿ ಮನ್ನಣೆಪಡೆದಿದೆ; ಜನತೆಯ ಶಿಕ್ಷಣಕ್ಕೆ ಹೊಸಹಾದಿಯನ್ನು ಹಾಕಿಕೊಟ್ಟಿದೆ.

ಶಿಕ್ಷಣದಲ್ಲಿ ಎಂಥ ಹೊಸಯೋಜನೆಯೇ ಆಗಲಿ, ಅದು ಹಳೆಯದರ ಮೇಲೆಯೇ ಕಾಲೂರಿ ನಿಲ್ಲಬೇಕು. ಹಿಂದಿನದರಲ್ಲಿ ಒಳ್ಳೆಯದಾಗಿರುವುದನ್ನೆಲ್ಲ ತನಗೆ ಹಿತವಾಗುವಂತೆ ಹೊಂದಿಸಿಕೊಳ್ಳಬೇಕು. ಮಾನಸಶಾಸ್ತ್ರದ ಶಾಶ್ವತ ತತ್ವಗಳ ಸಾಕಷ್ಟು ಪರಿಚಯವೂ ಹೊಸಯೋಜನೆಯ ಶಿಕ್ಷಕನಿಗೆ ಅಗತ್ಯವೆನಿಸದಿರದು. ಅದಕ್ಕಾಗಿ, ಹಿಂದಿನ ಆವೃತ್ತಿಯಲ್ಲಿ ಕಂಡು ಬರುವ ಬಹಳ ವಿಷಯವನ್ನೂ ಈ ಆವೃತ್ತಿಯಲ್ಲಿ ಪೂರ್ಣವಾಗಿ ಬಿಟ್ಟಿಲ್ಲ. ಆದರೆ ಮೂಲಶಿಕ್ಷಣದ ದೃಷ್ಟಿಯಿಂದ ಅವುಗಳನ್ನೆಲ್ಲ ವಿಚಾರಿಸಿ, ತಿದ್ದಿ ಬರೆಯಲಾಗಿದೆ. ನಿರೂಪಣೆಯಲ್ಲಿ ಶಕ್ಯವಿರುವಷ್ಟು ಸರಳತೆಗಾಗಿ ಯತ್ನಿಸಲಾಗಿದೆ. ಮೂಲ(ಜೀವನ) ಶಿಕ್ಷಣದ ಸಮಗ್ರವಾದ, ಸಾಂಗೋಪಾಂಗವಾದ ವಿವೇಚನೆಯನ್ನೂ ಈ ಆವೃತ್ತಿಯಲ್ಲಿ ಮಾಡಿದೆ. ಕೊನೆಗೆ ಕೊಟ್ಟ ಒಂಬತ್ತು ಪರಿಶಿಷ್ಟಗಳಲ್ಲಿ ಉಪಯುಕ್ತವಾದ ಹೊಸವಿಷಯಗಳನ್ನು ಕುರಿತು ಪೂರ್ಣವಾಗಿ ವಿವೇಚಿಸಲಾಗಿದೆ. ಒಟ್ಟಿನಲ್ಲಿ ಪ್ರಾಥಮಿಕಶಿಕ್ಷಕ ಶಿಕ್ಷಕಿಯರ ಟ್ರೇನಿಂಗಕಾಲೇಜುಗಳಿಗಾಗಿ ಗೊತ್ತುಪಡಿಸಿದ ನೂತನ ಅಭ್ಯಾಸ ಪತ್ರಿಕೆಯೊಳಗಿನ ಎಲ್ಲ ವಿಷಯಗಳನ್ನೂ ವಿಷಯವಿಭಾಗಗಳನ್ನೂ ಈ ಆವೃತ್ತಿಯಲ್ಲಿ ಸವಿವರವಾಗಿ ವಿವೇಚಿಸಿದೆ.

ಪ್ರಕಾಶಕರ ಒತ್ತಾಯ ಉತ್ಸಾಹಗಳಿರದಿದ್ದರೆ, ಇಷ್ಟೊಂದು ಹೊಸ ವಿಷಯಗಳನ್ನು ಸೇರಿಸಿ, ಮೊದಲಿನ ವಿಷಯಗಳನ್ನೆಲ್ಲ ತಿದ್ದಿ, ವಿಸ್ತರಿಸಿ, ಹೊಸ ಆವೃತ್ತಿಯನ್ನು ತೆಗೆಯುವ 'ಹವ್ಯಾಸ' ವು ಸ್ವಂತವಾಗಿ ನನ್ನಲ್ಲಿರಲಿಲ್ಲ. ಮರಣದ ದವಡೆಯಿಂದ ಅದೇ ಪಾರಾಗಿ ಬಂದ ಪ್ರಕೃತಿಯ ಅಶಕ್ತತೆ, ಜೀವನದ ಏರಿಳಿತ ಗಳಲ್ಲಿ ನನ್ನ ಪಾಲಿನ ನಿರಾಶೆ, ಶಿಕ್ಷಣಗ್ರಂಥಗಳ ಕೊರತೆ, ವೇಳೆಯ ಅಭಾವ ಎಲ್ಲವೂ ಪ್ರತಿಕೂಲವಾದಾಗ್ಗೂ ಒಂದು ದೃಢನಿರ್ಧಾರದಿಂದ ಇದನ್ನು ಬರೆದು ದಾಗಿದೆ. ಇವೆಲ್ಲ ಕೊರತೆಗಳು ಈ ಪುಸ್ತಕದಲ್ಲಿ ನ್ಯೂನತೆಗಳಾಗಿ ರೂಪಗೊಂಡಿರ ಬಹುದು. ಆಸ್ಥೆಯಿಂದ ಮಾಡಿದ ಪರಿಶ್ರಮದ ಈ ಫಲವನ್ನು ಶಿಕ್ಷಣಾಭಿ ಮಾನಿಗಳು ಸಹಾನುಭೂತಿಯಿಂದ ಸ್ವೀಕರಿಸಬೇಕೆಂದು ಬೇಡಿಕೆ. ಈ ಪುಸ್ತಕ ವನ್ನು ಪ್ರಕಟಿಸಲು ಮೊದಲಿನಿಂದ ಕೊನೆಯವರೆಗೂ ಬಂಧುಪ್ರೇಮದಿಂದ ಪ್ರೋತ್ಸಾಹಿಸಿದವರು ಶ್ರೀಮಾನ್ ಜೆ. ಪಿ. ನಾಯಕರು. ಅವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸುವೆ. 'ಕವಿತಾ ಶಿಕ್ಷಣ' ದ ವಿಷ ಯಕ್ಕೆ 'ಜೀವನ' ದಲ್ಲಿ ಬರೆದ ತಮ್ಮ ಲೇಖನವನ್ನು ಈ ಪುಸ್ತಕದಲ್ಲಿ ಸಂಕ್ಷೇ ಪಿಸಿಕೊಡಲು ಅನುಮತಿಯನ್ನಿತ್ತ ನನ್ನ ಆಪ್ತಸ್ನೇಹಿತರಾದ ಶ್ರೀ ರಂ. ಶ್ರೀ. ಮುಗಳಿಯವರಿಗೆ ನಾನು ತುಂಬಾ ಉಪಕೃತನಾಗಿರುವೆ. ಮೂಲಶಿಕ್ಷಣದ ವಿವೇಚನೆಗಾಗಿ:- ೧) ಶ್ರೀ. ಹಂದ್ರಾಳರವರ 'ಮೂಲಶಿಕ್ಷಣ'; ೨) ಶ್ರೀ. ಆಚಾರ್ಯಭಾಗವತರ 'ಜೀವನ ಶಿಕ್ಷಣ', ೩) ಶ್ರೀ. ಸಾರ್ದಳರವರ 'ವರ್ಧಾ ಶಿಕ್ಷಣ', ೪) 'Wardha Scheme'-by Shri K. L. Srimali ಇವೆಲ್ಲ ಪುಸ್ತಕಗಳ ಸಹಾಯವನ್ನು ನಾನು ತೆಗೆದುಕೊಂಡಿರುವೆ. ಈ ಗ್ರಂಥ ಗಳ ಲೇಖಕರಿಗೆ ಸಾದರದ ಕೃತಜ್ಞತೆಯನ್ನು ಸಲ್ಲಿಸುವೆ. ತಪ್ಪು ತಿದ್ದುವ ಶ್ರಮ ವನ್ನು ಕೂಡ ನನಗೆ ಕೊಡದೆ, ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿದ 'ಸ್ಟೂಡಂಟ್ಸ್ ಓನ್ ಬುಕ್‌ಡಿಪೋ' ದವರ ಅಕ್ಷಯ ಮುದ್ರಣಾಲಯದ ಕಾರ್ಯಕರ್ತರಿಗೂ, ವಿಶೇಷವಾಗಿ ಶ್ರೀ. ಮೇವುಂಡಿ ಮಲ್ಲಾರಿಯವರಿಗೂ ಹಾಗೂ ನವಕಲ್ಯಾಣಮಠದ ಸ್ವಾಮಿ ಶ್ರೀ ಕುಮಾರಸ್ವಾಮೀಜಿಯವರಿಗೂ ನಾನು ಋಣಿಯಾಗಿರುವೆ.

ಸಜ್ಜನರ ವಿಧೇಯ,

ವಿಜಯಪುರ

ಗಜೇಂದ್ರಗಡ ಶಾಮರಾಯ.

# ಪುರೋಗಾಮಿ ಶಿಕ್ಷಕ

## ಪರಿಚ್ಛೇದ ೧

## ಶಿಕ್ಷಣವೆಂದರೇನು ?

### ವ್ಯಕ್ತಿಗೂ ಸಮಾಜಕ್ಕೂ ಶಿಕ್ಷಣದ ಮಹತಿಯು

ಶಿಕ್ಷಣದ ಮಹತಿಯನ್ನು ಅರಿಯದವರು ವಿರಳ. ಇಲ್ಲವೆ ಅದನ್ನು ಅಲ್ಲಗಳೆಯುವವು ಕ್ವಚಿತ್ತಾಗಿ. ಆದರೆ ಶಿಕ್ಷಣ ಹಾಗೂ ಶಿಕ್ಷಕನ ಕಡೆಗೆ ವಿಚಾರಪೂರ್ವಕವಾಗಿ ಲಕ್ಷ್ಯ ಕೊಡುವವರು ಮಾತ್ರ ತೀರ ಕಡಿಮೆ. ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಶಿಕ್ಷಣಕ್ಕೆ ಅತ್ಯಂತ ಪ್ರಧಾನವಾದ ಸ್ಥಾನವಿದೆ. ಪ್ರಗತಿಪರನಾದ ಪಾಶ್ಚಾತ್ಯ ರಾಷ್ಟ್ರಗಳು ಈ ಮಾತಿಗೆ ಪ್ರತ್ಯಕ್ಷ ಉದಾಹರಣೆ ಗಳಾಗಿವೆ. ಕಳೆದ ಅರ್ಧ ಶತಮಾನದ ಪೂರ್ವದಲ್ಲಿ ಅಜ್ಞಾತವಾಗಿದ್ದ ರಾಷ್ಟ್ರಗಳು ಇಂದು ಸಾರ್ವತ್ರಿಕ ಶಿಕ್ಷಣ ಪ್ರಸಾರದಿಂದ ಮುಂದುವರೆದ ರಾಷ್ಟ್ರ ಗಳ ಸಾಲಿಕೆಯಲ್ಲಿ ಮೆರೆಯತೊಡಗಿವೆ. ಜನತೆಯ ಸರ್ವತೋಮುಖವಾದ ಉನ್ನತಿಗೆ ಸರಿಯಾದ ಶಿಕ್ಷಣವೇ ಸಾಧನವೆಂಬುದನ್ನು ಈ ರಾಷ್ಟ್ರಗಳು ಸಿದ್ಧ ಮಾಡಿವೆ.

ಶಿಕ್ಷಣ ವಿಷಯದಲ್ಲಿ ನಮ್ಮ ಪೂರ್ವಜರು ಒಳ್ಳೇ ದಕ್ಷತೆಯನ್ನು ವಹಿ ಸಿದ್ದರು. ಅವರ ದೃಷ್ಟಿ ಐಹಿಕವಾಗಿರಲಿಲ್ಲ; ಅಂತೆಯೇ ಅವರ ಶಿಕ್ಷಣದ ಅಂತಿಮ ಗುರಿಯು ಪಾರಲೌಕಿಕವಾಗಿತ್ತು. ನಿಸರ್ಗದ ನಿಕಟವಾದ ಸಹ ವಾಸದಲ್ಲಿ, ಆಶ್ರಮದ ಪವಿತ್ರವಾದ ಪರಿಸರಣದಲ್ಲಿ, ಋಷಿ ಸದೃಶರಾದ ಗುರು ಗಳ ಸಹವಾಸದಲ್ಲಿ ಅಂದಿನ ಭಾರತೀಯ ಬಟುಗಳು ತಮ್ಮ ವಿದ್ಯೆಯನ್ನು ಸಾಗಿಸುತ್ತಿದ್ದರು. ‘ ವಿಮುಕ್ತಿ’ ಯೇ ಅವರ ಗುರಿಯಾಗಿತ್ತು.

ಇಂದು ಜೀವನವು ಜಗತ್ತಿನಲ್ಲಿಯೇ ಬದಲಿಸಿದೆ. ಸ್ವತಂತ್ರವಾದ ಭಾರತವು ಈ ಜೀವನ ಪ್ರವಾಹದಿಂದ ಸಿಡಿದು ದೂರ ನಿಂತುಕೊಳ್ಳಲಾರದು. ಬದಲಿಸುವ ಜೀವನದೊಡನೆ ಶಿಕ್ಷಣವು ಸಮವಾಗಿ ಹಜ್ಜೆ ಇಡಬೇಕಾಗುವದು. ಜೀವನಕ್ಕೂ ಶಿಕ್ಷಣಕ್ಕೂ ಅಷ್ಟೊಂದು ನಿಕಟವಾದ ಸಾಮೀಪ್ಯವಿದೆ, ಸಂಬಂಧವಿದೆ. ಓಡುವ ಜೀವನದೊಡನೆ ಕೂಡಿಕೊಳ್ಳದ ಶಿಕ್ಷಣವು ಹಿಂದುಳಿಯುವದು. ಇಂಥ ಶಿಕ್ಷಣವು ವ್ಯಕ್ತಿಯ ಪ್ರಗತಿಯನ್ನು ಸಾಧಿಸದು; ರಾಷ್ಟ್ರದ ಏಳ್ಗೆಗೂ ಸಹಾಯಕವಾಗದು.

ಶಿಕ್ಷಣ ಪ್ರಪಂಚದಲ್ಲಿ ಇಂದಿನ ಯುಗವು ಕ್ರಾಂತಿಯ ಕಾಲವಾಗಿದೆ. ಶಿಕ್ಷಣದ ಮೂಲ ಸ್ವರೂಪವನ್ನೇ ವಿಚಾರಿಸಬಹುದು. ಚಿಕ್ಕಮಕ್ಕಳ ತಲೆಯಲ್ಲಿ ಹಿರಿಯರು ತಮಗೆ ಬೇಕಾದ ವಿಷಯಗಳನ್ನು ಹೇಗಾದರೂ ತುಂಬುವದೇ ಹಿಂದಿನ ಶಿಕ್ಷಣದ ರೀತಿಯಾಗಿತ್ತು. **ಆ ಮಗುವಿಗೆ 'ಸ್ವತಂತ್ರವಾದ ಜೀವನವಿದೆ, ಸಹಜ ಶಕ್ತಿಗಳಿವೆ, ಸ್ವಾಭಾವಿಕವಾದ ಒಲವುಗಳಿವೆ' ಎಂಬ ಸಂಗತಿಗಳ ವಿಚಾರವು ಈ ಪರಂಪರೆಯ ಶಿಕ್ಷಣದಲ್ಲಿ ಕಂಡು ಬರುವದಿಲ್ಲ. ಆದರೆ ಆಧುನಿಕ ಶಿಕ್ಷಣದಲ್ಲಿ ಮಗುವಿನ ಸ್ವಾತಂತ್ರ್ಯವೇ ಶಿಕ್ಷಣದ ತಳಹದಿಯಾಗಿದೆ.** ಆತನ ಸ್ವಾಭಾವಿಕ ಒಲವು ಶಕ್ತಿಗಳೇ ಶಿಕ್ಷಣದ ಮೂಲದ್ರವ್ಯಗಳಾಗಿವೆ. ಇವುಗಳನ್ನು ಕಂಡುಹಿಡಿದು ಸರಿಯಾಗಿ ರೂಪಿಸುವದೇ ಇಂದಿನ ಶಿಕ್ಷಣದ ಕಾರ್ಯವಾಗಿದೆ.

ಉದರನಿರ್ವಾಹದ ಸಾಧನವೆಂದು ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಬಯಸುವ ತಾಯಿ ತಂದೆಗಳೇ ಹೆಚ್ಚು. ಆದರೆ ಶಿಕ್ಷಣದ ಮೂಲೋದ್ದೇಶವು ಇಷ್ಟು ಸಂಕುಚಿತವಾಗಲಾರದು. ಮನುಷ್ಯನಿಗೆ ದೇಹವಿರುವಂತೆ ಆತ್ಮವೂ ಕೂಡ ಇರುವದು. ಶಿಕ್ಷಣವು ದೇಹರಕ್ಷಣೆ ಹಾಗೂ ಆತ್ಮವಿಕಾಸಗಳೆರಡನ್ನು ಕೂಡಿಯೇ ಸಾಧಿಸಬೇಕು. ಈ ಆತ್ಮವಿಕಾಸವೆಂದರೆ ಒಂದು ಬಗೆಯ ಆತ್ಮಸಂಸ್ಕಾರವೆಂತಲೇ ಹೇಳಬಹುದು. ನೈತಿಕ ಹಾಗೂ ಸಾಮಾಜಿಕ ಗುಣಗಳನ್ನು ಬೆಳೆಯುವ ಮಗುವಿನಲ್ಲಿ ತಂದುಕೊಡುವದು ಆತ್ಮಸಂಸ್ಕಾರದ ಕಾರ್ಯ. ವ್ಯಕ್ತಿಯು ತನ್ನಷ್ಟಕ್ಕೆ ತಾನು ಸುಖಿಯಾಗಿ ಬಾಳುವದಲ್ಲದೆ ಎಲ್ಲ

ರೊಡನೆ ಕೂಡಿ ಬಾಳುವ ಜೀವನಕಲೆಯನ್ನು ಶಿಕ್ಷಣದಿಂದ ಪಡೆಯಬೇಕು. ಸತ್ಯ–ಪ್ರೇಮ–ಸಹಕಾರಗಳ ಜೋಡಣೆಯಿಂದ ವ್ಯಕ್ತಿಯು ಸಮಾಜದೊಡನೆ ತನ್ನ ಸಂಬಂಧವನ್ನು ಕಟ್ಟಿಕೊಳ್ಳಬೇಕು. ವ್ಯಕ್ತಿ–ಸಮಾಜಗಳಲ್ಲಿ ಈ ಬಗೆಯ ಸಂಬಂಧವು ನೆಲೆಗೊಂಡರೆ ಸಮಾಜದ ಸುಸ್ಥಿತಿಯು ತನ್ನಿಂದ ತಾನೆ ಆಗುವದು.

ಉತ್ತಮ ನಾಗರಿಕರನ್ನು ನಿರ್ಮಾಣಗೊಳಿಸುವದು ಶಿಕ್ಷಣದ ಕಾರ್ಯವೆಂತಲೂ ಹೇಳುವರು. ನಾಗರಿಕನಿಗೆ ಹಕ್ಕು ಬಾಧ್ಯತೆಗಳು ಇರುವಂತೆ ವಿವಿಧವಾದ ಹೊಣೆಗಾರಿಕೆಗಳೂ ಇರುವವು. ಇವುಗಳನ್ನು ನಿರ್ವಹಿಸಲು ಬೇಕಾಗುವ ಶಕ್ತಿಯನ್ನೂ ಗುಣಗಳನ್ನೂ ಶಿಕ್ಷಣವು ತಂದುಕೊಡಬೇಕಾಗುವದು. ನಿರೋಗಿಯಾದ ಶರೀರದೊಡನೆ ಸರಿಯಾದ ತಿಳುವಳಿಕೆಯೂ ನಾಗರಿಕನಿಗೆ ಅವಶ್ಯವೆನಿಸುವದು. ಇದಲ್ಲದೆ ಸಮಾಜದೊಡನೆ ಕೂಡಿ ಕೆಲಸಮಾಡಲು ಸಹಾಯಮಾಡುವ ಗುಣಗಳನ್ನು ಶಿಕ್ಷಣವು ಆತನಿಗೆ ಒದಗಿಸಬೇಕು. ಮನಸ್ಸಿನ ವಿಶಾಲತೆ, ಹೃದಯದ ಔದಾರ್ಯ, ಪ್ರಾಮಾಣಿಕತನ ಮೊದಲಾದ ಸದ್ಗುಣಗಳನ್ನು ಪ್ರತ್ಯಕ್ಷವಾಗಿ ಇಲ್ಲವೇ ಅಪ್ರತ್ಯಕ್ಷವಾಗಿ ಮುಂದಿನ ನಾಗರಿಕರಾಗುವ ಇಂದಿನ ಚಿಕ್ಕಮಕ್ಕಳಲ್ಲಿ ಸನ್ನಿವೇಶಗಳ ಸಹಾಯದಿಂದ ಶಿಕ್ಷಣವು ತಂದುಕೊಡಬೇಕು. ವ್ಯಕ್ತಿಯ ಕೀಳು ಭಾವನೆಗಳನ್ನು ಬಿಗಿಹಿಡಿದು ಉದಾತ್ತ ಗುಣಗಳನ್ನು ಬೆಳೆಯುವಂತೆ ಮಾಡುವದೇ ಶೀಲಸಂವರ್ಧನೆ. ಇದುವೇ ಶಿಕ್ಷಣದ ಮೂಲೋದ್ದೇಶವೆಂದು ಬಹುಜನ ಶಿಕ್ಷಣತಜ್ಞರು ಒಪ್ಪುವದುಂಟು.

'ಪೂರ್ಣವಾದ ಜೀವನವು'— ಅಥವಾ ಜೀವನದ ಪರಿಪೂರ್ಣತೆಯು ಶಿಕ್ಷಣದ ಕಾರ್ಯವೆಂತಲೂ ಬೇರೆ ಕೆಲವರು ಹೇಳುವರು. ಈ ಜೀವನದ 'ಪರಿಪೂರ್ಣತೆಯು' 'ಎಂದು' 'ಯಾವುದರಲ್ಲಿ'? ಕೊನೆಗೊಳ್ಳುವದೆಂಬುದನ್ನು ಕಂಡುಹಿಡಿಯುವದು ಕಠಿಣವಾದುದು. ಇಷ್ಟು ವ್ಯಾಪಕವಾದ–ತಾತ್ವಿಕವಾದ ಉದ್ದೇಶಕ್ಕಿಂತಲೂ, ತಿಳಿಯಲೂ ಆಚರಿಸಲೂ ಸುಲಭವಾದ ಉದ್ದೇಶವನ್ನಿಟ್ಟುಕೊಳ್ಳುವದು ಹೆಚ್ಚು ಸಯುಕ್ತಿಕವಾದುದು. ಒಟ್ಟಿನಲ್ಲಿ **ಶರೀರ ಸಂವರ್ಧನೆ, ಬುದ್ಧಿವಿಕಾಸ, ಆತ್ಮೋನ್ನತಿ— ಈ ಪವಿತ್ರವಾದ ತ್ರಿವೇಣಿಯ ಸಂಗಮದಲ್ಲಿ ಮೈದೊಳೆದ ಮಗು ಸಮಾಜದ ಸ್ವಾಸ್ಥ್ಯ–**

**ಸುಸ್ಥಿತಿಗಳನ್ನು ಸಂರಕ್ಷಿಸಲು ಸಿದ್ಧನಾಗುವಂತೆ ಶಿಕ್ಷಣವು ತನ್ನ ಉದ್ದೇಶವನ್ನೂ ವಿಧಾನಗಳನ್ನೂ ಯೋಜಿಸಬೇಕಾಗುವದು.**

## ಪರಿಚ್ಛೇದ ೨

## ಶಿಕ್ಷಣಕಲೆ

### ಶಿಕ್ಷಣವು ಶಾಸ್ತ್ರವೇ–ಕಲೆಯೋ?

ಇದೊಂದು ಹಳೆಯ ಪ್ರಶ್ನೆ, ಹಿಂದಿನ ವಿಚಾರ. ಸಾಮಾನ್ಯವಾಗಿ ಶಿಕ್ಷಣದ ಕಾರ್ಯವು ಎರಡು ಮುಖವಾಗಿದೆ—ಕಲಿಯುವದು ಹಾಗೂ ಕಲಿಸುವದು. ನಿಜವಾಗಿ ನೋಡಿದರೆ ಶಿಕ್ಷಣವು ಆತ್ಮಗತವಾದ ಒಂದು ಬಗೆಯ ಸಂಸ್ಕಾರ ವಾಗಿರುವದು. ಹುಟ್ಟಿದಂದಿನಿಂದ ಸಾಯುವವರೆಗೆ ಈ ಸಂಸ್ಕಾರವು ವಿವಿಧ ವಾಗಿ ಸಾಗುವದು. ತಾಯಿಯ ಗರ್ಭದಿಂದ ಮೊದಲು ಭೂಮಿಯ ಮೇಲೆ ಒರಗಿದ ಮಗುವು ಮೂರು ತಿಂಗಳ ಮಂದಪ್ರಕಾಶದ ಕೋಣೆಯಲ್ಲಿ ಕೂಡ ಒಂದು ಬಗೆಯ ಸಂಸ್ಕಾರವನ್ನು ಹೊಂದುತ್ತಲೇ ಇರುವದು. ಇಷ್ಟು ಮಾತ್ರ ವಲ್ಲದೆ ಗರ್ಭವಾಸದಲ್ಲಿ ಕೂಡ ತನ್ನ ತಾಯಿಯ ಆಹಾರ, ಆಚಾರ, ವಿಚಾರ ಗಳಿಂದಲೂ ಅದರ ವ್ಯಕ್ತಿತ್ವವು ಒಳಗಿನಿಂದಲೇ ಸೂಕ್ಷ್ಮವಾಗಿ ರೂಪುಗೊಳ್ಳು ತ್ತಿರುವದು. ಕ್ರಮೇಣ ತನ್ನ ಎಲ್ಲ ಇಂದ್ರಿಯಗಳನ್ನು ಅಳವಡಿಸಿಕೊಂಡು, ವಿವಿಧವಾದ ಅನುಭವಗಳನ್ನು ಪಡೆದು, ಬೆಳೆಯುತ್ತಿರುವ **ಮಗುವು 'ವಿಶ್ವದ ಬೌದ್ಧಿಕ ದಿಗ್ವಿಜಯ'ಕ್ಕಾಗಿ ಹೋರಾಡುವದು. ಈ ಬಗೆಯ ಹೋರಾಟವೇ ಮಗುವಿನ ಚೈತನ್ಯದ ಕಾರ್ಯ.** ಸುತ್ತು ಮುತ್ತಲಿನ ನಿಸರ್ಗದ ಹಾಗೂ ಸಾಮಾಜಿಕ ವಿವಿಧ ಸನ್ನಿವೇಶಗಳೊಡನೆ ಮಗುವು ತನ್ನ ಎಲ್ಲ ಇಂದ್ರಿಯಗಳಿಂದ ಅನೇಕ ಬಗೆಯ ಸಂಬಂಧಗಳನ್ನು ತಂದುಕೊಳ್ಳುವದು. ಈ ಸಂಬಂಧಗಳಿಂದಲೇ ಅದರ ಅನುಭವವು ಹೆಚ್ಚುತ್ತ ಹೋಗುವದು. ಈ

**ಅನುಭವವೇ ಮಗುವಿನ ಜ್ಞಾನದ 'ಮೂಲಧನ'ವು.** ಈ ಅನುಭವವು ಸಹೇತುಕವಾಗಿ ವ್ಯವಸ್ಥಿತವಾದರೆ, ನಿಯಂತ್ರಿತವಾದರೆ, ಅದಕ್ಕೆ ಶಿಕ್ಷಣವೆಂಬ ಹೆಸರು. ಈ ಬಗೆಯ ಶಿಕ್ಷಣದಿಂದ ಮಗುವಿನ ಅಂತರ್ಬಾಹ್ಯ ಸ್ವರೂಪದಲ್ಲಿ ಅನೇಕಬಗೆಯ ವ್ಯತ್ಯಾಸಗಳಾಗುವವು. ಈ ವ್ಯತ್ಯಾಸಗಳನ್ನು ತನ್ನ ವಿಶಿಷ್ಟವಾದ ವ್ಯಕ್ತಿತ್ವಕ್ಕೆ ಹೊಂದಿಕೊಳ್ಳುವಂತೆ ಅವುಗಳನ್ನೂ ತನ್ನನ್ನೂ ಕೂಡಿಯೆ ಸರಿಪಡಿಸಿಕೊಳ್ಳುವದು ಶಿಕ್ಷಣದಿಂದ ಆಗತಕ್ಕ ಸಂಸ್ಕಾರವೆಂದು ಹೇಳಬಹುದು. ಶಿಕ್ಷಣವು ಆತ್ಮಸಂಸ್ಕಾರದ ಒಂದು ಸಾಧನವೆಂದು ಹೇಳುವದು ಇದೇ ಅರ್ಥದಲ್ಲಿಯೇ. ಮೊಗ್ಗು ಅರಳಿ, ಹೂವಾಗಿ, ಕಾಯಾಗಿ ಹಣ್ಣಾಗಲು ನಿಸರ್ಗವು ಆವಶ್ಯಕವಾದ ಅನುಕೂಲತೆಗಳನ್ನು ಒದಗಿಸಿಕೊಡಬೇಕಾಗುವದು. ಇದೇ ಮೇರೆಗೆ **ವ್ಯಕ್ತಿಯ ಆತ್ಮವು ಅರಳಿ ಅದರ ಶಕ್ತಿಗಳೆಲ್ಲವೂ ಬೆಳೆಯುವಂತೆ ಶಿಕ್ಷಣವು ಸಕಲ ಸೌಕರ್ಯಗಳನ್ನೂ ಒದಗಿಸಬೇಕು.** ಎಳೆಯ ಮಗುವಿನಲ್ಲಿರುವ ಚೈತನ್ಯವು ಬೀಜರೂಪವಾದುದು. ಅದು ಅಂಕುರಿಸಿ, ಬೆಳೆದು ಮರವಾಗಿ ಫಲಿಸುವಂತೆ ಮಾಡುವದು ಶಿಕ್ಷಣದ ಕಾರ್ಯವಾಗಿದೆ.

ಶಿಕ್ಷಣವು ಒಂದು ಕಲೆಯೆಂದು ಸಾಮಾನ್ಯ ಕಲ್ಪನೆ. ಆದರೆ ಅದು ಕಲೆಯಾಗಿರುವಂತೆ ಶಾಸ್ತ್ರವೂ ಕೂಡ ಆಗಿರುವದು. ಪ್ರತಿಯೊಂದು ಕಲೆಗೂ ಆಧಾರಭೂತವಾದ ಶಾಸ್ತ್ರವಿರುವದು. ಆ ಕಲೆಯ ಉಪಾಸನೆಯನ್ನು ಕೈಕೊಂಡ ಅನೇಕ ವ್ಯಕ್ತಿಗಳ ಸುಸಂಘಟಿತವಾದ ಅನುಭವವೇ ಅದಕ್ಕೆ ಆಧಾರವಂತಿರುವ ಶಾಸ್ತ್ರವಾಗುವದು. **ಶಾಸ್ತ್ರವು ಕಲೆಯ ತಿರುಳು; ಅದರ ಒಳಮೈಯಾಗಿರುವದು. ಪ್ರತ್ಯಕ್ಷವಾದ ಕಾರ್ಯವು ಅದರ ಹೊರಮೈಯಾಗಿರುವದು.**—ಇದಕ್ಕೆ 'ಕಲೆ' ಯೆಂಬ ಹೆಸರು. ಶಾಸ್ತ್ರವೂ ಕಲೆಯೂ ಪರಸ್ಪರಾವಲಂಬಿಗಳು. ಶಾಸ್ತ್ರವು ಕಲೆಯ ಸತ್ವವನ್ನು ಹೆಚ್ಚಿಸುವದು. ಕಲೆಯು ಶಾಸ್ತ್ರವನ್ನು ವ್ಯಾವಹಾರಿಕವಾಗಿ ಮರ್ಯಾದಿತಗೊಳಿಸುವದು. ಶಿಕ್ಷಣ–'ಶಾಸ್ತ್ರ' ದ ಅಭ್ಯಾಸವು ಅನುಭವವಿಲ್ಲದ ತರುಣ ಶಿಕ್ಷಕರಿಗೆ ಅವರ ತಪ್ಪುತಡೆಗಳನ್ನು ತೋರಿಸಿಕೊಡುವದು.

ಶಿಕ್ಷಣವು ಲಲಿತಕಲೆಯನ್ನು ಹೋಲುವದು. ಲಲಿತಕಲೆಯು ಕೃತಿ ಪ್ರಧಾನವಾದುದು ಹಾಗೂ ಅನುಭವ ಅಭ್ಯಾಸಗಳಿಂದ ಬೆಳೆಯುವದು, ಬದಲಿಸುವದು. ಶಿಕ್ಷಣಕಲೆಯೂ ಹೀಗೆ ಬೆಳೆಯುತ್ತಲಿದೆ, ಬದಲಾಗುತ್ತಲಿದೆ. ಲಲಿತಕಲೆಯಲ್ಲಿ ಕಲಾವಿದನು ತನ್ನ ಕಲೆಯನ್ನು ಉಪಲಬ್ಧವಾದ ಸಾಧನ ಸಾಮುಗ್ರಿಗಳಿಗೆ ಸರಿಯಾಗುವಂತೆ ಹೆಚ್ಚು ಕಡಿಮೆ ಮಾಡಬೇಕಾಗುವದು. ಶಿಲ್ಪಿಯು ಎಲ್ಲ ಬಗೆಯ ಕಲ್ಲುಗಳಲ್ಲಿಯೂ ಒಂದೇ ವಿಧವಾದ ಮೂರ್ತಿಯನ್ನು ನಿರ್ಮಿಸಲಾರನು. ಒಂದೇ ಬಗೆಯ ಸಾಧನಗಳನ್ನೂ ಉಪಯೋಗಿಸಲಾರನು. ಕಲಾವಿದನಾದ ಶಿಕ್ಷಕನೂ ಕೂಡ ಚಿಕ್ಕಮಕ್ಕಳ ಸ್ವರೂಪವನ್ನು—ವ್ಯಕ್ತಿತ್ವವನ್ನು ಗುರುತಿಸಬೇಕಾಗುವದು. ಅವರ ಒಲವು—ಶಕ್ತಿಗಳಿಗೆ ಅನುರೂಪವಾಗುವಂತೆ ಶಿಕ್ಷಣದ ವಿಷಯವನ್ನೂ ವಿಧಾನವನ್ನೂ ನಿಯೋಜಿಸಬೇಕಾಗುವದು. ಈ ಸಂದರ್ಭದಲ್ಲಿ ಶಿಕ್ಷಕನು ತಕ್ಕಮಟ್ಟಿಗೆ ಸ್ವತಂತ್ರನಾಗಿರಬೇಕು. ಇಂಥ ಹಾದಿಯನ್ನೇ ಹಿಡಿದು ಹೋಗೆಂದು ನಿರ್ಬಂಧಿಸುವದು ಅಸಮಂಜಸವಾಗುವದು.

ಆದರೆ ಸಾಮಾನ್ಯ ಕಲಾವಿದನಿಗೂ ಶಿಕ್ಷಕನಿಗೂ ಒಂದು ಮಹತ್ವದ ವ್ಯತ್ಯಾಸವುಂಟು. ಕಲಾವಿದನ ಸಾಧನಸಾಮುಗ್ರಿಯೆಲ್ಲವೂ ನಿರ್ಜೀವವಾದುದು. ಕಲ್ಲುಕಟ್ಟಿಗೆಗಳೊಡನೆ ಆತನ ಕಾರ್ಯ. ಮಾಡಿದಂತೆ ಆಗುವದು ಆ ಕಲ್ಲುಕಟ್ಟಿಗೆಗಳ ಸ್ವಭಾವ. ಕಲಾವಿದನ ಕಾರ್ಯದಲ್ಲಿ ಆತನೇ ಪ್ರಧಾನ. ಶಿಕ್ಷಕನ ಮಾತು ಹಾಗಲ್ಲ. **ಶಿಕ್ಷಕನು ಸಚೇತನವಾದ ಮಕ್ಕಳೊಡನೆ ಕೆಲಸ ಮಾಡುವವನು.** ಚಿಕ್ಕಮಕ್ಕಳು 'ಮಾಡಿದಂತೆ ಆಗುವ' ನಿರ್ಜೀವ ವಸ್ತುಗಳಲ್ಲ. ಪ್ರತಿಯೊಂದು ಮಗುವಿಗೂ ಒಂದು ವಿಶಿಷ್ಟವಾದ ವ್ಯಕ್ತಿತ್ವವಿರುವದು. ಭಿನ್ನವಾದ ಶಕ್ತಿಗಳಿರುವವು; ಪ್ರತ್ಯೇಕವಾದ ಒಲವುಗಳಿರುವವು. ಶಿಕ್ಷಕನು ಇವೆಲ್ಲವುಗಳನ್ನೂ ಅನುಲಕ್ಷಿಸಬೇಕಾಗುವದು. ಈ ವಿವಿಧ ಜೀವನಗಳ ವಿಶಿಷ್ಟವಾದ ವ್ಯಕ್ತಿತ್ವಕ್ಕೆ ಬಾಧೆ ಬರದಂತೆ ಅವುಗಳಿಗೆ ಅಪೇಕ್ಷಿತವಾದ ಒಂದು ರೂಪುಕೊಡುವದೇ ಶಿಕ್ಷಕನ ಕೌಶಲ್ಯವಾಗಿದೆ. ಹೀಗಾಗಿ **ಶಿಕ್ಷಣಕಲೆಯಲ್ಲಿ ಶಿಕ್ಷಕನಿಗೆ ಪ್ರಾಧಾನ್ಯತೆಯಿಲ್ಲ. ಶಿಶು ಪ್ರಧಾನವಾದುದು.** ಮೇಲಾಗಿ ಕಲಾವಿದನ ಕೃತಿಯಲ್ಲಿ ಕಲ್ಲುಕಟ್ಟಿಗೆಗಳ ಸಹಕಾರವಿರುವದಿಲ್ಲ. ಶಿಕ್ಷಕನ ಕಾರ್ಯದಲ್ಲಿ

ಯಾವ ವಿಷಯವನ್ನಾಗಲೀ, ಯಾರಾದರೂ ಹೇಗಾದರೂ ತುಂಬಬಹುದು. **ಆಧುನಿಕ ಶಿಕ್ಷಣದಲ್ಲಿ ಮಗುವು ಶಿಕ್ಷಣದ ಪ್ರಾಣವಿದ್ದಂತೆ.** ನಿರ್ಜೀವ ವಾದ ಪಾತ್ರೆಯಂತೆ ತುಂಬುವದನ್ನು ತುಂಬಿದಂತೆ ತೆಗೆದುಕೊಳ್ಳಲಾರದು. ಸಚೇತನವಾದ ಮಗುವು ತನಗೆ ಬೇಕಾದುದನ್ನು ಮಾತ್ರ ತೆಗೆದುಕೊಳ್ಳುವದು. ಮಗುವಿನ ಒಲವು ಶಕ್ತಿಗಳನ್ನೇ ಆತನ ಶಿಕ್ಷಣವು ಅನುಸರಿಸಬೇಕಾಗುವದು.

ಹಿಂದಿನ ಕಲ್ಪನೆಯಲ್ಲಿ ಮಗುವು ಒಂದು 'ಕಿಡಿಗೇಡಿಯಾದ' ಪ್ರಾಣಿ ಯಂತೆ. ಬೆತ್ತದ ಭೀತಿಯಿಂದ ಮಗುವನ್ನು ಒಗ್ಗಿಸಿ ಶಿಕ್ಷಕನು ತನಗೆ ತಿಳಿ ದದ್ದನ್ನು ಆತನ ತಲೆಯಲ್ಲಿ ತುಂಬುವದೇ ಶಿಕ್ಷಕನ ಸಾಹಸವಾಗಿತ್ತು. ಮಗು ವಿಗೆ ಮಿದುಳೊಂದಿರುವಂತೆ ಮನಸ್ಸೊಂದಿದೆ. ಆವೇಶ-ಆಕಾಂಕ್ಷೆಗಳಿವೆ. ಉದ್ವೇಗ-ಉಲ್ಲಾಸಗಳಿವೆ. ಈ ಮಾತಿನ ಅರಿಕೆಯೇ ಅವರಿಗಿರಲಿಲ್ಲ. ಚಿಕ್ಕ ಮಗುವು ಬೆಳೆದ ಮನುಷ್ಯನ ಕಿರಿದಾದ ಮೂರ್ತಿಯೆಂದು ಭಾವಿಸಿ ತಮ್ಮ ಪ್ರಬುದ್ಧ ಜೀವನದ ರೀತಿ ನೀತಿಗಳನ್ನೇ ಆತನಿಗೆ ಒತ್ತಾಯದಿಂದ ರೂಢವಾಗಿ ಮಾಡಲು ಅವರು ಯತ್ನಿಸುತ್ತಿದ್ದರು. ಮಗುವಿನ ಇಂದಿನ ಜೀವಿತದ ವಿಚಾರ ವನ್ನೇ ಅವರು ಮಾಡುತ್ತಿರಲಿಲ್ಲ. ಇಂದಿನ ಆತನ ಬೇಡಿಕೆಗಳನ್ನು ಪೂರೈಸುವ ಕಲ್ಪನೆಯೂ ಅವರಿಗಿರಲಿಲ್ಲ.

ಚಿಕ್ಕಮಕ್ಕಳ ವಯೋನುಗುಣವಾದ ಇಂದಿನ ಜೀವನಕ್ಕೆ, ಅದಕ್ಕೆ ಸರಾಗವಾಗಿ ಬೆಳೆಯುತ್ತಿರುವ ಅವರ ಶಕ್ತಿ ಒಲವುಗಳಿಗೆ, ಒದಲಿಸುತ್ತಿರುವ ಅವರ ಬೇಡಿಕೆಗಳಿಗೆ ಇಂದಿನ ಶಿಕ್ಷಣವು ಅತ್ಯಂತ ಮಹತ್ವವನ್ನು ಕೊಟ್ಟಿದೆ. ಮುಂದಿನ ನವನಾಗರಿಕರಾಗುವ ಇಂದಿನ ಎಳೆಯ ಮಕ್ಕಳು ಯಾವ ವಿಷಯ ಗಳನ್ನು ಕಲಿತುಕೊಳ್ಳಬೇಕು? ಎಂದು ಕಲಿಯಬೇಕು? ಹೇಗೆ ಕಲಿಯಬೇಕು? ಇವೇ ಮೊದಲಾದ ಶಿಕ್ಷಣದ ವಿವಿಧ ಅಂಗೋಪಾಂಗಗಳನ್ನು ಮಕ್ಕಳ ವಯೋನುಗುಣವಾದ ಒಲವು ಶಕ್ತಿಗಳ ಮೇರೆಯಿಂದಲೇ ಆಧುನಿಕ ಶಿಕ್ಷಣವು ಅಳೆದು ನೋಡುವದು, ಗೊತ್ತುಪಡಿಸುವದು. ಆದುದರಿಂದ ಈ ಶೈಕ್ಷಣಿಕ ವಯೋವಿಭಾಗಗಳ ಪರಿಚಯವು ಶಿಕ್ಷಕರಿಗೂ ತಾಯಿತಂದೆಗಳಿಗೂ ತೀರ ಅವಶ್ಯವಾಗಿದೆ.

## ಶಿಕ್ಷಣದಲ್ಲಿ ವಯೋವಿಭಾಗಗಳು

ಮಗುವು ಅಚೇತನವಾದ ಅರಲಿನ ಮುದ್ದೆಯಲ್ಲ. ಆತನು ಆತ್ಮಶಕ್ತಿಯುಳ್ಳ ಚೈತನ್ಯಸ್ವರೂಪ. ಚೈತನ್ಯವಿದ್ದಲ್ಲಿ ಬೆಳವಣಿಗೆಯುಂಟು. ಮಗುವಿನ ಶರೀರದ ಬೆಳವಣಿಗೆಯೊಡನೆ ಅದರ ಆತ್ಮಶಕ್ತಿಗಳೂ ಒಂದು ಕ್ರಮದಿಂದ ಅರಳುತ್ತ ಹೋಗುವವು. ಮಗುವಿನ ಅಂತರಂಗ–ಬಹಿರಂಗಗಳ ಈ ಜೋಡು ಬೆಳವಣಿಗೆಯು ಅತ್ಯಂತ ಸೋಜಿಗವುಳ್ಳದ್ದಾಗಿದೆ. ಈ ವಿಕಾಸದ ಹೆಗ್ಗುರುತುಗಳ ಪರಿಚಯವು ಶಿಕ್ಷಕನಿಗಂತೂ ಸರಿ–ತಾಯಿತಂದೆಗಳಿಗೂ ಕೂಡ– ಅವಶ್ಯವಾಗಿದೆ. ಕಲಿಯುವ ಕ್ರಮವೂ ಕಲಿಸುವ ವಿಷಯಗಳೂ ವಯೋನುಗುಣವಾಗಿ ಭಿನ್ನವಾಗುತ್ತ ಹೋಗುವವು. ಮಗುವು ಮುಂದೆ ಏನಾಗಬೇಕೆಂಬುದನ್ನು ಶಿಕ್ಷಣದಲ್ಲಿ ಮರೆಯದಿರುವಂತೆ, **ಮಗು ಇಂದು ಹೇಗಿರುವದೆಂಬುದನ್ನೂ ಶಿಕ್ಷಕನು ಶೋಧಿಸಿ ತಿಳಿದುಕೊಳ್ಳಬೇಕು.** ಮಗುವಿನ ಆಸ್ಥೆ–ಅನಾದರಗಳ, ಶಕ್ತಿ-ದೌರ್ಬಲ್ಯಗಳ ಪರಿಚಯವನ್ನು ಶಿಕ್ಷಕನು ಮೊದಲು ಮಾಡಿಕೊಳ್ಳಬೇಕು. ಮಗುವಿನ ಮನೋವೃತ್ತಿಗಳನ್ನೂ ಬುದ್ಧಿಶಕ್ತಿಗಳನ್ನೂ ಸಹಕಾರಿಗಳನ್ನಾಗಿ ಮಾಡಿಕೊಂಡು, ಅವುಗಳನ್ನು ಅನುಸರಿಸಿ ನಡೆದ ಶಿಕ್ಷಣವು ಯಶಸ್ವಿಯಾಗುವದು, ಸಫಲವಾಗುವದು.

## ವಯೋವಿಭಾಗಗಳು

ನಮ್ಮ ಜೀವನದ ಅವಧಿಯು ಸಾಮಾನ್ಯವಾಗಿ ನೂರುವರುಷಗಳೆಂಬ ಕಲ್ಪನೆ ರೂಢವಾಗಿದೆ. ಈ ನೂರುವರುಷದ ಅವಧಿಯನ್ನು ನಾಲ್ಕು ವಿಭಾಗಗಳಲ್ಲಿ ಹಂಚುವರು. ಈ ವಿಭಾಗಗಳಿಗೆ ‘ ಅವಸ್ಥೆ’ ಗಳೆಂತಲೂ ಕರೆಯುವದುಂಟು. ಶೈಶವ, ಬಾಲ್ಯ, ಪ್ರಾಯ, ಮುಪ್ಪು– ಇವೇ ಜೀವನದ ನಾಲ್ಕು ಅವಸ್ಥೆಗಳು. ವ್ಯಕ್ತಿಯ ಜೀವನದಲ್ಲಿ ಇವು ಮಹತ್ವದ ಸ್ಥಿತ್ಯಂತರಗಳು. ಕಲ್ಪಕರು ಈ ಅವಸ್ಥೆಗಳನ್ನು ಬೇರೆ ಬೇರೆ ರೀತಿಯಾಗಿ ಹೋಲಿಸಿ ಹೇಳಿರುವದುಂಟು. ಮುಂಜಾವು, ಮಧ್ಯಾಹ್ನ, ಸಂಜೆ, ರಾತ್ರಿಗಳೆಂಬ ದಿನಮಾನದ ನಾಲ್ಕು ಅವಧಿಗಳಿಗೆ ಕೆಲವರು ಈ ಅವಸ್ಥೆಗಳನ್ನು ಹೋಲಿಸುವದುಂಟು. ಬೇರೆ ಕೆಲವರು ವರುಷದ ನಾಲ್ಕು

ಋತುಮಾನಗಳಿಗೂ ಇವುಗಳನ್ನು ಹೋಲಿಸಿ ಹೇಳುವದುಂಟು. ಈ ಹೋಲಿಕೆಗಳಲ್ಲಿ ಕಲ್ಪನೆಯೊಡನೆ ಯಥಾರ್ಥವೂ ಸಾಕಷ್ಟು ಬೆರೆತುಕೊಂಡಿದೆ. ಮುಂಜಾವಿನ ಹೊಸ ಹುರುಪು, ವಸಂತದ ಸಮೋಲ್ಲಾಸ, ಶೈಶವದಲ್ಲಿ ಒಡೆದು ತೋರುತ್ತಿದೆಯೆಂಬುದೊಂದೇ ಉದಾಹರಣೆ ಇದಕ್ಕೆ ಸಾಕು.

ಶೈಕ್ಷಣಿಕ ದೃಷ್ಟಿಯಿಂದ ಇನ್ನೂ ಒಂದು ಬಗೆಯ ವಯೋವಿಭಾಗಗಳನ್ನು ಕಲ್ಪಿಸಬಹುದಾಗಿದೆ. ಈ ವಯೋವಿಭಾಗಗಳು ಮಗುವಿನ ಬಾಹ್ಯಾಂತರ ಬೆಳವಣಿಗೆಗೆ, ಆತನ ಒಟ್ಟು ವಿಕಾಸಕ್ಕೆ ಅನ್ವಯಿಸುವವು. **ಮಗುವಿನ ಮೊದಲಿನ ಹದಿನೆಂಟು ವರುಷಗಳು ಆತನ ಶಿಕ್ಷಣದ–ಕ್ರಮಬದ್ಧವಾದ ಶಿಕ್ಷಣದ ಅವಧಿಯಾಗಿರುವದು.** ಈ ಹದಿನೆಂಟು ವರುಷಗಳಲ್ಲಿ ಮಗುವಿನ **ಶಾರೀರಿಕ, ಮಾನಸಿಕ, ಆತ್ಮಿಕವಾದ ಬೆಳವಣಿಗೆಯು** ಸಾಗಿಬಂದು ಕೊನೆಗೊಳ್ಳುವದು. ಈ ಶೈಕ್ಷಣಿಕ 'ಜೀವಮಾನ' ದಲ್ಲಿಯೂ ಐದು ವಿಭಾಗಗಳನ್ನು ಕಲ್ಪಿಸಿರುವರು. ಪ್ರತಿಯೊಂದರಲ್ಲಿಯೂ ಬಾಹ್ಯಶರೀರವೂ ಬದಲಿಸುತ್ತಿದೆ; ಆತ್ಮಶಕ್ತಿಗಳೂ ವ್ಯತ್ಯಾಸ ಹೊಂದುವವು. ಈ ವಿವಿಧ ವ್ಯತ್ಯಾಸಗಳು ಭಿನ್ನವಾಗಿ ತೋರಿಬಂದರೂ ಮನಸ್ಸು ಅಖಂಡವಾಗಿದೆ. ಶಾರೀರಿಕ ಮಾನಸಿಕ ಬೆಳವಣಿಗೆಯಲ್ಲಿ ತಾಳಮೇಳವಿದೆ. ಅನ್ಯೋನ್ಯವಾದ ನಿಕಟವಾದ ಸಂಬಂಧವಿದೆ. ಮಾನಸಶಾಸ್ತ್ರವು ಸಾರಿ ಹೇಳುತ್ತಿರುವ ಈ ಸಂಗತಿಗಳನ್ನು ಶಿಕ್ಷಕರು ಮರೆಯಕೂಡದು.

**ಶಿಕ್ಷಣದ ಅವಧಿಯು ನಿಜವಾಗಿ– ತಾತ್ವಿಕವಾಗಿ– ಅವಿಭಾಜ್ಯವಾಗಿದೆ.** ಹೀಗಿದ್ದರೂ ತಿಳಿದುಕೊಳ್ಳಲು ಸುಲಭವಾಗುವಂತೆ, ಶಿಕ್ಷಣದ ಸೌಕರ್ಯಕ್ಕಾಗಿ ಹದಿನೆಂಟು ವರುಷಗಳ ಈ ಅವಧಿಯನ್ನು ಐದು ಅವಸ್ಥೆಗಳಾಗಿ ಕಲ್ಪಿಸುವದುಂಟು:— (೧) ಮಗುವಿನ ಮೊದಲಿನ ಮೂರು ವರುಷಗಳು–ಶೈಶವಾವಸ್ಥೆ; (೨) ೩ ರಿಂದ ೭ ರ ವರೆಗೆ–ಪೂರ್ವಬಾಲ್ಯ. (೩) ೭ ರಿಂದ ೧೨–೧೧ ರ ವರೆಗೆ—ಉತ್ತರ ಬಾಲ್ಯ; (೪) ೧೧ ರಿಂದ ೧೪ ವರುಷಗಳ ವರೆಗೆ—ಕೌಮಾರ ಅಥವಾ ಕೌಮಾರಿಕಾ ಅವಸ್ಥೆ; (೫) ೧೪ ರಿಂದ ೧೮ ರ ವರೆಗೆ—ಪ್ರಾಯ–ಜವ್ವನ.

ಈ ಅವಧಿಗಳನ್ನು ಹೀಗೆ ಪ್ರತ್ಯೇಕವಾಗಿ ಹೇಳಿದರೂ ಒಂದರಿಂದ

ಮತ್ತೊಂದನ್ನು ವಿಂಗಡಿಸಿ ಹೇಳಲು ಬರುವಂತೆ **ಅವುಗಳು ವಿಭಿನ್ನವಾಗಿಲ್ಲ. ವ್ಯಕ್ತಿವಿಕಾಸದ ಕಾರ್ಯಗಳಲ್ಲಿ ಹೀಗೆ ವಿಚ್ಛೇದಗಳಿಲ್ಲ. ಅದು ಸಂತತ ವಾಗಿ—ಸಾವಧಾನವಾಗಿ—ನಡೆಯುವ ಕಾರ್ಯ. ಮನಸ್ಸಿನ ಏಕ ರೂಪತೆಯೇ ಇದಕ್ಕೆ ಕಾರಣವಾಗಿರುವದು.** ಹಿಂದಿನ ಅವಸ್ಥೆಯು ಮುಂದಿನ ಅವಸ್ಥೆಗೆ ಮಗುವನ್ನು ತಿಳಿಯದಂತೆಯೇ ತಂದು ಬಿಡುತ್ತದೆ. ಈ ಸ್ಥಿತ್ಯಂತರಗಳ ನಡುವಿನ ಅಂತರವು—ನಿಸರ್ಗದ ವಿಭಾಗಗಳಲ್ಲಿ ಇರುವಂತೆ—ಕಿರಿದಾಗಿದೆ, ಕಾಣದಂತಿದೆ. 'ಇದೇ ಘಳಿಗೆಯಲ್ಲಿಗೆ ಮಳೆನಾಡು ಮುಗಿಯಿತು, ಬೈಲುಸೀಮೆ ಪ್ರಾರಂಭಿಸಿತು'—ಎಂದು ಸೀಮೆಗಲ್ಲನ್ನು ಊರಲು ಸಾಧ್ಯವೆ? ಇದೇ ರೀತಿಯಾಗಿ ಮಗುವು ನಡೆಯಲು ಕಲಿಯುವದನ್ನು ನೋಡಿದರೆ ಈ ಮಾತು ಮತ್ತಿಷ್ಟು ಮನದಟ್ಟಾಗುವದು. ಒಂದು ದಿನ ಮಗುವು ನಡೆಯು ಹತ್ತುವದು ನಮ್ಮ ಕಣ್ಣಿಗೆ ಬೀಳುವದು. ಆದರೆ ಅದನ್ನು ಸಾಧಿಸಲು ಆ ಮೊದಲು ಮಗುವು ಮಾಡುವ ಸಾಹಸವೂ ಪರಿಶ್ರಮವೂ ನಮಗೆ ಅಜ್ಞಾತ ವಾಗಿಯೇ ಸಾಗಿರುವವು. ತಪ್ಪುಹೆಜ್ಜೆ–ತೊಡಕುಹೆಜ್ಜೆಗಳು ಮಗುವು ನಡೆ ಯಲು ಕಲಿಯುವ ಅವಧಿಯಲ್ಲಿ ಅವಶ್ಯವಾದ ಅವಸ್ಥೆಗಳು, ಮೆಟ್ಟಲುಗಳು. ಇವುಗಳಲ್ಲಿ ಯಾವುದನ್ನೂ ಮಗುವು ಬಿಡಲಾರದು. ಹಿಂದಿನದನ್ನು ಬಿಟ್ಟು ಮುಂದಿನದಕ್ಕೆ ಜಿಗಿಯಲಾರದು. ಮಗುವು ಎಲ್ಲ ಅವಸ್ಥೆಗಳಲ್ಲಿಯೂ ನೆಲೆ ಯಾಗಿ ನಿಂತು ಹಿಂದಿನದರಲ್ಲಿ ನಿಷ್ಣಾತನಾಗಿ ಮುಂದಿನದನ್ನು ನಿಲುಕಿಸಿಕೊಳ್ಳ ಬೇಕು. **ಜೀವನದ ಒಟ್ಟು ವಿಕಾಸವು ಏಕಸೂತ್ರವಾಗಿ ಸಾಗಿರುವಾಗ್ಗೆ** ವೈ ಮನಗಳ ಶಕ್ತಿ–ಸ್ವರೂಪಗಳಲ್ಲಿ ಎದ್ದುಕಾಣುವಂತೆ ತೋರಿಬರುವ ವ್ಯತ್ಯಾ ಸಗಳನ್ನೇ ಈ ವಯೋವಿಭಾಗಗಳು ವ್ಯಕ್ತಗೊಳಿಸುವವು.

ಈ ವಯೋವಿಭಾಗಗಳಲ್ಲಾಗುವ ವ್ಯತ್ಯಾಸಗಳನ್ನು ಇಲ್ಲಿ ಸಂಕ್ಷೇಪವಾಗಿ ತಿಳಿದುಕೊಳ್ಳಬಹುದು.

(೧) **ಶೈಶವಾವಸ್ಥೆ:—** ಮೊದಲಿನ ಮೂರು ವರುಷಗಳು. ಈ ಅವ ಧಿಯ ಮಹತ್ವವು ಶಿಕ್ಷಣತಜ್ಞರಿಗೆ ಇತ್ತೀಚೆಗೆ ಹೆಚ್ಚಾಗಿ ಮನವರಿಕೆಯಾಗ ಹತ್ತಿದೆ. ಈ ಅವಧಿಯಲ್ಲಿರುವ ಚಿಕ್ಕಮಕ್ಕಳಿಗೆ ವಿಹಿತವಾದ ಸನ್ನಿವೇಶಗಳನ್ನು

ಒದಗಿಸಿಕೊಡುವ ಸ್ವತಂತ್ರ ಸಂಸ್ಥೆಗಳೂ ಪ್ರಾಗತಿಕ ರಾಷ್ಟ್ರಗಳಲ್ಲಿ ನಿರ್ಮಾಣ ವಾಗಿವೆ. ತನ್ನ ಇಂದ್ರಿಯಗಳ ನಿಯಂತ್ರಣದಲ್ಲಿ ಮಗುವು ಅಸಾಧಾರಣವಾದ ಪ್ರಗತಿಯನ್ನು ಈ ಅವಧಿಯಲ್ಲಿ ತೋರಿಸುವದು. ತನ್ನ ಅವಯವಗಳನ್ನೆಲ್ಲ ಜೀವನದ ಕಾರ್ಯಕ್ಕಾಗಿ ಅಳವಡಿಸಿಕೊಳ್ಳುವದು. ಅಸ್ತವ್ಯಸ್ತವಾದ ಅವಯವ ಗಳ ಚಲನವಲನವು ಈ ಅವಧಿಯಲ್ಲಿ ನಿಯಂತ್ರಿತವಾಗುವದು; ಸುಸಂಬದ್ಧ ವಾಗುವದು. ಬೇರೆ ಬೇರೆ ಅವಯವಗಳು ಸಹಕಾರದಿಂದ ಕೂಡಿ ಕೆಲಸ ಮಾಡುವದನ್ನು ಮಗುವು ಈ ಸಮಯದಲ್ಲಿ ಸಾಧಿಸುವದು. ಎದುರಿಗೆ ಕಾಣುವ ಬಗೆಬಗೆಯ ಜಗದ ಜಂಗುಳಿಯು ಮಗುವಿನಲ್ಲಿ ಕುತೂಹಲ ಬುದ್ಧಿಯನ್ನು ಹುಟ್ಟಿಸುವದು. ಅದರೊಡನೆ ಹೇಗೆ ವ್ಯವಹರಿಸಬೇಕೆಂಬುದನ್ನು ಮಗುವು ಅನುಕರಣದಿಂದ ಕಲಿತುಕೊಳ್ಳುವದು. ತನಗೆ ದೊರೆಯುವ ಅನುಭವಗಳನ್ನೆಲ್ಲ ತೂಗಿನೋಡುವ, ಹೊಂದಿಸಿಕೊಳ್ಳುವ ಶಕ್ತಿಯೂ ಇದೇ ಸಮಯದಲ್ಲಿ ತಲೆ ದೋರುವದು. ಮೂರನೆಯ ವರುಷದಲ್ಲಿ ಮಿದುಳಿನಲ್ಲಿ ಮಹತ್ವದ ಮಾರ್ಪಾಡು ಗಳಾಗುವವು. ಸ್ಮರಣಶಕ್ತಿಯಲ್ಲಿ ಹೆಚ್ಚಿನ ಪ್ರಗತಿಯು ಕಂಡುಬರುವದು. ಅಂತೆಯೇ ಮೂರುವರುಷದ ಬುದ್ಧಿ ನೂರುವರುಷದ ವರೆಗೆಂಬ ನಾಣ್ನುಡಿಯು ಪ್ರಚಾರದಲ್ಲಿರಬಹುದು.

ಹುಟ್ಟಿದ ಕೂಸಿನ ಶರೀರವನ್ನೂ ದೊಡ್ಡವರ ಶರೀರವನ್ನೂ ನಿರೀಕ್ಷಿಸಿದರೆ ಅಂಗಾಂಗಗಳ ಪ್ರಮಾಣದಲ್ಲಿ ಹೆಚ್ಚುಕಡಿಮೆ ಕಂಡುಬರುವದು. ದೊಡ್ಡವರ ಶರೀರದ ಪ್ರಮಾಣದಿಂದ ಆತನ ತಲೆಯು ಎರಡುಪಟ್ಟು ದೊಡ್ಡದು. ಪಾದ ಗಳು ತೀರ ಚಿಕ್ಕವು. ತೋಳುಗಳು ನಿಡಿದಾದವುಗಳು. ಮುಂದೆ ಆತನ ಜೀವನದ ಆವಶ್ಯಕತೆಯನ್ನು ಪೂರೈಸುವಂತೆ ಈ ಅವಯವಗಳ ಬೆಳವಣಿಗೆಯ ಪ್ರಮಾ ಣವೂ ಕಂಡುಬರುವದು. ಗರ್ಭವಾಸದಲ್ಲಿ ಬಿಗಿದು ಕಟ್ಟಿದಂತಿರುವ ಕಾಲು ಗಳು ಬರಬರುತ್ತ ಸರಳವಾಗುವವು. ನಡೆಯಲು ಅನುಕೂಲವಾಗುವಂತೆ ಪಾದ ಗಳು ದೊಡ್ಡವುಗಳಾಗುವವು. ಶರೀರದ ತೂಕವು ಹೆಚ್ಚುವದು. ಹುಟ್ಟಿದ ಕೂಡಲೆ ೬-೭ ಪೌಂಡು ತೂಕ ಭಾರವಾಗಿರುವ ಮಗುವಿನ ತೂಕವು ಒಂದು ವರುಷದಲ್ಲಿಯೇ ಮೂರುಪಟ್ಟು ಹೆಚ್ಚಾಗುವದು. ಎಲವುಗಳ ನ್ಯೂಮತ್ವವು

ಕಡಿಮೆಯಾಗುತ್ತ ಹೋಗುವದು. ಸ್ನಾಯುಗಳ ಬಲ ಹೆಚ್ಚುವದು. ವಸ್ತು ವನ್ನು ಬೆರಳುಗಳಿಂದ ಹಿಡಿಯಲು ಮಗುವು ಶಕ್ತವಾಗುವದು. ಇಂದ್ರಿಯಗಳ ಬೆಳವಣಿಗೆಯೊಡನೆ ಮಗುವಿನ ಮನೋವ್ಯಾಪಾರವೂ ನಮಗೆ ತಿಳಿಯದಂತೆ ಬೆಳೆಯುವದು. ಮಗುವು ಮೊದಲಿಗೆ ತನ್ನ ಸಹಜ ಪ್ರವೃತ್ತಿಗಳಿಗೆ ಸಂಪೂರ್ಣ ವಾಗಿ ಆಧೀನವಾಗಿರುವದು. ಮುಂದೆ ಮಗುವಿನ ಜ್ಞಾನೇಂದ್ರಿಯಗಳು ಬಲಿ ಯುವವು, ತೀಕ್ಷ್ಣವಾಗುವವು. ಮಗುವಿನ ಬುದ್ಧಿವಿಕಾಸವು ಆತನ ಕೃತಿಗಳಲ್ಲಿ, ಕ್ರೀಡೆಗಳಲ್ಲಿ ಕಂಡುಬರುವದು. ಮೂರನೆಯ ವರುಷದ ಕೊನೆಗೆ ಆತನಲ್ಲಿ ಭಾವನೆಗಳ ತೀವ್ರತೆಯು ಹೆಚ್ಚುವದು.

(೨) **ಪೂರ್ವಬಾಲ್ಯ:—** ಮೂರರಿಂದ ಏಳು ವರುಷಗಳವರೆಗೆ. ಮಗುವಿನಲ್ಲಿ ಕುತೂಹಲವು ಮತ್ತಿಷ್ಟು ಹೆಚ್ಚುವದು. ಮಗುವು ಮುದ್ದು ಮಾತಿನ ಮಳೆಗರೆಯುವದು. ಅದು 'ಹಾಗೇಕೆ?' ಇದು 'ಹೀಗೇಕೆ?'—ಎಂಬ ಪ್ರಶ್ನೆಗಳಿಂದ ಎಲ್ಲರನ್ನೂ ಪೀಡಿಸಿಬಿಡುವದು. ಅನುಕರಣ ಪ್ರವೃತ್ತಿಯು ಆಟದ ಕಡೆಗೆ ಮಗುವಿನ ಮನಸ್ಸನ್ನು ಸೆಳೆಯುವದು. ಆಟಗಳಲ್ಲಿ ಮಗುವಿಗೆ ಅತ್ಯಂತ ವಾದ ಆಸ್ಥೆ ಕಂಡುಬರುವದು. ಇದು ಆಟದ ಅವಧಿಯೆಂದು ಹೇಳಬಹುದು. ಕೇವಲ ಮಾಡಿದಂತೆ ಮಾಡುವದಲ್ಲದೆ ಆಟಗಳಲ್ಲಿ ಮಗುವಿನ ಕಲ್ಪಕತೆಯೂ ಹೆಚ್ಚುವದು. ತನ್ನ ಭಾವಭಾವನೆಗಳನ್ನು ಅಭಿನಯದಿಂದ 'ಆಡಿತೋರಿಸುವ' ನಾಟ್ಯಪ್ರವೃತ್ತಿಯೂ ಹಿರಿಯರಂತೆ ಮಾಡಲು ಆತನಿಗೊಂದು ಹೊಸ ಸಾಧನ ವಾಗುವದು. ಒಮ್ಮೆ 'ತಂದೆ' ಯಾಗುವನು. ಮತ್ತೊಮ್ಮೆ 'ಮಾಸ್ತರ' ನಾಗುವನು. ಮಗದೊಮ್ಮೆ 'ಮೋಟಾರು ನಡಿಸುವ' ನಾಗಿ ಅವನಂತೆ ಅಭಿ ನಯಿಸುವನು. ಈ ಅವಧಿಯಲ್ಲಿಯ ಚಿಕ್ಕಬಾಲಕರು ಹೀಗೆ ಅನುಕರಣದಿಂದ ಅನೇಕ ಆಟಗಳನ್ನು ಆಡುವದನ್ನು ನಾವು ನಿತ್ಯವೂ ನೋಡುತ್ತೇವೆ. ಈ ಸಮಯದಲ್ಲಿ ಇನ್ನೊಂದು ಹೊಸ ಪ್ರೀತಿಯೂ ಆತನಲ್ಲಿ ಹುಟ್ಟುವದು. ಆತನು ಕಥೆಗೆ ಮೆಚ್ಚುವ; ಕಥೆಕಟ್ಟಲು ಹವಣಿಸುವ. ಅಂತೆಯೇ **ಈ ಅವಧಿಯ ಮಕ್ಕಳ ಶಿಕ್ಷಣಕ್ರಮದಲ್ಲಿ ಕಥೆಗೆ ಪ್ರಾಧಾನ್ಯ.** ಇನ್ನೊಂದು ಮಹತ್ವದ ಲಕ್ಷಣವೂ ಈ ಸಮಯದಲ್ಲಿ ತೋರಿಬರುವದು. ಮಗುವು ತನ್ನ ಸುತ್ತಲಿನ

ಸಮಾಜದ ರೀತಿನೀತಿಗಳಿಗೆ ಒಗ್ಗುವಂತೆ ತನ್ನ ಸಹಜ ಪ್ರವೃತ್ತಿಗಳನ್ನು ಬಿಗಿ ಹಿಡಿಯುವ, ಬಗ್ಗಿಸುವ ಹವಣಿಕೆಯನ್ನೂ ಮಾಡುವನು. **ಇದು ಆತ್ಮಸಂಯಮನದ ಮೊದಲನೆಯ ಅಂತಸ್ತು.** ಶೀಲಸಂವರ್ಧನೆಯ ಮೊದಲನೆಯ ಹೆಜ್ಜೆ.

ಎರಡನೆಯ ವರುಷದಿಂದಲೆ ಮಗುವಿನಲ್ಲಿ ವಿಚಾರಶಕ್ತಿಯು ಅಂಕುರಿಸುವದೆಂದು ಹೇಳುವರು. ಪೂರ್ವಬಾಲ್ಯದ ಕೊನೆಗೆ ಆತನ ವಿಚಾರಗಳಿಗೆ ಒಂದು ಬಗೆಯ ಸ್ಥಿರತೆ ಬರುವದು. ತನಗೆ 'ಇದು ಬೇಕು'–'ಅದು ಬೇಡ' ವೆನ್ನುವ ಭಾವನೆಯು ಇದೇ ಸಮಯದಲ್ಲಿ ಉಂಟಾಗುವದು. ಇದರ ಜೊತೆಗೆ ಕೆಲವು ವಸ್ತುಗಳು ತನ್ನವೆನ್ನುವ 'ಒಡೆತನದ' ಕಲ್ಪನೆಯನ್ನೂ ಮಾಡಿಕೊಳ್ಳುವನು. ಆದರೆ ಆಟದ ಸಮಯದಲ್ಲಿ ಗೆಳೆಯರಿಗೆ ತನ್ನ ಒಡವೆಗಳನ್ನು ಕೊಡುವನು, ಅವರಿಂದ ತೆಗೆದುಕೊಳ್ಳುವನು. ಸಾಮಾಜಿಕ ಪ್ರೌಢಜೀವನದಲ್ಲಿ ಅತ್ಯಗತ್ಯವಾದ ಈ ಕೊಡು–ತೆಗೆದುಕೊಳ್ಳುವ ಗುಣವು ಈಗಿನಿಂದಲೇ ಆತನಲ್ಲಿ ಬೆಳೆಯಹತ್ತುವದು. ಕ್ಷಣಕ್ಷಣಕ್ಕೆ ಬದಲಿಸುವ ಆತನ ಭಾವನೆಗಳಲ್ಲಿ ಸ್ಥಿರತೆಯುಂಟಾಗಿ ಉಳಿದವರ ಕೂಡ ತಕ್ಕಮಟ್ಟಿಗೆ ಶಾಂತ ಹಾಗೂ ಸಮತೋಲ ವೃತ್ತಿಯಿಂದ ನಡೆದುಕೊಳ್ಳುವನು.

(೩) **ಉತ್ತರಬಾಲ್ಯ:—** ಏಳರಿಂದ ಹತ್ತು ವರುಷಗಳ ವರೆಗೆ. ಈ ಅವಧಿಯಲ್ಲಿ ದೇಹವು ಬಳ್ಳಿಯಂತೆ ಭರದಿಂದ ಬೆಳೆಯತೊಡಗುವದು. ವರುಷಕ್ಕೆ ಎರಡು ಇಂಚಿನಂತೆ ಆತನ ನಿಲುವಿಕೆಯು ಎತ್ತರವಾಗುವದು. ಮಿದುಳಿನ ಮೂರು ಪಾಲಿಗಿಂತಲೂ ಹೆಚ್ಚಿನ ಭಾಗವು ಇದೇ ಸಮಯದಲ್ಲಿ ಪೂರ್ತಿಗೊಳ್ಳುವದು. ಈ ಮೊದಲು ಆತನಿಗೆ ಆಟವೇ ಜೀವನದ ಕಾರ್ಯವಾಗಿತ್ತು. **ಇಂದು 'ಆಟ' ಹಾಗೂ 'ಕರ್ತವ್ಯ' ಗಳ ಅಂತರವು ಆತನಿಗೆ ಕ್ರಮೇಣ ತಿಳಿಯತೊಡಗುವದು.** ಕೇವಲ ಮನಸ್ಸಿನ ತಾತ್ಕಾಲಿಕವಾದ ಒಲವುಗಳನ್ನೇ ಹಿಡಿದು ಸಾಗಿರುವ ಆತನ ಜೀವಶಕ್ತಿಗೆ ಇಂದು ಬೇರೆ ಹೊಸ ಹಾದಿಗಳು, ಹೊಸ ಹರಿಗಳು ಉಂಟಾಗುವವು. ಬಹುಮುಖವಾಗಿ, ನಿರ್ಹೇತುಕವಾಗಿ ಹರಿಯುವ ಮನಸ್ಸನ್ನು ಇಂದು ಕೆಲಕಾಲವಾದರೂ ಏಕಾಗ್ರವಾಗಿ ಮಾಡಲು

ಆತನು ಯತ್ನಿಸುವನು. ಓದು ಬರೆಯುವ ವಿದ್ಯಾರ್ಥಿ ಜೀವನದ ವ್ಯವಸಾಯ ಗಳಲ್ಲಿ ತಾತ್ಕಾಲಿಕವಾಗಿ ಮನಸ್ಸನ್ನು ತಡೆದು ನಿಲ್ಲಿಸಲು ಆತನು ಶಕ್ತನಾಗು ವನು. ಅಂತೆಯೇ ಕ್ರಮಬದ್ಧವಾದ ಶಾಲೆಯ ಶಿಕ್ಷಣವು ಈ ಅವಧಿಯಿಂದಲೇ ಪ್ರಾರಂಭಿಸುವದು. ಇದಲ್ಲದೆ **ಆತನ ಸ್ಮರಣಶಕ್ತಿಯು ಹೆಚ್ಚು ತೀಕ್ಷ್ಣ ವಾಗಿರುವದು.** ಈ ಸ್ಮರಣಶಕ್ತಿಗೆ ಪ್ರೌಢವಯಸ್ಸಿನ ತರ್ಕದ ಸಾಹಾಯ್ಯವಿರ ದಿದ್ದರೂ ಅದರ ಪರಿಣಾಮವು ಹೆಚ್ಚಿನದಾಗಿರುವದು. ಮೊದಲಿನ ಉಚ್ಛೃಂ ಖಲವಾದ ಕಲ್ಪನಾಶಕ್ತಿಯನ್ನು ಸತ್ಯದ ಕಟ್ಟುಗಳಲ್ಲಿ ಹಿಡಿದು ಹಾಕಲು ಯತ್ನಿ ಸುವನು. ಓದುವ, ಕೇಳುವ ಕಥೆ-ವೃತ್ತಾಂತಗಳಲ್ಲಿಯ **ವಾಸ್ತವತೆಯ ಹಾಗೂ ಕಲ್ಪನೆಯ ಅಂಶಗಳನ್ನು ತಿಳಿದುಕೊಳ್ಳಲು** ತಕ್ಕಮಟ್ಟಿಗೆ ಸಮರ್ಥನಾಗುವನು. ನಕ್ಷೆಗಳು, ಚಿತ್ರಗಳು, ವಿವಿಧ ವಸ್ತುಗಳು ಇವುಗಳ ಸಹಾಯದಿಂದ ಸುವ್ಯವಸ್ಥಿತವಾದ, ಸುಸಂಬದ್ಧವಾದ ಜ್ಞಾನವನ್ನು ಸಂಪಾದಿ ಸುವ ಶಕ್ತಿಯೂ ಆತನಲ್ಲಿ ತಲೆದೋರುವದು. ಗುಣಧರ್ಮಗಳ ಸಾಮ್ಯವನ್ನು ಕಂಡುಹಿಡಿದು **ವಿವಿಧ ವಸ್ತುಗಳನ್ನು ಹೊಂದಿಸಿಕೊಳ್ಳುವ, ವರ್ಗೀಕರಿ ಸುವ ವಿಶೇಷಜ್ಞಾನವೂ** ಇದೇ ಸಮಯದಲ್ಲಿ ಮೂಡುವದು. ಇವೆಲ್ಲವುಗಳ ಜೊತೆಗೆ ಆತನ ನೈತಿಕ ಜೀವನವೂ ಹೆಚ್ಚೆಚ್ಚು ವಿಶಾಲವಾಗುತ್ತ ನಡೆಯು ವದು. ಒಳಿತು ಕೆಡಕುಗಳನ್ನು ಅರಿತುಕೊಂಡು **ಆತ್ಮಸಂಯಮನವನ್ನು** ಬೆಳೆ ಸುವನು. ಆತನ ನೈತಿಕ ಜೀವನಕ್ಕೆ ಇನ್ನೂ ನೀತಿತತ್ವಗಳ ತಳಹದಿಯು ದೊರೆತಿರುವದಿಲ್ಲ. ಮನೆಯಲ್ಲಿ ಹಿರಿಯರು, ಶಾಲೆಯಲ್ಲಿ ಶಿಕ್ಷಕರು, ಹೊರಗೆ ಸುತ್ತುಮುತ್ತಲಿನ ಒಡನಾಡಿಗಳು, ಇವರೆಲ್ಲರ ರೀತಿನೀತಿಗಳ ಅನುಕರಣ ದಿಂದಲೇ ಆತನು ತನ್ನ ನೈತಿಕ ಜೀವನವನ್ನು ಕಟ್ಟುವನು. ಆತನ ಜೀವನದಲ್ಲಿ ಇದೊಳ್ಳೇ ಸಂಧಿಕಾಲ. ಈ ಸಮಯದಲ್ಲಿ ಮಕ್ಕಳ 'ಆದರ್ಶ' ಪುರುಷರಾದ ಶಿಕ್ಷಕರೂ ತಂದೆತಾಯಿಗಳೂ ಅತ್ಯಂತ ದಕ್ಷತೆಯನ್ನು ವಹಿಸುವದು ಅವಶ್ಯ ವಿದೆ. ಮಕ್ಕಳ ಮೊದಲ ಗುರುಗಳಾದ ಪ್ರಾಥಮಿಕ ಶಿಕ್ಷಕರ ಹೊಣೆಗಾರಿಕೆ ಯಂತೂ ಈ ಅವಧಿಯಲ್ಲಿ ವಿಶೇಷವಾಗಿದೆ.

(೪) **ಕುಮಾರ-ಕುಮಾರಿಕಾ ಅವಸ್ಥೆ:—** ಹನ್ನೊಂದರಿಂದ ಹದಿ

ನಾಲ್ಕು ವರುಷಗಳವರೆಗೆ. ಇದು ಒಳ್ಳೇ ಸೂಕ್ಷ್ಮ ಕಾಲ. ಮಗುವು ಇತ್ತ ಬಾಲಕನೂ ಅಲ್ಲ, ಪ್ರಬುದ್ಧನೂ ಅಲ್ಲವೆನ್ನುವ ನಡುವಿನ ರೀತಿಯಲ್ಲಿ ಒಳ್ಳೇ ಸೋಜಿಗವಾಗಿ ವರ್ತಿಸುವನು. ಒಂದು ಬಗೆಯ ಮುಖೀನತೆ, ಇಲ್ಲವೆ ಹೆದರಿಕೆ ಆತನಲ್ಲಿ ತೋರುವದು. ಆತನಲ್ಲಿ ಸಂಘಪ್ರವೃತ್ತಿಯು ಹೆಚ್ಚಾಗಿ ಕಂಡುಬರುವದು. ಬಾಲ್ಯದಲ್ಲಿ ತನಗಿಂತಲೂ ದೊಡ್ಡವರ ಸಹವಾಸದ ಅಪೇಕ್ಷೆ. ಈ ವಯಸ್ಸಿನಲ್ಲಿ ತನ್ನ ಓರಿಗೆಯ ಗೆಳೆಯರೊಡನೆ ಕೂಡಿಕೊಳ್ಳುವ ಲವಲವಿಕೆ. ಅಂಥ ಗೆಳೆಯರದೊಂದು ಗುಂಪು ಕಟ್ಟಿಕೊಂಡು ತಾನು ಮುಂದಾಳು ಆಗಿ ಇಲ್ಲವೆ ಅನುಯಾಯಿಯಾಗಿ ಗೆಳೆತನದ ತನ್ನ ಹಸಿವನ್ನು ಹಿಂಗಿಸಿಕೊಳ್ಳುವನು. ಈ ವಯಸ್ಸಿನಲ್ಲಿ ಮನೆಯ ಆವಾರವು ಅವನಿಗೆ ಸಂಕುಚಿತವೆನಿಸುವದು. ಬೈಲುಗಳಲ್ಲಿ ಆಟಗಳು ಬೇಕು. ಸುತ್ತುಮುತ್ತಲು ನಡೆದುದನ್ನು ತಿಳಿದುಕೊಳ್ಳುವ ಅಪೇಕ್ಷೆಯು ಬಲವತ್ತರವಾಗುವದು.

ಮಕ್ಕಳ ಮನಸ್ಸಿನ ವಿಕಾಸವು ಸರಾಗವಾಗಿ ಒಂದೇ ವೇಗದಿಂದ ನಡೆಯುವದಿಲ್ಲ. ಅವರ ಮನೋವಿಕಾಸದಲ್ಲಿ ವಯೋಮಾನದಂತೆ ಕೆಲವೊಂದು ಏರಿಳಿತಗಳು—ಮೆಟ್ಟಲುಗಳು—ಕಂಡುಬರುವವು. ಕೆಲವು ಕಾಲ ಈ ವಿಕಾಸವು ಒಳ್ಳೇ ವೇಗದಿಂದ ನಡೆದಂತೆ ತೋರುವದು. ಮುಂದೆ ಕೆಲವು ಕಾಲ ಸ್ತಬ್ಧತೆ. ಮೊದಲಿನ ಮೂರು ವರುಷದ ವರೆಗೆ ಈ ವಿಕಾಸವು ಒಳ್ಳೇ ಜೋರಿನಿಂದ ನಡೆಯುವದು. ಮೂರರಿಂದ ಆರು ವರುಷಗಳು ಹಿಂದೆ ಗಳಿಸಿದ ಜ್ಞಾನವನ್ನು ಸಂಘಟಿಸಿ ಸ್ಥಿರಗೊಳಿಸಲು ಆತನು ವಿನಿಯೋಗಿಸುವನು. ಮುಂದೆ ಹತ್ತನೆಯ ವರುಷದ ವರೆಗೆ ಈ ವಿಕಾಸವು ಒಳ್ಳೇ ಭರದಿಂದ ಸಾಗುವದು. ಹತ್ತರಿಂದ ಹದಿನಾಲ್ಕರ ವರೆಗೆ ಮತ್ತೆ ಮೊದಲಿನಂತೆ ಗಳಿಸಿದ ಜ್ಞಾನಸಂಪತ್ತಿಯನ್ನು ಸ್ಥಿರಗೊಳಿಸುವದರಲ್ಲಿ ಆತನು ತೊಡಗುವನು.

ಶಾರೀರಿಕ ಬೆಳವಣಿಗೆಯು ಈ ಅವಸ್ಥೆಯಲ್ಲಿಯೂ ಮುಂದೆ ಸಾಗುವದು. ಆದರೆ ಗಂಡು ಹುಡುಗರಿಗಿಂತಲೂ ಹೆಣ್ಣು ಹುಡಿಗಿಯರಿಗೆ ಈ ಅವಧಿಯಲ್ಲಿ ಬೆಳವಣಿಗೆ ಹೆಚ್ಚು. ನಿಲುವಿಕೆಯಲ್ಲಿ, ಪುಷ್ಟತೆಯಲ್ಲಿ ವಿಶೇಷವಾದ ಪ್ರಗತಿಯನ್ನು ಅವರು ತೋರಿಸುವರು. ಈ ವಯಸ್ಸಿನಲ್ಲಿ ಶಾರೀರಿಕ ಶಿಕ್ಷಣವನ್ನು ಕೊಡಲು

ದೇಹವು ಒಳ್ಳೇ ಅನುಕೂಲವಾಗಿರುವದು. ಹಿಂದಿನಂತೆ ಕೇವಲ ಪ್ರತ್ಯಕ್ಷವಾದ ವಸ್ತು-ಚಿತ್ರಗಳ ನಿರೀಕ್ಷಣವೇ ಆತನಿಗೆ ಜ್ಞಾನದ ಸಾಧನವಾಗಿರುವದಿಲ್ಲ. ಸಂಜ್ಞೆ-ಸಂಕೇತಗಳಿಂದಲೂ ಜ್ಞಾನವನ್ನು ಗಳಿಸುವ ಹೆಚ್ಚಿನ ಶಕ್ತಿಯು ಆತನಲ್ಲಿ ಕ್ರಮೇಣ ತಲೆದೋರುತದು ಸಂಜ್ಞೆ-ಸಂಕೇತಗಳ ಮೂಲವನ್ನು ಕಂಡು ಹಿಡಿಯಲೂ, ಅವುಗಳಲ್ಲಿ ಅಡಕವಾಗಿರುವ ಸಾಮಾನ್ಯ ತತ್ವವನ್ನು ತಿಳಿದುಕೊಳ್ಳಲೂ ಆತನು ಸಮರ್ಥನಾಗಿರುವನು ಗಣಿತದ ನಿರ್ಜೀವವಾದ ಅಂಕಗಳಲ್ಲಿ ಆತನು ನಿಜವಾದ ವಸ್ತುಗಳನ್ನು ಕಾಣಹತ್ತುವನು. ನಕ್ಷೆ-ನಕಾಶಗಳ ಅಂಕುಡೊಂಕಾದ ಗೆರೆಗಳಲ್ಲಿ ಗಿರಿನದಿಗಳ ನಿಸರ್ಗದ ಸ್ವರೂಪವನ್ನು ನೋಡಿಕೊಳ್ಳುವನು. ' ಹೇಳಿದುದ ' ರಲ್ಲಿ ಹೇಳಿದ್ದಕ್ಕಿಂತಲೂ ಆತನಿಗೆ ಹೆಚ್ಚಿಗೆ ' ಹೊಳೆಯು ' ಹತ್ತುವದು. **ಅಚ್ಚಾದ ಶಬ್ದದ ಆಚೆಗಿರುವದನ್ನು ಆತನ ಮನಸ್ಸು ಕಾಣುವದು.** ಅಂತೆಯೇ ಓದುವ ಪುಸ್ತಕವೂ ನೋಡುವ ಚಿತ್ರವೂ ಆತನಲ್ಲಿ ವಿವಿಧವಾದ ಭಾವನೆಗಳನ್ನು ಹುಟ್ಟಿಸಿ ಹೃದಯಸ್ಪರ್ಶಿಯಾಗಹತ್ತುವವು. ಈ ಭಾವನೆಗಳೆಲ್ಲ ಒಂದುಗೂಡಿ, ಅನುಭವದ ಅಚ್ಚಿನಲ್ಲಿ ರೂಪುಗೊಂಡು ಆತನ ' ಸಂಸ್ಕೃತಿ 'ಗೆ ತಳಹದಿಯಾಗಿ ಪರಿಣಮಿಸುವವು.

**ಪ್ರಾಯ :—** ಹದಿನಾಲ್ಕರಿಂದ ಹದಿನೆಂಟು ವರ್ಷಗಳವರೆಗೆ ಈ ವಯಸ್ಸಿನಲ್ಲಿ ಕಾಲಿಟ್ಟಕೂಡಲೆ ಕುಮಾರನಾಗಲಿ, ಕುಮಾರಿಯಾಗಲಿ ' ಪ್ರಬುದ್ಧ ' ರಾಗುವರೆಂದು ಹೇಳುವದುಂಟು ' ಪ್ರಬುದ್ಧ ' ವೆಂಬ ಈ ವಿಶೇಷಣವು ಈ ಅವಧಿಯಲ್ಲಿ ನಿಜವಾಗಿ ಯಥಾರ್ಥವೂ ವಸ್ತುಸ್ಥಿತಿ ದ್ಯೋತಕವೂ ಆಗಿರುವದು ಇದೇ ಅವಧಿಯಲ್ಲಿ ಶಾಲೆಯ ಏಳು ವರುಷಗಳ ಶಿಕ್ಷಣವನ್ನು ತೀರಿಸಿ ಉಚ್ಚ ಶಿಕ್ಷಣಕ್ಕಾಗಿ ಇಲ್ಲವೇ ಜೀವಿತದ ಅನೇಕ ಹೋರೆಗಳಿಗಾಗಿ ಸಿದ್ಧರಾಗುವ ಯುವಕರ ಸಂಖ್ಯೆಯೂ ಹೆಚ್ಚು. ವಿವಾಹಿತರಾಗಿ - ಪತಿಯ ' ಸ್ವಗೃಹ ' ದಲ್ಲಿ ಗೃಹಿಣೀಪದಕ್ಕೆ ಹಾಗೂ ಮುಂದೆ ಬರಲಿರುವ ಮಾತೃಪದಕ್ಕೆ ಸಿದ್ಧರಾಗುವ ಯುವತಿಯರ ಸಂಖ್ಯೆಯೂ ಹೆಚ್ಚು. ಅಂತೆಯೇ ಈ ಅವಧಿಯ ಮಹತಿಯೂ ಹೆಚ್ಚು. ಇನ್ನೊಂದು ದೃಷ್ಟಿಯಿಂದಲೂ ಈ ಅವಧಿಗೆ ವಿಶೇಷವಾದ ಪ್ರಾಶಸ್ತ್ಯವು ಒಂದಿದೆ. ವ್ಯಕ್ತಿಯಲ್ಲಿ ಅಡಗಿಕೊಂಡಿರುವ ಅನೇಕ

**ಸುಪ್ತಶಕ್ತಿಗಳು ಈ ಸಮಯದಲ್ಲಿ ಜಾಗೃತವಾಗುವವು.** ಹದಿನೇಳು ವರುಷಗಳವರೆಗೆ ದೇಹವೂ ಬಲಿಯುವದು, ಬೆಳೆಯುವದು. ಹೆಚ್ಚಿನ ಶಾರೀರಿಕ ಶ್ರಮಕ್ಕೆ ಇದೊಳ್ಳೇ ಉಚಿತವಾದ ಕಾಲ. ಮಿದುಳೂ ಬಲಿಯುವದು. **ವ್ಯಕ್ತಿವಿಕಾಸದಲ್ಲಿ ಇದೊಂದು ಸಂಧಿಸಮಯ-ಕ್ರಾಂತಿಕಾಲವೆಂದರೆ** ತಪ್ಪಾಗದು. ಮೈ-ಮನಗಳ ರೂಪ-ಸ್ವಭಾವಗಳಲ್ಲಿ ಅನೇಕ ವ್ಯತ್ಯಾಸಗಳೂ ವಿಕಾರಗಳೂ ಒಡೆದು ತೋರುವವು. ಮೋರೆಯಮೇಲೆ ಎಳೆಮೀಸೆ ಮೂಡಹತ್ತುವವು. ಕಂಠಸ್ವರವು ಕಿಂಚಿತ್ ಕರ್ಕಶವಾಗುವದು. ಮಿದುಳು ಮಾರ್ಪಾಡು ಹೊಂದಿ ತಲೆಯ ಆಕೃತಿಯಲ್ಲಿಯೂ ಹೆಚ್ಚುಕಡಿಮೆಯಾಗುವದು. ಇವೆಲ್ಲವುಗಳು ಶಾರೀರಿಕ ವ್ಯತ್ಯಾಸಗಳು. ಇತ್ತ ಮನಸ್ಸು ಹಾಗೂ ಭಾವನೆಗಳಲ್ಲಿಯೂ ಇದೇ ಬಗೆಯ ಕ್ರಾಂತಿಯು ಕಾಣುವದು. **ಮನಸ್ಸಿನ ಕೀಲವು ತಪ್ಪಿ ಅದು ಬಹುಮುಖವಾಗಿ ಹರಿಯತೊಡಗುವದು.** ಮನಸ್ಸಿನ ಸ್ಥಿರತೆ ಇಲ್ಲದಂತಾಗುವದು. ಆತ್ಮಸಂಯಮನವು ಅಡಗುವದು. ಆತ್ಮವಂಚನೆಯು ನಿತ್ಯದ ರೂಢಿಯಾಗುವದು. ಕಲ್ಪನೆಯ ಕುದುರೆಯನ್ನೇರಿ ಕನಸಿನ ರಾಜ್ಯದಲ್ಲಿ ಸುಳಿದಾಡಹತ್ತುವನು. ಕನಸಿನಲ್ಲಿ ಉನ್ನತವಾದ ಉಪ್ಪರಿಗೆಗಳನ್ನು ಕಟ್ಟುವನು. ನಿತ್ಯ ಜೀವನದ ದಾರುಣವಾದ ಸತ್ಯವು ಅವೆಲ್ಲವುಗಳನ್ನು 'ಉಫ್' ಎಂದು ಊದಿ ಹಾರಿಸಿಬಿಡುವದು. ಇದರಿಂದ ಮನಸ್ಸು ಮತ್ತಿಷ್ಟು ಅಂತರ್ಮುಖವಾಗಹತ್ತುವದು. ಹೀಗೆ ಆಶೆ-ನಿರಾಶೆಗಳ ಅಲೆದಾಟಗಳಲ್ಲಿ ಹೃದಯವು ಹೊಯ್ದಾಡಹತ್ತುವದು. ಇದೇ ಸಮಯದಲ್ಲಿ ತನ್ನಿಂದ ವಿಜಾತೀಯಳಾದ ಸ್ತ್ರೀಯಳಬಗ್ಗೆ ವಿಶಿಷ್ಟವಾದ ವಿಕಾರವು ಮನಸ್ಸನ್ನು ಆವರಿಸಲು ಮೊದಲು ಮಾಡುವದು. ಪ್ರಬಲವಾದ ಈ ವಿಕಾರವು ಆತನ ಜೀವನವನ್ನೆಲ್ಲ ಅದುರಿಸಿಬಿಡುವದು. ಹೀಗೆ ವಿವಿಧವಾದ ಆಘಾತಗಳಿಗೆ ಬಲಿಯಾಗಿ ಮನಸ್ಸು ಒಮ್ಮೊಮ್ಮೆ ಒಳ್ಳೇ ಆಸ್ತಿಕ್ಯಬುದ್ಧಿಯಲ್ಲಿ ಮೈಮರೆಯುವದು. ನಿರಾಶೆಯಿಂದ ಒಮ್ಮೊಮ್ಮೆ ನಾಸ್ತಿಕತೆಯಲ್ಲಿ ನಲಿದಾಡಹತ್ತುವದು. ಈ ಅಂತಃಕಲಹದ ಬಿರುಗಾಳಿಯಲ್ಲಿ ಶಾಂತಿಗಾಗಿ ಅಧ್ಯಾತ್ಮದ ಆಸರವನ್ನು ಆತನು ಅಪೇಕ್ಷಿಸುವನು. ಅಂತೆಯೇ ಈ ಸಮಯದಲ್ಲಿ ಒಮ್ಮೊಮ್ಮೆ ಅತಿಶಯವಾದ ಧಾರ್ಮಿಕ ಪ್ರವೃತ್ತಿಯು ಆತನಲ್ಲಿ

ತೋರಿಬರುವದು. ಹೀಗೆ ಮಾನಸಿಕವಾದ, ಆತ್ಮಿಕವಾದ ತನ್ನ ತೊಡಕುಗಳನ್ನು ತಾನೇ ತಿಳಿಸಲಾರದೆ ಆತನ ಮನಸ್ಸು ಹೊರಗೆ ಹರಿಯುವದನ್ನು ನಿಲ್ಲಿಸಿ ಅಂತ ರ್ಮುಖವಾಗುವದು. ಮನಸ್ಸಿನ ನಿಯಂತ್ರಣವೆಲ್ಲ ತಪ್ಪಿ ಹೋಗಿ ಅದು ಕ್ಷಣಿಕ ವಾದ ಭಾವನೆಗಳ ಬೆನ್ನು ಹತ್ತುವದು. ನಿತಾಂತವಾಗಿ 'ಭಾವನಾಪ್ರಧಾನ' ವಾಗುವದು. ಈ ಸಮಯದಲ್ಲಿ ಉಕ್ಕೇರುವ ಭಾವನೆಗಳನ್ನು ಒತ್ತಿ ಹಿಡಿಯು ವದು ವಿಹಿತವಾಗಲಾರದು. ಈ ಭಾವನೆಗಳನ್ನು 'ವಿಶುದ್ಧ' ಗೊಳಿಸಬೇಕು. ವಿಹಿತವಾದ ಕಾರ್ಯಕ್ರಮದ ಕಾಲುವೆಗಳನ್ನು ಕಡಿದು ಭಾವನೆಗಳ ಪ್ರವಾಹದ ವೇಗವನ್ನು ತಗ್ಗಿಸಬೇಕು. ಅನಿಯಂತ್ರಿತವಾದ ಅವುಗಳ ಓಟದಿಂದಾಗುವ ಅನ ರ್ಥವನ್ನು ತಪ್ಪಿಸಿ ಬೇರೊಂದು ಹಿತಕರವಾದ ಕಾರ್ಯಗಳಿಗೆ ಆ ಶಕ್ತಿಯ ವಿನಿ ಯೋಗವಾಗುವಂತೆ ಮಾಡಬೇಕು. ಒಟ್ಟಿನಲ್ಲಿ 'ಪ್ರಬದ್ಧ' ವಾದ ಪ್ರಾಯದ ಈ ಆಂತರಿಕ ಶಕ್ತಿಗಳು ತಮ್ಮ ನಿಜವಾದ ನೆಲೆಯನ್ನರಿತುಕೊಂಡು ಕಾರ್ಯ ಪ್ರವೃತ್ತವಾದರೆ ಆ ಜೀವನದ ವಿಕಾಸವು ತಾನೇ ಸಾಧಿಸುವದು.

ಮೇಲೆ ಹೇಳಿದ ಈ ಅವಸ್ಥಾವಿಶೇಷಗಳನ್ನು ವಿಶದವಾಗಿ ತಿಳಿದುಕೊಳ್ಳು ವದು ಶಿಕ್ಷರಿಗೂ ತಾಯಿತಂದೆಗಳಿಗೂ ಅವಶ್ಯವಾಗಿದೆ. ಆದರೆ ಈ ಏರಿಳಿತಗಳ ವಿಮರ್ಶೆಯಿಂದ ಮನಸ್ಸು ಅಖಂಡವಾಗಿರುವದೆಂಬುದನ್ನು ಮಾತ್ರ ಅವರು ಮರೆಯಕೂಡದು. ಈ ವಯೋವಿಭಾಗಗಳಲ್ಲಿ ಒಮ್ಮೊಮ್ಮೆ ಮನಸ್ಸುಗಳ ಬೆಳವ ಣಿಗೆಯು ಕೆಲಕಾಲ ತಡೆದು ನಿಂತಂತೆ ಕಂಡುಬರುವದು. ಆದರೆ ಒಳಗಿನಿಂದಲೇ ತಿಳಿಯದಂತೆ ಅವುಗಳ ವಿಕಾಸವು ಸಾಗಿರುತ್ತದೆ. **ಒಂದೇ ನದಿಯ ಪ್ರವಾಹ ದಲ್ಲಿ ಮಡುವುಗಳೂ, ತಡಸಲುಗಳೂ, ಸುಳಿಗಳೂ ಇರುವಂತೆ ಏಕ ಸೂತ್ರವಾದ ಜೀವನದ ಝರಿಯಲ್ಲಿ ಈ ಏರಿಳಿತಗಳು ಕಂಡುಬರುವವು.** ಮೇಲಾಗಿ ಈ ಅವಸ್ಥಾವಿಶೇಷಗಳು ಸಾರ್ವತ್ರಿಕವಾಗಿ, ಸಾಮಾನ್ಯವಾಗಿ ಕಂಡು ಬಂದರೂ ಅಬಾಧಿತವಾದ ಸಿದ್ಧಾಂತಗಳೆಂದು ಇವುಗಳನ್ನು ಭಾವಿಸಕೂಡದು. ವಯೋನುರೂಪವಾದ ಈ ವ್ಯತ್ಯಾಸಗಳಲ್ಲಿ ಅಲ್ಲಲ್ಲಿ ಸಾಕಷ್ಟು ಅಪವಾದಗಳೂ ದೊರೆಯುವವು. ಕೆಲವು ಮಕ್ಕಳು ಮಾತನಾಡಲು ಹೆಚ್ಚು ತೀವ್ರವಾಗಿ ಪ್ರಾರಂಭಿಸುವವು. ಬೇರೆ ಕೆಲವು ಮಕ್ಕಳು ಬೇಗನೆ ನಡೆಯಲು ಪ್ರಾರಂಭಿಸು

ವವು. ಶಾರೀರಿಕ ಬೆಳವಣಿಗೆಯಲ್ಲಿ ಕಂಡುಬರುವ ಈ ಹೆಚ್ಚುಕಡಿಮೆಗಳು ಮಕ್ಕಳ ಮನೋವಿಕಾಸದಲ್ಲಿಯೂ ಆಗಾಗ್ಗೆ ತೋರಿಬರುವವು. ವಿಷಯ ಗ್ರಹಣದಲ್ಲಿ—ಆಸ್ಥೆ ಆತುರತೆಗಳಲ್ಲಿ—ಕೆಲವು ಮಕ್ಕಳ ಬುದ್ಧಿಯು ಒಳ್ಳೇ ಚುರುಕು. ಆದರೆ ಅದೇ ವಯಸ್ಸಿನ ಬೇರೆ ಮಕ್ಕಳು ಎಷ್ಟೋ ಮಂದವಾಗಿರುವವು. ಆದರೂ ಈ ಹೆಚ್ಚುಕಡಿಮೆಗಳೂ ಹೊಯ್ದಾಟಗಳೂ ಘೋಕಾಯಂತ್ರದ ಸೂಜಿಯು ಅತ್ತಿತ್ತ ಸರಿದಾಡುವಂತೆ—ಅದಕ್ಕೆ ಸರಿಯಾದ 'ಉತ್ತರ' ವು ದೊರೆಯುವ ವರೆಗೆ ಮಾತ್ರ. ಜೀವನ ಶಕ್ತಿಯ ಹೋರಾಟವೂ ಸರಿದಾಟವೂ ಹೀಗೆಯೇ ಸರಿ. ಬೆಳೆಯುವ ಮಕ್ಕಳ ಮಾನಸಿಕವಾದ ಈ ಹೊಯ್ದಾಟಗಳಿಗೆ ಹದರಿ ಬಿಡುವ ಇಲ್ಲವೆ ಅವರನ್ನೇ ಹದರಿಸಿಬಿಡುವ ಪ್ರವೃತ್ತಿಯು ಒಳ್ಳೇ ಹಾನಿಕರವಾದುದು. ಆದರೆ ಅವುಗಳನ್ನೆಲ್ಲ ಸರಿಯಾಗಿ 'ಗುರುತಿಸಿ,' ಅವುಗಳಿಗೆ ತಕ್ಕುದಾದ ಗುರಿಯನ್ನು ಗೊತ್ತುಮಾಡಿಕೊಡುವದು ಅವರೆಲ್ಲರ ಕರ್ತವ್ಯವಾಗಿದೆ. ನಿಸರ್ಗವು ನಿಯಮಿಸಿದ ವಯೋನುರೂಪವಾದ ಈ ಪರಿಳಿತಗಳನ್ನು ತಿಳಿದುಕೊಂಡು ತಮ್ಮ ವರ್ತನೆಯನ್ನು ತಿದ್ದಿಕೊಳ್ಳುವದು ಮಕ್ಕಳ ಹಿತೈಷಿಗಳಾದ ತಂದೆತಾಯಿಗಳೂ ಶಿಕ್ಷಕರೂ ಅವಶ್ಯವಾಗಿ ಮಾಡಬೇಕಾದ ಕಾರ್ಯ.

## ಪರಿಚ್ಛೇದ ೪

## ಅಖಂಡ ಶಿಕ್ಷಣ

ಇಂದಿನ ಶಿಕ್ಷಣವು ಎತ್ತಿಹಿಡಿದಿರುವ ಅನೇಕತತ್ವಗಳಲ್ಲಿ ಅಖಂಡಶಿಕ್ಷಣವು ಒಂದಾಗಿದೆ. ಅನೇಕ ಶಿಕ್ಷಣತಜ್ಞರು ಈ ಮಾತನ್ನು ತಪ್ಪದೇ ಆದ ರೀತಿಯಲ್ಲಿ ಹೇಳುತ್ತ ಬಂದಿರುವರು ಮಾನಸಶಾಸ್ತ್ರವೂ ಅದರಲ್ಲಿಯೂ ಪ್ರಾಯೋಗಿಕವಾದ ಮಾನಸಶಾಸ್ತ್ರವು ಅಖಂಡಶಿಕ್ಷಣದ ಅವಶ್ಯಕತೆಯನ್ನು ಸಾಧಾರವಾಗಿ ಮನವರಿಕೆ ಮಾಡಿಕೊಟ್ಟಿದೆ. ಶಿಕ್ಷಣವೆಂದರೆ 'ಆತ್ಮಸಂಸ್ಕಾರ' ವೆಂದು ಹಿಂದೆ ಹೇಳಿದೆ. ಸಂದರ್ಭೋಚಿತವಾಗಿ ಅರ್ಥಮಾಡಿಕೊಳ್ಳಬೇಕಾದ ಕೆಲವು ಶಬ್ದ

ಗಳಲ್ಲಿ 'ಶಿಕ್ಷಣ' ಶಬ್ದವು ಒಂದಾಗಿದೆ. ಕುದುರೆಗೆ ನಡಿಗೆ ಕಲಿಸುವದಕ್ಕೂ ಗಿಳಿಗೆ ಮಾತು ಕಲಿಸುವದಕ್ಕೂ 'ಶಿಕ್ಷಣ'ವೆಂದು ನಾವು ಹೇಳುವದುಂಟು. ಆದರೆ ಕುದುರೆಗೆ ನಡಿಗೆ ಕಲಿಸುವದಕ್ಕೂ ಮಗುವಿನ ಶಿಕ್ಷಣಕ್ಕೂ ಮಹದಂತರ ವುಂಟು. ಆಹಾರದ ಆಸೆ, ಚಿತ್ತದ ಭಯಗಳ ಸಹಾಯದಿಂದ ಒಂದು ಹೊಸ ರೂಢಿಯನ್ನು ಕುದುರೆಯ ಗತಿಗೆ ಹಾಕಿಕೊಟ್ಟರೆ 'ನಡಿಗೆ' ಕಲಿಸಿ ದಂತಾಯಿತು. **ಮಗುವಿನ ಶಿಕ್ಷಣವು ಇಷ್ಟು ಏಕಾಂಗಿಯೂ ಅಲ್ಲ, ಸುಲಭವಾದುದೂ ಆಗಿಲ್ಲ. ಮಗುವಿನ ಶಿಕ್ಷಣವು ಆತನ ಸಮಗ್ರ ಚೈತನ್ಯಕ್ಕೆ ಸಂಬಂಧಿಸಿರುವದು.** ಆತನ ಸಮಗ್ರ ಜೀವನವನ್ನೇ ಆವರಿಸು ವದು. ಮಗುವು ಚೈತನ್ಯ ಸ್ವರೂಪಿಯು. ಆತನ ಚೈತನ್ಯದ ಸಮಗ್ರತೆಯೇ—ಅಖಂಡತೆಯೇ—ಇಂದಿನ ಅಖಂಡ ಶಿಕ್ಷಣಕ್ಕೆ ಆಧಾರವಾಗಿದೆ, ಅದರ ಜೀವಾಳ ವಾಗಿದೆ.

ಅಖಂಡತೆ, ಅವಿಭಾಜ್ಯತೆ, ಏಕರೂಪತೆ—ಎನ್ನುವ ಶಬ್ದಗಳು ಸಾಮಾ ನ್ಯವಾಗಿ ಒಂದೇ ಅರ್ಥವನ್ನು ಕೊಡುವವು. ಈ ಅರ್ಥವನ್ನು ತಿಳಿದುಕೊಳ್ಳಲು ನಿತ್ಯ ಜೀವನದ ಒಂದು ಉದಾಹರಣೆಯನ್ನೇ ತೆಗೆದುಕೊಳ್ಳಬಹುದು. ಪೇಟೆ ಯಲ್ಲಿ ಪಾತ್ರೆಗಳನ್ನು ಕೊಂಡುಕೊಳ್ಳುವಾಗ್ಗೆ 'ಅಖಂಡ' ಪಾತ್ರೆಗಳನ್ನೇ ನಾವು ಹೆಚ್ಚಾಗಿ ಆರಿಸುವೆವು. ಅಡಿಗೆ ಮಾಡುವವರಿಗೆ ಈ ಅಖಂಡ ಪಾತ್ರೆ ಗಳ ಮಹತಿಯು ಗೊತ್ತಿದೆ. ಎರಕ ಹೊಯ್ದು, ಇಲ್ಲವೇ ಒಂದೇ ತಗಡನ್ನು ಬಡೆದು ಮಣಿಸಿ ಮಾಡಿದ ಪಾತ್ರೆಗಳಿವು. ಇವುಗಳಲ್ಲಿ ತುಣುಕುಗಳ ಜೋಡಣೆ ಯಿರುವದಿಲ್ಲ, ಇಲ್ಲವೆ ಬೆಸುಗೆಯಿಂದ ಅವುಗಳನ್ನು ಕೂಡಿಸಿ ಮಾಡಿರುವದಿಲ್ಲ. ಇಂಥ ಪಾತ್ರೆಗಳ ತಾಳಿಕೆಬಾಳಿಕೆಗಳೂ ಹೆಚ್ಚು. ಅಂತೆಯೇ ಇವುಗಳ ಬೆಲೆಯೂ ಹೆಚ್ಚು.

ಬೆಸುಗೆಯ ಪಾತ್ರೆಗಳ ನ್ಯೂನತೆಗಳೇನೆ ಇರಲಿ; ಹೆಚ್ಚುಕಡಿಮೆ ಬೆಲೆ ಯುಳ್ಳ, ಹೆಚ್ಚುಕಡಿಮೆ ತಾಳಿಕೆಯುಳ್ಳ ಬೇರೆ ಬೇರೆ ಲೋಹದ ತಗಡಿನ ತುಣು ಕುಗಳನ್ನು ಬೆಸುಗೆಯಿಂದ ಹೇಗಾದರೂ ಜೋಡಿಸಿ ನಾವು ಒಂದು ಪೂರ್ಣ ಪಾತ್ರೆಯನ್ನು ಮಾಡಬಹುದು. ಸಿರಿವಂತರಲ್ಲದವರು ಸಂಸಾರದಲ್ಲಿ ಜೋಡೆ

ಬೇರೆ ಪ್ರಯೋಜನಗಳಿಗಾಗಿ ಇಂಥ ಪಾತ್ರೆಗಳನ್ನು ಉಪಯೋಗಿಸುವದೂ ಉಂಟು. **ಆದರೆ ಶಿಕ್ಷಣದ ಅಧಿಷ್ಠಾತೃವಾದ ಮಗುವು ಬಿಡಿಯಾದ ಭಾಗಗಳ ಜೋಡಣೆಯಿಂದ ರಚಿಸಿದ ಜಡಮೂರ್ತಿಯಲ್ಲ.** ಮಗುವು ಚೈತನ್ಯ ಸ್ವರೂಪನು. **ಆತನ ಚೈತನ್ಯವು–ವ್ಯಕ್ತಿತ್ವವು–ಅಖಂಡವಾಗಿದೆ, ಇಡಿಯಾಗಿದೆ.** ಬೆಸುಗೆಯು ಪಾತ್ರೆಯಂತೆ ಬೇರೆ ಬೇರೆ ಶಕ್ತಿಗಳ ಜೋಡಣೆಯೇ ಆತನ ವ್ಯಕ್ತಿತ್ವವಾಗಿಲ್ಲ. ಅಖಂಡ ಶಿಕ್ಷಣದ ಮೂಲವೂ ಅವಶ್ಯಕತೆಯೂ ಮಗುವಿನ ಚೈತನ್ಯದ ಈ ಅಖಂಡತೆಯಲ್ಲಿಯೇ ನೆಲೆಸಿವೆ.

ಚೈತನ್ಯವಿರುವಲ್ಲಿ ಕ್ರಿಯೆಯು ಕಂಡುಬರುವದು. ಸಚೇತನ ಪ್ರಾಣಿಗಳು ತಮ್ಮ ಕೃತಿಗಳಿಂದಲೇ ತಮ್ಮ ಉನ್ನತಿಯನ್ನು–ವಿಕಾಸವನ್ನು–ಸಾಧಿಸಿಕೊಳ್ಳುವವು. **ಈ ಕ್ರಿಯಾಶಕ್ತಿ, ಚಟುವಟಿಕೆ, ಚೈತನ್ಯದ ಹಿರಿದಾದ ಕುರುಹು.** ಅಣುರೂಪವಾದ ಏಕೇಂದ್ರಿಯದ ಕ್ಷುದ್ರ ಜಂತುವಿನಲ್ಲಿಯೂ ಈ ಕ್ರಿಯಾಶಕ್ತಿಯು ತಲೆದೋರುವದು. ದೇವದೇವನ ಹೆಮ್ಮೆಯ ಕಲಾಕೃತಿಯಾದ ಮಾನವನಲ್ಲಿಯೂ ಇದೇ ಕ್ರಿಯಾಶಕ್ತಿಯ ಉನ್ನತಸ್ವರೂಪವು ಕಾಣಬರುವದು. ಇವರೀರ್ವರ ನಡುವಿನ ವಿವಿಧ ಜೀವರಾಶಿಗಳಲ್ಲಿ ಇದೇ ಕ್ರಿಯಾಶಕ್ತಿಯ ತರ–ತಮಭಾವವನ್ನು ನಾವು ನೋಡುವೆವು. ಕ್ರಿಯಾಶಕ್ತಿಯ ಸ್ಥೂಲರೂಪವು ಮಕ್ಕಳು ಕಟ್ಟುವ ಉಸುಕಿನ ಮನೆಯಂತಿದ್ದರೆ, ಮಾನವನ ಕ್ರಿಯಾಶಕ್ತಿಯು ಶಿಲ್ಪಕಲೆಯ ಕಳಸದಂತಿರುವ ಬೇಲೂರಿನ ದೇವಾಲಯಗಳಂತೆ ಇರುವದು. **ಜೀವನ ಸಂಗ್ರಾಮದಲ್ಲಿ ಮಗುವಿಗೆ ಇದೊಂದೇ ಸಾಧನವಾಗಿದೆ.** ಅಂತೆಯೇ ಇದಕ್ಕೆ 'ಜೀವಶಕ್ತಿ' 'ಆತ್ಮಶಕ್ತಿ' ಎಂದು ಹೇಳುವದುಂಟು. ಮಗುವಿನ ಜೀವನವು ಮುಂದರಿದಂತೆ ಈ ಆತ್ಮಶಕ್ತಿಯು ಅರಳುವದು. ನಮಗೆ ಬೇರೆಬೇರೆಯಾಗಿ ತೋರುವ, ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುವ ಮಗುವಿನ ಮಾನಸಿಕ ಶಕ್ತಿಗಳೆಲ್ಲ ಅರಳಿದ ಒಂದೇ ಆತ್ಮಶಕ್ತಿಯ ಪಕಳಿಗಳು ಮಾತ್ರ. **ಒಂದೇ ಶಕ್ತಿಯ ವಿವಿಧ ಮುಖಗಳು.**

ಮಾನಸಿಕ ಶಕ್ತಿಗಳ ಒಂದೆರಡು ಉದಾರಣೆಗಳಿಂದ ಈ ಮಾತು ಇನ್ನೂ ಹೆಚ್ಚಾಗಿ ತಿಳಿಯಬಹುದು. ಸ್ಮರಣಶಕ್ತಿಯನ್ನೇ ತೆಗೆದುಕೊಳ್ಳೋಣ. ಬಾಳು–ಬದುಕುಗಳ ಹೋರಾಟದಲ್ಲಿ, ಬೆಳೆಯುವ ಮಗು ಐಚ್ಛಿಕವಾಗಿ, ಅನಿವಾರ್ಯ

ವಾಗಿ ಮಾಡಬೇಕಾದ ಕ್ರಿಯೆಗಳಿಂದ ಅನೇಕ ಅನುಭವಗಳನ್ನು ಪಡೆಯುವದು. **ಮನಸ್ಸಿನಲ್ಲಿ ಉಳಿಯುವ ಪ್ರತಿಯೊಂದು ಅನುಭವದ ಸಾರವೇ 'ಸ್ಮೃತಿ.'** ತಾನೇ ನಿರ್ಮಿಸಿದ ಈ ಸ್ಮೃತಿ ಸಂಕೋಲೆಗಳಿಂದ ಕೂಡಿಕೊಂಡೇ ಕ್ರಿಯಾ-ಶಕ್ತಿಯು ಕೆಲಸ ಮಾಡಬೇಕಾಗುವದು. ಹಿಂದು, ಇಂದು, ಮುಂದು ಗಳ ಸಂಬಂಧವು ಈ ರೀತಿಯಾಗಿ ತಾನಾಗಿಯೇ ಸಾಧಿಸುವದು. ಈ ಬಗೆಯ ಸಂಬಂಧವನ್ನು ರಚಿಸುವದೇ ಸ್ಮರಣಶಕ್ತಿಯ ಕಾರ್ಯ. ಇಂದಿನ ಕೃತಿಗೆ ಹಿಂದಿನ ಸ್ಮೃತಿಯೇ ಕೇಂದ್ರ. ಹಿಂದಿನ ಸ್ಮೃತಿಯೇ ಇಂದಿನ ಕೃತಿಯ ರೂಪರೀತಿಗಳನ್ನು ಗೊತ್ತುಪಡಿಸುವದು. ಹೀಗಾಗಿ, ಸ್ಮರಣಶಕ್ತಿಯು ಸ್ವತಂತ್ರ ವಾದ ಶಕ್ತಿಯೂ ಅಲ್ಲ, ಪ್ರತ್ಯೇಕವಾಗಿ ನಡೆಯುವ ಕಾರ್ಯವೂ ಆಗಿರುವದಿಲ್ಲ. ಅಖಂಡವಾದ ಆತ್ಮ-ಶಕ್ತಿಯ ಅದೊಂದು ಸ್ವರೂಪ ಮಾತ್ರ.

ಮಗುವಿನ ಚೈತನ್ಯದ ಅಖಂಡತೆಗೆ ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಶಿಕ್ಷಣದ ಮೂಲಗಳೆಂದು ಹೇಳುವ ಸಹಜ ಪ್ರವೃತ್ತಿ ಗಳೂ ಕೂಡ ಕ್ರಿಯಾಶಕ್ತಿಯ ವಿವಿಧ ಸ್ವರೂಪಗಳೇ ಆಗಿರುವವು. ಸಚೇ ತನ ಪ್ರಾಣಿಗಳು ವಿವಿಧ ಸಂದರ್ಭಗಳಲ್ಲಿ ವಿಶಿಷ್ಟ ರೀತಿಯಿಂದ ಕಾರ್ಯ ಮಾಡು ವವು. ಪರಂಪರಾಗತವಾಗಿ ನಡೆದು ಬಂದ ಈ ಕಾರ್ಯದ ಸ್ಮೃತಿಯು ಹೆಪ್ಪುಗಟ್ಟಿ ಸುದೃಢವಾಗುವದು. ವ್ಯಕ್ತಿಯ ಸಾಮಾನ್ಯ ಸ್ಮೃತಿಗಿಂತಲೂ ಈ ಸಜಾತೀಯ ಸ್ಮೃತಿಯಲ್ಲಿ ಪ್ರೇರಕ ಶಕ್ತಿಯು ಹೆಚ್ಚು ಪ್ರಬಲವಾಗಿರುವದು. ಚೈತನ್ಯದ ಕ್ರಿಯಾಶಕ್ತಿಗೆ ಇವು ಸಂಕೋಲೆಗಳಂತೆ. ವಿಶಿಷ್ಟವಾದ ಸನ್ನಿವೇಶ ಗಳಲ್ಲಿ ಸಚೇತನವಾದ ಪ್ರಾಣಿಗಳಿಗೆ, 'ಹೀಗೆಯೇ ಮಾಡು' – ಎಂದು ಇವು ನಿರೂಪಿಸುವವು. ಇವುಗಳೂ ಕೂಡ ಚೈತನ್ಯದ ಉಸಿರಾದ ಕ್ರಿಯಾಶಕ್ತಿಯಿಂದ ಭಿನ್ನವಾದವುಗಳಲ್ಲ, ನಿರಪೇಕ್ಷವಾದವುಗಳೂ ಅಲ್ಲ.

ಮಗುವಿನ ಚೈತನ್ಯದ ಅಖಂಡತೆಯ ನಿದರ್ಶನಕ್ಕಾಗಿ ಒಂದೆರಡು ಉದಾ ಹರಣೆಗಳನ್ನು ಮಾತ್ರ ಮೇಲೆ ಹೇಳಿದೆ. ಚೈತನ್ಯದ ಜೀವಾಳವಾದ ಕ್ರಿಯಾ ಶಕ್ತಿಯ ವಿವಿಧ ಸ್ವರೂಪಗಳನ್ನೇ ಪ್ರಾಚೀನರು ಪ್ರತ್ಯೇಕವಾದ ಮಾನಸಿಕ ಶಕ್ತಿ ಗಳೆಂದು ಭಾವಿಸಿದರು. ಸ್ಮೃತಿ, ಅವಧಾನ, ತರ್ಕ–ಇವೇ ಮೊದಲಾದ

ಬಿಡಿಬಿಡಿಯಾದ ಶಕ್ತಿಗಳ ಸಮುಚ್ಚಯವೇ ಮನಸ್ಸೆಂದು ಅವರು ತಿಳಿದು ಕೊಂಡಿದ್ದರು. ಮಾನಸಿಕ ಕ್ರಿಯೆಯು ಒಂದೊಂದು ಸ್ವರೂಪವೂ ಒಂದೊಂದು ಹೊಸ 'ಶಕ್ತಿ'ಯಾಗಲು ಈ ಶಕ್ತಿಗಳ ಸಂಖ್ಯೆಗೆ ಮಿತಿಯಿಲ್ಲದಂತಾಯಿತು. ಮಾನಸಿಕ ಶಕ್ತಿಗಳ ಈ ಪ್ರತ್ಯೇಕತೆಯನ್ನು ಇಂದಿನ ಪ್ರಾಯೋಗಿಕ ಮಾನಸಶಾಸ್ತ್ರವು ಸಾಧಾರವಾಗಿ ನಿರಾಕರಿಸಿದೆ. ದೇಹದ ಬೇರೆಬೇರೆ ಅವಯವಗಳಿಗೆ ಅನುರೂಪವಾದ ಬೇರೆಬೇರೆ ತರದ ವ್ಯಾಯಾಮವನ್ನು ಒದಗಿಸಿ ಅವುಗಳ ಕಸುವನ್ನು ಹೆಚ್ಚಿಸಲು ಯತ್ನಿಸುವಂತೆ, ಈ ಮಾನಸಿಕ ಶಕ್ತಿಗಳನ್ನು ಕೂಡ ಅವುಗಳಿಗೆ ಅನುರೂಪವಾದ ವ್ಯಾಯಾಮವನ್ನು ಕೊಟ್ಟು ಬಿಡಿಬಿಡಿಯಾಗಿ ಬಲಿಸಬಹುದೆಂದು ಕೆಲವೊಂದು ಮಾನಸ ಶಾಸ್ತ್ರಜ್ಞರ ಕಲ್ಪನೆಯಾಗಿತ್ತು. ಸ್ಮರಣ ಶಕ್ತಿಯ ಬೆಳವಣಿಗೆಗಾಗಿ ಬಾರದ ಭಾಷೆಯಲ್ಲಿ ಗದ್ಯ ಪದ್ಯಗಳ ದೀರ್ಘವಾದ ಅವತರಣಿಕೆಗಳನ್ನು ಮಕ್ಕಳಿಗೆ ಪಾಠಮಾಡಲು ಹೇಳುವದೂ, ತಾರ್ಕಿಕ-ತರ್ಕಶಕ್ತಿಗಳನ್ನು ತಂದುಕೊಡುವದಕ್ಕಾಗಿ ಮುಗಿಯಲಾರದ ಗಣಿತದ ಗುಣಾಕಾರಗಳನ್ನು ಮಾಡ ಹಚ್ಚುವದೂ, ಕಾವ್ಯ ರಸಾಸ್ವಾದನೆಗಾಗಿ ಅಲ್ಲ-ಕಲ್ಪನಾಶಕ್ತಿಯನ್ನು ಬೆಳೆಸುವದಕ್ಕಾಗಿ ಕವಿತೆಯ ಅಭ್ಯಾಸವನ್ನು ಮಾಡಹಚ್ಚುವದೂ-ಈ ಬಗೆಯ ವಿಚಾರ ಸರಣಿಯು ಇವರದಾಗಿತ್ತು. ಅಂದಿನ ಶಿಕ್ಷಣವೂ ಈ ಹಾದಿಯನ್ನೇ ಹಿಡಿಯುತ್ತಿತ್ತು.

ಇಂದಿನ ಮಾನಸಶಾಸ್ತ್ರವು ಈ ವಿಚಾರ ಸರಣಿಯನ್ನು ಬಿಟ್ಟುಕೊಟ್ಟಿದೆ. ಇಂದಿನ ಶಿಕ್ಷಣದಲ್ಲಿ ವಿವಿಧ ವಿಷಯಗಳನ್ನು ಬಿಡಿಬಿಡಿಯಾಗಿ ಭಾವಿಸದೆ ಅವುಗಳನ್ನು ಪರಸ್ಪರವಾಗಿ ಹೊಂದಿಸಬೇಕೆಂಬ ಹವಣಿಕೆಯಿದೆ. ಆದರೂ ಶಿಕ್ಷಣ-ಕ್ರಮದಲ್ಲಿ ಪರಿಪೂರ್ಣವಾದ ಏಕರೂಪತೆ ಬಂದಿಲ್ಲ. ಪ್ರಾಥಮಿಕ, ಮಾಧ್ಯಮಿಕ, ಉಚ್ಚ ಶಿಕ್ಷಣಗಳಲ್ಲಿ ಹೊಂದಿಕೆಯಿಲ್ಲ. ವ್ಯಕ್ತಿವಿಕಾಸರೂಪವಾದ ಶಿಕ್ಷಣವು ಇವುಗಳಲ್ಲಿ ನಿರರ್ಗಳವಾಗಿ, ಏಕಮುಖವಾಗಿ, ಸಂತತವಾಗಿ ಸಾಗುವದಿಲ್ಲ. ವರ್ಧಾ ಯೋಜನೆಯು ಈ ನ್ಯೂನತೆಯನ್ನು ಸರಿಪಡಿಸಲು ಯತ್ನಿಸಿದೆ. ಇದಲ್ಲದೆ ಜೀವನೋಪಯೋಗಿಯಾದ ಮೂಲೋದ್ಯೋಗದೊಡನೆ ಹಾಗೂ ಜೀವನದ ಪರಿಸರಣಗಳಾದ ನಿಸರ್ಗ-ಸಮಾಜಗಳೊಡನೆ

ವಿಷಯಸಾಮಂಜಸ್ಯವನ್ನು ಸಾಧಿಸುವದು ಮೂಲಶಿಕ್ಷಣದ ಗುರಿಯಾಗಿದೆ. ವಿಷಯಗಳನ್ನು ಹೀಗೆ ತಳಕುಹಾಕಲೆತ್ನಿಸುವ ವಿಷಯಸಾಮಂಜಸ್ಯದ ಈ ವಿಧಾನಕ್ಕೆ ಜ್ಞಾನದ ಅಖಂಡತೆಯೆ ಆಧಾರವಾಗಿದೆ. ವಿಷಯಸಾಮಂಜಸ್ಯವು-ಇವನ್ನೇ ಅಖಂಡ ಶಿಕ್ಷಣವೆಂದು ಹೇಳಬಹುದು-ಕೃತ್ರಿಮವಾದುದಲ್ಲ. ಮಗುವಿನ ಮನೋಧರ್ಮಕ್ಕೆ ಇದು ಪರಿಪೂರ್ಣವಾಗಿ ಹೊಂದಿಕೊಳ್ಳುವದು. ಮಗುವಿನ ಮಾನಸಿಕ ಕ್ರಿಯೆಯಾದರೂ ಈ ರೀತಿಯನ್ನೇ ಅನುಸರಿಸುವದು. ಮಗುವಿನ ಮೈ-ಮನ-ಆತ್ಮ-ಶಕ್ತಿಗಳೆಲ್ಲ ಸರಾಗವಾಗಿ, ಹೊಂದಿಕೆಯಾಗಿ ಬೆಳೆಯುವವೆಂಬುದು ಇಂದಿನ ಮಾನಸಶಾಸ್ತ್ರದ ಸಿದ್ಧಾಂತಗಳಲ್ಲಿ ಒಂದಾಗಿದೆ.

ಎಲೆ-ಹೂ-ಹೀಚು-ಕಾಯಿಗಳೆಲ್ಲ ಒಂದಕ್ಕೊಂದು ಭಿನ್ನವಾಗಿ ತೋರಿದರೂ ಅವುಗಳಲ್ಲಿ **ಹರಿದಾಡುವ ಜೀವರಸವು ಒಂದೇಯಾಗಿರುವಂತೆ,** ವಿವಿಧ ಪಾತ್ರಗಳನ್ನು ವಹಿಸಿ ರಂಗ ಭೂಮಿಯ ಮೇಲೆ ಬೇರೆಬೇರೆಯಾಗಿ ತೋರುವ ನಟನು ಮೂಲತಃ ಒಬ್ಬನೇಯಾಗಿರುವಂತೆ, ಮಗುವಿನ ಚೈತನ್ಯವು ತನ್ನ ವಿಕಾಸದಲ್ಲಿ ವಿವಿಧ ರೂಪಗಳನ್ನೂ, ವಿವಿಧಶಕ್ತಿಗಳನ್ನೂ ಮೈ-ಮನಗಳಲ್ಲಿ ಪ್ರಕಟಿಸಿದರೂ ಸ್ವರೂಪದಲ್ಲಿ ಅದು ಒಂದೇಯಾಗಿದೆ, ಅಖಂಡವಾಗಿದೆ. ಆಧುನಿಕ ಶಿಕ್ಷಣವು ಚೈತನ್ಯದ ಈ ಅಖಂಡತೆಯನ್ನು ಕಂಡುಹಿಡಿದಿದೆ. ಅನೈಕ್ಯದಲ್ಲಿ ಐಕ್ಯತೆಯನ್ನೂ ವಿವಿಧತೆಯಲ್ಲಿ ಏಕರೂಪತೆಯನ್ನೂ ಸಾಧಿಸುವದು ಸನಾತನ ಧರ್ಮದ ತಿರುಳಾದಂತೆ ಮಗುವಿನ ಚೈತನ್ಯದ ಸ್ವರೂಪವೂ ಇದೇ ರೀತಿಯದಾಗಿರುವದು. ಚೈತನ್ಯದ ಈ ಅಖಂಡತೆಗೆ ಹೊಂದಿಕೊಂಡು, **ಮಗುವಿನ ವಿವಿಧ ಶಕ್ತಿಗಳ ಸರ್ವತೋಮುಖವಾದ ಪರಿಪೂರ್ಣವಾದ ಸಮರಸ ವಿಕಾಸವನ್ನು ಸಾಧಿಸುವದೇ ಅಖಂಡ ಶಿಕ್ಷಣದ ಗುರಿಯಾಗಿದೆ.**

# ಪರಿಚ್ಛೇದ ೫

## ಶಿಕ್ಷಣದ ಮೂಲಗಳು

ವಯೋಮಾನುಗುಣವಾಗಿ ಮಕ್ಕಳ ಶಾರೀರಿಕ–ಮಾನಸಿಕ ಬೆಳವಣಿಗೆಯ ಮೆಟ್ಟಲುಗಳನ್ನು ತಿಳಿದುದಾಯಿತು. ವ್ಯಾಪಾರದಲ್ಲಿ ತೊಡಗಿಸಿದ ಮೂಲ ಧನವು ಹೆಚ್ಚುವಂತೆ, ಶಿಕ್ಷಣದಿಂದ ವಿಕಾಸಗೊಳಿಸಬಹುದಾದ ಮಕ್ಕಳ ಮೂಲ ಧನವು ಯಾವುದೆಂಬುದನ್ನು ತಿಳಿದುಕೊಳ್ಳುವದು ಅವಶ್ಯವಿದೆ.

**ಶರೀರ–ಮನಸ್ಸು :—** ಇವುಗಳಲ್ಲಿ ನಿತ್ಯವಾದ ಬಿಡಿಸಲಾರದ ಸಂಬಂಧ ವಿದೆ. ದುರ್ಬಲವಾದ ಶರೀರದಲ್ಲಿ ಸಾಮಾನ್ಯವಾಗಿ ಮನಸ್ಸು ದುರ್ಬಲ ವಾಗಿರುವದು. **ನಿರೋಗಿಯಾದ ಶರೀರದೊಡನೆ ನಿರ್ದುಷ್ಟವಾದ ಮನಸ್ಸನ್ನೂ ಶಿಕ್ಷಣವು ತಂದುಕೊಡಬೇಕು.** ಶರೀರವು ಮನಸ್ಸಿನ ನಿಯಂತ್ರಣಕ್ಕೆ ಅಧೀನವಾಗಿರುವಂತೆ, ಶರೀರದ ಸಹಕಾರ್ಯವಿಲ್ಲದ ಮನಸ್ಸೂ ಅಸಹಾಯವಾಗಿಬಿಡುವದು. ಒಂದಕ್ಕೆ ಮತ್ತೊಂದರ ಸಹ ಕಾರ್ಯವು ತಪ್ಪಿದರೆ ಯಾವ ಕಾರ್ಯವೂ ಸರಿಯಾಗಿ ನಡೆಯದು.

**ಇಂದ್ರಿಯಗಳು :—** ಶರೀರವನ್ನು ಪೋಷಿಸುವಂತೆ, ಮನಸ್ಸನ್ನೂ ಬೆಳೆಯಿಸಬೇಕು. ಇಂದ್ರಿಯಗಳು ಮನಸ್ಸಿನ ಬಾಗಿಲುಗಳು. ಇಂದ್ರಿಯ ಗಳ ಕಾರ್ಯದಿಂದಲೇ ಮನಸ್ಸಿಗೆ ಅವಶ್ಯವಾದ 'ಆಹಾರ' ವು ಮುಟ್ಟಬೇಕು. **ಮೊದಲಿನ ಕೆಲವು ವರ್ಷಗಳಲ್ಲಿ ಮಗುವಿಗ ಇಂದ್ರಿಯಗಳೇ ಜ್ಞಾನದ ಮುಖ್ಯ ಸಾಧನಗಳು.** ಇಂದ್ರಿಯಗಳ ಸಹಾಯದಿಂದಲೇ ಆತನು ತನ್ನ ಸುತ್ತು ಮುತ್ತಲಿನ ಜಗತ್ತಿನೊಡನೆ ಸಂಬಂಧ ಬೆಳಸುವನು, ವ್ಯವಹರಿಸುವನು. ಜಗತ್ತಿನ ಬೌದ್ಧಿಕವಾದ ದಿಗ್ವಿಜಯಕ್ಕೆ ಇಂದ್ರಿಯಗಳ ಸಹಕಾರವೇ ಆತನಿಗೆ ಸಮರಸನ್ನಾಹ. ಎಳೆ ವಯಸ್ಸಿನ ಶಿಕ್ಷಣದಲ್ಲಿ ಇಂದ್ರಿಯಗಳಿಗೂ ಅವುಗಳ ಯಥೋಚಿತವಾದ ಸಂಸ್ಕರಣಕ್ಕೂ ಮಹತ್ವದ ಸ್ಥಾನವಿದೆಯೆಂಬುದನ್ನು ಪೆಸ್ಟೆಲೊರ್ಝಿ ಮೊದಲಾದ ಶಿಕ್ಷಣತಜ್ಞರು ಕಂಡುಹಿಡಿದರು. ಆದರೆ ಇದ ಕ್ಕೊಂದು ವ್ಯವಸ್ಥಿತರೂಪವನ್ನು ಕೊಟ್ಟವರು ಮಾತಾ ಮಾಂಟೆಸರಿಯವರು.

**ಮನಸ್ಸು :—** ಮನಸ್ಸಿನ ಪ್ರೇರಣೆಯೇ ಎಲ್ಲ ಇಂದ್ರಿಯಗಳ ಕ್ರಿಯಾ ಶಕ್ತಿ. ಮನಸ್ಸಿಲ್ಲದಿದ್ದರೆ ಸಮೀಪದ ವಸ್ತು ಕಣ್ಣಿಗೆ ಕಾಣಿಸದು, ಶಬ್ದ ಕಿವಿಗೆ

ಕೇಳಿಸದು. ಕಣ್ಣು-ಕಿವಿಗಳಂತೆ ಮನಸ್ಸು ಕಾಣುವ ವಸ್ತುವಲ್ಲ, ಅಗೋಚರವಾದುದು. **ಮನಸ್ಸು ಒಂದು 'ವಸ್ತು' ವಾಗಿರದೆ ಅಂತರ್ಯವಾದ ಶಕ್ತಿಯಾಗಿರುವದು.** ಈ ಶಕ್ತಿಯ ಅಡಳಿತಕ್ಕೆ ಎಲ್ಲ ಇಂದ್ರಿಯಗಳೂ ಆಧೀನವಾಗಿರುವವು. ಮನಸ್ಸು ಬುದ್ಧಿಗೆ ಬಾಗುವದು. ಬುದ್ಧಿಯು ಆತ್ಮದ ಆಡಳಿತಕ್ಕೆ ಸೇರಿದುದು.

**ಸಚೇತನ-ಅಚೇತನ ಕ್ರಿಯೆಗಳು :—** ಆತ್ಮ-ಚೈತನ್ಯ-ಮನಸ್ಸು ಎಂದು ಸ್ಥೂಲವಾಗಿ ಒಂದೇ ಅರ್ಥದಲ್ಲಿ ಉಪಯೋಗಿಸುವದುಂಟು. ಪ್ರಾಣಿಗಳ ವಿಶಿಷ್ಟವಾದ ಆತ್ಮಶಕ್ತಿಯೇ ಅವುಗಳಿಂದ ಎಲ್ಲ ಕಾರ್ಯಗಳನ್ನು ಮಾಡಿಸುವದು. ಪ್ರಾಣಿಗಳ ತರಗತಿಯು ಹೆಚ್ಚುಕಡಿಮೆಯಾದಂತೆ ಈ ಶಕ್ತಿಯ ಪರಿಮಿತಿಯೂ ಹೆಚ್ಚುಕಡಿಮೆಯಾಗುವದು. ಸಚೇತನ ಪ್ರಾಣಿಯ ವ್ಯವಹಾರಕ್ಕೂ ನಿರ್ಜೀವ ವಸ್ತುವಿನ ವ್ಯವಹಾರಕ್ಕೂ ಮಹದಂತರವಿದೆ. **ಸಚೇತನ ಪ್ರಾಣಿಯ ವ್ಯವಹಾರವು ಸಹೇತುಕವಾಗಿರುವದು. ನಿರ್ಜೀವ ವಸ್ತುವಿನ ಕಾರ್ಯವು ಯಾಂತ್ರಿಕವಾಗಿರುವದು.** ಗಾಲಿಯನ್ನು ಮತ್ತೊಬ್ಬರು ಉರುಳಿಸಬೇಕಾಗುವದು. ಹಾಲಿಗಾಗಿ ಬೆಕ್ಕು 'ಸ್ವಯಂಪ್ರೇರಣೆ' ಯಿಂದ ಮನೆಯಲ್ಲಿ ಸುತ್ತಾಡುವದು. ಹಾಲು ದೊರೆತರೆ ಬೆಕ್ಕು ತನ್ನ 'ಕ್ರಿಯೆ' ನಿಲ್ಲಿಸಬಹುದು, ಬದಲಿಸಬಹುದು. ಯಾಂತ್ರಿಕ ಕ್ರಿಯೆಯು ತಾನಾಗಿಯೇ ನಿಲ್ಲಲಾರದು, ಬದಲಿಸಲಾರದು. ಆತ್ಮ ರಕ್ಷಣೆ-ವಂಶಾಭಿವೃದ್ಧಿಗಳು ಸಚೇತನವಾದ ಸೃಷ್ಟಿಯ ಕಾರ್ಯಕ್ಕೆ ಮೂಲೋದ್ದೇಶಗಳು.

**ಸಹಜ ಪ್ರವೃತ್ತಿಗಳು :—** ಈ ಮೂಲೋದ್ದೇಶಗಳೊಡನೆ ಸಹಕರಿಸಿ ವಿಶಿಷ್ಟವಾದ ರೀತಿಯಲ್ಲಿ ಪಶುಪಕ್ಷಿ ಮನುಷ್ಯರನ್ನು ಕಾರ್ಯ ಮಾಡಲು ಹಚ್ಚುವ ಬೇರೆ ಕೆಲವು **ಪ್ರೇರಕ ಶಕ್ತಿಗಳಿರುವವು.** ಇವುಗಳಿಗೆ ಸಹಜ ಪ್ರವೃತ್ತಿಗಳೆಂದು ಹೆಸರು. ಈ ಸಹಜ ಪ್ರವೃತ್ತಿಗಳ ಬಗ್ಗೆ ಹಳೆ ಕಾಲದ ವಿಚಾರವೊಂದಿದೆ. ಅವರು ತಿಳಿದುಕೊಂಡಂತೆ, ಮನುಷ್ಯನನ್ನು ಬಿಟ್ಟು ಉಳಿದ ಪ್ರಾಣಿಗಳೆಲ್ಲವೂ ಇವುಗಳಿಗೆ ಪೂರ್ಣವಾಗಿ ಆಧೀನವಾದವುಗಳು. ಆದರೆ ಮನುಷ್ಯನ ಕ್ರಿಯೆಗಳು ಆತನ ಬುದ್ಧಿಗೆ ಅಂಕಿತವಾಗಿರುವವು. ಆತನ ಸ್ವಾಭಾವಿಕ ಬಲಿ

ವುಗಳೆಲ್ಲವೂ ಕೀಳು. ಅವುಗಳನ್ನು ಒಗ್ಗಿಸುವದೇ ಹಿಂದಿನ ಶಿಕ್ಷಣದ ಧ್ಯೇಯ ವಾಗಿತ್ತು. ಇಂದು ಆ ದೃಷ್ಟಿ ಬದಲಿಸಿದೆ. ನಮ್ಮ ಉನ್ನತವಾದ ವಿಚಾರಗಳಿಗೂ ಬೆರಗುಗೊಳಿಸುವ ಬೌದ್ಧಿಕ ಚಟುವಟಿಕೆಗಳಿಗೂ ಈ ಸಹಜ ಪ್ರವೃತ್ತಿಗಳೇ ಅದೃಶ್ಯವಾಗಿ ಆಧಾರವಾಗಿವೆಯೆಂಬುದನ್ನು ಇಂದಿನ ಮಾನಸಶಾಸ್ತ್ರವು ಸಿದ್ಧ ಮಾಡಿಕೊಟ್ಟಿದೆ.

ಈ ಸಹಜ ಪ್ರವೃತ್ತಿಗಳನ್ನು ಸಂಪೂರ್ಣವಾಗಿ ವಿವೇಚಿಸಿದವರು ಮ್ಯಾಕ್ ಡೊಗಲ್ ಎಂಬ ಮಾನಸಶಾಸ್ತ್ರಜ್ಞರು. ಇವರು ಹೇಳುವಂತೆ ಈ ಪ್ರವೃತ್ತಿ ಗಳು 'ಸಹಜ' ವಾಗಿವೆ, ಹುಟ್ಟುಗುಣಗಳಾಗಿವೆ, ಇಲ್ಲವೆ ಆನುವಂಶಿಕಗ ಳಾಗಿವೆ. ಇವು ಕಲಿಕೆಯಿಂದ ಬಾರವು ಆದರೆ ಕಲಿಯುವದರ ಮೂಲ ದ್ರವ್ಯಗಳಾಗಿರುವವು ಹುಟ್ಟುಗುಣಗಳಾದರೂ ಹುಟ್ಟಿದಂದಿನಿಂದಲೇ ಎಲ್ಲವೂ ಹೊರಗೆ ಕಾಣವು. ತಮಗೆ ಸರಿಯಾದ ಸನ್ನಿವೇಶ—ಸಂದರ್ಭಗಳು ಒದಗಿ ದರೆ ತಾವಾಗಿಯೇ ತಲೆದೋರುವವು ಇಂಥ ಸಂದರ್ಭಸನ್ನಿವೇಶಗಳಲ್ಲಿ ಪ್ರಾಣಿಗಳೆಲ್ಲವೂ **ಸಜಾತೀಯವಾದ ಒಂದು ವಿಶಿಷ್ಟರೀತಿಯಿಂದ ನಡೆದು ಕೊಳ್ಳುವವು.** ಒಂದು ವಿಶಿಷ್ಟವಾದ ಕಾರ್ಯವು ತಾನಾಗಿಯೇ ನಡೆಯು ವದು. ಇದು ವಿಚಾರದ ಫಲವಲ್ಲ. ಅನುಭವದ ಪರಿಣಾಮವಲ್ಲ. ಆ ಸಮಯ ಸಂದರ್ಭಗಳೇ ಪ್ರಾಣಿಗಳ ಲಕ್ಷವನ್ನು ವಿಶಿಷ್ಟವಾದ ವಸ್ತುವಿನ ಕಡೆಗೆ ಸೆಳೆಯುವದು.

**'ಪ್ರತಿಕ್ಷಿಪ್ತ' ಕ್ರಿಯೆಗೂ ಸಹಜ ಪ್ರವೃತ್ತಿಗಳಿಗೂ ವ್ಯತ್ಯಾಸ ವಿರುವದು.** ಬೆಳಕಿಗೆ ಕಣ್ಣು ಮುಚ್ಚಿಕೊಳ್ಳುವದು ಮೊದಲಾದ ಪ್ರತಿಕ್ಷಿಪ್ತ ಕ್ರಿಯೆಗಳು ಕೇವಲ ಶಾರೀರಿಕವಾದವುಗಳು ಆ ಸ್ನಾಯುವಿಗೆ ಸಂಬಂಧಿಸಿದ ಒಂದು ಅವಯವವು ಮಾತ್ರ ಪ್ರತಿಕ್ಷಿಪ್ತಕ್ರಿಯೆಯಲ್ಲಿ ಭಾಗ ವಹಿಸುವದು. ಆದರೆ ಸಹಜ ಪ್ರವೃತ್ತಿಗಳಲ್ಲಿ ಸೇಂದ್ರಿಯವಾದ ಸಂಪೂರ್ಣ ಚೈತನ್ಯವೇ ಸಹ ಕರಿಸುವದು. ಅಂತೆಯೇ ಇವು ಹೆಚ್ಚು ವ್ಯಾಪಕವಾದವುಗಳು ಸಹಜ ಪ್ರವೃತ್ತಿಗಳನ್ನು ವ್ಯತ್ಯಾಸಗೊಳಿಸಲು ಬಾರದೆಂಬುದು ತಪ್ಪು ತಿಳುವಳಿ ಕೆಯು. ಶಿಕ್ಷಣದಿಂದಲೂ ಅನುಭವಗಳಿಂದಲೂ ಇವುಗಳನ್ನು ತಿದ್ದಬಹುದು,

ಉಜ್ವಲಗೊಳಿಸಬಹುದು. ಇವುಗಳೊಡನೆ ಬುದ್ಧಿಯು ಸಹಕರಿಸುವದು. ಪ್ರಾಣಿಗಳ ತರಗತಿಯು ಹೆಚ್ಚಾದಂತೆ ಬುದ್ಧಿಯ ಈ ಸಹಕಾರವೂ ಹೆಚ್ಚಾಗುವದು.

ಪ್ರತಿಯೊಂದು ಸಹಜ ಪ್ರವೃತ್ತಿಯಲ್ಲಿ ಮೂರು ಸೂತ್ರಗಳು ಕಂಡು ಬರುವವು:– ೧) ಸನ್ನಿವೇಶದ ಜ್ಞಾನ,–ತನ್ನೆಡೆಗೆ ಲಕ್ಷವನ್ನು ಸೆಳೆಯುವ ಒಂದು ವಿಶಿಷ್ಟ ವಸ್ತುವಿನ ಅಸ್ತಿತ್ವದ ಅರಿವು. ೨) ಅದರೊಡನೆ ವ್ಯವಹರಿಸುವ ಸಜಾತೀಯವಾದ ಒಂದು ವಿಶಿಷ್ಟ ಕಾರ್ಯಪ್ರವೃತ್ತಿ. ೩) ಇದಕ್ಕೆ ಅನುರೂಪವಾದ ಒಂದು ವಿಶಿಷ್ಟ 'ಭಾವ,' ಮನೋವೃತ್ತಿ. ಈ ಮೂರು ಸಂಗತಿಗಳು ಏಕಕಾಲಕ್ಕೆ ಕೂಡಿಯೇ ನಡೆಯುವವು.

ಸ್ವಾರ್ಥಕ್ಕೆ ಸಂಬಂಧಿಸಿದವುಗಳು :— ೧) **ಆಹಾರ ಸಂಪಾದನೆ.** ಇದು ದೇಹಧರ್ಮವಾದ ಹಸಿವೆಯಿಂದ ಭಿನ್ನವಾಗಿರುವದು. ಎಲ್ಲ ಸಜೀವ ಪ್ರಾಣಿಗಳಲ್ಲಿ ಸಮಾನವಾಗಿ ಕಂಡುಬರುವದು.

೨) **'ಯುಯುತ್ಸುತಾ'** (ಹೋರಾಟದ) ಒಲವು:–ಆತ್ಮ–ರಕ್ಷಣೆಯೇ ಈ ಹೋರಾಟದ ಉದ್ದೇಶ. ಹೋರಾಟವೆಂದರೆ ಕೇವಲ ಹೊಡೆದಾಟವಲ್ಲ. ವಿಚಾರಗಳ ತಾಕಲಾಟ, ಆದರ್ಶಗಳ ಅಂತಃಕಲಹ ಇದರಲ್ಲಿಯೇ ಸಮಾವೇಶವಾಗುವವು.

೩) **ಜಿಜ್ಞಾಸಾ :**— ತಿಳಿದುಕೊಳ್ಳುವ ಲವಲವಿಕೆ. ಇದುವೇ ಶಿಕ್ಷಣದ ತಳಹದಿ, ಮನೋವಿಕಾಸದ ಅಳತೆಗೋಲು. ಚಿಕ್ಕಮಕ್ಕಳಲ್ಲಿ ಇದು ಹೆಚ್ಚಾಗಿ ಜಾಗೃತವಾಗಿರುವದು.

೪) **ಪಲಾಯನ ಪ್ರವೃತ್ತಿ :**— ಇದು ಆತ್ಮರಕ್ಷಣೆಗಾಗಿ. ಭಯವೇ ಇದಕ್ಕೆ ಪ್ರೇರಕ. ಜೀವನದ ಯೋಜನೆಯಲ್ಲಿ 'ಭಯ'ಕ್ಕೂ ಒಂದು ಸ್ಥಾನವಿದೆ. ಆದರೆ ಸಮಾಜದ ಸುಸ್ಥಿತಿಗಾಗಿ ಇಲ್ಲವೇ ಶಾಲೆಯ ಶಿಸ್ತಿಗಾಗಿ ಭಯವನ್ನೆ ಅವಲಂಬಿಸುವದು ತಪ್ಪಾಗುವದು. **ಅಂಜಿಕೆಯು ಅಕಾರ್ಯಗಳನ್ನು ಬಿಡಿಸಬಹುದು. ಆದರೆ ಸತ್ಕಾರ್ಯಗಳನ್ನು ಮಾಡಲು ಪ್ರೇರೇಪಿಸದು.**

೫) **ರಚನಾಪ್ರವೃತ್ತಿ** :— ಮನುಷ್ಯರಲ್ಲಿ ಮಾತ್ರ ಪಲ್ಲ–ಪಶುಪಕ್ಷಿಗಳಲ್ಲಿಯೂ ಇದು ಕಂಡುಬರುವದು. ಉಸುಕಿನ ಮನೆಕಟ್ಟುವದು ಮೊದಲಾದ ಚಿಕ್ಕಮಕ್ಕಳ ಕೃತಿಗಳಲ್ಲಿ ಇದು ಮೊದಲಿನಿಂದಲೂ ತೋರಿಬರುವದು. ರಚನಾಕಾರ್ಯದಲ್ಲಿ ಅವರಿಗೆ ಸ್ವಾಭಾವಿಕವಾದ ಒಲವೂ ಸಂತೋಷವೂ ಉಂಟಾಗುವದು. ಕೈಗಾರಿಕೆಯ ಶಿಕ್ಷಣಕ್ಕಾಗಲೀ, ಇಂದಿನ ಮೂಲ ಶಿಕ್ಷಣಕ್ಕಾಗಲೀ ಈ ಪ್ರವೃತ್ತಿಯು ಬಲವಾದ ಆಧಾರವಾಗಿದೆ.

೬) **ಸಂಪಾದನಾ ಪ್ರವೃತ್ತಿ** :— ಎಲ್ಲ ಪ್ರಾಣಿಗಳಿಗೂ ಇದು ಸಮಾನವಾಗಿದ್ದರೂ ಇರುವೆ–ಇಣಚಿ–ಜೇನ್ನೊಣಗಳಲ್ಲಿ ಇದು ಹೆಚ್ಚಾಗಿ ಕಂಡುಬರುವದು. ಚಿಕ್ಕಮಕ್ಕಳು ಕೈಗೆ ಸಿಕ್ಕದ್ದನ್ನು ಕೂಡಿಹಾಕುವರು. ಉಪಯುಕ್ತವಾದ 'ಹವ್ಯಾಸ' ಗಳಲ್ಲಿ ಇದನ್ನು ತೊಡಗಿಬೇಕು.

೭) **ಜುಗುಪ್ಸಾ ಪ್ರವೃತ್ತಿ** :— ಜುಗುಪ್ಸೆಯೆಂದರೆ ತಿರಸ್ಕಾರವಲ್ಲ. 'ಇದು ನನಗೆ ಬೇಡ–ಇದರಿಂದ ನಾನು ದೂರವಾಗಿರಬೇಕು' –ಎನ್ನುವ ಭಾವನೆ. ನೈತಿಕ ಶಿಕ್ಷಣದಲ್ಲಿ ನಾವು ಈ ಪ್ರವೃತ್ತಿಯನ್ನು ಹೆಚ್ಚಾಗಿ ಉಪಯೋಗಿಸಬಹುದು. ಹೊಲಸು ಹೇಸಿಗೆಗಳ ಬಗ್ಗೆ, ಅನೀತಿ–ದುಷ್ಕೃತಿಗಳ ಬಗ್ಗೆ ಸಹಜವಾದ ತಿರಸ್ಕಾರವನ್ನು–ಅವುಗಳಿಂದ ದೂರವಾಗಿರುವ ಪ್ರವೃತ್ತಿಯನ್ನು–ಚಿಕ್ಕಮಕ್ಕಳ ಮನಸ್ಸಿನಲ್ಲಿ ಪರ್ಯಾಯದಿಂದ ಮೂಡಿಸಲು ಯತ್ನಿಸಬೇಕು.

**ಸಂತಾನೋತ್ಪಾದನ ಪ್ರವೃತ್ತಿಗಳು** :— ಇದು ಇನ್ನೊಂದು ಗುಂಪು. ಇವುಗಳಲ್ಲಿ ಗಂಡು–ಹೆಣ್ಣುಗಳೆರಡನ್ನು ಶಾರೀರಿಕ ಸಂಬಂಧಕ್ಕಾಗಿ ಪ್ರೇರೇಪಿಸುವ (೧) **ಕಾಮ ಪ್ರವೃತ್ತಿಯು** ಮೊದಲಿನದು. ಶಿಕ್ಷಣ ಶಾಸ್ತ್ರದ ವಿವೇಚನೆಯಲ್ಲಿ 'ಕಾಮ' ವೆಂದೊಡನೆ ಕಿವಿ ಮುಚ್ಚುವ ಮಡಿವಂತರ ಕಾಲವು ಇಂದು ಕಳೆದುಹೋಗಿದೆ. ನಮ್ಮ ಜೀವನವನ್ನು ರೂಪುಗೊಳಿಸುವ ವಿವಿಧ ಆತ್ಮಶಕ್ತಿಗಳಲ್ಲಿ ಈ ಪ್ರವೃತ್ತಿಯೂ ಒಂದಾಗಿದೆ. ಇದರ ಪ್ರಭಾವವನ್ನು ಇಂದಿನ ಮಾನಸಶಾಸ್ತ್ರವು ತಿಳಿದಿದೆ. ಇದನ್ನೇ ಜೀವನದ ಆದ್ಯಶಕ್ತಿಯೆಂದು ಭಾವಿಸುವ ಮಾನಸ ಶಾಸ್ತ್ರಜ್ಞರೂ ಇರುವರು. ಪ್ರಾಯದ ಅವಧಿಯಲ್ಲಿ





ಯಂತೂ ಈ ಪ್ರವೃತ್ತಿಯೇ ವ್ಯಕ್ತಿಯನ್ನು ಪೂರ್ಣವಾಗಿ [illegible]ದು. ಈ ಸಮಯದಲ್ಲಿ ಶಾರೀರಿಕ ಆಟ-ಕಸರತ್ತುಗಳಲ್ಲಿ ಯುವಕರ ಮನಸ್ಸನ್ನು ತೊಡಗಿಸಬೇಕು. ಇದರಿಂದ ಈ ಪ್ರವೃತ್ತಿಗೆ ಹರಿದುಹೋಗಲು ಬೇರೊಂದು ಹರಿ ಕಡಿದು ಕೊಟ್ಟಂತಾಗುವದು.

ಇದೇ ಗುಂಪಿನ ಎರಡನೆಯ ಪ್ರವೃತ್ತಿಯು—**ಅಪತ್ಯ ಪ್ರೇಮ.** ಇದು ಪಶುಪಕ್ಷಿಗಳಿಗೂ ಮಾನವರಿಗೂ ಸಮಾನವಾಗಿರುವದು. ಮರಿಗಳಿಗಾಗಿ ಪಶುಪಕ್ಷಿಗಳು ವಹಿಸುವ ದಕ್ಷತೆಯೂ ಮಕ್ಕಳಿಗಾಗಿ ತಂದೆ ತಾಯಿಗಳು ಪಡುವ ಶ್ರಮವೂ ಒಂದೇ ವಿಧವಾದವುಗಳು. ಪಶುಪಕ್ಷಿಗಳ ಮರಿಗಳು ಅಲ್ಪಕಾಲದವರೆಗೆ ಮಾತ್ರ ಪರಾವಲಂಬಿಗಳಾಗಿರುವವು. ಆದರೆ **ಮಾನವ ವರ್ಗದಲ್ಲಿ ಮಕ್ಕಳ ಪರಾವಲಂಬನದ ಅವಧಿಯು ದೀರ್ಘವಾಗಿರುವದು.** ಈ ಅವಧಿಯಲ್ಲಿ ಅವರು ಅತ್ಯಂತ ಅಸಹಾಯಸ್ಥಿತಿಯಲ್ಲಿರುವರು. ಅಪತ್ಯ ಪ್ರೇಮವೇ ಚಿಕ್ಕಮಕ್ಕಳಿಗೆ ಈ ಸ್ಥಿತಿಯಲ್ಲಿ ಮೂಲಾಧಾರವಾಗಿದೆ. ಇದೇ ಅವಧಿಯಲ್ಲಿಯೇ ಹಿರಿಯರು ಗಳಿಸಿಟ್ಟ ಅನುಭವ ಸಂಪತ್ತಿಯನ್ನು, ಸಜಾತೀಯ ರೀತಿನೀತಿಗಳನ್ನು ಚಿಕ್ಕಮಕ್ಕಳು ಸಂಪಾದಿಸುವರು.

**ಸಾಮಾಜಿಕ ಜೀವನೋಪಯೋಗಿಯಾದ ಪ್ರವೃತ್ತಿಗಳು** ಮೂರನೆಯ ಪ್ರಕಾರದವುಗಳು:— ೧) **ಸಾಂಘಿಕ ಪ್ರವೃತ್ತಿ** :— ಆತ್ಮರಕ್ಷಣೆಗಾಗಿ ಪಶುಪಕ್ಷಿಗಳು ಗುಂಪನ್ನು ಕಟ್ಟಿಕೊಳ್ಳುವವು. ಆದರೆ ಮಾನವ ಸಮಾಜದ ರಚನೆಯು ಇದಕ್ಕಿಂತಲೂ ಹೆಚ್ಚು ಉದಾತ್ತವಾದುದು. **ಮನುಷ್ಯನು ಒಂಟಿಗನಾಗಿ ಬಾಳಲಾರನು.** ಸಮಾಜದಲ್ಲಿರುವದೇ ಆತನಿಗೊಂದು ತೃಪ್ತಿಯನ್ನು ತಂದುಕೊಡುವದು. ಸಾಮಾಜಿಕ ಜೀವನದಲ್ಲಿಯೇ ಆತನ ಅಂತಃಶಕ್ತಿಗಳು ಪ್ರಕಟಗೊಳ್ಳುವವು, ಬೆಳೆಯುವವು. ಆತನು ಜೀವನದ ಸಫಲತೆಯನ್ನು ಪಡೆಯುವನು. ಸಹಕಾರ ಶ್ರಮವಿಭಾಗಗಳು ಸಮಾಜದ ಒಟ್ಟು ಹಿತವನ್ನೂ ಸಾಧಿಸುವವು, ವ್ಯಕ್ತಿವಿಕಾಸಕ್ಕೂ ಆಸ್ಪದಕೊಡುವವು. ಕೂಡಿ ಬಾಳುವ, ಕೂಡಿಕೊಂಡು ಕೆಲಸ ಮಾಡುವ ಮನೋವೃತ್ತಿಯನ್ನು ಇಂದಿನ ಚಿಕ್ಕಮಕ್ಕಳಲ್ಲಿ ತಂದುಕೊಟ್ಟು ಮುಂದಿನ ಸಾಂಘಿಕ ಜೀವನಕ್ಕೆ ಅವರನ್ನು ಅಣಿಗೊಳಿಸುವದೇ ಶಿಕ್ಷಣದ ಮೂಲೋದ್ದೇಶಗಳಲ್ಲಿ ಒಂದಾಗಿದೆ.

ನಮ್ಮ ಸಾಮಾಜಿಕ ಪ್ರವೃತ್ತಿಯಲ್ಲಿ ಮೂರು ಮುಖ್ಯ ಸೂತ್ರಗಳು ಕಂಡು ಬರುವವು :— (೧) **ಭಾವ ಸಾಮ್ಯತೆ** (Sympathy) (೨) **ಅನುಕರಣ** ( Imitaion ); (೩) **ವಿಚಾರ ಸಾಮ್ಯತೆ** ( Suggestion ). ಸಮಾಜದ ಸಂಘಟನೆಗೆ ಇವು ಮೂರು ಅವಶ್ಯವಾದವುಗಳು. ಭಾವ ಸಾಮ್ಯತೆಯಲ್ಲಿ ಒಬ್ಬರ ಭಾವವು ಮತ್ತೊಬ್ಬರಲ್ಲಿ ಪ್ರವಹಿಸುವದು. ಹೆದರಿಕೆಯ ಕಾರಣವು ಗೊತ್ತಿರದೆ, ಒಬ್ಬನು ಓಡುಬರುವನ್ನು ನೋಡಿ ಮತ್ತೊಬ್ಬನೂ ಓಡತೊಡಗುವನು. ನಾವು ನಕ್ಕರೆ ಚಿಕ್ಕ ಮಗುವು ನಗುವದು. ಉತ್ಸಾಹ ಉದ್ವಿಗ್ನತೆಗಳು ತಿಳಿಯದೆಯೇ ಸುತ್ತಲೂ ಹರಡುವವು.

ಅನುಕರಣವು ಸಾಮಾಜಿಕ ಒಲವಿನ ಎರಡನೇ ಸೂತ್ರವು. ಅನುಕರಣದ ಉಪಯುಕ್ತತೆಯು ಶಿಕ್ಷಣದಲ್ಲಿ ವಿಶೇಷವಾಗಿದೆ. ಒಬ್ಬರಂತೆ ಮಾಡಬೇಕೆನ್ನುವದು–ಮತ್ತೊಬ್ಬರಂತೆ ಆಗಬೇಕೆನ್ನುವದು, ಅನುಕರಣದ ಎರಡು ಸ್ವರೂಪಗಳು. ಮಾತು ಕಲಿಯುವದನ್ನು ಮೊದಲು ಮಾಡಿಕೊಂಡು ಮಕ್ಕಳ ಜೀವನದ ರೂಪು–ಸಿದ್ಧಿಗಳನ್ನು ಅನುಕರಣವೇ ಗೊತ್ತುಪಡಿಸುವದು. **ಚಿಕ್ಕ ಮಕ್ಕಳಿಗೆ ಎಳೆತನದಲ್ಲಿ ಶಿಕ್ಷಕನೆ ಆದರ್ಶ, ಮೆಚ್ಚುಗೆಯ ಗೆಳೆಯನೇ ಮಾದರಿ.** ಶಾಲೆಯಲ್ಲಿ, ಶಿಕ್ಷಣದ ಎಲ್ಲ ವಿಷಯಗಳಲ್ಲಿ ಆದರ್ಶ ಪದವಿಗೆ ಯೋಗ್ಯವಾದುದನ್ನೇ ಚಿಕ್ಕಮಕ್ಕಳಿಗೆ ನಾವು ಯಾವಾಗಲೂ ಒದಗಿಸಬೇಕು.

ವಿಚಾರ ಸಾಮ್ಯತೆಯು ಸಾಮಾಜಿಕ ಪ್ರವೃತ್ತಿಯ ಮೂರನೆಯ ಸೂತ್ರವು. ಎರಡನೆಯವರ ವಿಚಾರಗಳನ್ನು ಅನಿಮಿತ್ತವಾಗಿ ನಮ್ಮವುಗಳನ್ನಾಗಿ ಮಾಡಿಕೊಳ್ಳುವದೇ ವಿಚಾರತಾದಾತ್ಮ್ಯವು. ನಡೆದು ಬಂದ ಅನೇಕ ನಂಬಿಗೆಗಳನ್ನು ಅವುಗಳ ಸತ್ಯಾಸತ್ಯತೆಯ ತೊಡಕಿನಲ್ಲಿ ಬೀಳದೆ ನಾವು ತೆಗೆದುಕೊಳ್ಳುವೆವು. ನಮಗೆ ಸಂಬಂಧಿಸಿದ ಸಂಸ್ಥೆಯ ಸಂಪ್ರದಾಯಗಳೂ ನಮ್ಮಲ್ಲಿ ಸೇರುವವು.

ಸಾಮಾಜಿಕ ಪ್ರವೃತ್ತಿಗಳಿಗೆ ತೀರ ಸಮೀಪವಾಗಿ ಹೊಂದಿಕೊಂಡಿರುವ ಮತ್ತೆರಡು ಸ್ವಾಭಾವಿಕ ಒಲುವುಗಳುಂಟು. ಸಾಂಘಿಕ ಜೀವನದಲ್ಲಿ (೧) ನೇತಾರರು–**ಮುಂದಾಳುಗಳು** ಕೆಲವರು; (೨) ನೀಯಮಾನರು–**ಅನುಯಾ**

**ಯಿಗಳು** ಕೆಲವರು. ಕಾಡು ಸ್ಥಿತಿಯಲ್ಲಿ ನಾಯಕನಾಗುವವನಿಗೆ ಶಾರೀರಿಕ ಬಲವೊಂದೇ ಸಾಕಾಗಿತ್ತು. ಇಂದಿನ ಮುಂದಾಳುತನವು ಬೇರೆ ಗುಣಗಳನ್ನು ಅವಲಂಬಿಸಿದೆ. ಆತನು ಸಮಾಜದೊಡನೆ ಹೆಜ್ಜೆ ಹಾಕಬೇಕು. ಸಮಾಜದ 'ನಾಡಿ' ಯನ್ನು ನೋಡಿ ಅದರಂತೆ ನಡೆಯಬೇಕು. ಜನತೆಯ ಇಂಗಿತವನ್ನರಿತುಕೊಳ್ಳುವ ಜಾಣ್ಮೆಯೂ, ಅಂತಿಮಹಿತದ ಮುನ್ನೋಟವೂ, ಮನವೊಲಿಸುವ ಮಾತುಗಾರಿಕೆಯೂ ಆತನಲ್ಲಿರಬೇಕು. ಮುಂದಾಳುತನದಲ್ಲಿ ಯಾವಾಗಲೂ ಲೌಕಿಕವಾದ ಲಾಭವಿರದಿದ್ದರೂ ಪ್ರಕೃತಿಸಹಜವಾದ ಲೋಭವಿದೆ. **ತನ್ನದೇ ನಡೆಯಬೇಕೆನ್ನುವದು ಹೃದಯದ ಒಲವುಗಳಲ್ಲಿ ಒಂದಾಗಿರುವದು.**

ಹಿರಿಯರನ್ನಾಗಿ ಮಾಡಿಕೊಂಡವರನ್ನು ಹಿಂಬಾಲಿಸುವದೂ ಕೆಲವರಲ್ಲಿ ಹುಟ್ಟುಗುಣವಾಗಿರುವದು. ಸಮಾಜದ ಹಿತಸಂಬಂಧಗಳು ಸುಸೂತ್ರವಾಗಿ ಸಾಗಬೇಕಾದರೆ ಹಿರಿಯತನವೂ ಬೇಕು; ಹಿಂಬಾಲಿಸುವ ಗುಣವೂ ಬೇಕು. ಇವುಗಳ ಸರಿಯಾದ ಹೊಂದಿಕೆಯಲ್ಲಿಯೇ ಸಮಾಜದ ಹಿತವಿದೆ. **ಅಧಿಕಾರ ಆಧೀನತೆಗಳೆರಡೂ ಸಾಂಘಿಕ ಜೀವನದ ಹಾಸುಹೊಕ್ಕುಗಳಿದ್ದಂತೆ.** ಅನುಯಾಯಿಗಳಲ್ಲಿ ಮುಂದಾಳಿನ ಮನೋಗತವನ್ನರಿತುಕೊಳ್ಳುವ ಮಾರ್ಮಿಕತೆ ಬೇಕು. ಸಂತೋಷದಿಂದ ಅದನ್ನು ಸ್ವೀಕರಿಸುವ ಮನಸ್ಸಿನ ಸಿದ್ಧತೆಯಿರಬೇಕು. ಅದನ್ನು ಸಿದ್ಧಿಗೊಳಿಸುವ ಶಕ್ತಿಯುಕ್ತಿಗಳಿರಬೇಕು. **ಅನುಯಾಯಿತ್ವವು ಸುಲಭವಾದುದಲ್ಲ.** ಸ್ವಸಂತೋಷದಿಂದ ಅದನ್ನು ಕೈಕೊಂಡರೆ, ವಿವೇಕ ವಿಮರ್ಶೆಗಳ ಬೆಂಬಲವಿದ್ದರೆ, ಎಂಥ ಮಹತ್ಕಾರ್ಯವೂ ಸಿದ್ಧಿಸುವದು. ಮಹಾವಿಭೂತಿಗಳಾದ ಮಹಾತ್ಮರಂಥ ಮುಂದಾಳುಗಳು ರಾಷ್ಟ್ರಕ್ಕೆ ದೊರೆತಿದ್ದರೂ ರಾಷ್ಟ್ರದ ಪ್ರಗತಿಯಾಗದಿದ್ದರೆ, ಅನುಯಾಯಿಧರ್ಮದ ಸರಿಯಾದ ತಿಳುವಳಿಕೆ, ಬೆಳವಣಿಗೆಯಾಗಿಲ್ಲವೆಂದೇ ಹೇಳಬಹುದು.

ತನ್ನದನ್ನೇ ಸಾಧಿಸಬೇಕೆನ್ನುವ ಪ್ರವೃತ್ತಿಯು ಪ್ರಬಲವಾಗಿರುವ ಮಕ್ಕಳನ್ನು ಶಾಲೆಯಲ್ಲಿ ಹೊಸ ಹಾದಿಗಳಿಗೆ ಹಚ್ಚಬಹುದು. ಅಂಥ

ಬಾಲಕರು ವರ್ಗದ 'ಪಿರಿಕಿಣಿ'ಯಾಗಬಹುದು. ಆಟದಲ್ಲಿ 'ಹಿರಿ ಹುದ್ದರಿ'ಯಾಗಬಹುದು. ಒಟ್ಟಿನಲ್ಲಿ ಮಕ್ಕಳ 'ಹಟಮಾರಿತನ'ದ ಮೂಲ ಕಾರಣಗಳನ್ನು ಶೋಧಿಸಬೇಕು. ಅಂಥ ಪ್ರವೃತ್ತಿಯುಳ್ಳ ಮಕ್ಕಳಿಗೆ 'ಮುಂದೆ ಬೀಳುವ' ಎಲ್ಲ ಪ್ರಸಂಗಗಳನ್ನೂ ತಂದುಕೊಡಬೇಕು, ಎಲ್ಲ ಬಗೆಯ ಆಸ್ಪದಗಳನ್ನೀಯಬೇಕು. ಇದರಿಂದ ಇಂದು 'ಹಟಮಾರಿ' ಗಳೆಂದು ತೋರುವ ಹುಡುಗ-ಹುಡುಗಿಯರು ಮುಂದಿನ ನಾಗರಿಕ ಜೀವನದಲ್ಲಿ ಪ್ರಭಾವ ಶಾಲಿಗಳಾದ ಜನನಾಯಕರಾಗುವರು.

ಮೂರು ವಿಧದಲ್ಲಿ ಈ ಸಹಜ ಪ್ರವೃತ್ತಿಗಳೊಡನೆ ನಾವು ವರ್ತಿಸಬಹುದಾಗಿದೆ:— (೧) ಇವುಗಳಿಗೆ ತುಂಬಾ ಅಧೀನರಾಗಿ ನಡೆಯುವದು; (೨) ಇವುಗಳನ್ನು ಹಟದಿಂದ ನಿಯಂತ್ರಿಸುವದು; (೩) ಇವುಗಳ **ಸದ್ವಿನಿಯೋಗ**-ಇಲ್ಲವೆ-**ಉಜ್ವಲೀಕರಣ.** ಎಲ್ಲ ಸಹಜ ಪ್ರವೃತ್ತಿಗಳಿಗೆ ನಾವು ಪೂರ್ಣವಾಗಿ ಅಧೀನರಾದರೆ ನಾಗರಿಕತೆಯಿಂದ ನಾವು ದೂರವಾಗುವೆವು. ಇವುಗಳಲ್ಲಿ **ಕೆಲವು ಸಾಮಾಜಿಕ ಜೀವನಕ್ಕೆ ಪ್ರತಿಕೂಲವಾಗಿರುವವು.** ಕಾಮ-ಯುದ್ಧ ಪ್ರವೃತ್ತಿಗಳನ್ನು ನಿರಾತಂಕವಾಗಿ ನಡೆಯಗೊಟ್ಟರೆ, ಸಾಮಾಜಿಕ ಜೀವನವೇ ಅಶಕ್ಯವಾಗುವದು. ಜನಾಂಗವು ತನ್ನ ಹಿತಕ್ಕಾಗಿ ಹಾಕಿಕೊಂಡ ನಿರ್ಬಂಧಗಳನ್ನೆಲ್ಲ ಬಿಟ್ಟು ನಮ್ಮ ನಡತೆಯು ಸ್ವೈರ ವರ್ತನವಾಗಬಹುದು. ಇವುಗಳನ್ನು ಬಲಾತ್ಕಾರದಿಂದ ಬಿಗಿಹಿಡಿಯಲೂ ಬಾರದು. ನೀರಿನ ಓಟವನ್ನು, ಉಗಿಯ ಒತ್ತಡವನ್ನು ತಡೆದರೆ ಬೇರೊಂದೆಡೆಗೆ ಅದು ಒಡೆದು ಹೋಗುವದು. ಹಾಗೆಯೇ ಪ್ರಬಲವಾದ ಈ ಪ್ರವೃತ್ತಿಗಳನ್ನು ಬಲುಮೆಯಿಂದ ಒತ್ತಿಹಿಡಿಯುವದು ನಿಸರ್ಗದ ನಿಯಮಗಳನ್ನು ಮೀರಿ ನಡೆದಂತಾಗುವದು. ಆದುದರಿಂದ ಇವುಗಳಿಗೆ **ಸರಿಯಾದ ಹಾದಿಯನ್ನು ಹಾಕಿಕೊಡುವದೇ ಹಿತಕರವಾಗಿದೆ.** ವ್ಯಕ್ತಿ ಸಮಾಜಗಳ ಹಿತಕ್ಕೆ, ಪ್ರಗತಿ ಸಂಸ್ಕೃತಿಗಳಿಗೆ ಪ್ರತಿಬಂಧಕವಾಗದಂತಿದ್ದರೆ, ಈ ಸಹಜವಾದ ಒಲವುಗಳನ್ನು ಅನುಸರಿಸಿ ನಡೆಯುವದು ಸರಿಯಾದುದು. ಇವುಗಳಿಗೆ ವಿರೋಧವಾಗುವಂತಿದ್ದರೆ, ಈ ಸಹಜ ಪ್ರವೃತ್ತಿಗಳನ್ನೆಲ್ಲ ಬೇರೊಂದು ಶ್ರೇಯಸ್ಕರವಾದ ಹಾದಿಗೆ

ಹಚ್ಚುವದೇ ಸರಿಯಾದ ಮಾರ್ಗ. ಹೋರಾಟದ ಪ್ರವೃತ್ತಿಯನ್ನು ಸ್ಪರ್ಧೆಗಳಲ್ಲಿ ತೊಡಗಿಸಬೇಕು. ಕೂಡಿ ಹಾಕುವ ಪ್ರವೃತ್ತಿಗೆ ವಿವಿಧ ವಸ್ತುಗಳನ್ನು ಒದಗಿಸಿ ತೃಪ್ತಿಗೊಳಿಸಬೇಕು. ರಚನಾಪ್ರವೃತ್ತಿಯಲ್ಲಿ ತಾಯಿ ತಂದೆಗಳು ಕಿಡಿಗೇಡಿತನವನ್ನು ಕಾಣದೆ, ಅದನ್ನು ವಿಧಾಯಕ ಕೆಲಸಗಳಲ್ಲಿ ತೊಡಗಿಸಬೇಕು. **ಇಷ್ಟವಾದ ರೀತಿಯಲ್ಲಿ ಈ ಒಲವುಗಳ ಓಟವನ್ನು ತಿರುಗಿಸುವದಕ್ಕೆ 'ಉಜ್ವಲೀಕರಣ' ವೆನ್ನುವರು.** ಒಂದೊಂದು ಮಗುವಿನಲ್ಲಿ ಒಂದೊಂದು ಪ್ರವೃತ್ತಿಯು ಪ್ರಬಲವಾಗಿರುವದು. ಎಳೆತನದಲ್ಲಿಯೇ ಅದನ್ನು ಕಂಡು ಹಿಡಿಯಬೇಕು. ಒಂದೊಂದು ವಯೋವಿಭಾಗದಲ್ಲಿ ಕೆಲವೊಂದು ಪ್ರವೃತ್ತಿಗಳ ಪ್ರಭಾವವು ಹೆಚ್ಚಿರುವದು. ಮಗುವು ಅದಕ್ಕೆ ಆಗ್ಗೆ ಪೂರ್ಣ ಆಧೀನವಾಗಿರುವದು.

ಮಾನವನ ವಿವಿಧ ಕಾರ್ಯಕಲಾಪಕ್ಕೆಲ್ಲ ಈ ಸಹಜ ಪ್ರವೃತ್ತಿಗಳೇ ಪ್ರೇರಕಶಕ್ತಿಗಳಾಗಿರುವವು. **ಮನೋವೃತ್ತಿಯು ಸೂಕ್ಷ್ಮವಾದ ಈ ಎಳೆಗಳನ್ನು ಕಂಡುಹಿಡಿದು, ಅವುಗಳನ್ನು ಹರಿಯಗೊಡದೆ, ತೊಡಕಾಗಗೊಡದೆ, ಅವುಗಳಿಂದಲೇ ಸುಂದರವಾದ ಸಂಸ್ಕೃತಿಯ ಬಟ್ಟೆಯನ್ನು ನೇಯುವದು ಕಲಾಕುಶಲನಾದ ಶಿಕ್ಷಕನ ಕಾರ್ಯವಾಗಿದೆ.**

## ಪರಿಚ್ಛೇದ ೬

### ಭಾವಗಳೂ ಭಾವನೆಗಳೂ

**ಸಹಜ ಪ್ರವೃತ್ತಿಯೂ ಭಾವಗಳೂ :—** ಸಾಮಾನ್ಯವಾಗಿ ಪ್ರತಿಯೊಂದು ಸಹಜ ಪ್ರವೃತ್ತಿಯಲ್ಲಿ ಅರಿವು—ಭಾವ—ಕೃತಿ ಹೀಗೆ ಮೂರು ಅಂಶಗಳು ಕಂಡುಬರುವವು. ಅರಿವು ಕೃತಿಗಳ ನಡುವೆ ಈ 'ಭಾವ' ವು ಜನಿಸುವದು. ಇದನ್ನೇ ಮನೋವೃತ್ತಿಯೆಂತಲೂ ಕೆಲವರು ಕರೆದಿರುವರು. **ಈ ಭಾವಗಳೇ ಎಲ್ಲ ಬಗೆಯ ಕೃತಿಗಳಿಗೆ ಪ್ರೇರಕಶಕ್ತಿಗಳು.** ಭಾವ

ಶಕ್ತಿಯು ಅವಿಕಾರಿಯಾಗಿರುವದು, ಸ್ಥಿರವಾದುದು. ಬೇರೆಬೇರೆ ವಸ್ತುಗಳಿಂದ ನಮಗೆ ಭಯ ಹುಟ್ಟಬಹುದು. ಭಯದಿಂದ ಬೇರೆಬೇರೆ ಕೃತಿಗಳು ನಡೆಯಬಹುದು. ಆದರೆ ‘ಭಯ’ ವೆಂಬ ಭಾವವು ಮಾತ್ರ ಒಂದೇಯಾಗಿರುವದು. ಹಾಗೂ ಒಟ್ಟು ವ್ಯಕ್ತಿಯನ್ನೇ ಅದು ಹೊಂದಿಕೊಳ್ಳುವದು. ಸಹಜ ಪ್ರವೃತ್ತಿಯ ಸುಗಮವಾದ ಕಾರ್ಯಕ್ಕೆ ನಮ್ಮ ಶರೀರವು ತಾನಾಗಿಯೇ ಸಿದ್ಧವಾಗುವದು. ಭಾವಗಳು ಆಕಸ್ಮಿಕವಾಗಿ ಬರುವವು. ದೇಹದಿಂದ ನಡೆಯುವ ಕಾರ್ಯಗಳಿಗೆ ತಡೆಮಾಡುವವು, ಇಲ್ಲವೆ ಹೆಚ್ಚುಕಡಿಮೆ ಮಾಡುವವು. ಭಾವಗಳಿಂದ ನಡೆಯುವ ಕಾರ್ಯವೂ ಸುದೀರ್ಘವಾಗಿ ಉಳಿಯಬಹುದು. ಮದುವೆಯ ಸಮಾರಂಭದಲ್ಲಿ ಸಣ್ಣ ಮಾತಿಗಾಗಿ ಹುಟ್ಟಿದ ‘ಸಿಟ್ಟು’ ಮರಿಮಕ್ಕಳ ವರೆಗೂ ಅಳಿಯದಿರುವ ಉದಾಹರಣೆಗಳಿರುವವು. ಒಂದೇ ವಸ್ತುವು ಇಲ್ಲವೇ ಒಬ್ಬನೇ ವ್ಯಕ್ತಿಯು ಬೇರೆಬೇರೆ ವ್ಯಕ್ತಿಗಳಲ್ಲಿ ಭಿನ್ನವಾದ ‘ಭಾವ’ ಗಳನ್ನು ಹುಟ್ಟಿಸಬಹುದು. ‘ಯಾದವರಲ್ಲಿ ಬಾಂಧವನಾಗಿ, ದಾನವರಲ್ಲಿ ಹಗೆಯಾಗಿ........’ ಹೀಗೆ ಶ್ರೀಕೃಷ್ಣನನ್ನು ಕಾಣುವ ವಿವಿಧ ಭಾವಗಳನ್ನು ಕನಕನು ಮಾರ್ಮಿಕವಾಗಿ ಹೇಳಿರುವನು. **ಭಾವಗಳ ಉದ್ರೇಕವೇ ಭಾವಶಕ್ತಿ.** ಈ ಭಾವಶಕ್ತಿಯೇ ಎಲ್ಲ ಕಾರ್ಯಗಳಿಗೆ ಪ್ರೇರಕವಾಗಿರುವದು. ಪ್ರತಿಯೊಂದು ಭಾವಕ್ಕೆ ಅನುಗುಣವಾದ—ದ್ಯೋತಕವಾದ—ವಿಕಾರಗಳೂ ಕೃತಿಗಳೂ ಶರೀರದಲ್ಲಿ ಕಂಡುಬರುವವು. ಸಿಟ್ಟಿಗೆದ್ದರೆ ಹುಬ್ಬು ಗಂಟಿಕ್ಕುವದು, ದವಡೆ ಕಚ್ಚುವದು. ದುಃಖದಲ್ಲಿ ಕಣ್ಣೀರಿನ ಸೆಲೆಯೊಡೆಯುವದು. ಸಂತೋಷದಲ್ಲಿ ನಗೆ ಮೂಡುವದು. **ಭಯ—ಕ್ರೋಧ—ಪ್ರೀತಿ ಇವುಗಳಿಗೆ ಮೂರು ಮೂಲಭಾವಗಳೆಂದು ಹೇಳುವರು.** ಗೀತೆಯಲ್ಲಿ ಹೇಳಿದ ಸತ್ವ—ರಜ—ತಮಗಳೆಂಬ ಮೂರು ಗುಣಗಳು ಮೂಲ ಭಾವಗಳ ಮೂರು ಗುಂಪುಗಳೆಂಬಂತೆ ತೋರುವವು. ಶಿಕ್ಷಣದಿಂದ, ಅನುಭವದಿಂದ ಈ ಭಾವಗಳನ್ನು ತಿದ್ದಬಹುದು. ಹೀಗೆ ಸುಸಂಸ್ಕೃತವಾದ ಭಾವಗಳು ‘ಸಾಧಿತ’ ಭಾವಗಳು. ಮೂಲರೂಪವಾದ ಕನಿಕರವು ಮಮತೆ, ಕೃತಜ್ಞತೆ, ಗೌರವ ಮೊದಲಾದ ರೂಪಾಂತರಗಳನ್ನು ಹೊಂದಬಹುದು. ಸಿದ್ಧ ಭಾವಗಳನ್ನು

ಸಾಂಘಿಕ ಜೀವನಕ್ಕೆ ಅನುಕೂಲವಾಗುವಂತೆ ಶಿಕ್ಷಣದಿಂದ ತಿದ್ದಬಹುದು.

ಕೆಲವು ವಿಶಿಷ್ಟ ಭಾವಗಳ ಬಗ್ಗೆ ಶೈಕ್ಷಣಿಕ ದೃಷ್ಟಿಯಿಂದ ತಿಳಿದುಕೊಳ್ಳುವದು ಅವಶ್ಯವಾಗಿದೆ.

**ಕ್ರೋಧ :—** ಶಿಕ್ಷಣ, ಸಮಾಜದ ಅಭಿಪ್ರಾಯ, ಧಾರ್ಮಿಕ ಭಾವನೆ ಈ ಮೂರು ಸಾಧನಗಳಿಂದ ಸಾಮಾಜಿಕ ಜೀವನಕ್ಕೆ ಪ್ರತಿಕೂಲವಾಗುವ ಕ್ರೋಧವನ್ನು ನಿಯಂತ್ರಿಸಬೇಕಾಗುವದು. ಕ್ರೋಧವನ್ನು ತಡೆಗಟ್ಟುವದಕ್ಕಿಂತಲೂ ಕ್ರೋಧಜನಕವಾದ ಸಂಗತಿಗಳನ್ನು ತಪ್ಪಿಸುವದೇ ಮೇಲು. ಸತ್‌ಪಕ್ಷಪಾತಿಯಾದ ಕ್ರೋಧಕ್ಕೆ 'ಸಂತಾಪ'ವೆಂದು ಹೇಳುವರು. ಆಫ್ರಿಕೆಯಲ್ಲಿ ತನ್ನ ಬಾಂಧವರಿಗಾಗುವ ಅನ್ಯಾಯ ಅಪಮಾನಗಳಿಂದ ಉಂಟಾದ 'ಸಂತಾಪ'ವು ಗಾಂಧೀಜಿಯವರನ್ನು ಮಹಾತ್ಮಾ ಪದವಿಗೆ ಮುಟ್ಟಿಸಿತು. ಬೇಡನ ಕ್ರೂರ ಕೃತಿಯಿಂದ 'ಕಳವಳ'ಗೊಂಡ ವಾಲ್ಮೀಕಿಯು ಆದಿಕವಿಯಾದನು.

**ಭಯ :—** ಭಯವೂ ಇಂಥ ಭಾವಗಳಲ್ಲಿ ಒಂದು. ಭಯವು ಬರುವ ಗಂಡಾಂತರವನ್ನು ತಪ್ಪಿಸಬಹುದು. ಇಲ್ಲವೇ ಬಿಡುಗಡೆಗೆ ಬಂಧನವಾಗಬಹುದು. ಬುದ್ಧಿ ಬಲಿತಂತೆ ಬಾಲ್ಯದ 'ಬಾವಾ'ನ ಭಯ, ಭೂತಗಳ ಹೆದರಿಕೆ ತಾವಾಗಿಯೇ ಇಲ್ಲದಂತಾಗುವವು. ಸರಿಯಾದ ನಿರ್ಭಯತೆಯು ಜೀವನಕ್ಕೆ ಅವಶ್ಯವಾದ ಸದ್ಗುಣಗಳಲ್ಲಿ ಒಂದಾಗಿದೆ. ಅನೇಕ ಸಲ ಕಾಲ್ಪನಿಕ ಭಯವು ಆತ್ಮಶಕ್ತಿಗೆ ಆತಂಕವಾಗುವದು, ಹೇಡಿತನವನ್ನು ಉಂಟುಮಾಡುವದು. ಯಾವುದೇ ಭಾವದ ಬಿಗಿಯಾದ ಹಿಡಿತದಲ್ಲಿರುವ ವ್ಯಕ್ತಿಯೊಡನೆ ವಾದಿಸುವದೂ ತಿಳಿಹೇಳುವದೂ ನಿಷ್ಫಲವಾಗುವದು. ಕೋಪದಿಂದ ಕುದಿಯುವವನಿಗೆ ಬುದ್ಧಿ ಹೇಳುವದು 'ಬೋರ್ಗಲ್ಲಮೇಲೆ ನೀರು ಸುರಿದಂತೆ' ಎಂದು ಹಿರಿಯರು ಹೇಳುವರು.

**ಭಾವಕ್ಕೂ ಕೃತಿಗೂ ಇರುವ ನಿಕಟವಾದ ಸಂಬಂಧವು** ಶೈಕ್ಷಣಿಕ ದೃಷ್ಟಿಯಿಂದ ಅತ್ಯಂತ ಮಹತ್ವವಾದುದು. ಭಾವಗಳ ಪ್ರೇರಕ ಶಕ್ತಿಯೇ ಇದಕ್ಕೆ ಕಾರಣ. ಇಷ್ಟವಾದ ಭಾವಗಳನ್ನು ಹೊತ್ತಿಸಿ ಇಷ್ಟವಾದ ಕೃತಿಗ

ಳನ್ನು ಸಾಧಿಸಬಹುದು. **ಭಾವಗಳು ಒಂದು ಬಗೆಯ ಅವ್ಯಕ್ತ ಕೃತಿಗಳೆಂತಲೇ ತಿಳಿಯಬಹುದು.** ನಾವು ಮಾಡುವ ಕೃತಿಗಳೆಲ್ಲವೂ ವಿವಿಧ ಭಾವಗಳ ವ್ಯಕ್ತಸ್ವರೂಪಗಳು ಮಾತ್ರ. ನಾಡು ನುಡಿಗಳ ಏಳ್ಗೆಗಾಗಿ ದುಡಿಯಲು ಹಚ್ಚಬೇಕಾದರೆ ವಿದ್ಯಾರ್ಥಿಗಳಲ್ಲಿ ನಾಡುನುಡಿಗಳ ಬಗ್ಗೆ ಪ್ರೇಮವನ್ನು ಹೊತ್ತಿಸಬೇಕು. ಸತ್ಯಸಂಧರಾಗಬೇಕೆಂದಿದ್ದರೆ ಸತ್ಯಪ್ರಿಯತೆಯನ್ನು ಹೆಚ್ಚಿಸಬೇಕು. ಕಲಾವಿದರಾಗಬೇಕೆಂದಿದ್ದರೆ ಸುಂದರ ವಸ್ತುಗಳ ಬಗ್ಗೆ ಅನುರಾಗವು ಅಂಕುರಿಸುವಂತೆ ಮಾಡಬೇಕು. ಹೀಗೆ ಮಾಡಲು ಅನುಕೂಲವಾದ ಅವಕಾಶಗಳು ಶಾಲೆಯ ಶಿಕ್ಷಣದಲ್ಲಿ ಸಾಕಷ್ಟು ದೊರೆಯುವವು. **ನಿತ್ಯ ಪ್ರಾರ್ಥನೆಯಿಂದ ನೈತಿಕ ಭಾವಗಳನ್ನು ಬಲಿಸಬಹುದು.** ನಿಸರ್ಗ ನಿರೀಕ್ಷಣೆಯಿಂದ ನಿಸರ್ಗ ಪ್ರೇಮವನ್ನು ಬೆಳಿಸಬಹುದು. **ಆಟಗಳಿಂದ ಸೋಲು–ಗೆಲವುಗಳನ್ನು ಸಮನಾಗಿ ಭಾವಿಸುವ ಆಟಗಾರಿಕೆಯ ಆನಂದವೃತ್ತಿಯನ್ನು ತರಬಹುದು.** ಇತಿಹಾಸದ ಮಾರ್ಮಿಕವಾದ ಶಿಕ್ಷಣದಿಂದ ನಾಡಿನ ಏಳ್ಗೆಯ ಬಗ್ಗೆ ವಿಶುದ್ಧವಾದ ವಿಶ್ವಾಸವನ್ನೂ ಆದರಾಭಿಮಾನಗಳನ್ನೂ ಹುಟ್ಟಿಸಬಹುದು. ಹೇಗೋ ಹರಿದುಹೋಗುವ ಭಾವಶಕ್ತಿಯನ್ನು ಹಿತಕರವಾದ ಕಾರ್ಯಗಳಲ್ಲಿ ಸೋಸಿ ತೆಗೆದು ವಿಶುದ್ಧಗೊಳಿಸಬೇಕು. ಇದುವೇ ಭಾವಗಳ '**ಉನ್ನಯನ**' – ಇಲ್ಲವೇ – '**ಉಜ್ವಲೀಕರಣ.**'

ವ್ಯಕ್ತಿನಿಷ್ಠವಾದ ಭಾವಗಳಿರುವಂತೆ ಸಂಘ–ನಿಷ್ಠವಾದ ಹಲಕೆಲವು ಭಾವಗಳು ಕಂಡುಬರುವವು. ಜನರ ನೆರವಿಯಲ್ಲಿ ಬೇಕಾದ ಭಾವಾವೇಶವನ್ನು ಹುಟ್ಟಿಸುವದು ಸುಲಭವಾದುದು. ಕುಶಲನಾದ ಮಾತುಗಾರನು ತನ್ನ ಮುಂದಿರುವ ಜನಜಂಗುಳಿಯ ಭಾವಗಳನ್ನು ಬೇಕಾದ ಹಾಗೆ ಕುಣಿಸುವನು. ಸಾಂಘಿಕ ವರ್ತನೆಯೂ ವಿಚಿತ್ರವಾಗಿದೆ. ತಾನೊಬ್ಬನೇ ಮಾಡಲು ಎಂದೂ ಒಪ್ಪದ ಅಕಾರ್ಯವನ್ನು ಗುಂಪಿನಲ್ಲಿ–ಗುಂಪಿನಕೂಡ–ವ್ಯಕ್ತಿಯು ಸಹಜವಾಗಿ ಮಾಡಿಬಿಡುವನು. ತಿಳಿದವರೆಂದು ಹೇಳಿಕೊಳ್ಳುವ ಜನರ ಗುಂಪು ಒಮ್ಮೊಮ್ಮೆ ಹುಚ್ಚೆದ್ದು ಕುಣಿಯುವದು. ಧೂರ್ತರಾದ ಧುರೀಣರು ಸಾಂಘಿಕ ಭಾವದ

ಬೇಗೆಯನ್ನು ತಮಗೆ ಬೇಕಾದಂತೆ ಹೊತ್ತಿಸಿ ತಮ್ಮ ಬೇಳೆಯನ್ನು ಬೇಯಿಸಿ ಕೊಳ್ಳುವರು.

ಚಿಕ್ಕಮಕ್ಕಳು ಹೆಚ್ಚಾಗಿ ಭಾವಜೀವಿಗಳು. ಪ್ರಾಯದ ಅವಧಿಯಲ್ಲಿ ಅನೇಕಮುಖವಾಗಿ ಹೊರಹೊಮ್ಮುವ ವಿವಿಧ ಭಾವಗಳು ಅಂದಿನ ಜೀವನ ದಲ್ಲಿ ಅಳತೆಗೆಟ್ಟ ಹೊಯ್ದಾಟವನ್ನುಂಟುಮಾಡುವವು. ಭಾವಗಳನ್ನು ಹತ್ತಿ ಕ್ಕಲು ಯತ್ನಿಸುವದು ತಪ್ಪು ದಾರಿ. ಅದರಿಂದ ಹೃದಯದ ಅಂತರಾಳದಲ್ಲಿ ಅನೇಕ ತೊಡಕುಗಳುಂಟಾಗಿ ವ್ಯಕ್ತಿವಿಕಾಸಕ್ಕೆ ಹಾನಿಯುಂಟಾಗುವದು. ಭಾವಗಳ ಸಂಸ್ಕರಣವು ಸೂಕ್ಷ್ಮವಾದ ಕೆಲಸ. ಅದು ಅತ್ಯಂತ ದಕ್ಷತೆಯಿಂದ ಸರಿಯಾಗಿ ಸಾಗಬೇಕು. ಇದರಲ್ಲಿ ತಾಳ ತೂಕಗಳು ತಪ್ಪಿದರೆ ಜೀವನವೇ ತಪ್ಪು ದಾರಿಯನ್ನು ಹಿಡಿಯಬಹುದು. **ಉಚಿತವಾದ ಭಾವಗಳ ಬೆಳೆ ಯಿಲ್ಲದ ಬಾಳು ಬೀಳುನೆಲವಾಗಬಹುದು. ಭಾವಗಳ ನೂಲಿ ನಿಂದ ನೆಯ್ದ ಬಾಳುವೆಂಬ ಬಟ್ಟೆ ಬಣ್ಣಬಣ್ಣದ್ದಾಗುವದು. ಭಾವಗಳ ಬೇವು-ಬೆಲ್ಲಗಳೇ ಬಾಳುವೆಗೆ ವಿವಿಧ ರುಚಿಗಳನ್ನು ತಂದು ಕೊಡುವವು. ಭಾವಗಳ ಏರಿಳಿತಗಳೇ ನಿತ್ಯ ಜೀವನದ ಹೊಯ್ದಾಟ ಹೋರಾಟಗಳು. ಭಾವಗಳ ಸರಿಯಾದ ಸಂಸ್ಕರಣಕ್ಕೆ ಶಿಕ್ಷಣದಲ್ಲಿ ಹೆಚ್ಚಿನ ಸ್ಥಾನವು ದೊರೆಯಲೇಬೇಕು.**

ಭಿನ್ನವಾದ ಭಾವಗಳು ಕೆಲವೊಂದು ವಿಶಿಷ್ಟವಾದ ವಸ್ತುವಿನ ಇಲ್ಲವೇ ವ್ಯಕ್ತಿಯ ಸುತ್ತಲೂ ಗುಂಪುಕಟ್ಟಿಕೊಳ್ಳುವವು. ಈ ಬಗೆಯ ಭಾವಗಳ ಗುಂಪುಗಳಿಗೆ **ಭಾವನೆ**ಯೆಂದು ಕರೆಯಬಹುದು. ಭಾವನೆಯು ಒಂದು ಬಗೆಯ '**ಭಾವಗ್ರಂಥಿ**' ಯಾಗಿದೆ. ಮನಸ್ಸಿನ ಸಹಜವಾದ ಒಲವು ಒಂದು ವಸ್ತುವಿನ ಕಡೆಗೆ ಹರಿಯತೊಡಗುವದು. ಹೀಗೆ ಹರಿಯುವ ಭಾವವು ಆ ವಸ್ತುವಿನ ಸುತ್ತಲೂ ಹೆಪ್ಪುಗಟ್ಟುವದು. ಕಾಲಾಂತರದಲ್ಲಿ ಆ ವಸ್ತುವಿನ ಬಗ್ಗೆ ನಮ್ಮದೊಂದು ವಿಶಿಷ್ಟವಾದ 'ಭಾವನೆ' ಯಾಗುವದು. "ಆ ವಸ್ತುವಿನ ಬಗ್ಗೆ ಇಲ್ಲವೆ ಆ ವ್ಯಕ್ತಿಯ ಬಗ್ಗೆ ನಿಮ್ಮ ಭಾವನೆ ಏನಿದೆ?" – ಎಂದು ಅನೇಕ ಸಲ ನಾವು ಕೇಳುವೆವು. ಮಾನಸಶಾಸ್ತ್ರದಲ್ಲಿ ಭಾವನೆಯೆಂದರೆ ಪೂರ್ವ

ಗ್ರಹಿಕೆಯಲ್ಲ; ವ್ಯಕ್ತಿವಿಶಿಷ್ಟವಾದ ಭಾವಗ್ರಂಥಿಯು ಮಾತ್ರ. **ಭಾವಗಳ ಈ ಗ್ರಥನವು ಅನೇಕ ಅನುಭವಗಳಿಂದ ಸಾಗುವದು.** ಮೊದಲು ಮನಸ್ಸನ್ನು ಸೆಳೆದ ವಸ್ತುವಿನಲ್ಲಿ ಅನುರಾಗವು ಜನಿಸುವದು. ಈ ಅನುರಾಗವು ಬೆಳೆದು ಆಸಕ್ತಿಯಾಗಬಹುದು. ಆಸಕ್ತಿಯು ಆದರವಾಗಿ ಪರಿಣಮಿಸಬಹುದು. ನಮ್ಮ ಭಾವನೆಯ ವಸ್ತುವಿನ ಬಗ್ಗೆ ನಮಗೆ ಅತ್ಯಂತವಾದ ಮಮತೆ ಎನಿಸುವದು. ಪಾಸಾದ ಪರೀಕ್ಷೆಯಲ್ಲಿ ಉಪಯೋಗಿಸಿದ ಟಾಕು, ಮದುವೆಯ ಕೋಟು ವಿಶೇಷ ಆತ್ಮೀಯ ವಸ್ತುಗಳಾಗುವವು.

ವಸ್ತುವಿನಿಂದ ವಿಚಾರಕ್ಕೆ, ಆದರ್ಶಕ್ಕೆ ಹಬ್ಬುವದು ಭಾವನೆಗಳ ಮುಂದಿನ ಹೆಜ್ಜೆ. ಒಂದು ವಸ್ತುವು ಭಾವನೆಯ ವಿಷಯವಾದಂತೆ ಒಂದು ವಿಚಾರವೂ ಕೂಡ ಭಾವನೆಯ ವಿಷಯವಾಗಬಹುದು. ಇಂಥ ಭಾವನೆಗಳು ಹೆಚ್ಚು ಉಜ್ವಲವಾದವುಗಳು. ಸದ್ಗುಣಗಳನ್ನು ಶೀಲರೂಪವಾಗಿ ಕಟ್ಟುವ ಶೀಲಸಂವರ್ಧನದ ಕಾರ್ಯದಲ್ಲಿ ಈ ಬಗೆಯ ಭಾವನೆಗಳನ್ನೇ ನಾವು ಹೆಚ್ಚಾಗಿ ಉಪಯೋಗಿಸಬೇಕಾಗುವದು. ನೀತಿ–ತತ್ವವು ಕೃತಿಯಾಗಿ ಪರಿಣಮಿಸಬೇಕಾದರೆ, ಅದಕ್ಕೆ ಆದರ್ಶ ಭಾವನೆಗಳ ಪ್ರೇರಕಶಕ್ತಿಯು ಅವಶ್ಯವಾಗಿ ಬೇಕು. ಸತ್ಯದ ಬಗ್ಗೆ ನಮ್ಮ ಭಾವನೆಯು ಬಲಶಾಲಿಯಾಗಿದ್ದರೆ ಸತ್ಯವನ್ನು ಆಚರಿಸುವದು ನಮಗೆ ಸುಗಮವಾಗುವದು. ಅಸತ್ಯದ ಬಗ್ಗೆ ಹೇಯಬುದ್ಧಿಯು ತಾನಾಗಿಯೇ ಜನಿಸುವದು. ಒಂದು ಮಾತನ್ನು ಇಲ್ಲಿ ಲಕ್ಷದಲ್ಲಿಡಬೇಕಾಗುವದು. ದುರ್ಗುಣಗಳ ಬಗ್ಗೆ ದ್ವೇಷವನ್ನು ಹುಟ್ಟಿಸುವದಕ್ಕಿಂತಲೂ ಸದ್ಗುಣಗಳ ಬಗ್ಗೆ ಆದರವನ್ನುಂಟುಮಾಡುವದು ಹೆಚ್ಚು ಶ್ರೇಯಸ್ಕರವಾದುದು. ಆದರೆ ಆದರ್ಶ ಭಾವಗಳ ಉಗಮವು ಮಾತ್ರ ಆದರದ ವ್ಯಕ್ತಿಗಳಿಂದಲೇ ಮೊದಲಾಗುವದು. ಸತ್ಯಸಂಧನಾದ ಹರಿಶ್ಚಂದ್ರನ ಬಗ್ಗೆ ಬಾಲ್ಯದಲ್ಲಿ ಉಂಟಾದ ಆದರವು ಆತನ ಸತ್ಯನಿಷ್ಠೆಯನ್ನೇ ಗಾಂಧೀಜಿಯವರ ಜೀವನಸೂತ್ರವನ್ನಾಗಿ ಮಾಡಿತು.

ಈ ರೀತಿಯಾಗಿ ಬೆಳೆಯುವ ಪ್ರತಿಯೊಂದು ಭಾವನೆಯಲ್ಲಿ ಎರಡು ಅಂಶಗಳು ಕಂಡು ಬರುವವು: (೧) ಆ ಭಾವನೆಯ ವಿಷಯದ ಬಗ್ಗೆ ನಮಗೆ

ಸರಿಯಾದ ತಿಳುವಳಿಕೆ; (೨) ಅದನ್ನು ಸುತ್ತುಗಟ್ಟಿರುವ ಭಾವಗಳ ಗುಂಪು. ಭಾವನೆಯ ವಿಷಯವು ಒಂದು ವಸ್ತು-ವ್ಯಕ್ತಿ ಆಗಿದ್ದರೆ ಅದರ ಜ್ಞಾನವು ಸುಲಭವಾಗಿ ಆಗಬಹುದು. ಆದರೆ ಭಾವನೆಯ ವಿಷಯವು ಒಂದು ಆದರ್ಶ ವಾಗಿದ್ದರೆ, ಅದರ ತಿಳುವಳಿಕೆಯನ್ನು ಪರಿಶ್ರಮಪೂರ್ವಕವಾಗಿ ತಂದುಕೊಡ ಬೇಕಾಗುವದು. ಸತ್ಯ ಅಹಿಂಸೆ ಮೊದಲಾದ ಭಾವನೆಗಳನ್ನು ಬೆಳೆಸಬೇಕಾ ದರೆ ಈ ಸದ್ಗುಣಗಳ ರೀತಿ-ಮಹತಿಗಳನ್ನು ಮಕ್ಕಳ ಮನಸ್ಸಿನಲ್ಲಿ ಮಾರ್ಮಿಕ ವಾಗಿ ಮೂಡಿಸಬೇಕು. ಹೀಗೆ ಮಾಡುವದೂ ಶಿಕ್ಷಣದ ಅಂಗವೇ ಸರಿ. ಕಥೆ ಹೇಳುವಾಗ್ಗೆ ಧರ್ಮಕ್ಕೆ ಜಯ, ಅಧರ್ಮಕ್ಕೆ ಸೋಲು, ಹಿಂಸೆಯಿಂದ ಕೆಡಕು, ಅಹಿಂಸೆಯಿಂದ ಒಳಿತು – **ಈ ಆದರ್ಶ ಭಾವನೆಗಳನ್ನು ಚಿಕ್ಕ ಮಕ್ಕಳ ಮನಸ್ಸಿನಲ್ಲಿ ಬಿಂಬಿಸಲು ಶಿಕ್ಷಕನು ಯತ್ನಿಸಬೇಕು.** ಮಕ್ಕಳ ಕೃತಿಗಳಲ್ಲಿ ಉಚಿತವಾದವುಗಳನ್ನು ಆದರಿಸಬೇಕು, ಹೊಗಳಬೇಕು; ಅನಿಷ್ಟ ಪ್ರವೃತ್ತಿಗಳನ್ನು ಅಲ್ಲಗಳೆಯಬೇಕು. ಹೀಗೆ ಉದಾತ್ತ ಭಾವನೆಗಳ ನಿರ್ಮಾಣ ದಲ್ಲಿ ಶಿಕ್ಷಕನು ಸಹಕರಿಸಬೇಕು.

**ಸ್ವಾತ್ಮ ಭಾವನೆ:**— ಈ ಭಾವನೆಗಳಲ್ಲಿ ಹಿರಿದಾದ ಸ್ವಕೀಯವಾದ ಭಾವನೆಯೊಂದಿದೆ. ಇದಕ್ಕೆ **ಸ್ವಾತ್ಮಭಾವನೆಯೆಂದು** ಹೇಳಬಹುದು. ನಮ್ಮ ಇಚ್ಛಾಶಕ್ತಿಯು ( Will ) ಈ ಸ್ವಾತ್ಮಭಾವನೆಯನ್ನು ಹೆಚ್ಚಾಗಿ ಅವಲಂಬಿಸಿದೆ. ಬೆಳೆಯುವ ಮಗುವಿನಲ್ಲಿ 'ತಾನು ಬೇರೆ-ಉಳಿದವರು ಬೇರೆ' ಯೆಂಬ ಭಾವನೆಯು ಅನುಭವದಿಂದ ಒದಗುವದು. ಮುಂದೆ ಬರಬರುತ್ತ ತನ್ನನ್ನು ತಾನೆ ತಿಳಿದುಕೊಳ್ಳುವ ಶಕ್ತಿಯು ಆತನಲ್ಲಿ ಉದಯಿಸುವದು. ಈ ತಿಳಿವೇ ಆತನ ಸ್ವಾತ್ಮಭಾವನೆಯ ತಳಹದಿಯು. ಈ ತಿಳಿವು ಎರಡು ವಿಧವಾಗಿದೆ. ತನಗೆ ವಿಚಾರ ಶಕ್ತಿ ಇದೆ-ಎನ್ನುವದು ಒಂದು. ತನ್ನ ಬಗ್ಗೆ ತಾನೆ ವಿಚಾರ ಮಾಡಬಲ್ಲೆನು-ಎನ್ನುವದು ಎರಡನೆಯದು. ಇದರಿಂದ **ವ್ಯಕ್ತಿಯು ತನ್ನ ಬಗ್ಗೆ ಒಂದು ಕಲ್ಪನೆಯನ್ನು ತಾನಾಗಿಯೇ ಕಟ್ಟಿ ಕೊಳ್ಳುವನು.** ಅನೇಕ ಭಾವನೆಗಳನ್ನು ಪಡೆದುಕೊಳ್ಳುವನು. ಇವು ಗಳಲ್ಲಿ ಎರಡು ಮುಖ್ಯವಾದವುಗಳು,-ತನ್ನ ವಿಷಯಕ್ಕಿರುವ ಅಭಿಮಾನ;

ಒಂದು; ತನ್ನ ನ್ಯೂನತೆಗಳ ಬಗ್ಗೆ ಆತನಿಗೆನಿಸುವ ಹೀನತೆಯು ಎರಡನೆಯದು. ತನ್ನ ಬಗ್ಗೆ ತಾನು ಕಟ್ಟಿಕೊಂಡಿರುವ ಕಲ್ಪನೆಯೇ ಆತನ ನಡತೆಯನ್ನು ನಿಯಂತ್ರಿಸುವದು. ನೈತಿಕ ಆಚರಣೆಯಲ್ಲಿ ಇದೇ ಆತನಿಗೆ ಅಳತೆಗೋಲು. ತಾನು ಪ್ರಾಮಾಣಿಕನೆಂದು ಒಲವಾಗಿ ನಂಬಿದ ಬಾಲಕನು ಅಪ್ರಾಮಾಣಿಕ ತನದ ಕೆಲಸದಲ್ಲಿ ಸಹಸಾ ತೊಡಗಲಾರನು. ತಾನು ಹೇಡಿ–ಕೈಲಾಗದವನು ಎಂದು ತಿಳಿದುಕೊಂಡ ಬಾಲಕನು ಕೊನೆಯ ವರೆಗೂ ಹಿಂದೆ ಉಳಿಯುವನು. **ಚಿಕ್ಕಮಕ್ಕಳು ತಮ್ಮ ಬಗ್ಗೆ ತಪ್ಪು ಕಲ್ಪನೆಗಳನ್ನು ಮಾಡಿಕೊಳ್ಳ ದಂತೆ ಶಿಕ್ಷಕರೂ ತಾಯಿತಂದೆಗಳೂ ಮಾತಿನಲ್ಲಿ–ಕೃತಿಯಲ್ಲಿ ದಕ್ಷತೆ ವಹಿಸಬೇಕು.** ನೀನು ಹೇಡಿ–ಎಂದು ಒಬ್ಬನನ್ನು, ನೀನು ಕಿಡಿಗೇಡಿ– ಎಂದು ಮತ್ತೊಬ್ಬನನ್ನು ಯಾವಾಗಲೂ ಹಿಯಾಳಿಸುವದು ಆ ಬಾಲಕರಿಗೆ ಅತ್ಯಂತ ಹಾನಿಯನ್ನುಂಟುಮಾಡುವದು. ಇದರಿಂದ ಅವರಲ್ಲಿರುವ ಆತ್ಮ ಶಕ್ತಿ ಆತ್ಮವಿಶ್ವಾಸಗಳೆಲ್ಲ ಅಳಿದುಹೋಗುವವು. ಚಿಕ್ಕಮಕ್ಕಳ ಸ್ವಭಾವವನ್ನು ರೂಪಿಸುವ ಕಾರ್ಯದಲ್ಲಿ ಅವರಲ್ಲಿ ಸ್ವಾಭಿಮಾನವನ್ನು ಹುಟ್ಟಿಸುವದು ಮೊದಲನೆಯ ಹೆಜ್ಜೆಯಾಗಿದೆ. **ಸ್ವಾಭಿಮಾನ ಪ್ರೇರಿತರಾದ ಚಿಕ್ಕ ಮಕ್ಕಳು ಆಕಾರ್ಯಗಳಿಗೆ ಹೆದರುವರು.** ನೈತಿಕ ಜೀವನವು ಈ ಬಗೆಯ ಸ್ವಾಭಿಮಾನದಿಂದಲೇ ಮೊದಲಾಗುವದು.

**ಇಚ್ಛಾಶಕ್ತಿ :**— ಇಚ್ಛಾ ಶಕ್ತಿಯು( Will )ನಮ್ಮ ಸ್ವಾತ್ಮಭಾವನೆ ಯನ್ನು ಹೆಚ್ಚಾಗಿ ಅನುಸರಿಸುವದು. ತಡೆಯಿಲ್ಲದ ಎಡರುಗಳಿಗೆ ಬಾಗದ ಕ್ರಿಯಾಶಕ್ತಿಯೆ ಇಚ್ಛಾ ಶಕ್ತಿಯೆಂದು ಕೆಲವರ ಮತ. ಸ್ವಪ್ರೇರಣೆಯೇ ಇಚ್ಛಾಶಕ್ತಿಯೆಂದು ಬೇರೆ ಕೆಲವರ ಹೇಳಿಕೆ. ಬುದ್ಧಿಪೂರ್ವಕವಾಗಿ ಕೈಕೊ ಳ್ಳುವ ಕಾರ್ಯಾಚರಣೆಯೆ ಇಚ್ಛಾಶಕ್ತಿಯಾಗಿರುವದೆಂತಲೂ ಮತ್ತೆ ಕೆಲವರ ಅಭಿಪ್ರಾಯ. ಜೀವನದಲ್ಲಿ ಈ ಶಕ್ತಿಯ ಪ್ರಭಾವವನ್ನು ಎಲ್ಲರೂ ಒಪ್ಪಿ ಕೊಳ್ಳುವರು. ಮನವಿದ್ದಲ್ಲಿ ಮಾರ್ಗವೆಂಬ ಗಾದೆಯು ಮಾತಾದರೂ ಇವನ್ನೇ ಹೇಳುವದು. ಆಟದ ಕಡೆಗೆ ಸಹಜವಾಗಿ ಹರಿಯುವ ಮನಸ್ಸನ್ನು ಜಗ್ಗಿ ಅಭ್ಯಾಸದಲ್ಲಿ ತೊಡಗಿಸುವದು ಇಚ್ಛಾಶಕ್ತಿಯ ಬಲದಿಂದಲೆ! ಇಚ್ಛಾಶಕ್ತಿ

ಯಿಂದ ಬುದ್ಧಿಪೂರ್ವಕವಾಗಿ ಕಠಿಣ ಕಾರ್ಯಗಳನ್ನು ಕೈಕೊಳ್ಳುವಾ
ಯುಕ್ತಾಯುಕ್ತತೆಯ ನಿರ್ಣಯವು ನಮ್ಮಲ್ಲಿರಬೇಕಾಗುವದು. ಇದು ಸ
ಇದು ತಪ್ಪು—ಎನ್ನುವ ಕೆಲವು ನೀತಿ ನಿಯಮಗಳು ನಮ್ಮ ಇಚ್ಛಾಶಕ್ತಿಯನ
ನಿಯಂತ್ರಿಸಬೇಕಾಗುವದು. ಈ ನೈತಿಕ ನಿರ್ಬಂಧಗಳು ಆತ್ಮೀಯವಾದ
ಗಳು. ಅಂತೆಯೇ ನಮ್ಮ ಸ್ವಾತ್ಮಭಾವನೆಯು ನಮ್ಮ ನೈತಿಕ ಜೀವನವನ
ನಿಯಂತ್ರಿಸುವದೆಂದು ಹೇಳುವರು. **ಸರಿಯಾದ ಸ್ವಾತ್ಮಭಾವನೆ, ಉಜ್ವ
ವಾದ ಇಚ್ಛಾಶಕ್ತಿಗಳನ್ನು ಬೆಳೆಸಿ ಹೃದಯದ ಕೀಳು ಭಾವನೆಗಳ
ಮಕ್ಕಳ ನೈತಿಕ ಜೀವನಕ್ಕೆ ಆತಂಕವಾಗದಂತೆ ನಾವು ನೋಡಿಕೊ
ಬಹುದು.** ಹೀಗೆ ಮಾಡುವದು ಮಕ್ಕಳ ಶಿಕ್ಷಕರ ಮಹತ್ವದ ಕಾಯ
ವಾಗಿದೆ.

## ಪರಿಚ್ಛೇದ ೭

### ಮನೋವಿಭಜನೆ

**ಮನೋವಿಭಜನೆಯು** ಮಾನಸಶಾಸ್ತ್ರದ ಒಂದು ನೂತನವಾ
ಪ್ರಯೋಗವಾಗಿದೆ. ನಾವು ಯಾವುದನ್ನು ಮನಸ್ಸೆಂದು ತಿಳಿದುಕೊಂಡಿರುವೆವೋ
ಅದು ನಿಜವಾಗಿ ಚಿತ್‌ಪ್ರದೇಶದ ತುದಿಯಂಚು ಮಾತ್ರ. ತೇಲುವ ಹಿಮ
ಗಡ್ಡೆಯ ಮೇಲೆ ಕಾಣುವ ಅತ್ಯಲ್ಪಭಾಗದಂತೆ. ಈ ಹೊಸ ಪ್ರಯೋಗವನ
ಮೊದಲು ಕಂಡುಹಿಡಿದವರು ಆಸ್ಟ್ರಿಯದ ವೈಜ್ಞಾನಿಕರಲ್ಲಿ ಒಬ್ಬರು. ಸಿಗ್ಮಂ
ಫ್ರಾಯಿಡ ಎಂಬುದು ಅವರ ಹೆಸರು. ಮನಸ್ಸಿನ ಅಪಾರವಾದ ಆಳವನ
ಇವರು ಕಂಡುಹಿಡಿದರು. ಫ್ರಾಯಿಡರ ಅದ್ಭುತವಾದ ಶೋಧವು ಮಾನ
ಶಾಸ್ತ್ರದಲ್ಲಿ ಪ್ರಚಂಡವಾದ ಕ್ರಾಂತಿಯನ್ನುಂಟುಮಾಡಿದೆ. ಪ್ರಗತಿಪರ ರಾಷ
ಗಳಲ್ಲಿ ಈ ಹೊಸ ಪ್ರಯೋಗದ ಸಹಾಯದಿಂದ ಚಿಕ್ಕಮಕ್ಕಳಲ್ಲಿ ತೋರಿಬರು
ವಿವಿಧವಾದ ಮನೋವಿಕೃತಿಗಳನ್ನು ಸರಿಪಡಿಸುವ ಕಾರ್ಯವು ಯಶಸ್ವಿಯಾ
ಸಾಗಿದೆ.

ನಮ್ಮ ಮನಸ್ಸಿಗೆ ಮೂರು ಅಂತಸ್ತುಗಳಿವೆ. ನಮಗೆ ಪರಿಚಿತವಾಗಿರುವದು ಮೇಲಿನ ಅಂತಸ್ತು ಮಾತ್ರ. **ನಮ್ಮ ವಿಚಾರಗಳ ಹಾಗೂ ಕೃತಿಗಳ ಬೇರುಗಳು ಮನಸ್ಸಿನ ಆಳದಲ್ಲಿ ದೂರದ ವರೆಗೆ ಹೋಗಿರುವವೆಂಬುದನ್ನು** ಫ್ರಾಯಿಡರು ಮೊದಲು ತೋರಿಸಿಕೊಟ್ಟರು. ಮನಸ್ಸಿನ ಮೊದಲಿನ ಅಂತಸ್ತಿಗೆ **ಜಾಗೃತ ಚಿತ್ತವೆಂದು** ಹೇಳುವರು. ಈ ಮೇಲಂತಸ್ತಿನಲ್ಲಿದ್ದ ಚಿತ್ತವೃತ್ತಿಗಳು ಆಳವಾದ ಮನಸ್ಸಿನ ಒಂದು ಅಲ್ಪಾಂಶವು ಮಾತ್ರ. ಇಲ್ಲಿ ತೋರಿಬರುವ ವಿಕಾರ-ವ್ಯತ್ಯಾಸಗಳಿಗೆ ಕೆಳಗಿನ ಅಂತಸ್ತುಗಳಲ್ಲಿ ನೆಲಸಿರುವ ಚಿತ್ತವೃತ್ತಿಗಳೇ ಕಾರಣಗಳಾಗಿರುವವು. ಮೊದಲನೆಯ ಅಂತಸ್ತಿಗೆ ಹೊಂದಿಕೊಂಡಿರುವದು ಎರಡನೆಯ ಅಂತಸ್ತಾಗಿರುವದು. ಇದಕ್ಕೆ **ಅನಾವಿಷ್ಕೃತ ಚಿತ್ತವೆಂದು** ಕರೆಯುವರು. ಇವೆರಡು ಅಂತಸ್ತುಗಳ ನಡುವಿನ ಅಂತರವು ಕಿರಿದಾಗಿದೆ, ಎರಡು ಕೋಣೆಗಳ ನಡುವಿರುವ ಒಂದು ಹೊಸತಿಲಂತೆ ಮಾತ್ರ. ಈ ಅಂತರವನ್ನು '**ಜಾಗೃತ ಅವಸ್ಥೆಯ ಹೊಸತಿಲೆ**'ಂದು ರೂಪಕವಾಗಿ ಹೇಳುವರು. ಎರಡನೆಯ ಅಂತಸ್ತಿನಲ್ಲಿ ಸೇರಿಕೊಂಡಿರುವ ಸಂಸ್ಕಾರಗಳು ಈ ಹೊಸತಿಲನ್ನು ದಾಟಿ ಜಾಗೃತಾವಸ್ಥೆಯ ತಿಳಿವಿನ ಬೈಲಲ್ಲಿ ಬರಲು ಯಾವಾಗಲೂ ಯತ್ನಿಸುತ್ತಿರುವವು. ಸಂಧಿ ದೊರೆತ ಕೂಡಲೆ ಅವು ಅಲ್ಲಿಗೆ ಒಂದಿಲ್ಲೊಂದು ರೀತಿಯಿಂದ ನಮಗೆ ತಿಳಿಯದಂತೆ ನುಗ್ಗುವವು. ಈ ಎರಡನೆಯ ಅಂತಸ್ತಿನ ಕೆಳಗೆ ಆಳವಾಗಿ ನೆಲಸಿರುವದು ಮನಸ್ಸಿನ ಮೂರನೆಯ ಅಂತಸ್ತು. ಇದರ ಆಳವು ಅಳತೆಗೆ ಮೀರಿದ್ದು. ಅನೇಕ ಹತ್ತಿಕ್ಕಿದ ಒಲವುಗಳು, ಈಡೇರದ ಆಶೆ-ಆಕಾಂಕ್ಷೆಗಳು ಇಲ್ಲಿ ಆಶ್ರಯವನ್ನು ಹೊಂದಿರುವವು. ನಮಗೆ ತಿಳಿಯದಲೆ ಇವು ನಮ್ಮ ಕೃತಿಗಳನ್ನು ರೂಪಿಸುವವು, ನಿಯಂತ್ರಿಸುವವು. ಬೇಡಾದ ಒಲವುಗಳನ್ನು ನಾವು ಚೆಲ್ಲಿ ಬಿಡಲಾರೆವು. ಅಂತರಾಳದ ಅಜ್ಞಾತ ಪ್ರದೇಶದಲ್ಲಿ ನಿರಾಕೃತವಾದ ಇಂಥ ಒಲವುಗಳೂ ಆಶೆ ಆಕಾಂಕ್ಷೆಗಳೂ ಗುಂಪು ಕಟ್ಟಿಕೊಂಡು **ತೊಡಕುಗಳಾಗಿ ಪರಿಣಮಿಸುವವು.** ಕಾರ್ಯ-ಕಾರಣ ಸಂಬಂಧವನ್ನು ಹೇಳಲು ಬಾರದ ನಮ್ಮ ಅನೇಕ ಕೃತಿಗಳಿಗೆಲ್ಲ ಇಂಥ ತೊಡಕುಗಳೇ ಕಾರಣವೆಂದು ಫ್ರಾಯಿಡರು ಹೇಳಿರುವರು.

ಇವುಗಳನ್ನು ತಿಳಿವಿನ ಬೆಳಕಿನಲ್ಲಿ ತರಲು ಯೋಜಿಸಿದ ಯುಕ್ತಿಗಳಲ್ಲಿ ಕನಸುಗಳೂ ಒಂದಾಗಿವೆ. ಈಡೇರದ ಬಾಲ್ಯದ ಅತೃಪ್ತವಾದ ಆಕಾಂಕ್ಷೆಗಳು ಕನಸಿನಲ್ಲಿ ಕೊನೆಗೊಳ್ಳುವವೆಂದು ಕೆಲವರ ಅಭಿಪ್ರಾಯ. ಇಲ್ಲವೆ ಇಂದಿನ ಅತೃಪ್ತ ಜೀವನದ ಮುಂದಿನ ಹಂಬಲುಗಳು ಕನಸಿನಲ್ಲಿ ತೋರಿಬರುವವೆಂದು ಮತ್ತೊಬ್ಬ ಮನೋವಿಜ್ಞಾನಿಯ ಮತ. ಅಂತೂ ಕನಸುಗಳಲ್ಲಿ ಅತೃಪ್ತವಾದ ಆಶೆ ಆಕಾಂಕ್ಷೆಗಳ ಸೂಚಕತೆಯುಂಟೆಂದು ಇಂದಿನ ಮಾನಸಶಾಸ್ತ್ರವು ಸಾಮಾನ್ಯವಾಗಿ ಒಪ್ಪುತ್ತಿದೆ. **ಮನೋವಿಭಜನೆಗೆ ಕನಸುಗಳು ಮೂಲದ್ರವ್ಯಗಳು.** ಮನಸ್ಸಿನ ಕೆಳಗಿನ ಕೋಣೆಗಳಲ್ಲಿ ಸೇರಿದ ಸಂಸ್ಕಾರಗಳು ಕನಸಿನಲ್ಲಿ ಕಾಣಿಸಿಕೊಳ್ಳುವವು. ಜಾಗ್ರದವಸ್ಥೆಯಲ್ಲಿ ಹೊರಗೆ ಬರಲು ಇವುಗಳಿಗೆ ಆಸ್ಪದವಿಲ್ಲ. ಆದರೂ ತಿಳಿವಿನ ಬಯಲಲ್ಲಿ ಬರಲು ಇವು ಯಾವಾಗಲೂ ಯತ್ನಿಸುತ್ತಿರುವವು. **ಆದರೆ ಮನಸ್ಸಿನ ಮೇಲಂತಸ್ತಿನ-ಪ್ರಬುದ್ಧ ಚಿತ್ತದ–ಸುತ್ತಲೂ ಸದಾ ವಿವೇಕದ ಸರ್ಪಗಾವಲು ಇರುವದು.** ಸಮಾಜವು ನಿರಾಕರಿಸುವ ಈ ಸಂಗತಿಗಳನ್ನು ಹೊರಗೆ ಬರಗೊಡದಂತೆ ವಿವೇಕವು ಯಾವಾಗಲೂ ತಡೆಹಿಡಿಯುತ್ತಿದೆ. ಈ ಹೋರಾಟವು ಯಾವಾಗಲೂ ಸಾಗಿರುವದು. ಜಾಗ್ರದವಸ್ಥೆಯಲ್ಲಿ ವಿವೇಕದ ಕಾವಲು ಬಿಗಿಯಾಗಿರುವದು ಭದ್ರವಾಗಿರುವದು. ಆದರೆ ನಿದ್ರೆ ಹೋದ ಸಮಯದಲ್ಲಿ ಮಾತ್ರ ವಿವೇಕದ ಈ ಕಾವಲು ಎಷ್ಟೋ ಶಿಥಿಲವಾಗಿರುವದು. ಈ ಸಮಯವನ್ನು ಸಾಧಿಸಿ ಕೆಳಗಿನ ಸಂಸ್ಕಾರಗಳು ಮೇಲೆ ಕಾಣಿಸಿಕೊಳ್ಳುವವು. ನೀತಿ ವಿರುದ್ಧವಾದ ಈ ಚಿತ್ತವೃತ್ತಿಗಳು ಇದ್ದಕ್ಕಿದ್ದ ಹಾಗೆ ಹೊರಗೆ ಬಂದರೆ ವಿವೇಕವು ಅವುಗಳನ್ನು ಪ್ರತಿಬಂಧಿಸುವದು. ಸಾಂಪ್ರದಾಯಿಕ ನೀತಿಮತ್ತೆಯ ಸೋಗನ್ನು ಧರಿಸಿ ವಿವೇಕವನ್ನು ಮೋಸಗೊಳಿಸಿ ಇವು ಹೊರಗೆ ಬರುವವು, ಕನಸಿನಲ್ಲಿ ಕಾಣಿಸಿಕೊಳ್ಳುವವು, ಸ್ವಚ್ಛಂದವಾಗಿ ಸುಳಿದಾಡುವವು. ತಿರುಕನ ಅತೃಪ್ತವಾದ ಹಣದ ಹಂಬಲು ಕನಸಿನಲ್ಲಿ ಆತನನ್ನು ಸಮ್ರಾಟನನ್ನಾಗಿ ಮಾಡುವದು. ನೀತಿನಿರೋಧದಿಂದ ಅತೃಪ್ತವಾದ ಸ್ತ್ರೀಭೋಗದ ಲಾಲಸೆಯು ಕನಸಿನ ಅಂತಃಪುರದ ಸಾವಿರಾರು ಸ್ತ್ರೀಯರ ಸಮಾಗಮದಲ್ಲಿ ಕೊನೆಗಾಣುವದು

ಈ ಬಗೆಯ ನಿರೋಧಿಸಿದ ಬಯಕೆಗಳ ಗುಪ್ತವಾದ ತೃಪ್ತಿಯೇ ಕನಸೆಂದು ಫ್ರಾಯಿಡರು ಹೇಳುವರು. ಕನಸುಗಳ ಸಹಾಯದಿಂದ ವ್ಯಕ್ತಿಯ ಆಳವಾದ ಅಂತರಾಳವನ್ನು ಒಳಸೇರಬಹುದು. ಅಲ್ಲಿ ನಿಗೂಢವಾಗಿ ನೆಲೆಸಿರುವ ನಿರೋಧಿತ ಆಕಾಂಕ್ಷೆಗಳನ್ನು ತಿಳಿವಿನ ಬೆಳಕಿಗೆ ತರುವದರಿಂದ ಅವುಗಳಿಂದಾಗುವ ಅನರ್ಥವನ್ನು ತಪ್ಪಿಸಬಹುದೆಂಬುದು ಮನೋವಿಭಜನೆಯ ಮೂಲಮಂತ್ರವಾಗಿದೆ. ಇದೇ ಮೇರೆಗೆ ಪ್ರಚೋದಕ ಶಬ್ದಕ್ಕೆ ತಡೆಯದೆ ಬರುವ ಪ್ರತ್ಯುತ್ತರಗಳಿಂದಲೂ ಈ ಮಾನಸಿಕ ತೊಡಕುಗಳನ್ನು ಬಿಡಿಸಲು ಅವರು ಯತ್ನಿಸುವರು. ಇದರಿಂದ ಕುಂಠಿತ ಮನೋವ್ಯಾಪಾರವನ್ನು ಅವರು ಸರಿಪಡಿಸುವರು. ವ್ಯಕ್ತಿಯ ಕನಸುಗಳು ಆತನ ಮನಸ್ಸಿನ ಅಂತರಾಳವನ್ನರಿಯಲು ಸಾಧನವಾಗುವಂತೆ, ಒಂದು ಜನಾಂಗದ ಪ್ರಾಚೀನ ಕಥೆಗಳೂ ಪುರಾಣಗಳೂ ಆ ಜನಾಂಗದ ನಿಗೂಢವಾದ ಮನಸ್ಸಿನ ಚಾರಿತ್ರ್ಯವನ್ನು ತಿಳಿದುಕೊಳ್ಳಲು ಸಹಾಯಕವಾಗುವವು.

ಮನೋವಿಭಜನೆಯ ಶಾಸ್ತ್ರದಲ್ಲಿ ಇನ್ನೊಂದು ದೊಡ್ಡ ವಿಚಾರವಿದೆ. **ಮನುಷ್ಯನ ಸಕಲ ವ್ಯವಹಾರಗಳಿಗೂ 'ಕಾಮ'ವೇ ಮೂಲ ಶಕ್ತಿಯೆಂದು ಇಲ್ಲಿ ಹೇಳುವರು. 'ಆತ್ಮಿಕ ಶಕ್ತಿಗಳಿಗೆಲ್ಲ ಕಾಮ ದೇವನೇ ಅರಸ. ಮಾನಸಿಕ, ಬೌದ್ಧಿಕ ಶಕ್ತಿಗಳೆಲ್ಲ ಆತನಿಗೆಯೇ ಆಧೀನವಾದವುಗಳು'** – ಹೀಗೆ ಈ ಶಾಸ್ತ್ರದಲ್ಲಿ ಹೇಳುವರು. ವಿವೇಕಕ್ಕೆ ಬಾಗಿ ಅಂತರಾಳದಲ್ಲಿ ತಡೆಹಿಡಿದ ಕಾಮಭಾವನೆಗಳ ಬಿರುಗಾಳಿಯು ನಮ್ಮ ಚಿತ್ತವೃತ್ತಿಗಳನ್ನೆಲ್ಲ ಚದರಿಸಿಬಿಡುವದು. ಇದೇ ಮೇರೆಗೆ ನಮ್ಮ ಬುದ್ಧಿಶಕ್ತಿಯ ಪ್ರತಿಫಲಗಳಾದ ಕಲೆ–ಸಾಹಿತ್ಯ–ಅಧ್ಯಾತ್ಮ ಮೊದಲಾದ ಸಂಸ್ಕೃತಿಯ ವಿವಿಧ ಸ್ವರೂಪಗಳೆಲ್ಲವೂ ಈ ಕಾಮ ಭಾವನೆಯಿಂದಲೇ ಪ್ರೇರಿತವಾದವುಗಳೆಂದು ಫ್ರಾಯಿಡರ ಹೇಳಿಕೆಯಾಗಿದೆ. ಕಾಮಭಾವದ ನಿಗ್ರಹವು ಬೇಡವೆಂದು ಹೇಳಿದರೂ ಅದನ್ನು ನಿರಂಕುಶವಾಗಿ ಹರಿಯಗೊಡಬೇಕೆಂದು ಇವರು ಹೇಳುವದಿಲ್ಲ. ಈ ಕಾಮಭಾವವನ್ನಾದರೂ ಉಜ್ವಲಗೊಳಿಸಬೇಕು. ಸರಿಯಾದ ವಿಧಾಯಕ ಕೆಲಸಗಳಲ್ಲಿ ಈ ಶಕ್ತಿಯನ್ನು ತೊಡಗಿಸಬೇಕು. ವ್ಯಕ್ತಿಯ ಸರ್ವತೋ

ಮುಖವಾದ ಉನ್ನತಿಗೆ ಇದು ಸಹಾಯಕವಾಗುವಂತೆ ಮಾಡಬೇಕು. ಕಾಮಭಾವದ ಪ್ರೇರಕ ಶಕ್ತಿಯು ಪ್ರಬಲವಾಗಿರುವದು. ಸಾಹಿತ್ಯವೂ ಕಲಾ ಕೃತಿಗಳೂ ಈ ಪ್ರೇರಕ ಶಕ್ತಿಯಿಂದಲೇ ಉಗಮಹೊಂದಿದ ಅನೇಕ ಉದಾ ಹರಣೆಗಳನ್ನು ನಾವು ನೋಡಬಹುದು. ಮುದ್ದಣನು ತನ್ನ ರಸಿಕಳಾದ ಪತ್ನಿಯ ಮನಸ್ಸಿನ ಬೇಜಾರವನ್ನು ಕಳೆಯಲು ರಾಮಾಶ್ವಮೇಧವನ್ನು ರಚಿ ಸಿದನು. ಮುಮತಾಜಳ ಮೇಲಿನ ಪ್ರೀತಿಗಾಗಿ ಶಹಾಜಾನನು ಅದ್ವಿತೀಯ ಕಲಾಕೃತಿಯಾದ ತಾಜಮಹಲನ್ನು ನಿರ್ಮಿಸಿದನು. ಇವೆಲ್ಲವುಗಳು ಸ್ತ್ರೀ ಪ್ರೇಮವನ್ನು–**ಕಾಮಭಾವವನ್ನು ಉಜ್ವಲಗೊಳಿಸಿದ ಉದಾಹರಣೆಗ ಳೆಂದು** ಹೇಳಬಹುದು.

ಮಾನಸಶಾಸ್ತ್ರದ ಮೂಲಗಳನ್ನೇ ಅಲುಗಿಸಿದ ಈ ಮನೋವಿಭಜನೆಯ ಪ್ರಯೋಗವು ಶಿಕ್ಷಣದ ಪ್ರಪಂಚವನ್ನೂ ವ್ಯಾಪಿಸಿದೆ. ಶಿಕ್ಷಕರು ಈ ಪ್ರಯೋ ಗದ ಪರಿಚಯುವನ್ನು ಮಾಡಿಕೊಳ್ಳಬೇಕು. ಭಾವಮೂರ್ತಿಗಳಾದ ಎಳೆಯ ಮಕ್ಕಳ ಸರಿಯಾದ ಬೆಳವಣಿಗೆ ಶಿಕ್ಷಕರನ್ನೇ ಅವಲಂಬಿಸಿದೆ. ಭಾವಶಕ್ತಿಯ ಸರಿಯಾದ ಜ್ಞಾನವು ಆತನಲ್ಲಿದ್ದರೆ ಆತನ ಕಾರ್ಯವು ಸುಗಮವಾಗುವದು. ಆತನ ವರ್ತನೆಯು ಸಹಾನುಭೂತಿಯುಳ್ಳದ್ದಾಗುವದು. ಚಿಕ್ಕಮಕ್ಕಳ ನಡತೆಯಲ್ಲಿ ಕಂಡುಬರುವ ಲೋಪದೋಷಗಳಿಂದ ಆತನು ಒಮ್ಮೆಲೆ ಕೆರಳ ಲಾರನು. ಮಾಡಿದ್ದನ್ನು ಮರೆಯುವದು, ಇಲ್ಲವೇ ಮಾತು ತಟ್ಟುವದು, ತೊದಲಿಸುವದು–ಇವೇ ಮೊದಲಾದ ಮಾನಸಿಕ ಹಾಗೂ ಶಾರೀರಿಕ :ವಿಕಾರ ಗಳ ಬಗ್ಗೆ ಅವುಗಳ ಮೂಲ ಕಾರಣಗಳು ಎಲ್ಲಿಯೋ ದೂರದ ಮನೋ ಭೂಮಿಯಲ್ಲಿ ಮುಚ್ಚಿಕೊಂಡಿವೆಯೆಂದು ಶಿಕ್ಷಕನು ತಿಳಿದುಕೊಳ್ಳಬೇಕು. ಸಾಧ್ಯವಿದ್ದರೆ ತಾನಾಗಲೀ ನುರಿತ ವಿಜ್ಞಾನಿಗಳ ಸಹಾಯದಿಂದಾಗಲಿ ಈ ಮಾನಸಿಕ ತೊಡಕುಗಳನ್ನು ಶಾಸ್ತ್ರೀಯುವಾಗಿ ಬಿಡಿಸಲು ಯತ್ನಿಸಬಹುದು. ಇಲ್ಲವಾದರೆ, ಇಂಥ ತೊಡಕುಗಳಾಗದಂತೆಯೂ ಚಿಕ್ಕ ಬಾಲಕರ ಕೂಡ ತಿಳು ವಳಿಕೆ ಸಹಾನುಭೂತಿಯಿಂದ ವರ್ತಿಸುವಂತೆಯೂ–ಇಷ್ಟನ್ನಾದರೂ ಪ್ರಾಮಾ ಣಿಕ ಶಿಕ್ಷಕನು ಮಾಡಬಲ್ಲನು.

# ಪರಿಚ್ಛೇದ ೮

## ಬೇರೆ ಕೆಲವು ಮಾನಸಿಕ ಶಕ್ತಿಗಳು

ಶಿಕ್ಷಣವೆಂದರೆ ಆತ್ಮವಿಕಾಸ. ಸಹಜ ಪ್ರವೃತ್ತಿಗಳ ಸೂಕ್ಷ್ಮವಾದ ಎಳೆಗಳನ್ನು ಹಿಡಿದುಕೊಂಡೇ ಶಿಕ್ಷಣವು ಸಾಗಬೇಕು. ವ್ಯಕ್ತಿಯ ವ್ಯವಹಾರವೆಲ್ಲವೂ ಇವುಗಳಿಗೆ ಆಧೀನವಾಗಿರುವದು. ಸಹಜ ಪ್ರವೃತ್ತಿಗಳ ಅಂಗಗಳಾದ ಭಾವಗಳು ನಾವು ಮಾಡುವ ಪ್ರತಿಯೊಂದು ಕ್ರಿಯೆಗೂ ಪ್ರೇರಕಶಕ್ತಿಗಳಾಗಿವೆ. ಇದುವರೆಗೆ ಇವೆಲ್ಲವುಗಳ ವಿವೇಚನೆಯನ್ನು ಮಾಡಿದುದಾಯಿತು. ಆದರೆ ಇವುಗಳ ಜೊತೆಗೆ ಶಿಕ್ಷಣ ಕಾರ್ಯದಲ್ಲಿ ಸಹಕರಿಸುವ ಮಾನಸಿಕವಾದ ಇನ್ನೂ ಬೇರೆ ಕೆಲವು ಶಕ್ತಿಗಳೂ ಇರುವವು. ಇವುಗಳಿಗೆ '**ಸಾಮಾನ್ಯ ಪ್ರವೃತ್ತಿ**' ಗಳೆಂತಲೂ ಹೇಳಬಹುದು. ಅನುಮಾನ, ಅನುಕರಣ, ಕ್ರೀಡೆ, ಕಲ್ಪಕತೆ ಇವುಗಳು ಸಾಮಾನ್ಯ ಪ್ರವೃತ್ತಿಗಳಲ್ಲಿ ಮುಖ್ಯವಾದವುಗಳು. ದಿನ ದಿನದ ಶಿಕ್ಷಣದಲ್ಲಿ ಈ ಸಾಮಾನ್ಯ ಪ್ರವೃತ್ತಿಗಳ ಸಹಕಾರವು ಹೆಜ್ಜೆಹೆಜ್ಜೆಗೂ ಬೇಕಾಗುತ್ತದೆ. ಅಂತೆಯೇ ಅವುಗಳ ರೂಪುರೀತಿಗಳನ್ನರಿತುಕೊಳ್ಳುವದು ಶಿಕ್ಷಕರಿಗೆ ಅವಶ್ಯವಾಗಿದೆ.

**ಅನುಮಾನವು :—** ಊಹಾಶಕ್ತಿಯ ಪ್ರತಿಫಲ. **ಕಾರ್ಯ ಕಾರಣಗಳ ಸಂಬಂಧವನ್ನು ಜೋಡಿಸುವ ಒಂದು ಬಗೆಯ ವಿಧಾನ.** ಕಣ್ಣು-ಕಿವಿಗಳೇ ಮೊದಲಾದ ಜ್ಞಾನೇಂದ್ರಿಯುಗಳ ಸಹಾಯದಿಂದ ಮಗುವು ತನ್ನ ಸುತ್ತುಮುತ್ತಲಿನ ಸಂಗತಿಗಳ 'ಪರಿಚಯ' ವನ್ನು ಮಾಡಿಕೊಳ್ಳುವದು. ವಸ್ತುವಿಗೂ ಇಂದ್ರಿಯಗಳಿಗೂ ಒರುವ ಸಂಪರ್ಕದಿಂದ ಆತನ ಮನಸ್ಸಿನಲ್ಲಿ ಮಿದುಳಿನ ಮುಖಾಂತರವಾಗಿ '**ಸಂವೇದನೆ**' ಗಳು ಸಂಗ್ರಹಿಸುವವು. ಇಂದಿನ ಸಂವೇದನೆಗಳನ್ನು ಹಿಂದಿನ ಅನುಭವದ ಬೆಳಕಿನಲ್ಲಿ ಮಗುವು ಹಿಡಿದು ನೋಡುವದು. ಇದುವೇ ಮಗುವಿನ ಒಂದು ವಸ್ತುವಿನ ಬಗ್ಗೆ ಉಂಟಾಗುವ ತಿಳುವಳಿಕೆ. ಒಂದೇ ವಸ್ತುವಾಗಿದ್ದರೂ ಅದರ ಬಗ್ಗೆ ಮಕ್ಕಳ ಅನುಭವವು ಬೇರೆಬೇರೆಯಾಗಿರಬಹುದು. ಅಂತೆಯೇ ಅದರ ಬಗ್ಗೆ ತಿಳುವಳಿಕೆಯೂ ಬೇರೆಬೇರೆಯಾಗಿರಬಹುದು. ಈ ತಿಳುವಳಿಕೆಯನ್ನು ತಂದುಕೊಡುವ

ಕಾರ್ಯವು ಮನಸ್ಸಿನದು. ಮನಸ್ಸು ಇನ್ನೊಂದು ಕಾರ್ಯವನ್ನೂ ಮಾಡು ವದು. ವಿವಿಧ ವಸ್ತುಗಳಲ್ಲಿಯ ಗುಣಸಾಮ್ಯತೆ, ರೂಪಸಾಮ್ಯತೆಗಳನ್ನು ನಿರೀಕ್ಷಿಸುವದೂ, **ಸಾಮ್ಯತೆಯನ್ನು ಕಂಡುಹಿಡಿದು ವಸ್ತುಗಳನ್ನು ವರ್ಗೀಕರಿಸುವದೂ** ಅವರ ಮುಂದಿನ ಕಾರ್ಯ. ಹೀಗೆ **ವಿವಿಧತೆ ಯಲ್ಲಿ ಏಕರೂಪತೆಯನ್ನು ಕಾಣುವದೂ,** ಸಾಮಾನ್ಯತೆಯ ಸಂಬಂಧ ವನ್ನು ಜೋಡಿಸುವದೂ ಮಾನಸಿಕ ಶಕ್ತಿಗಳಲ್ಲಿ ಮುಖ್ಯವಾದುದು. ಅನು ಮಾನದ ಸಾಧನೆಗೆ ಇದೇ ಆಧಾರವಾದುದು. ಸಾಮಾನ್ಯತೆಯ ಕಲ್ಪನೆ ಯಾಗಬೇಕಾದರೆ ಅನುಭವಗಳನ್ನು ತೂಗಿ ನೋಡಬೇಕಾಗುವದು. ಒಂದನ್ನು ಮತ್ತೊಂದರೊಡನೆ ಸರಿ ಹಚ್ಚಿ ನೋಡಬೇಕಾಗುವದು. ಹೊರಗೆ ಕಾಣುವ ಹೆಚ್ಚುಕಡಿಮೆಗಳನ್ನು ಬಿಟ್ಟುಕೊಡಬೇಕು. ಸೂಕ್ಷ್ಮವಾದ ಏಕಸೂತ್ರ ತೆಯ ಎಳೆಯನ್ನು ಮಾತ್ರ ಎತ್ತಿಕೊಳ್ಳಬೇಕು. ಈ ಮಾನಸಿಕ ಕ್ರಿಯೆಯು ಒಳ್ಳೇ ಮಾರ್ಮಿಕವಾಗಿದೆ. ಇದರಲ್ಲಿ ವಿಭಜನ ಹಾಗೂ ಸಂಯೋಜನಗ ಳೆರಡೂ ಕಂಡುಬಂದರೂ ಇವು ಒಂದೇ ಕ್ರಿಯೆಯ ಎರಡು ಮುಖಗಳಿ ದ್ದಂತೆ. ಅನುಮಾನವು ಈ ಕ್ರಿಯೆಯನ್ನೇ ಮುಂದುವರಿಸುತ್ತದೆ. ಸಾದೃ ಶ್ಯದ ಸಹಾಯದಿಂದ ಒಂದು ಸಾಮಾನ್ಯ ನಿಯಮವನ್ನು ಬಿಡಿವಸ್ತುವಿಗೆ ಅನ್ವಯಿಸುವದು ಅನುಮಾನದ ಒಂದು ರೀತಿ. ಬೇರೆಬೇರೆ ವಸ್ತುಗಳಲ್ಲಿರುವ ಹೋಲಿಕೆಯನ್ನು ತಿಳಿದುಕೊಂಡು ಅವುಗಳಲ್ಲಿ ಒಂದು ಸಾಮಾನ್ಯ ತತ್ವವನ್ನು ಕಾಣುವದು ಅನುಮಾನದ ಮತ್ತೊಂದು ರೀತಿಯಾಗಿದೆ. ಎರಡನೆಯ ಪ್ರಕಾರದ ಈ ಅನುಮಾನವು ವಿಜ್ಞಾನದ ಅಡಿಗಲ್ಲಾಗಿದೆ. ಆಧುನಿಕ ಶಿಕ್ಷ ಣವು ಇದನ್ನೇ ಹೆಚ್ಚಾಗಿ ನಂಬುತ್ತಿದೆ. **ವ್ಯಾಕರಣದಲ್ಲಿ ಸಿದ್ಧವಾದ ಸಾಮಾನ್ಯ ನಿಯಮಗಳನ್ನು ಪಾಠಮಾಡಿಸುವದು ಹಿಂದಿನ ಪರಂ ಪರೆಯ ಶಿಕ್ಷಣ. ಅನೇಕ ಉದಾಹರಣೆಗಳ ನಿರೀಕ್ಷಣೆಯಿಂದ ಸಾಮಾನ್ಯ ನಿಯಮವನ್ನು ವಿದ್ಯಾರ್ಥಿಗಳು ತಾವಾಗಿಯೇ ಕಂಡುಹಿಡಿದು ತಿಳಿದುಕೊಳ್ಳುವದು ಇಂದಿನ ಪಾಠಕ್ರಮದ ರೀತಿ.** ಈ ರೀತಿಯನ್ನು ಅನು ಸರಿಸುವದರಿಂದ ಮಕ್ಕಳಲ್ಲಿ ಸ್ವತಂತ್ರ ವಿಚಾರ ಮಾಡುವ ಶಕ್ತಿಯು ತಾನಾ ಗಿಯೇ ಬೆಳೆದುಬರುವದು.

ಆನುವಂಶಿಕವಾದ ಇಲ್ಲವೆ ಅನುಭವಜನ್ಯವಾದ ಸಂಸ್ಕಾರಗಳನ್ನು ಒಬ್ಬ ರಿಂದ ಮತ್ತೊಬ್ಬರಿಗೆ ಮುಟ್ಟಿಸುವದು ಮನಸ್ಸಿನ ಮತ್ತೊಂದು ಕಾರ್ಯ ವಾಗಿದೆ. ಇವಕ್ಕೆ **ಅನುಕರಣವೆಂದು** ಹೆಸರು. ಅನುಕರಣವು ಮೂರು ವಿಧವಾಗಿವೆ. ಸುಪ್ರಸಿದ್ಧ ಸಾಹಿತಿಗಳಾದ 'ಶ್ರೀನಿವಾಸರು' ಒಂದೆಡೆಗೆ ಬೇರೆ ಸಂದರ್ಭದಲ್ಲಿ ಹೇಳಿರುವಂತೆ–'**ಒಬ್ಬರ ಭಾವವು ಹಲವರ ಭಾವ ವಾಗಬೇಕು.**' ತಿಳಿಯದೆಯೆ ಒದಗುವ ಈ ಭಾವತಾದಾತ್ಮ್ಯವು **ಭಾವಾನು ಕರಣವು.** ಇದೇ ಮೇರೆಗೆ ಒಬ್ಬರ ವಿಚಾರವು ಹಲವರ ವಿಚಾರವಾಗುವದು **ವಿಚಾರಾನುಕರಣವು.** ಇವೆರಡು ರೀತಿಯ ಅನುಕರಣವು ನಮಗೆ ತಿಳಿ ಯದಂದೆ ಒಳಗಿನಿಂದಲೇ ನಡೆಯುವದು. ಅಂತೆಯೇ ಅದು ಸೂಕ್ಷ್ಮ ವಾಗಿದೆ. ಒಬ್ಬರು ಮಾಡಿದಂತೆ ಮಾಡುವದು **ಕೃತಿಯ ಅನುಕರಣವು.** ಇದು ಎಲ್ಲರಿಗೂ ಚಿರಪರಿಚಿತವಾದುದು.

ಕೃತಿಯ ಅನುಕರಣವು ಯಾವಾಗಲೂ ಸಜ್ಞಾನವಾದುದಲ್ಲ. ಪ್ರಾಣಿ ಗಳಲ್ಲಿ ಇದು ಹೆಚ್ಚಾಗಿ ಕಂಡುಬರುವದು. ತಾಯಿ ಮಾಡಿದಂತೆ ಮರಿಗಳು ಮಾಡುವವು. ಗಿಡವೇರುವದು, ಬೇಟೆಯಾಡುವದು–ಇವೇ ಮೊದಲಾದ ಸಜಾತೀಯ ಕ್ರಿಯೆಗಳನ್ನೆಲ್ಲ ಪ್ರಾಣಿವರ್ಗದಲ್ಲಿ ಮರಿಗಳು ತಮ್ಮ ತಾಯಿ ತಂದೆಗಳು ಮಾಡುವಂತೆ ಮಾಡಿ ಕಲಿಯುವವು. ಅನುಕರಣದ ಎರಡನೆಯ ಸ್ವರೂಪವು ಸಜ್ಞಾನವಾದುದು. ಒಬ್ಬರು ಮಾಡಿದಂತೆ ಮಾಡಬೇಕೆನ್ನುವ– ಮಾಡುವೆನೆನ್ನುವ–ಅರಿವು ಇದರಲ್ಲಿ ತೋರಿಬರುವದು. ಆದರೆ ಇದು ಸಹೇ ತುಕವಾದುದಲ್ಲ. ಹೀಗೇಕೆ ಮಾಡಬೇಕೆಂಬ ಪ್ರಯೋಜನದ ತಿಳುವಳಿಕೆ ಇರುವದಿಲ್ಲ. ಬಾಲ್ಯದಲ್ಲಿ ಚಿಕ್ಕಮಕ್ಕಳು ಮಾಡುವ ಅನುಕರಣವು ಹೆಚ್ಚಾಗಿ ಈ ಬಗೆಯದು. ಹಿರಿಯರೂ ಚಿಕ್ಕವರೂ ಮಾಡುವದನ್ನೆಲ್ಲ ಮಗುವು ನಿರೀ ಕ್ಷಿಸಿ ತಾನೂ ಹಾಗೆಯೇ ಮಾಡಲು ಹವಣಿಸುವದು. ಸಹಜ ಪ್ರವೃತ್ತಿ ಗಳಷ್ಟೇ ಸ್ವಾಭಾವಿಕವಾದ ಅನುಕರಣವನ್ನು ಸಹಜ ಪ್ರವೃತ್ತಿಗಳಲ್ಲಿ ಒಂದಾಗಿ ಭಾವಿಸುವರು ಕೆಲವರುಂಟು. ಎಳೆಯತನದಲ್ಲಿ ತೋರಿಬರುವ ಅವಲೋಕನ, ಅನುಕರಣಗಳು ಚಿಕ್ಕಮಕ್ಕಳ ದೇಹ–ಬುದ್ಧಿಗಳ ವಿಕಾಸಕ್ಕೆ ನಿಸರ್ಗವು

ಒದಗಿಸುವ ಪ್ರಬಲವಾದ ಸಾಧನಗಳಾಗಿವೆ. **ಚಿಕ್ಕಮಕ್ಕಳು ಮಾತು ಕಲಿಯುವದಾದರೂ ಕೇವಲ ಅನುಕರಣದಿಂದಲೇ.** ಅನುಕರಣದ ಮೂರನೆಯ ಸ್ವರೂಪವು ಸಹೇತುಕವಾದುದು; 'ಹೀಗೆ'–ಆಗಬೇಕೆಂದಾಗಲಿ 'ಹೀಗೆ'ಮಾಡಬೇಕೆಂದಾಗಲಿ ಒಂದು ಉದ್ದೇಶದ ಪೂರ್ತಿಗಾಗಿ ಮಾಡುವದು. ಈ ಬಗೆಯ ಅನುಕರಣವು ವ್ಯಕ್ತಿಗಳಲ್ಲಿ ತೋರಿಬರುವಂತೆ ರಾಷ್ಟ್ರಗಳಲ್ಲಿಯೂ ಕಂಡುಬರುವದು. ಹಿಂದುಳಿದ ರಾಷ್ಟ್ರಗಳು ಮುಂದುವರಿದ ರಾಷ್ಟ್ರಗಳ ಅನುಕರಣದಿಂದ ಪ್ರಗತಿಯನ್ನು ಸಾಧಿಸಿರುವದಕ್ಕೆ ಜಪಾನ, ತುರ್ಕಸ್ಥಾನಗಳೇ ಸಾಕ್ಷಿಯಾಗಿವೆ.

ಚಿಕ್ಕಮಕ್ಕಳ ಅನುಕರಣವು ಮೊದಲಿಗೆ ಹೇತುರಹಿತವಾದರೂ ಅವರು ದೊಡ್ಡವರಾಗುತ್ತ ಹೋದಂತೆ ಅದು ಸಹೇತುಕವಾಗುವದು. ಈ ಸಹೇತುಕವಾದ ಅನುಕರಣದಿಂದಲೆ ಅವರ ಮುಂದಿನ ಜೀವನವು ರೂಪುಗೊಳ್ಳುವದು. ನಮ್ಮ ನಿತ್ಯ ಜೀವನದ ಅನೇಕ ಕಾರ್ಯಗಳೆಲ್ಲವೂ ಒಂದೇ ಮಾದರಿಯ ಅನುಕರಣವಾಗಿರುವದರಿಂದ ಒಂದೇ ರೀತಿಯವಾಗಿರುವವು. ಚಿಕ್ಕಮಕ್ಕಳಲ್ಲಿ ಅನುಕರಣ ಪ್ರವೃತ್ತಿಯು ಹುಟ್ಟಿದ ಆರು ತಿಂಗಳಿನಿಂದಲೇ ಪ್ರಾರಂಭಿಸುವದೆಂದು ಹೇಳುವರು. ಮುಂದೆ ಈ ಪ್ರವೃತ್ತಿಯು ಬಲಿಯುತ್ತ ಬಂದರೂ ಬಾಲ್ಯದಲ್ಲಿಯೇ ಇದರ ಪ್ರಾಬಲ್ಯವು ಹೆಚ್ಚು. ಎಳೆಯ ಮಕ್ಕಳು ತಮ್ಮ ಮನಸ್ಸಿಗೆ ಹಿಡಿದುದನ್ನೆಲ್ಲ, ರಂಜಿಸಿದುದನ್ನೆಲ್ಲ ತಾವೂ ಅದರಂತೆ ಆಗಲೂ ಇಲ್ಲವೆ ಮಾಡಲೂ ಯತ್ನಿಸುವರು. ಆದರೆ ಈ ಸಹೇತುಕವಾದ ಅನುಕರಣದಲ್ಲಿ ಬುದ್ಧಿಯ ಸಹಕಾರವಿರುವದು. ಪರಿಚಿತವಾದ ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು. ಚಿಕ್ಕ ಬಾಲಿಕೆಯರು ನೃತ್ಯವನ್ನು ಕಲಿಯುವರು, ಹಗ್ಗದ ಆಟವನ್ನಾಡುವರು. ಇವೇ ಮೊದಲಾದ ಆಟಗಳನ್ನು ಕಲಿಯಲು ಅವಲೋಕನ–ಅನುಕರಣಗಳೇ ಮುಖ್ಯ ಸಾಧನಗಳು. ಹೆಜ್ಜೆ ಹಾಕುವದು, ಕೈ ಕೂಡಿಸುವದು, ಮೈ ಮಣಿಸುವದು ಮೊದಲಾದವುಗಳನ್ನು ಬಲ್ಲವರು ಮಾಡಿದಂತೆ ಮಾಡಿ ಕಲಿಯಬೇಕಾಗುವದು. ಮಾಡುವಾಗ್ಗೆ ತಪ್ಪು ತಡೆಗಳಾಗುವದುಂಟು. ಈ ತಪ್ಪುಗಳನ್ನು ತಿಳಿದುಕೊಂಡು ಮಗುವು ಮುಂದಿನ ತನ್ನ

ಹೆಜ್ಜೆಯನ್ನು ತಿದ್ದಿಕೊಳ್ಳುವದು. **ತಪ್ಪುವದೂ ತಿದ್ದಿಕೊಳ್ಳುವದೂ ಕಲಿಯುವ ಕಾರ್ಯದಲ್ಲಿ ಅವಶ್ಯವಾಗಿದೆ.**

ಅನುಕರಣದಿಂದ ಕಲಿಯುವಾಗ್ಗೆ **ಪುನರುಕ್ತಿಯು** ಮಹತ್ವದ್ದಾಗಿದೆ. ಪ್ರಗತಿಯ ಪ್ರತಿಯೊಂದು ಹೆಜ್ಜೆಯೂ ದೃಢವಾಗಬೇಕು. ಈ ದೃಢತೆ ಬರಬೇಕಾದರೆ ಮಾಡಿದ್ದನ್ನೇ ಮಾಡಬೇಕು. **ಮಾಡಿದ್ದನ್ನೇ ಮಾಡುವದು ನಮ್ಮ ಮಾನಸಿಕ ಒಲವುಗಳಲ್ಲಿ ಒಳ್ಳೇ ಮಹತ್ವದ್ದಾಗಿದೆ.** ಮಾಡಿದ್ದನ್ನೇ ಮತ್ತೆ ಮತ್ತೆ ಮಾಡುವದು ಚಿಕ್ಕಮಕ್ಕಳಿಗೆ ಹೆಚ್ಚಾಗಿ ಸೇರುವದು. ಅದರಲ್ಲಿ ಅವರಿಗೆ ಬೇಸರವಿಲ್ಲ. ಇದರಿಂದ ಅವರ ಪ್ರಗತಿಯು ಮುಂದೆ ಸಾಗುವದು. ಕಲಿತದ್ದು ದೃಢವಾಗಿ ನೆಲೆಸುವದು. ಈ ಪ್ರವೃತ್ತಿಯು ಹಿರಿಯರಲ್ಲಿಯೂ ತೋರಿಬರುವದು. ಹಿಂದಿನ ಹಳೆಯ ಸಂಪ್ರದಾಯಗಳಿಗೆ ನಾವು ಅಂಟಿಕೊಳ್ಳುವದಕ್ಕೆ ಈ ಪ್ರವೃತ್ತಿಯೇ ಕಾರಣವಾಗಿದೆ. ಶಿಕ್ಷಣ ಕಾರ್ಯದಲ್ಲಿ ಈ ಪ್ರವೃತ್ತಿಯ ಸಹಕಾರವು ವಿಶೇಷವಾಗಿದೆ. ಚಿಕ್ಕಮಕ್ಕಳಿಗಾಗಿ ರಚಿಸುವ ಕಥೆ-ಕವಿತೆಗಳಲ್ಲಿ ಒಮ್ಮೆ ಬಂದ ಮಾತುಗಳೇ ಅದೇ ಕ್ರಮದಲ್ಲಿ ಮತ್ತೆ ಮತ್ತೆ ಬರಬೇಕು.

ಮಾಡಿದ್ದನ್ನೇ ಮಾಡುತ್ತ ಹೋದಂತೆ ಅನುಕರಣವು ಆತ್ಮಗತವಾಗುವದು; ಸ್ಥಿರವಾಗುವದು; ರೂಢವಾಗುವದು. ಮುಂದೆ ಆ ಕೃತಿಯು ಬುದ್ಧಿಪೂರ್ವಕವಾದ ಪ್ರಯತ್ನವಿಲ್ಲದೆ ನಡೆಯುವದು—ಯಂತ್ರದ ಕೆಲಸದಂತೆ. **ಇಂಥ ರೂಢವಾದ ಕೃತಿಗೆ 'ರೂಢಿ' ಇಲ್ಲವೇ 'ಚಟ'ವೆಂದು ಕರೆಯುವರು.** ನಮ್ಮ ನಿತ್ಯ ಜೀವನದ ಮುಕ್ಕಾಲು ಕೃತಿಗಳೆಲ್ಲವೂ ರೂಢಿಗಳಾಗಿಯೇ ಪರಿಣಮಿಸಿರುವವು. ಮನುಷ್ಯನ ಶೀಲವು ಆತನು ಹಾಕಿಕೊಂಡ ರೂಢಿಗಳ-ಚಟಗಳ-ಸಮುಚ್ಚಯವೆಂದು ಹೇಳುವರು. ಜೀವನದಲ್ಲಿ ರೂಢಿಗಳ, ಚಟಗಳ ಪ್ರಭಾವವು ವಿಶೇಷವಾಗಿರುವದು. ಅಂತೆಯೇ ರೂಢಿಯು ದ್ವಿತೀಯ ನಿಸರ್ಗವೆನ್ನುವಂತಾಗಿರುವದು. ನೀರು ಹರಿಯುತ್ತ ಹೋದಂತೆ ಕೊರಕಲವನ್ನು ಕೆಡವಿ ತನಗಾಗಿ ಶಾಶ್ವತವಾದ ಒಂದು ಹಾದಿಯನ್ನು ಮಾಡಿಕೊಳ್ಳುವದು. ಒಂದೇ ರೀತಿಯಲ್ಲಿ ನಡೆಯುವ ರೂಢವಾದ

ಕೃತಿಯು ಆ ರೀತಿಯನ್ನೇ ಶಾಶ್ವತವಾಗಿ ಮಾಡಿಕೊಳ್ಳುವದು. ಹೀಗೆ ಸ್ಥಿರತೆಯನ್ನು ಹೊಂದಿದ ಕೃತಿಗಳೇ ರೂಢಿಗಳು—ಚಟಗಳು. **ಪ್ರಯಾಸವಿಲ್ಲದೆ, ಪ್ರಯತ್ನದ ಪರಿವೆಯಿಲ್ಲದೆ ಮಾಡಬೇಕಾಗುವ ಜೀವನೋಪಯೋಗಿಯಾದ ಎಲ್ಲ ಕೃತಿಗಳನ್ನೂ ಶಿಕ್ಷಣವು ರೂಢಿಗಳ—ಚಟಗಳ ರೂಪವಾಗಿ ನೆಲೆಗೊಳಿಸಬೇಕಾಗುವದು.**

ಅನುಕರಣವು ಸ್ವತಂತ್ರ ವಿಚಾರಕ್ಕೆ, ಸ್ವತಂತ್ರಕೃತಿಗೆ ಆತಂಕವಾಗುವದೆಂದು ಕೆಲವರು ಆಕ್ಷೇಪಿಸಬಹುದು. ಆದರೆ ವ್ಯಕ್ತಿವಿಕಾಸದಲ್ಲಿ ಅನು—ಕರಣವು ಅತ್ಯಂತ ಮಹತ್ವದ ಸಾಧನವಾಗಿದೆ. ಎಳೆತನದಲ್ಲಿ ಅನುಕರಣದ ಸ್ವರೂಪವು ಸ್ಥೂಲವಾದುದು, ಕೇವಲ ಶಾರೀರಿಕವಾದುದು. ಸಹೇತುಕವಾದ ಮುಂದಿನ ಅನುಕರಣವು ಸೂಕ್ಷ್ಮವಾದುದು. ಇವೆರಡೂ ಬಗೆಯ ಅನುಕರಣಗಳು ವ್ಯಕ್ತಿವಿಕಾಸಕ್ಕೆ ಅವಶ್ಯವಾದ ಸಾಮುಗ್ರಿಯನ್ನು ಒದಗಿಸುವವು. **ಯಾವುದೇ ಸ್ವತಂತ್ರ ಕೃತಿಯಾದರೂ ಅನುಕರಣದಿಂದಲೇ ಮೊದಲಾಗುವದು. ಆದರೆ ತಿಳಿಗೆಟ್ಟ ಅನುಕರಣವಾಗಲಿ, ಇಲ್ಲವೆ ಅನುಕರಣದ ಅತಿರೇಕವಾಗಲಿ ವ್ಯಕ್ತಿವಿಕಾಸಕ್ಕೆ ವಿಘಾತುಕವೆಂದು** ಮಾತ್ರ ಹೇಳಬಹುದು. ಮಗುವಿನ ಒಲವು—ಶಕ್ತಿಗಳಿಗೆ ಉಚಿತವಾದ ಅನುವು ದೊರೆಯುವಂತೆ ಶಾಲೆಯಲ್ಲಿ ಅನುಕರಣದ ಕ್ಷೇತ್ರವು ವಿಶಾಲವಾಗಿರಬೇಕು. ಅನುಕರಣದ ಸಾಮುಗ್ರಿಯು ಸಮೃದ್ಧವಾಗಿರಬೇಕು. ಶಾಲೆಯ ಸನ್ನಿವೇಶದ ಜೊತೆಗೆ ಸಾಹಿತ್ಯದ ಅಪಾರವಾದ ಕ್ಷೇತ್ರವನ್ನೂ ಅದಕ್ಕೆ ಜೋಡಿಸಬಹುದು. ಸಾಹಿತ್ಯವು ಅನುಕರಣಕ್ಕೆ ಸರಿಯಾದ ಸಾಕಷ್ಟು ಆದರ್ಶಗಳನ್ನು ಒದಗಿಸುವದು. ವ್ಯಕ್ತಿಗಳ ವಿವಿಧತೆಗೆ ಸಾಹಿತ್ಯದಲ್ಲಿ ಬೇಕಾದಷ್ಟು ಆಸ್ಪದವಿದೆ. ಆದರೆ **ಅನುಕರಣವು** ಯಾವಾಗಲೂ **ಸ್ವಯಂ ಪ್ರೇರಿತವಾಗಿರಬೇಕು.** ನಡೆನುಡಿಗಳಲ್ಲಿ ಒಳ್ಳೆಯದನ್ನು ಒಬ್ಬರು ಮಾಡಿದಂತೆ ಮಾಡಬೇಕೆನ್ನುವ ಒಲವು ಒಳಗಿನಿಂದಲೇ ಬರಬೇಕು. ಈ ಸಂದರ್ಭದಲ್ಲಿ ತಿಳಿದು—ತಿಳಿಯದೆ ಮಾಡುವ ಒತ್ತಾಯವು ಒಳ್ಳೇ ಅಹಿತವನ್ನುಂಟು ಮಾಡಬಹುದು. ಅನುಕರಣಶೀಲರಾದ ಚಿಕ್ಕಮಕ್ಕಳಿಗೆ ಶಾಲೆಯಲ್ಲಿ ಶಿಕ್ಷ

ಕನೇ ಆದರ್ಶ. ಆತನ ನಡೆನುಡಿಗಳೆಲ್ಲವನ್ನೂ ಚಿಕ್ಕಮಕ್ಕಳು ಸೂಕ್ಷ್ಮವಾಗಿ ಅವಲೋಕಿಸುವರು, ಅವರಂತೆ ಮಾಡಲು ಹವಣಿಸುವರು. ಇದರಿಂದ ಶಿಕ್ಷಕನ ಹೊಣೆಗಾರಿಕೆ ಹೆಚ್ಚುವದು. ಶಿಕ್ಷಕನು ಮಾತ್ರವಲ್ಲದೆ ವರ್ಗದ 'ಹಿರಿಹುದ್ದರಿ'ಗಳು ಚಿಕ್ಕಮಕ್ಕಳಿಗೆ ಅನುಕರಣದ ವಿಷಯವಾಗುವರು. ಹಿರಿಹುದ್ದರಿಗಳ ವರ್ಚಸ್ಸು ಸೂಕ್ಷ್ಮವೂ ಪ್ರಭಾವಶಾಲಿಯೂ ಆಗಿರುವದು.

ಚಿಕ್ಕಮಕ್ಕಳಲ್ಲಿ ಕಂಡುಬರುವ '**ಆಟದ ಒಲವು**' ಸಾಮಾನ್ಯ ಪ್ರವೃತ್ತಿಗಳಲ್ಲಿ ಮೂರನೆಯದಾಗಿರುವದು. ಇದನ್ನೇ ಕ್ರೀಡಾ—ಪ್ರವೃತ್ತಿಯೆಂತಲೂ ಕರೆಯುವದುಂಟು. ಚಿಕ್ಕಮಕ್ಕಳು ತೀರ ಎಳೆತನದಿಂದಲೇ ಆಟವಾಡುವರು. ಆದರೆ ಅವರು ಆಡುವ ಆಟದ ಬೇರುಗಳು ಮಾನಸಶಾಸ್ತ್ರದಲ್ಲಿ ಎಷ್ಟು ಆಳವಾಗಿ ಒಳಸೇರಿವೆಯೆಂಬುದನ್ನು ಅರಿತವರು ವಿರಳ. ಮಕ್ಕಳು ಕೈಬಿಟ್ಟು ಆಡಿದರೆ ತಮಗೆ ತೊಂದರೆ ತಪ್ಪಿತೆಂದು ತಾಯಂದಿರ ತಿಳುವಳಿಕೆ. ಆಟಗಳೆಂದರೆ ಆರೋಗ್ಯರಕ್ಷಣೆಯ ಕೇವಲ ಕಸರತ್ತುಗಳೆಂತಲೇ ಹಿರಿಯರ ತಿಳುವಳಿಕೆ. ಆದರೆ ಇಂದಿನ ಮಾನಸಶಾಸ್ತ್ರವು ಮಕ್ಕಳ ಆಟದ ಒಲವಿನ ಮೂಲವನ್ನು ಶೋಧಿಸಿದೆ. ಆಟಗಳ ಮಹತಿಯನ್ನು ಕಂಡುಹಿಡಿದಿದೆ. **ಆಟಗಳು ಆತ್ಮವಿಕಾಸದ ಸಾಧನಗಳಾಗಿವೆ.** ಅಂತೆಯೇ ಆಟದ ಒಲವಿಗೆ ಶಿಕ್ಷಣದಲ್ಲಿ ಇಂದು ಹೆಚ್ಚಿನ ಸ್ಥಾನ ದೊರೆತಿದೆ. ನೈಸರ್ಗಿಕವಾದ ನಿರ್ಮಾಣಶಕ್ತಿಯು ಆಟದಲ್ಲಿ ಅತ್ಯಂತ ಉನ್ನತಾವಸ್ಥೆಯಲ್ಲಿ ಕಂಡುಬರುವದು. ಆಟವೇ ಮುಂದೆ ವಿವಿಧಕಲೆಗಳ ರೂಪವನ್ನು ತಾಳುವದೆಂದು ಕೆಲವರು ಹೇಳುವರು. ಆಟದ ಮೂಲಸ್ವರೂಪದ ಬಗ್ಗೆ ಇರುವ ಭಿನ್ನಾಭಿಪ್ರಾಯಗಳನ್ನು ಇಲ್ಲಿ ತಿಳಿದುಕೊಳ್ಳಬಹುದು.

[೧]:— ಚಿಕ್ಕಮಕ್ಕಳಲ್ಲಿರುವ ಉತ್ಸಾಹಶಕ್ತಿಯು ಅಪಾರವಾದುದು. ಅವರ ಜೀವನಕ್ಕೆ ಬೇಕಾಗುವ ಶಕ್ತಿಗಿಂತಲೂ ಎಷ್ಟೋಪಟ್ಟು ಮಿಗಿಲಾದುದು. **ಈ ಮಿಕ್ಕಿದ ಉತ್ಸಾಹಶಕ್ತಿಯನ್ನು** ಬಗೆಬಗೆಯ **ಆಟಗಳ ರೂಪವಾಗಿ ಮಗುವು ವಿನಿಯೋಗಿಸುವದೆಂದು** ಕೆಲವರ ಹೇಳಿಕೆ. ಎಂಜಿನುಗಳಲ್ಲಿ ಮಾಡುವ ಕೆಲಸಕ್ಕೆ ಬೇಕಾಗುವಷ್ಟು ಉಗಿಯನ್ನು ಮಾತ್ರ ಇಟ್ಟುಕೊಂಡು

ಹೆಚ್ಚಾದುದನ್ನು ಹೊರಗೆ ಬಿಡುವಂತೆ ಈ ಕಾರ್ಯವಾಗಿದೆ. ಆಟಗಳು ಅನಾವಶ್ಯಕವಾದ ಜೀವನಶಕ್ತಿಗೆ ಹೊರಗೆ ಹೋಗಲು ಹರಿ ಕಡಿದಂತೆ. ಆದರೆ ಎಲ್ಲ ಆಟಗಳಿಗೂ ಈ ಮಾತು ಅನ್ವಯಿಸಲಾರದು. ಎಷ್ಟೋ ಸಲ ದುಡಿದು ದಣಿದುಕೊಂಡಿದ್ದರೂ ಆಟಗಳಿಂದ ಒಂದು ಹೊಸ ಶಕ್ತಿಯನ್ನು ನಾವು ಹೊಂದುವೆವು.

[೨]:— **ಆಟಗಳು ಮುಂದಿನ ಜೀವನಕ್ಕೆ ಇಂದಿನ ಪೂರ್ವಪಾಠದಂತಿರುವವೆಂದು** ಮತ್ತೆ ಕೆಲವರ ಮತವಾಗಿದೆ. ದೊಡ್ಡವರು ಮಾಡುವ ಅನೇಕ ವ್ಯವಸಾಯಗಳ ಪೂರ್ವಪೀಠಿಕೆಯನ್ನು ಮಕ್ಕಳ ಆಟಗಳಲ್ಲಿ ನಾವು ಇಂದಿಗೂ ನೋಡುವೆವು. ಮುಂದೆ ಮಾತೃಪದವನ್ನೇರುವ ಹುಡಿಗೆಯು ಗೊಂಬೆಯ ಆಟದಲ್ಲಿ ಮುಂದಿನ ತನ್ನ 'ಚಿಕ್ಕ ಸಂಸಾರ'ವನ್ನು ನಡೆಸುವಳು. ಪಶುಪಕ್ಷಿಗಳ ಚಿನ್ನಾಟದಲ್ಲಿ ಈ ಮಾತು ಚೆನ್ನಾಗಿ ತೋರಿಬರುವದು. ಮುಂದೆ ಜೀವನದ ನಿಷ್ಠುರವಾದ ಸಂಗ್ರಾಮದಲ್ಲಿ ತೊಡಗಬೇಕಾಗಿರುವ ಚಿಕ್ಕಮಕ್ಕಳು ಬಾಲ್ಯದಲ್ಲಿ ಆಟಗಳ ನೆವದಿಂದ ಅಣಿ ಮಾಡುತ್ತಿರುವರೆಂಬ ಈ ವಿಚಾರವು ಒಳ್ಳೇ ಮಾರ್ಮಿಕವಾಗಿದೆ. ಆದರೆ ಚಿಕ್ಕಮಕ್ಕಳ ದೃಷ್ಟಿಯು ಭವಿಷ್ಯತ್ತಿನಲ್ಲಿ ಇಷ್ಟು ದೂರದವರೆಗೆ ಹರಿಯಬಹುದೇ?—ಎಂಬುದು ಮೇಲಿನ ವಿಚಾರಕ್ಕೆ ಆಕ್ಷೇಪವಾಗಿದೆ. ಎಂಥ ಬುದ್ಧಿಶಾಲಿಗಳಿಗೆ ಕೂಡ ಮುಂದಿನ ಆಗುಹೋಗುಗಳು ತಿಳಿಯದಂತೆ ಕಣ್ಮರೆಯಾಗಿರುವಾಗ್ಗೆ ಅಲ್ಪ ಶಕ್ತಿ—ಅಲ್ಪ ಬುದ್ಧಿಯುಳ್ಳ ಚಿಕ್ಕ ಬಾಲಕರು ಭವಿಷ್ಯದ ಒಡಲನ್ನು ಭೇದಿಸಬಲ್ಲರೆಂಬುದು ಸಂದೇಹದ ಸಂಗತಿ. ಬಾಲಕರ ಆಸ್ಥೆಯು ತಾತ್ಕಾಲಿಕವಾದುದು. ಅವರ ದೃಷ್ಟಿಯೂ ಅಷ್ಟೇ ಮರ್ಯಾದಿತವಾದುದು. ಅದಕ್ಕಾಗಿ, ಅವರ ಆಟಗಳ ಮೂಲವನ್ನು ಮುಂದಿನ ಭವಿಷ್ಯತ್ತಿಗೆ ಜೋಡಿಸುವದಕ್ಕಿಂತಲೂ ಇಂದಿನ ಅವರ ಜೀವನಕ್ಕೆ ಹೊಂದಿಸುವದೇ ಸರಿಯಾದುದೆಂದು ತೋರುವದು.

[೩]:— ಚಿಕ್ಕಮಕ್ಕಳು ತಮ್ಮ **ಆಟಗಳಲ್ಲಿ ಜನಾಂಗದ ಹಿಂದಿನ ಜೀವನ ಪರಂಪರೆಯನ್ನೇ ಮತ್ತೊಮ್ಮೆ ಪ್ರಕಟಿಸುವರೆಂತಲೂ** ಒಂದು ಅಭಿಪ್ರಾಯ. ಈ ಅಭಿಪ್ರಾಯವೂ ಸತ್ಯಕ್ಕೆ ದೂರವಾಗಿಲ್ಲ. ಅನು

ಭವವೂ ಅದನ್ನು ಅಲ್ಲಗಳೆಯುವಂತಿಲ್ಲ. ತೀರ ಕಾಡುಸ್ಥಿತಿಯ ಜನರ ಕೆಲವು ಸಂಗತಿಗಳು ಚಿಕ್ಕಮಕ್ಕಳ ಆಟಗಳಲ್ಲಿ ಕಂಡುಬರುವವು. ಹೋರಾಟದ ಪ್ರೀತಿ, ಶರೀರ ಶೃಂಗಾರಕ್ಕಾಗಿ ತೋರಿಬರುವ ಲವಲವಿಕೆ ಇಬ್ಬರಿಗೂ ಸಮಾನ ವಾಗಿರುವವು. ಈ ಹಿಂದಿನ ಜೀವನದ ಸಂಸ್ಮರಣೆಗೆ ಎರಡು ಉದ್ದೇಶ ಗಳೆಂದು ಹೇಳುವರು: [೧] ಶರೀರದಲ್ಲಿ ಸಂಗ್ರಹಿಸಿದ ಮಲವನ್ನು 'ಜುಲಾಬಿ' ನಿಂದ ಕಳೆದುಕೊಳ್ಳುವಂತೆ **ಕಾಡುಸ್ಥಿತಿಯ ಜೀವನವನ್ನು ಆಡಿ ತೋರಿಸಿ ಅದರ ಅವಶೇಷಗಳನ್ನು ಕಳೆದುಕೊಳ್ಳುವದು.** [೨] ಜನಾಂಗವು ಅಂದಿನಿಂದ ಇಂದಿನ ವರೆಗೆ ಬೆಳೆಸಿಕೊಂಡು ಬಂದ ಸಂಸ್ಕೃತಿ ಯನ್ನು ಮತ್ತೊಮ್ಮೆ ನೆನಪುಮಾಡಿಕೊಂಡು ಅದರ 'ಪುನರಾವಲೋಕನ' ಮಾಡಿದಂತೆ. ಈ ವಿಚಾರವೂ ಕೂಡ ಆಕ್ಷೇಪಕ್ಕೆ ಹೊರತಾಗಿಲ್ಲ. ಜೀವ ನದ ಪ್ರವಾಹವು ನಿಂತ ನೀರಿನಂತೆ ಕಟ್ಟಿಗಿಲ್ಲ. ಅದು ಬೆಳೆಯುತ್ತ ಬಂದಿದೆ; ಬದಲಿಸುತ್ತಲೂ ಇರುವದು. ಹೀಗೆ ಉತ್ಕ್ರಾಂತಿಮುಖವಾದ ಜೀವನದಲ್ಲಿ ಕೂಡ ಹಿಂದಿನ ಜೀವನವನ್ನೇ ಇಂದಿಗೂ ಚಿಕ್ಕಮಕ್ಕಳು ತಮ್ಮ ಆಟಗ ಳಲ್ಲಿ ಆಡಿತೋರಿಸುವರೆಂಬದು ಅಷ್ಟೊಂದು ಸಮಂಜಸವೆನಿಸದು.

[೪] :— ಮನೋವಿಭಜನೆಯನ್ನು ವಿವೇಚಿಸುವಾಗ್ಗೆ ಕಾಮ—ಪ್ರವೃ ತ್ತಿಯೇ ಜೀವನದ ಆದಿಶಕ್ತಿಯೆಂದು ಫ್ರಾಯಿಡರ ಅಭಿಪ್ರಾಯವನ್ನು ಹೇಳಿದೆ. **ಮಕ್ಕಳ ಆಟಗಳಲ್ಲಿಯೂ ಫ್ರಾಯಿಡರಿಗೆ ಕಾಮಪ್ರವೃತ್ತಿಯ ಪ್ರಭಾ ವನೇ ಕಂಡುಬರುವದು.** ಪ್ರಬಲವಾದ ಈ ಕಾಮಪ್ರವೃತ್ತಿಯನ್ನು ನಿರೋ ಧಿಸಕೂಡದು. ಆಟಗಳ ಮುಖಾಂತರವಾಗಿ ಇದರ ಉಜ್ವಲೀಕರಣವಾಗ ಬೇಕು. ಚಿಕ್ಕಮಕ್ಕಳ ಆಟಗಳು ಅನಿಷ್ಟವಾದ ಕಾಮಪ್ರವೃತ್ತಿಗಳನ್ನು ಕಳೆದುಕೊಳ್ಳಲು ಉತ್ತಮವಾದ ಸಾಧನಗಳೆಂದು ಇವರ ನಂಬಿಕೆ.

ಇದು ವರೆಗೆ ಕ್ರೀಡಾಪ್ರವೃತ್ತಿಯ ಮೂಲಸ್ವರೂಪವನ್ನು ವಿವೇಚಿಸಿದು ದಾಯಿತು. ಇನ್ನು 'ಆಟ'ವೆಂದರೇನೆಂಬುದನ್ನು ತಿಳಿದುಕೊಳ್ಳಬಹುದು. **ತಿಳಿದು ಮಾಡುವ ಸ್ವಚ್ಛಂದಕ್ರಿಯೆಯು ಆಟವೆಂದು ಹೇಳಬಹುದು.** ಈ ಸ್ವಚ್ಛಂದತೆ ಆಟದ ವೈಶಿಷ್ಟ್ಯವಾಗಿದೆ. ಅದೇ ಆಟದ ಹೆಗ್ಗುರುತು.

ಆಟ—ಕರ್ತವ್ಯಗಳಲ್ಲಿರುವ ಭೇದವಾದರೂ ಇಲ್ಲಿಯೇ ಕಂಡುಬರುವದು. ಮಗುವು ಕೋಲನ್ನು ಕುದುರೆಯನ್ನಾಗಿ ಮಾಡಿಕೊಂಡು ಆಟವಾಡುವದು. ಬೇಕಾದರೆ ಕುದುರೆಯಾಟವನ್ನು ಆಡಬಹುದು. ಬೇಡವಾದರೆ ಕೋಲನ್ನು ಚೆಲ್ಲಿಕೊಟ್ಟು ಬೇರೆ ಏನನ್ನಾದರೂ ಮಾಡಬಹುದು. ಹೀಗೆ ಹೊರಗಿನ ಯಾವ ನಿರ್ಬಂಧವಿಲ್ಲದೆ, ವಸ್ತುಸ್ಥಿತಿಯ ಕೋಟಲೆಗೆ ಒಳಗಾಗದೆ, **ತಾನೆ ತಾನಾಗಿ ವಿಹರಿಸುವ ಈ ಪ್ರವೃತ್ತಿಯೇ ಆಟದ ವಿಶಿಷ್ಟರೂಪವಾಗಿದೆ.** ಆಟದ ಇನ್ನೊಂದು ವೈಶಿಷ್ಟ್ಯವೆಂದರೆ **ಅದು ಸಂತೋಷಕರವಾಗಿರುವದು.** ಈ ಸಂತೋಷವು ಅಂತರಂಗದಿಂದಲೆ ಆಟಗಳಲ್ಲಿ ಉಕ್ಕಿ ಬರುವದು. ಸಂತೋಷ, ಸ್ವಚ್ಛಂದವೃತ್ತಿಗಳೇ ಆಟಗಳಿಗೆ ನಿಜವಾದ ತಳಹದಿಯಾಗಿರುವವೆಂದು ಹೇಳಬಹುದು.

ಚಿಕ್ಕಮಕ್ಕಳ ಆಟಗಳಲ್ಲಿ ಸ್ವಚ್ಛಂದತೆಯು ತೋರಿದರೂ ಅವು ನಿಷ್ಪ್ರಯೋಜಕವಾಗಿರುವದಿಲ್ಲ. ಆಟಗಳ ಸಹಾಯದಿಂದಲೆ ಚಿಕ್ಕಮಕ್ಕಳು ತಮ್ಮ ಅವಯವಗಳನ್ನು ಜೀವನದ ವಿವಿಧಕಾರ್ಯಕ್ಕಾಗಿ ಸಿದ್ಧಗೊಳಿಸುವವು, ಸ್ಥಿರಗೊಳಿಸುವವು. ಅವುಗಳ ಚಲನವಲನದಲ್ಲಿ ಅವಶ್ಯವಾದ ಕೌಶಲ್ಯವನ್ನು ಗಳಿಸುವವು. ಚೈತನ್ಯಸ್ವರೂಪಿಗಳಾದ ಚಿಕ್ಕಮಕ್ಕಳು ಕೈಕಟ್ಟಿಕೊಂಡು ಸುಮ್ಮನೆ ಕೂಡುವದೇ ಅಶಕ್ಯವಾಗಿದೆ; ಅಸ್ವಾಭಾವಿಕವಾಗಿದೆ. **ಚಟುವಟಿಕೆಯು ಬೆಳೆಯುವ ಜೀವನದ ಉಸಿರಿದ್ದಂತೆ.** ಸ್ವಾಭಾವಿಕವಾದ ಈ ಚಟುವಟಿಕೆಯನ್ನು ಚಿಕ್ಕಮಕ್ಕಳು ಆಟಗಳಲ್ಲಿ ವ್ಯಕ್ತಪಡಿಸುವರು. ಅವರ ಕೈಕಾಲು ಒಂದು ಗಳಿಗೆಯಾದರೂ ಸುಮ್ಮನೆ ಕೂಡಲಾರವು. ಓಡುವದು, ಜಿಗಿಯುವದು—ಇಲ್ಲವೇ ಏನನ್ನಾದರೂ ಮಾಡುವದು ಚಿಕ್ಕಮಕ್ಕಳಿಗೆ ಅಚ್ಚುಮೆಚ್ಚಿನ ಕೆಲಸ. ಅವರ ಆತ್ಮಶಕ್ತಿಗಳು ಒಂದೊಂದು ಬಗೆಯ ಆಟಗಳ ರೂಪವಾಗಿಯೆ ವಿಕಸನ ಹೊಂದುವವು. ಚಿಕ್ಕಮಕ್ಕಳ ಆಟಗಳಲ್ಲಿ ಕಂಡುಬರುವ **ರಚನಾಶಕ್ತಿಯು** ದೊಡ್ಡವರ ಆಟಗಳಲ್ಲಿ ಕಂಡುಬರುವದಿಲ್ಲ. ಹಿರಿಯರಿಗೆ ಆಟಗಳು ವಿಶ್ರಾಂತಿ—ಮನರಂಜನೆಗಳ ಸಾಧನ. ಆದರೆ, ಚಿಕ್ಕಮಕ್ಕಳು ತಮ್ಮ ಆಟಗಳನ್ನೇ ತಮ್ಮ ಸರ್ವಶಕ್ತಿಗಳ ಬೆಳವಣಿಗೆಯ ಸಾಧನವನ್ನಾಗಿ ಮಾಡಿಕೊಳ್ಳುವರು.

ಶಿಕ್ಷಣ ಪ್ರಪಂಚದಲ್ಲಿ ಆಟಗಳಿಗೆ ಇಂದು ಮಹತ್ವದ ಸ್ಥಾನವಿದೆ. ಬೇನೆ ಬಂದಾಗ್ಗೆ ಕಹಿಯಾದ ಔಷಧವನ್ನು ಹೇಗಾದರೂ ಹೊಟ್ಟೆಯಲ್ಲಿ ಹಾಕು ವಂತೆ, ಬೇಡಾದ ವಿಷಯಗಳನ್ನೂ ಕೂಡ ಚಿಕ್ಕಮಕ್ಕಳ ತಲೆಯಲ್ಲಿ ತುಂಬು ವದು ಇಂದಿನ ಹೊಸ ಶಿಕ್ಷಣಕ್ಕೆ ವಿರೋಧವಾಗಿದೆ. **ಚಿಕ್ಕಮಕ್ಕಳು ಮಾಡು ವದೆಲ್ಲವೂ ಅವರ ಆಟಗಳಂತೆ ಸ್ವಚ್ಛಂದವಾಗಿರಬೇಕು.** ಅವರ ಶಿಕ್ಷಣವಾದರೂ ಇದೇ ತತ್ವವನ್ನನುಸರಿಸಬೇಕು—ಎಂಬುದು ಹೊಸ ಶಿಕ್ಷಣದ ರೀತಿಯಾಗಿದೆ. ಈ ಮಾತಿನಲ್ಲಿಯೇ ಇಂದಿನ ಕ್ರೀಡಾಪದ್ಧತಿಯ ಮೂಲ ವಿರುವದು. **ಕಲಿಯುವ ಕಾರ್ಯವು ಆಟದಂತೆ ಸ್ವಚ್ಛಂದವಾಗಿಯೂ, ಸ್ವಯಂಪ್ರೇರಿತವಾಗಿಯೂ ಸಂತೋಷಜನಕವಾಗಿಯೂ ಇರ ಬೇಕು.** ಹೀಗಾದರೆ ಮಾತ್ರ ಆಟಗಳಲ್ಲಿ ತೋರಿಸುವ ಆಸ್ಥೆಯನ್ನೂ, ಅವ ಧಾನವನ್ನೂ, ಕಲಿಯುವ ಕಾರ್ಯದಲ್ಲಿ ಕೂಡ ಚಿಕ್ಕಮಕ್ಕಳು ಪಡೆಯಬಹುದು. ಆಸ್ಥೆ—ಅವಧಾನಗಳಿಲ್ಲದ ಶಿಕ್ಷಣವು ಬೋರ್ಗಲ್ಲಮೇಲೆ ನೀರು ಸುರಿದಂತೆ ನಿರರ್ಥಕವಾಗುವದು. ಆಟದ ಈ ತಿರುಳನ್ನು ಕಲಿಯುವದರಲ್ಲಿ ತರುವದೇ ಕ್ರೀಡಾಪದ್ಧತಿಯ ಉದ್ದೇಶವಾಗಿದೆ. ಮಾಂಟೇಸೋರಿ ಕ್ರೀಡಾಪದ್ಧತಿ ಯಲ್ಲಿಯೂ ಇಂದಿನ ಮೂಲ ಶಿಕ್ಷಣವಲ್ಲಿಯೂ ಈ ಕ್ರೀಡಾತತ್ವವೇ ತಳಹದಿ ಯಾಗಿದೆ. ಶಿಕ್ಷಣದಲ್ಲಿ ಶಾಸ್ತ್ರಕಾರನಾದ ಫ್ರೋಬೆಲನು, “**ಶಾಲೆಯಲ್ಲಿ ಮಕ್ಕಳ ಜೀವನವನ್ನು ಶಕ್ಯವಿದ್ದಷ್ಟು ಆನಂದಮಯವಾಗಿ ಮಾಡಿರಿ**”ಎಂದು ಹೇಳುವನು. ಆತನ ಕಿಂಡರಗಾರ್ಟನ್ ಇಲ್ಲವೇ ಬಾಲೋದ್ಯಾನ ಪದ್ಧತಿಯಲ್ಲಿ ಮಕ್ಕಳ ಮನೋವಿಕಾಸಕ್ಕೆ ಬಗೆಬಗೆಯ ಆಟ ಗಳೇ ಮುಖ್ಯ ಸಾಧನಗಳಾಗಿವೆ. ಶಿಕ್ಷಣ ಕಾರ್ಯದಲ್ಲಿ ಚಿಕ್ಕಮಕ್ಕಳ ಆಸ್ಥೆ, ಅವಧಾನ ಹಾಗೂ ಸಂತೋಷವೃತ್ತಿಗಳನ್ನು ತರಲು ಕ್ರೀಡಾಪದ್ಧತಿಯು ಉಪಯುಕ್ತವಾಗಿದೆ. ಇದನ್ನು ಹೇಗೆ, ಎಲ್ಲಿ, ಉಪಯೋಗಿಸಬೇಕೆಂಬು ದನ್ನು ಚತುರನಾದ ಶಿಕ್ಷಕನು ತಾನಾಗಿಯೇ ತಿಳಿದುಕೊಳ್ಳಬಹುದು. ಕಲಿ ಯುವ ವಿಷಯಗಳ ನೀರಸತೆಯನ್ನು ತೆಗೆದು ಹಾಕಲು ವಿವಿಧವಾದ ಸಾಧನಗಳನ್ನೂ ಹಂಚಿಕೆಗಳನ್ನೂ ಶಿಕ್ಷಕನು ಕಲ್ಪಿಸಬೇಕಾಗುವದು. ಇದ

ಕ್ಕಾಗಿ **ವಿದ್ಯಾರ್ಥಿಗಳಲ್ಲಿರುವ ಸ್ವಾಭಾವಿಕವಾದ ಕೃತಿಪ್ರೇಮದ ಒಲವನ್ನು ಕಲಿಯುವ ಕಾರ್ಯದಲ್ಲಿ ನಿಯೋಜಿಸಬೇಕು.** ಉದಾಹರಣೆಗಾಗಿ—ಭೂಗೋಲವು ನೀರಸ ವಿಷಯವೆಂಬ ತಪ್ಪುತಿಳುವಳಿಕೆಯಾಗಿದೆ. ಇದನ್ನು ಕಲಿಸುವಾಗ್ಗೆ ಹಿಂದಿನ ಶಿಕ್ಷಣವು ಅನುಸರಿಸಿದ ಅಶಾಸ್ತ್ರೀಯವಾದ ಪದ್ಧತಿಯೆ ಈ ತಪ್ಪುತಿಳುವಳಿಕೆಗೆ ಕಾರಣವಾಗಿದೆ. ಕ್ರೀಡಾಪದ್ಧತಿಯಿಂದ ಭೂಗೋಲದ ವಿಷಯವನ್ನು ಚಿಕ್ಕಮಕ್ಕಳಿಗೆ ಆಟಗಳಷ್ಟೆ ಆನಂದದಾಯಕವಾಗಿ ಮಾಡಲು ಶಕ್ಯವಿದೆ. ಮೂಲ ಶಿಕ್ಷಣವು ಒದಗಿಸುವ ಸಂದರ್ಭಗಳಲ್ಲಿ ಬೇರೆ ಬೇರೆ ಜನಾಂಗಗಳ ಜೀವನವನ್ನು ಕಥೆಯ ರೂಪವಾಗಿ ಚಿಕ್ಕಮಕ್ಕಳಿಗೆ ಹೇಳಬಹುದು; ಅವರ ನಡೆನುಡಿಗಳನ್ನು ಅಭಿನಯಿಸಿ ತೋರಿಸಬಹುದು. ಈ ಬಗೆಯ **ಆನಂದಮಯವಾದ ಸನ್ನಿವೇಶಗಳಲ್ಲಿ ಆಸ್ಥೆಯಿಂದ ಸಂಪಾದಿಸಿದ ವಿಷಯಜ್ಞಾನವು** ಎಂದೂ ಮರೆಯದಂತೆ ಅವರಿಗೆ ಮನದಟ್ಟಾಗುವದು.

ಆಟಗಳು ಬುದ್ಧಿವಿಕಾಸಕ್ಕೆ ಮಾತ್ರ ಸಾಧನಗಳಾಗಿಲ್ಲ. ಶೀಲಸಂವರ್ಧನಕ್ಕೆ ಆಟಗಳಿಂದ ಒಳ್ಳೆ ಸಹಾಯವು ದೊರೆಯುವದು. ಸಾಂಘಿಕವಾದ ಆಟಗಳಲ್ಲಿ ಚಿಕ್ಕಮಕ್ಕಳು ಮನೋನಿಗ್ರಹದ ಮೊದಲ ಪಾಠವನ್ನು ಕಲಿಯುವರು. **ಕೂಡಿ ಆಡುವದರಿಂದ ಕೂಡಿ ಕೆಲಸಮಾಡುವ ಸಾಮಾಜಿಕ ಜೀವನದ ಪ್ರಾರಂಭವಾದರೂ ಇಂಥ ಆಟಗಳಿಂದಲೇ ಆಗುವದು.** ಎಲ್ಲವೂ ತನ್ನದು—ತನಗೆ ಎನ್ನುವ ಪ್ರಬಲವಾದ ಸ್ವೇಚ್ಛೆಯನ್ನು ಸಾಮೂಹಿಕ ಹಿತಕ್ಕಾಗಿ, ಅನುಕೂಲತೆಗಾಗಿ ಬಿಟ್ಟುಕೊಡುವದರಲ್ಲಿ ಶ್ರೇಷ್ಠವಾದ ನೀತಿತತ್ವವಿದೆ. ಸೋಲುಗೆಲವುಗಳ ಪರಿವೆಯಿಲ್ಲದ ಆಟಗಾರಿಕೆಯ ಆನಂದವೃತ್ತಿಯು ಜೀವನವನ್ನೇ ಆನಂದಮಯವಾಗಿ ಮಾಡುವದು. ಹೇಗಾದರೂ ಗೆದೆಯಬೇಕೆಂದು ತಗಲು ತಂಟೆಗಳನ್ನು ಮಾಡದೆ,—'ಸೋತರೂ ಚಿಂತೆಯಿಲ್ಲ, ಸರಿಯಾಗಿ ಆಟವಾಡಿದೆನು '—ಎಂಬ ಆನಂದ ಅಭಿಮಾನಗಳು ನಿಜವಾದ ಆಟಗಾರಿಕೆಯಲ್ಲಿ ಕಂಡುಬರುವವು. ಶಾಲೆಯಲ್ಲಿ ಸಾಂಘಿಕ ಆಟಗಳು ಈ ವೃತ್ತಿಯನ್ನು ಚಿಕ್ಕಮಕ್ಕಳಲ್ಲಿ ತರಲು ಸಹಾಯಕವಾಗಿರುವವು.

**ಕಲ್ಪನಾಶಕ್ತಿಯು** ಇನ್ನೊಂದು ಮಹತ್ವದ ಮಾನಸಿಕ ಶಕ್ತಿಯಾಗಿದೆ. ಬುದ್ಧಿಯ ವಿಕಾಸಕ್ಕೆ ಇಂದ್ರಿಯಗಳಿಂದ ಬಂದ ಜ್ಞಾನವಷ್ಟೇ ಸಾಲದು. ಈ ಜ್ಞಾನವನ್ನೇ ಆಧಾರವಾಗಿಟ್ಟುಕೊಂಡು ಮನಸ್ಸು ನೂತನವಾದ ಜ್ಞಾನ ಸೃಷ್ಟಿಯನ್ನು ನಿರ್ಮಿಸಲು ಸಮರ್ಥವಾಗಿದೆ. **ಇಂದ್ರಿಯಗಳಿಗೆ ಪ್ರತ್ಯಕ್ಷವಾಗಿ ಗೋಚರವಾಗದಿರುವ ಆಕೃತಿಗಳನ್ನು ಮನಸ್ಸಿನಲ್ಲಿ ತರುವದು ಕಲ್ಪನೆಯೆಂದು ಹೇಳಬಹುದು.** ಒಂದು ವಸ್ತುವನ್ನು ನೋಡಿ, ಮಾಡಿಕೊಳ್ಳುವದು ಅದರ ಪ್ರತ್ಯಕ್ಷಜ್ಞಾನವು. ಆ ವಸ್ತುವನ್ನು ನೋಡದೆ, ಅದು ಹೀಗೆ ಹೀಗೆ ಇರಬಹುದೆಂದು ಮನಸ್ಸಿನ ಪರದೆಯ ಮೇಲೆ ಅದರ ಚಿತ್ರವನ್ನು ರೂಪಿಸುವದು ಕಲ್ಪನೆಯ ಕಾರ್ಯ. ಒಂದು ಉತ್ಸವಕ್ಕೆ ಪ್ರತ್ಯಕ್ಷವಾಗಿ ಹೋಗಬಹುದು. ಹೋಗುವದಾಗದಿದ್ದರೆ ಅಂಥ ಉತ್ಸವಗಳಲ್ಲಿ ನಡೆಯುವದನ್ನೆಲ್ಲ ಇಲ್ಲಿಯೇ ಮನಸ್ಸಿನಲ್ಲಿ ತರಬಹುದು. ಇದು ಕಲ್ಪನೆಯ ರೀತಿ. ಒಮ್ಮೆ ನೋಡಿದ್ದನ್ನು ಮತ್ತೊಮ್ಮೆ ಧ್ಯಾನಿಸಿಕೊಳ್ಳುವದು ಕೇವಲ ನೆನಹು. **ಇಂದ್ರಿಯಗಳಿಗೆ ಕಾಣದ್ದನ್ನು ಕಣ್ಣೆದುರಿಗೆ ತರುವದು ಕಲ್ಪನಾ ಶಕ್ತಿಯ ಕಾರ್ಯ.**

ಕಲ್ಪನೆಯು ರಚಿಸುವದು ಎಂದೂ ಕಾಣದ ತೀರ ಹೊಸ ವಸ್ತುವಲ್ಲ. ಕಲ್ಪನೆಯ ಸಾಮಗ್ರಿಯೆಲ್ಲವೂ ಅನುಭವದ ವಿಷಯಗಳಿಂದಲೇ ಬಂದುದು. ಅನುಭವದ ವಿಷಯಗಳನ್ನೇ ಆಯ್ದುಕೊಂಡು ಅವುಗಳನ್ನು ಅಂದವಾಗಿ ಕೂಡಿಸುವದು ಕಲ್ಪನಾಶಕ್ತಿಯ ಕಾರ್ಯ. ಎಂಥ ಗಾಳಿಗೋಪುರಗಳನ್ನು ಕಟ್ಟಿದರೂ ಆ ಗಾಳಿಗೋಪುರದ ಕಲ್ಲುಕಟ್ಟಿಗೆಗಳನ್ನೆಲ್ಲ ಹಿಂದಿನ ಅನುಭವವೇ ಒದಗಿಸುವದು. ಕಲ್ಪನಾಶಕ್ತಿಯು ಕುಶಲನಾದ ಕಾರಾಗೀರನಂತೆ ಅವುಗಳಲ್ಲಿ ಕುಸುರು ಕೆತ್ತಿಗೆಯ ಕೆಲಸವನ್ನು ಮಾತ್ರ ಮಾಡಬಲ್ಲದು. **ಆದರೂ ಕಲ್ಪನಾಶಕ್ತಿಯು ಕರ್ತೃತ್ವಶಾಲಿ. ಹಿಂದಿನ ಅನುಭವದ ಹತ್ತಿಯನ್ನು ಹಿಂಜಿ ಹೊಡೆದುಕೊಂಡು ಕಲ್ಪನಾಶಕ್ತಿಯು ನೂತನ ನಯವಾದ ಬಟ್ಟೆಗಳನ್ನು ನೇಯುವದು.** ಉನ್ನತವಾದ ಕಲ್ಪನಾಶಕ್ತಿಗೆ ಕಾವ್ಯಭೂಮಿಯೇ ವಿಹಾರ ಭೂಮಿಯೆಂಬುದು ತಪ್ಪು ತಿಳುವಳಿಕೆ. ಸತ್ಯಶೋಧನೆ

ಯಲ್ಲಿಯೂ ಅದರ ಕೈವಾಡವು ಕಂಡುಬರುವದು. **ವಿಧಾಯಕವಾದ ಕಲ್ಪನಾಶಕ್ತಿಯೇ ಇಂದಿನ ವಿಜ್ಞಾನದ ವಿಸ್ಮಯಜನಕವಾದ ಶೋಧಗಳಿಗೆ ಸಾಧನವಾಗಿದೆ.** ಕವಿಯು ಕಲ್ಪನೆಯ ಕುದುರೆಯನ್ನೇರಿ ಬೇಕಾದಂತೆ ವಿಹರಿಸಿದರೆ, ವಿಜ್ಞಾನಿಯು ಆ ಶಕ್ತಿಯ ಪ್ರಭಾವದಿಂದಲೇ ವಿಮಾನವನ್ನು ನಿರ್ಮಿಸಿ ನೀರು ನೆಲಗಳ ಆತಂಕವಿಲ್ಲದೆ ನಿರಾಲಂಬವಾದ ಆಕಾಶದಲ್ಲಿ ಸಂಚರಿಸುವನು.

**ಭಾವನಾತ್ಮಕವಾದ ಕಲ್ಪನಾಶಕ್ತಿಯೊಂದಿರುವದು.** ಜೀವನದಲ್ಲಿ ಇದು ಅತ್ಯಂತ ಉಪಕಾರಿಯಾದುದು. ಒಬ್ಬರ ಭಾವವು ಹಲವರ ಭಾವವಾಗುವಂತೆ ಕಲ್ಪನಾಶಕ್ತಿಯೇ ಮಾಡುವದು. ಹೃದಯದಿಂದ ಹೃದಯಕ್ಕೆ ಹಾರುವ ಬಲವು ಭಾವಗಳಿಗೆ ಕಲ್ಪನೆಯ ಕಸುವಿನಿಂದಲೆ ಬರುವದು. **ಪ್ರೇಮ, ಪರೋಪಕಾರ, ದಯಾ–ಸಹಾನುಭೂತಿಗಳು ಭಾವನಾತ್ಮಕ ಕಲ್ಪನಾಶಕ್ತಿಯಿಂದಲೇ ನಮ್ಮಲ್ಲಿ ಜನಿಸುವವು.** ಅನ್ಯರ ತೊಂದರೆಗಳನ್ನು ತನ್ನವುಗಳಾಗಿ ತಿಳಿದುಕೊಳ್ಳುವದು, ಅನ್ಯರ ಸುಖ–ದುಃಖಗಳಲ್ಲಿ ತಾನು ಭಾಗಿಯಾಗುವದು ಜೀವನದಲ್ಲಿ ಸಾಮಾನ್ಯವಾದ ಸಂಗತಿಯಲ್ಲ. ಇದೇ ನೀತಿಯ ನೆಲೆಗಟ್ಟು. 'ತನ್ನಂತೆ ಪರರ ಬಗೆಯುವದು' ಕೈವಲ್ಯದ ಸೋಪಾನವಾಗಿದೆ. ಸಾಹಿತ್ಯದಲ್ಲಿ ಬರುವ ಬಡವರ ಗೋಳು, ಬರಗಾಲದ ಭೀಕರತೆ, ಇವುಗಳ ಮಾರ್ಮಿಕವಾದ ವರ್ಣನೆಯು ಓದಿದವರ ಮನಸ್ಸನ್ನು ಕರಗಿಸದೆ ಬಿಡದು. ಈ ಕಾರುಣ್ಯದ ಭಾವವು ಹೃದಯದಲ್ಲಿ ಮೊತ್ತಿದರೆ, ಹತ್ತರಲ್ಲಿ ಒಬ್ಬನೆನ್ನಾದರೂ ದುಃಖಿತರ ನೆರವಿಗೆ ಧಾವಿಸುವಂತೆ ಮಾಡುವದು. ಪರರವರ ಸುಖದುಃಖಗಳನ್ನು ತಮ್ಮವುಗಳನ್ನಾಗಿ ಮಾಡಿಕೊಳ್ಳುವದರಲ್ಲಿ ಭಾವನಾತ್ಮಕವಾದ ಕಲ್ಪನಾಶಕ್ತಿಯೇ ಕಾರಣವು. ಭಾವಕಲ್ಪನೆಗಳ ಬಂಧುರವಾದ ಈ ಜೋಡು ಜೀವನ ಪಥದಲ್ಲಿ ಅದೇ ಕಾಲಿಡುವ ಚಿಕ್ಕಮಕ್ಕಳಿಗೆ ಮೊದಲಿನಿಂದಲೂ ದೊರೆಯುವಂತೆ ಶಿಕ್ಷಕನು ಮಾಡಬಹುದು. ಹಿಂದಿನ ಹಾಗೂ ಇಂದಿನ ಸಾಹಿತ್ಯದಲ್ಲಿ ತೋರಿಬರುವ ಉಜ್ವಲ ಜೀವನದ ಚರಿತ್ರೆಗಳನ್ನೂ ಭಾವ–ಗೀತೆಗಳನ್ನೂ ಸಮಯವನ್ನರಿತು ಚಿಕ್ಕಮಕ್ಕಳ ಗಮ

ನಕ್ಕೆ ತರಬಹುದು. ಅವುಗಳಲ್ಲಿ ತುಂಬಿರುವ ಉದಾತ್ತ ಭಾವಗಳನ್ನು ಚಿಕ್ಕ ಮಕ್ಕಳು ತಮ್ಮವುಗಳನ್ನಾಗಿ ಕಲ್ಪಿಸುವಂತೆ ಸರಿಯಾದ ರೀತಿಯಲ್ಲಿ ಅವುಗಳನ್ನು ಓದಿ-ಅಂದು ತೋರಿಸಬಹುದು. ವಹಿಸುವ ಪಾತ್ರದಲ್ಲಿ ಸಮರಸವಾಗಿ ಮಾಡುವ ಅಭಿನಯವೂ ಈ ಕೆಲಸದಲ್ಲಿ ಸಹಾಯಕವಾಗಿದೆ.

ವಿಶಿಷ್ಟವಾದ ಭಾವನೆಯೊಡನೆ ಬೆರೆಯದೆ ಕೇವಲ ವಿನೋದಕ್ಕಾಗಿ ಒದಗುವ ಕಲ್ಪನಾಶಕ್ತಿಯು ಮಕ್ಕಳ ಬಾಲ್ಯದ ಆಟಗಳಲ್ಲಿ ಕಂಡುಬರುವದು. ಈ ಬಗೆಯ **ವಿನೋದಾತ್ಮಕ ಕಲ್ಪನೆಯು** ವಿವಿಧರೂಪಗಳನ್ನು ತಾಳ ಬಹುದು. ಆಟಗಳಲ್ಲಿ ಅಜ್ಜನ ಕೋಲು ಕುದುರೆಯಾಗಬಹುದು. ತೂಗುವ ಮಂಚ ಗಳಿಗೆಯಲ್ಲಿ ಯಾವ ಊರಿಗಾದರೂ ಕರೆದೊಯ್ಯುವ ಉಗಿಬಂಡಿ ಯಾಗಬಲ್ಲದು. ಕಾಗದದ ತುಣುಕಿಗೆ ಕರನ್ಸಿನೋಟುಗಳ ಬೆಲೆ ಬರಬಹುದು. ಆದರೆ ಈ ಕಲ್ಪನೆಗಳೆಲ್ಲವೂ ಕೇವಲ ವಿನೋದಕ್ಕಾಗಿ, ಸ್ವಂತದ ಸಂತೋಷಕ್ಕಾಗಿ ಎಂಬುದು ನಿಜ.

ಭಯದ ಕಲ್ಪನೆಯು ಕೆಲವರನ್ನು ಹೇಡಿಗಳನ್ನಾಗಿ ಮಾಡುವದುಂಟು. ಚಿಕ್ಕಮಕ್ಕಳು ಅಳುವದನ್ನು ನಿಲ್ಲಿಸುವದಕ್ಕಾಗಿ—ಇಲ್ಲವೆ—ಹಟ ಬಿಟ್ಟುಕೊಡುವ ದಕ್ಕಾಗಿ ತಾಯಿತಂದೆಗಳು ಅನೇಕ ಪ್ರಕಾರದ ಹೆದರಿಕೆಗಳನ್ನು ಹಾಕುವ ಪರಿಪಾಠವಿದೆ. ಕಲ್ಪನಾಶಕ್ತಿಯು ಈ ಹೆದರಿಕೆಗಳನ್ನು ಹೆಚ್ಚಿಸಿ ಚಿಕ್ಕಮಕ್ಕ ಳನ್ನು ಹೇಡಿಗಳನ್ನಾಗಿ ಮಾಡುವದು. ಅಜ್ಞಾನದಿಂದ ನಡೆದುಬಂದಿರುವ ಈ ತಪ್ಪುತಿಳುವಳಿಕೆಯನ್ನು ತಾಯಿತಂದೆಗಳು ಬಿಟ್ಟುಕೊಡಬೇಕು.

ಪರಂಪರೆಯ ಶಿಕ್ಷಣವು ಭಾವಗಳನ್ನು ದುರ್ಲಕ್ಷಿಸಿದಂತೆ ಪ್ರಭಾವ ಶಾಲಿಯಾದ ಈ ಕಲ್ಪನಾಶಕ್ತಿಯನ್ನೂ ಕಡೆಗಣಿಸಿರುವದು. ನೀರಸವಾದ ಜೀವನವನ್ನು ಆಗಾಗ್ಗೆ ರಸಮಯವಾಗಿ ಮಾಡುವದು ಕಲ್ಪನಾಶಕ್ತಿಯು. ಅದ್ವಿತೀಯ ಶೋಧಗಳಿಗೆ ಆದಿಯಾಗಿರುವದು ಕಲ್ಪನಾಶಕ್ತಿಯು. ಉದಾ ತ್ತವಾದ ಆಶೆ ಆಕಾಂಕ್ಷೆಗಳ ಉಗಮವಾದರೂ ಕಲ್ಪನಾಶಕ್ತಿಯಲ್ಲಿಯೇ. ಮನ ಸ್ಸಿನ ಮೇಲ್ತರದ ಶಕ್ತಿಗಳಲ್ಲಿ ಒಂದಾದ ಈ ಕಲ್ಪನಾಶಕ್ತಿಯನ್ನು ಚಿಕ್ಕಮಕ್ಕ ಳಲ್ಲಿ ಮೊದಲಿನಿಂದಲೇ ಕಂಡುಹಿಡಿದು ಅದನ್ನು ಅವರಿಗೆ ಹಿತವಾಗುವಂತೆ ಹೆಚ್ಚಿಸುವದು ಇಂದಿನ ಶಿಕ್ಷಕರ ಕಾರ್ಯವಾಗಿದೆ.

## ಪರಿಚ್ಛೇದ ೯

### ಮಗು ಹೇಗೆ ಕಲಿಯುವದು ?

ಶಿಕ್ಷಣದಲ್ಲಿ ಕಲಿಯುವದು ಹಾಗೂ ಕಲಿಸುವದು ಎಂಬ ಎರಡು ಕಾರ್ಯಗಳಿರುವವು. ಈ ದ್ವಿಮುಖವಾದ ಕಾರ್ಯದಲ್ಲಿ ಬೇಕಾಗುವ ಮೂಲಧನವು ಚಿಕ್ಕಮಕ್ಕಳ ನೈಸರ್ಗಿಕ ಶಕ್ತಿಗಳಲ್ಲಿ ಅಡಕವಾಗಿದೆ. ಇವೆರಡು ಕ್ರಿಯೆಗಳನ್ನು ಭಿನ್ನವೆಂದು ಭಾವಿಸುವದು ತಪ್ಪು ತಿಳುವಳಿಕೆ. ಮಾನಸಶಾಸ್ತ್ರದ ದೃಷ್ಟಿಯಿಂದ ಇವೆರಡೂ ಕ್ರಿಯೆಗಳು ಒಂದೇ ಮನೋವ್ಯಾಪಾರದ ಎರಡು ಮುಖಗಳಿದ್ದಂತೆ ಮಾತ್ರ. **ಮಗುವು ಕಲಿಯುವವರೆಗೆ ಕಲಿಸಿದಂತಾಗದೆಂಬ** ಮಾತಾದರೂ ಇದೇ ಅರ್ಥವನ್ನೇ ಸೂಚಿಸುವದು. ಮಗುವು ಹೇಗೆ ಕಲಿಯುವದೆಂಬದು ಗೊತ್ತಾಗುವವರೆಗೆ ಹೇಗೆ ಕಲಿಸಬೇಕೆಂಬುದು ತಿಳಿಯದು. ಮಗುವಿನ ಸ್ಥಾನದಲ್ಲಿ ನಿಂತುಕೊಂಡು ಮಗುವು ಹೇಗೆ ಕಲಿಯುತ್ತದೆಂಬದನ್ನು ಪ್ರತಿಯೊಬ್ಬ ಶಿಕ್ಷಕನೂ ಅರಿತುಕೊಳ್ಳಬೇಕು.

ಮಾತೆಯ ಮಡಿಲಿನಲ್ಲಿ ಮೂಡಿದಂದಿನಿಂದ ಮಗುವು 'ಕಲಿಯಲು' ಮೊದಲು ಮಾಡುವದೆಂದು ಹೇಳುವದುಂಟು. ಇದು ಕಣ್ಣಿಗೆ ಕಾಣದ ಮಾತು. ಭೂಸಂಪರ್ಕವಾದೊಡನೆ ಕಲಿಯಹತ್ತುವದೆಂಬುದು ಪ್ರತ್ಯಕ್ಷವಾಗಿ ಕಂಡುಬರುವ ಮಾತು. ಸಾಮಾನ್ಯವಾಗಿ ಒಂದೇ ಮಾತಿನಲ್ಲಿ 'ಮಗುವು ಕಲಿಯುವದು,' ಎಂದು ನಾವು ಹೇಳುವೆವು. ಆದರೆ ಈ ಕಲಿಯುವ ಕ್ರಿಯೆಯು ಅಷ್ಟೊಂದು ಸರಳವಾಗಿರುವದಿಲ್ಲ. ಹುಟ್ಟಿದಂದಿನಿಂದ ಮಗುವಿಗೆ ಬೇರೆಬೇರೆ **ಸನ್ನಿವೇಶಗಳ ಸಂಪರ್ಕವು** ಒದಗುವದು. ಕೆಲವು ಸನ್ನಿವೇಶಗಳೊಡನೆ ಮಗುವು ಹೊಂದಿಕೊಳ್ಳುವದು, ಸಹಕರಿಸುವದು. ಕೆಲವು ಸನ್ನಿವೇಶಗಳನ್ನು ಮಗುವು ಎದುರಿಸುವದು, ವಿರೋಧಿಸುವದು. ವಿವಿಧವಾದ ಸನ್ನಿವೇಶಗಳು ಮಗುವನ್ನು ವಿವಿಧವಾಗಿ ಪ್ರಚೋದಿಸುವವು. ಈ ವಿವಿಧವಾದ ಪ್ರಚೋದನೆಗಳಿಗೆ ಮಗುವು ವಿವಿಧವಾಗಿ ಪ್ರತ್ಯುತ್ತರಗಳನ್ನು ಕೊಡುವದು. ಈ **ಪ್ರಚೋದನೆ-ಪ್ರತ್ಯುತ್ತರಗಳೇ ಕಲಿಯುವದರ ಪೂರ್ವಪೀಠಿಕೆಯಾಗಿರುವವು.**

ಈ ಪ್ರಚೋದನೆ–ಪ್ರತ್ಯುತ್ತರಗಳನ್ನು ಕೆಲವು ಸಾಮಾನ್ಯ ಉದಾಹರಣೆಗಳಿಂದ ಸ್ಪಷ್ಟಗೊಳಿಸಬಹುದು. ಬೆಕ್ಕು ಹಾಲನ್ನು ನೋಡುತ್ತದೆ. ಇದೊಂದು ಸನ್ನಿವೇಶ. ಹಾಲಿನ ಪಾತ್ರೆಯ ಕಡೆಗೆ ಧಾವಿಸುವದು,–ಈ ಪ್ರಚೋದನೆಗೆ ಬೆಕ್ಕು ಕೊಟ್ಟ ಪ್ರತ್ಯುತ್ತರ. ನಮ್ಮ ಜೀವನದಲ್ಲಿ ಬರುವ ವಿವಿಧ ಸನ್ನಿವೇಶಗಳೆಲ್ಲವೂ ಸ್ವರೂಪದಲ್ಲಿ ಇದೇ ಮಾದರಿಯಾಗಿರುವವು. ವಿವಿಧವಾದ ಪ್ರಚೋದನೆಗಳಿಗೆ ಬರುವ ಪ್ರತ್ಯುತ್ತರಗಳು, ಅನುಭವದ ಪೂರ್ವಪರಂಪರೆಯನ್ನೂ, ಪುನರುಕ್ತಿಯನ್ನೂ, ಅವಲಂಬಿಸಿರುವದು. ಹೆಚ್ಚು ಪುನರುಕ್ತಿಗಳಾದಂತೆ ಇವೆರಡರ ಸಂಬಂಧವು ಹೆಚ್ಚು ನಿಕಟವಾಗುವದು–ತುಳಿತದಿಂದ ಹುಲ್ಲುಗದ್ದೆಯಲ್ಲಿ ಹಾದಿಯನ್ನು ಕೆಡವಿದಂತೆ. ಕಲಿಯುವದೆಂದರೆ ಮೆದುಳಿನ ಮಿದುವಾದ ಭೂಮಿಯಲ್ಲಿ ಈ ರೀತಿಯಾಗಿ ಹಾದಿಯನ್ನು ಹಾಕಿಕೊಟ್ಟಂತೆ. ಈ ಮಾರ್ಗಗಳಿಂದಲೇ ಜ್ಞಾನತಂತುಗಳು ತಮ್ಮ ಕ್ರಿಯೆಯನ್ನು ನಡೆಸುವವು. ಜೀವನದ ಸಾವಿರಾರು ಹೊಸ ಸನ್ನಿವೇಶಗಳಲ್ಲಿ ಹೇಗೆ ಆಚರಿಸಬೇಕೆಂಬುವದು ಹಿಂದಿನ ಹಳೆಯ ಹಾದಿಯಿಂದಲೇ ನಮಗೆ ಹೊಳೆಯುವದು. **ಸದೃಶವಾದ ಸನ್ನಿವೇಶಗಳಲ್ಲಿ ಪ್ರಚೋದನೆಗೆ ಸರಿಯಾದ ಉತ್ತರವು ಬರಹತ್ತಿದರೆ ಕಲಿಯುವದು ಪೂರ್ಣವಾಯಿತೆಂದು ಹೇಳಬಹುದು.** "ಎರಡು ನಾಲ್ಕಲೇ ಎಷ್ಟು?"–ಎಂದು ಕೇಳಿದಾಗ್ಗೆ ಮಗುವು 'ಎಂಟು'–ಎಂದು ತಟ್ಟನೆ ಹೇಳಿದರೆ ಎರಡರ ಮಗ್ಗಿಯನ್ನು ಮಗುವು ಚನ್ನಾಗಿ 'ಕಲಿತಿರುವದೆ'ಂದು ನಾವು ಹೇಳುವದುಂಟು.

ಜ್ಞಾನತಂತುಗಳನ್ನು ಹೀಗೆ ಸರಿಯಾಗಿ ಹೊಂದಿಸಿ ಹೊಸೆಯುವಂತೆ ಭಾವಗಳ ಬಂಧನವೂ ಬೆಳವಣಿಗೆಯೂ ಇದೇ ರೀತಿಯಾಗಿ ಸಾಗುವದು. ಹೀಗೆ ಉದಾತ್ತ ಭಾವಗಳ ಬಂಧನವೇ 'ಶೀಲ'ವಾಗಿ ರೂಪಗೊಳ್ಳುವದು. ಬರೆಯುವ ಯಂತ್ರದಲ್ಲಿ ಬೆರಳೊತ್ತಿದೊಡನೆ ಬೇಕಾದ ಅಕ್ಷರವು ಮುಂದೆ ಬರುವಂತೆ **ಸನ್ನಿವೇಶಕ್ಕೆ ಸರಿಯಾದ ಆಚರಣೆಯಾಗಬೇಕು.** ವೀಣೆಯ ಬೇರೆಬೇರೆ ತಂತಿಗಳನ್ನು ಮೀಟಿದೊಡನೆ ಇಂಪಾದ ಸ್ವರವು ಕೇಳಬರುವಂತೆ **ಸಮಯಕ್ಕೆ ಸರಿಯಾಗಿ ಹೃದಯದ ವೀಣೆಯು ಭಾವಗಳನ್ನು ನುಡಿಸಬೇಕು.** ಇದುವೇ ಕಲಿಯುವದು.

ಕಲಿಯುವ ವಿಧಾನದಲ್ಲಿ ಸರ್ವಸಾಮಾನ್ಯವಾದ ಕೆಲವು ಕ್ರಮಗಳೂ ಕಟ್ಟುಗಳೂ ಇರುವವು. ಹೆಚ್ಚು ಕೊರೆದಂತೆ ಕೊರಕಲವು ಹೆಚ್ಚು ಆಳವಾಗುವದು. ಮನಕಾಗಿ ಮೂಡಿದ್ದ ಸಂವೇದನೆಗಳು ಪುನರುಕ್ತಿಯಿಂದ ಮನಸ್ಸಿನಲ್ಲಿ ಮತ್ತಿಷ್ಟು ಆಳವಾಗಿ ನಡುತ್ತವೆ. ಆದರೆ ಹೀಗೆ ಮಾಡಿದ್ದನ್ನೇ ಮಾಡುವವರಲ್ಲಿ ಮನಸ್ಸು ಮಾತ್ರ ಜಡವಾಗಲೂ ಹರಿಯಬೇಕು. **ಕಲಿಯುವ ಕ್ರಿಯೆಗೆ 'ಪುನರುಕ್ತಿ' ತತ್ವವು ತಳಹದಿಯಾಗಿದೆ.** ಈ ತತ್ವಕ್ಕೆ ಅನೇಕ ಮುಖಗಳಿವೆ:—

**(೧) ಪುನಃಪಠನವನ್ನು ಬಿಟ್ಟು ಬಿಟ್ಟು ಮಾಡಬೇಕು.** ಏಕಕಾಲಕ್ಕೆ ಎಲ್ಲವನ್ನು ಪಾಠ ಮಾಡುವದಕ್ಕಿಂತಲೂ ಕ್ರಮಶಃ ಮಾಡುವದು ಹೆಚ್ಚು ಸಫಲವಾಗುವದು. ಒಂದೇ ದಿನದಲ್ಲಿ ಒಂದು ಪದ್ಯವನ್ನು ಹತ್ತು ಸಾರೆ ಅನ್ನುವದಕ್ಕಿಂತಲೂ ಹತ್ತು ದಿನಗಳಲ್ಲಿ ದಿನಕ್ಕೊಮ್ಮೆಯಾದರೂ ಅಂದರೆ ಹೆಚ್ಚಿಗೆ ಮುಖೋದ್ಗತವಾಗಬಹುದು. ಒಂದೇ ದಿನದಲ್ಲಿ ಪಾಠ ಮಾಡಿದ್ದು ಅಂದಿನ ದಿನದ ಮಟ್ಟಿಗೆ ಮಾತ್ರ ಉಳಿಯಬಹುದು. ಆದರೆ ಬಹಳ ದಿನಗಳಲ್ಲಿ ಕಲಿತದ್ದು ಕಲ್ಲಿನಲ್ಲಿ ಕೊರೆದಂತೆ ಬಹುಕಾಲ ಉಳಿಯುವದು.

**(೨) ಖಂಡಶಃ ಕಲಿಯುವದಕ್ಕಿಂತಲೂ ಇಡಿಯಾಗಿ ಕಲಿಯುವದು ಲೇಸು.** ಇಡಿಯಾಗಿ ಕಲಿಯುವದರಿಂದ ಅರ್ಧಕ್ಕಿಂತ ಹೆಚ್ಚಿಗೆ ವೇಳೆಯು ಉಳಿತಾಯವಾಗುವದೆಂದು ಶಾಸ್ತ್ರಜ್ಞರು ಪ್ರಯೋಗದಿಂದ ಕಂಡು ಹಿಡಿದಿರುವರು. ಇಡಿಯಾಗಿ ಕಲಿಯುವದರಿಂದ ಮೊದಲಿನಿಂದ ಕಡೆಯವರೆಗೆ ಮನಸ್ಸಿನ ಲಕ್ಷವು ತೊಡಗುವದು.

(೩) ಕಲಿಯುವ ವಿಷಯವು ಪರಿಚಿತವಾಗುವವರೆಗೆ ಮೊದಲಿಗೆ ಸಾವಕಾಶವಾಗಿಯೂ ಮುಂದೆ ವೇಗವಾಗಿಯೂ ಓದಬೇಕು. ಓದುವ ಸಮಯದಲ್ಲಿ ಆಗಾಗ್ಗೆ ಅಂದದ್ದನ್ನೇ ಅನ್ನುವದರಿಂದಲೂ ಕಲಿಯುವದು ಶೀಘ್ರವೂ ಸುಗಮವೂ ಆಗುವದು. ಕಲಿಯುವದು ಒಂದು ರೂಢಿಯನ್ನು ಹಾಕಿಕೊಂಡಂತೆ. **ಕಲಿಯುವ ಕ್ರಿಯೆಯು ಸಫಲವಾಗಬೇಕಾದರೆ ಅದರ ಕ್ರಮವು ಸರಿಯಾಗಿರಬೇಕು. ಅನುಕೂಲವಾದ ಪರಿಸ್ಥಿತಿಯಿರ**

**ಬೇಕು.** ಸ್ವಚ್ಛತೆ, ಸಾಕಷ್ಟು ಗಾಳಿ ಬೆಳಕುಗಳು, ಸುತ್ತಲೂ ಶಾಂತತೆ– ಇವೆಲ್ಲವುಗಳ ಅನುಕೂಲತೆಗಳಿದ್ದರೆ ಕಲಿಯುವದು ಲೇಸಾಗಿ ಸಾಗುವದು.

**ಮಗುವು ತನ್ನ ಕೃತಿಯಿಂದ, ತನ್ನದೇ ಪ್ರಯತ್ನದಿಂದ ಕಲಿಯ ಬೇಕೆಂಬುದು** ಇಂದಿನ ಶಿಕ್ಷಣದಲ್ಲಿ ಹಿರಿದಾದ ತತ್ವವಾಗಿದೆ. ತಾನಾಗಿಯೇ ಶೋಧಿಸಿ ತಿಳಿದುಕೊಳ್ಳುವದರಲ್ಲಿ ಆನಂದವಿದೆ. ಆ ಜ್ಞಾನವು ಸ್ಥಿರವಾಗಿ ಉಳಿ ಯುವದು. ಆದರೆ ಮಗುವು ಎಷ್ಟಾದರೂ ಮಗುವೆಂಬುದನ್ನು ನಾವು ಮರೆ ಯುವಂತಿಲ್ಲ. ಅತ್ಯಲ್ಪ ಸಂಗತಿಯನ್ನು ತಿಳಿದುಕೊಳ್ಳಲು ಮಗುವಿಗೆ ಅನಂತ ಕಾಲವು ಹಿಡಿಯಬಹುದು. ಇದರಿಂದ ಮಗುವು ನಿರಾಶೆ ಹೊಂದಿ ಅದರ ಉತ್ಸಾಹವು ಶಾಶ್ವತವಾಗಿ ಕುಗ್ಗಿ ಹೋಗಬಹುದು. ಇದಲ್ಲದೆ **ಅನಂತಕಾಲ ದಿಂದ ನಡೆದು ಬಂದ ಜನಜೀವನವು ಅನೇಕ ಮುಖವಾದ ಅನು ಭವಗಳಿಂದ ಅಪರಿಮಿತವಾದ ಜ್ಞಾನ ಸಂಪತ್ತಿಯನ್ನು ಸಂಗ್ರಹಿಸುತ್ತ ಬಂದಿದೆ. ಈ ಸಂಪತ್ತೆಲ್ಲವೂ ಬೆಳೆಯುವ ಮಗುವಿನ ಸ್ವಾಧೀನ ವಾಗಬೇಕು.** ಮಗುವಿನ ಶಕ್ತಿ–ಒಲವು–ಕಾಲಮಾನಗಳನ್ನರಿತುಕೊಂಡು ಸಮಯಕ್ಕೆ ಸರಿಯಾದ ರೀತಿಯಲ್ಲಿ, ಸರಿಯಾದ ಪ್ರಮಾಣದಲ್ಲಿ, ಶಿಕ್ಷಕನು ಮಗುವಿಗೆ ಈ ಜ್ಞಾನವು ದೊರೆಯುವಂತೆ ಮಾಡಬೇಕು. ಇದುವೇ ಶಿಕ್ಷಕನ ಕಾರ್ಯಕ್ಷೇತ್ರ. ಕಲಿಸುವದೂ ಕಲಿಯುವದೂ ಇಲ್ಲಿಯೇ ಕೂಡಿಕೊಳ್ಳುವವು.

ಕಲಿಯುವ ವಿಧಾನದಲ್ಲಿ ಇನ್ನೆರಡು ಮಾನಸಿಕ ಕ್ರಿಯೆಗಳು ಮಹತ್ವ ವಾದವುಗಳು. '**ಆಸ್ಥೆ**'ಯು ಇವುಗಳಲ್ಲಿ ಒಂದಾಗಿದೆ. '**ಅವಧಾನ**'ವು ಎರಡನೆಯದು. ಚಿಕ್ಕಮಕ್ಕಳಿಗೆ **ಸಹಜ ಪ್ರವೃತ್ತಿಗಳ ಸಹಕಾರವಿದ್ದ ಕಾರ್ಯದಲ್ಲಿ ಆಸ್ಥೆಯು ತಾನಾಗಿಯೇ ತಲೆದೋರುವದು.** ಮಗುವಿನ ಮನಸ್ಸನ್ನು ಆ ಸಂಗತಿಯು ಸ್ವಾಭಾವಿಕವಾಗಿಯೇ ಸೆಳೆಯುವದು. ಆದರೆ ಚಿಕ್ಕಮಕ್ಕಳ ಜೀವನವನ್ನೆಲ್ಲ ಸಹಜ ಪ್ರವೃತ್ತಿಗಳಿಗೆ ಆಧೀನವಾಗಿ ಮಾಡಲು ಬರುವಂತಿಲ್ಲ. ಇಂದು ನೀರಸವೆಂದು ತೋರುವ ಎಷ್ಟೋ ವಿಷಯಗಳಲ್ಲಿ ಮುಂದಿನ ಹಿತದ ದೃಷ್ಟಿಯಿಂದ ಬೆಳೆಯುವ ಮಕ್ಕಳು ಆಸ್ಥೆ ವಹಿಸುವದು ಅವಶ್ಯವಾಗಿರುವದು.

ಆಸ್ಥೆಯು ಎರಡು ವಿಧವಾಗಿದೆ,—(೧) ಹೊರಗಿನ ವಿಷಯಗಳಿಗೆ ಸಂಬಂಧಿಸಿರುವದು; (೨) ಆತ್ಮಿಕವಾದುದು. ತೀರ ಚಿಕ್ಕಮಗುವು ತನ್ನ ಆಹಾರವನ್ನುಳಿದು ಉಳಿದ ವಿಷಯಗಳಲ್ಲಿ ಆಸ್ಥೆ ವಹಿಸುವದು. ದೊಡ್ಡವನಾದಂತೆ ಆತನ ಆಸ್ಥೆಯ ವಿಷಯಗಳೂ ಬದಲಿಸುತ್ತ ಹೋಗುವವು. ಆತನ ಆಸ್ಥೆಯ ಕ್ಷೇತ್ರವು ವಿಶಾಲವಾಗುತ್ತ ಹೋಗುವದು. ಕಲಿಯುವ ಕಾರ್ಯದಲ್ಲಿ ಆಸ್ಥೆಯನ್ನು ಹುಟ್ಟಿಸಲು ಶಕ್ಯವಿದ್ದಷ್ಟು ಸಹಜ ಪ್ರವೃತ್ತಿಗಳ ಸಹಕಾರವನ್ನು ಶಿಕ್ಷಕನು ದೊರಕಿಸಬೇಕು. ಆಸ್ಥೆಗೂ ಶರೀರ ಸ್ವಾಸ್ಥ್ಯಕ್ಕೂ ಇರುವ ಸಂಬಂಧವನ್ನೂ ಮರೆಯಕೂಡದು. ಇದಲ್ಲದೆ ಶಿಕ್ಷಕನ ಕಲಿಸುವ ರೀತಿಯು ಸರಿಯಾಗಿರದಿದ್ದರೆ ಆಸ್ಥೆಯು ಎಂದೂ ಬಾರದು. ಮಕ್ಕಳಲ್ಲಿ ಪ್ರೇಮವಿಲ್ಲದ, ಶಿಕ್ಷಣ ಕಾರ್ಯದಲ್ಲಿ ಆದರವಿಲ್ಲದ ಶಿಕ್ಷಕನು ಮಕ್ಕಳ ಮನಸ್ಸನ್ನು ವಶಪಡಿಸಿಕೊಳ್ಳಲಾರನು. ಪ್ರೇಮದಿಂದ ಪ್ರೇಮವು ಹುಟ್ಟುವಂತೆ **ಆಸ್ಥೆಯಿಂದಲೆ ಆಸ್ಥೆಯು ಹುಟ್ಟುವದು.** ತನ್ನ ಕಾರ್ಯದಲ್ಲಿ ಆಸ್ಥೆಯಿಲ್ಲದ ಶಿಕ್ಷಕನು ಮಕ್ಕಳ ಮನಸ್ಸಿನಲ್ಲಿ ಆಸ್ಥೆಯನ್ನು ಹುಟ್ಟಿಸಲಾರನು.

ಆಸ್ಥೆಗೆ ಬಂಧುವಿನಂತಿರುವದು ಅವಧಾನವು. **ಆಸ್ಥೆ ಅವಧಾನಗಳೆರಡೂ ಅವಳಿಜವಳಿಗಳಿದ್ದಂತೆ.** ಆಸ್ಥೆಯಿರುವಲ್ಲಿ ಅವಧಾನವು ತಾನಾಗಿಯೆ ಹುಟ್ಟುವದೆಂದು ಹೇಳಬಹುದು. ಅಂತೆಯೇ ಆಸ್ಥೆಯು ಅವಧಾನದ ತಾಯಿಯೆಂದು ಹೇಳುವರು. ಆದರೆ ಅವಧಾನವಿರುವಲ್ಲೆಲ್ಲ ಆಸ್ಥೆಯಿರುವದೆಂದು ಹೇಳುವದು ತಪ್ಪಾಗಬಹುದು. ಆಸ್ಥೆ ಹರಿದಾಡದ ಹವೆಯಂತೆ. ಅವಧಾನ ಹರಿಯುವ ಗಾಳಿಯಿದ್ದಂತೆ. **ಕಾರ್ಯಾಸಕ್ತವಾದ ಆಸ್ಥೆಯೇ ಅವಧಾನ.** ಅವಧಾನವೆಂದರೆ ಲಕ್ಷ್ಯಗೊಡುವದು; ಮನಸ್ಸಿನ ಏಕಾಗ್ರತೆ; ಇಷ್ಟವಾದ ವಸ್ತುವಿನಲ್ಲಿ ಇಲ್ಲವೆ ಸಂಗತಿಯಲ್ಲಿ ಮನಸ್ಸನ್ನು ಹಿಡಿದು ನಿಲ್ಲಿಸುವದು. ಇದುವೆ 'ಚಿತ್ತವೃತ್ತಿನಿರೋಧ'—ಎನ್ನುವ ಯೋಗವಿದ್ದಂತೆ. ನೀರು ಅನೇಕ ಮುಖವಾಗಿ ಹರಿಯುವದನ್ನು ತಪ್ಪಿಸಿ ಒಂದೇ ಹಾದಿಗೆ ಹಚ್ಚುವಂತೆ, ಸುತ್ತಲೂ ತಮ್ಮೆಡೆಗೆ ಸೆಳೆಯುವ ವಿಷಯಗಳಿಂದ ಮನಸ್ಸನ್ನು ಎಳೆದು ತಂದು ಇಷ್ಟವೆನಿಸಿದ ಒಂದೇ ವಸ್ತುವಿನಲ್ಲಿ ಅದು ಕೆಲಕಾಲವಾದರೂ ನೆಲೆಸು

ವಂತೆ ಮಾಡುವದು. ಈ ಬಗೆಯ ಅವಧಾನಕ್ಕೆ 'ಐಚ್ಛಿಕ' **ಅವಧಾನ ವೆನ್ನುವರು.** ಈ ಅವಧಾನವು ಪ್ರಯತ್ನ ಸಾಧ್ಯವಾದುದು. ಇದಕ್ಕೆ ಪರಿಶ್ರಮವು ಬೇಕು. **ಐಚ್ಛಿಕ ಅವಧಾನದ ಉನ್ನತಸ್ವರೂಪವೆ ಇಚ್ಛಾಶಕ್ತಿಯಾಗಿದೆ.** ಹತ್ತು ಕಡೆಗೆ ಹರಿಯುವ ಮನಸ್ಸನ್ನು ಹಿಡಿದು ಒಂದೆಡೆಯಲ್ಲಿ ನೆಲೆಸುವಂತೆ ಮಾಡುವದು ಸುಲಭ ಸಾಧ್ಯವಿಲ್ಲ. ಸೆಳವಿನ ಇದಿರು ಈಸಿದಂತೆ ಈ ಸಾಹಸವಾಗಿದೆ. ಇದಕ್ಕೆ ಪೂರ್ವಾಭ್ಯಾಸವಿರಬೇಕಾಗುವದು. ಇಂದಿನ ತಾತ್ಕಾಲಿಕ ಸುಖವನ್ನು ಬಿಟ್ಟುಕೊಟ್ಟು ಮುಂದಿನ ಹಿತವನ್ನು ಬಯಸುವ ತಿಳುವಳಿಕೆ ಇರಬೇಕು. ಇಲ್ಲವೆ-'ಇದು ನನ್ನ ಹಿತಕ್ಕಾಗಿದೆ—ನನ್ನ ಪರ ಹಿತಕ್ಕಾಗಿದೆ—ನನಗೆ ಕೀರ್ತಿಪ್ರದವಾಗಿದೆ'—ಎನ್ನುವ ಆತ್ಮಭಾವನೆಯ ಆವೇಶವಾದರೂ ಇರಬೇಕು.

ಇನ್ನೊಂದು ವಿಧವಾದ ಅವಧಾನವು '**ಅನೈಚ್ಛಿಕ**'**ವಾದುದು.** ಬುದ್ಧಿಪೂರ್ವಕವಾದ ಪ್ರಯತ್ನವಿಲ್ಲದೆ, ತನ್ನಿಂದ ತಾನೆ ಜನಿಸುವ ಈ ಬಗೆಯ ಅವಧಾನವು ಸ್ವಯಂಪ್ರೇರಿತವಾದುದು. ಸಹಜ ಪ್ರವೃತ್ತಿಗಳಿಗೂ ಇದಕ್ಕೂ ನಿಕಟವಾದ ಸಂಬಂಧವಿದೆ. ಸಹಜ ಪ್ರವೃತ್ತಿಯ ವಿಷಯದಲ್ಲಿ ಮನಸ್ಸು ಅದರ ಕಡೆಗೆ ತಾನಾಗಿ ಹರಿಯುವದು. ಆ ವಸ್ತುವಿನಲ್ಲಿ ಒಂದು ಬಗೆಯ ಆಸ್ಥೆಯು ಹುಟ್ಟುವದು. ಈ ಅವಧಾನವು ಅತ್ಯಂತ ಸ್ವಾಭಾವಿಕವಾದುದು. ಐಚ್ಛಿಕ ಅವಧಾನಕ್ಕಿಂತಲೂ ಎಷ್ಟೋ ಪಟ್ಟು ಮಿಗಿಲಾದುದು. ಹರ್ಷ—ವ್ಯಥೆಗಳ ಭಾವದ ಬಲದಿಂದ ಕೂಡಿಕೊಂಡಿರುವದರಿಂದ ಇದು ಅನಿವಾರ್ಯವಾಗಿರುವದು. ಪಶುಪಕ್ಷಿಗಳ ಹಾಗೂ ಬಾಲ್ಯದಲ್ಲಿ ಚಿಕ್ಕಮಕ್ಕಳ ಅವಧಾನವೂ ಇದೇ ರೀತಿಯದು.

ಚಿಕ್ಕಮಕ್ಕಳಲ್ಲಿ ಕಲಿಯುವ ವಿಷಯಗಳ ಬಗ್ಗೆ ಆಸ್ಥೆಯನ್ನು ಹುಟ್ಟಿಸಲು ಶಿಕ್ಷಕನು ಎಲ್ಲ ರೀತಿಯಿಂದಲೂ ಯತ್ನಿಸಬೇಕು. ಈ ಆಸ್ಥೆಯನ್ನು ಮೊದಲು ತಾನು ವಹಿಸಬೇಕು. ಅದರ ಜೊತೆಗೆ ಆತ್ಮವಿಶ್ವಾಸವನ್ನೂ ಕೂಡಿಸಬೇಕು. ಆತನ ನುಡಿಯಲ್ಲಿ, ನಡೆಯಲ್ಲಿ, ಉಲ್ಲಾಸವೃತ್ತಿಯಿರಬೇಕು. **ಶಿಕ್ಷಕನ ಔದಾಸೀನ್ಯವು ಎಳೆಯ ಮಕ್ಕಳ ಮನಸ್ಸನ್ನೆಲ್ಲ ಮೋಡದಂತೆ ಮುತ್ತಿ**

**ಬಿಡುವದು.** ವಿಷಯದಲ್ಲಿ, ವಿಧಾನದಲ್ಲಿ, ವಿವರಣೆಯಲ್ಲಿ ಒಂದು ಸಂತೋಷವು ಮಕ್ಕಳಿಗೆ ಉಂಟಾಗಬೇಕು. ಇದರಿಂದ ಕಲಿಯುವದರ ಬಗ್ಗೆ ಆಸ್ಥೆ ಅವಧಾನಗಳು ತಾವಾಗಿಯೇ ಜನಿಸುವವು. ಆದರೆ ಒಂದು ಮಾತನ್ನು ಇಲ್ಲಿ ವಿಚಾರಿಸಬಹುದು. 'ಕಣ್ಣೀರು ಸುರಿಸದೆ ಕಲಿಯುವದು' ಎಂಬ ತತ್ವದಿಂದ ಸಾಗಿದ ಇಂದಿನ ಶಿಕ್ಷಣಕ್ಕೆ ಒಂದು ಆಪಾದನೆಯು ಬಂದಿದೆ. 'ಇಂದಿನ ಶಿಕ್ಷಣದಲ್ಲಿ ಮಕ್ಕಳಿಗೆ ದುಡಿತವೇ ಇಲ್ಲ. ಶಿಕ್ಷಕರು ಕೇವಲ ಮನರಂಜನೆಯ ಕಡೆಗೆ ಲಕ್ಷಕೊಡುವರು'—ಇತ್ಯಾದಿ ಮಾತುಗಳಿಂದ ಕೆಲವರು ಆಧುನಿಕ ಶಿಕ್ಷಣವನ್ನು ಆಕ್ಷೇಪಿಸುವದುಂಟು. ಇದು ತಪ್ಪುತಿಳುವಳಿಕೆ. **ಇಂದಿನ ಶಿಕ್ಷಣವು ಕಲಿಯುವದರಲ್ಲಿ ದುಡಿತದ ಅವಶ್ಯಕತೆಯನ್ನು ಅಲ್ಲಗಳೆಯುವದಿಲ್ಲ.** ಆದರೆ ನೀರಸವಾದ, ನಿರರ್ಥಕವಾದ ದುಡಿತವನ್ನು ಮಾತ್ರ ನಿರಾಕರಿಸುವದು. ಕಲಿಯುವದು ಒಂದು ಅನುಭವ ಪರಂಪರೆ. ಅನುಭವಗಳು ಆನಂದಮಯವಾಗಿದ್ದರೆ ಮಾತ್ರ ಬೆಳೆಯುವ ಮಕ್ಕಳ ಆತ್ಮದೊಡನೆ ಒಂದಾಗುವವು. ಆನಂದಮಯವಾದ ಅನುಭವಗಳ ಕಡೆಗೆ ಮಕ್ಕಳ ಮನಸ್ಸು ತಾನಾಗಿಯೇ ಹರಿಯುವದು. ಇದನ್ನೇ ಆಸ್ಥೆಯೆಂದು ಹೇಳುವದುಂಟು. ಆನಂದಮಯವಾದ ಅನುಭವಗಳೆಂದರೆ ಕೇವಲ ಕಾಲಹರಣ ಮಾಡುವ ವಿನೋದವಲ್ಲ. ಕಲಿಯುವ ವಿಷಯಗಳೂ, ಕಲಿಸುವ ವಿಧಾನವೂ, ಮಕ್ಕಳ ಒಲವು ಶಕ್ತಿಗಳಿಗೆ ಅನುರೂಪವಾಗಿರಬೇಕು. ವಿಶೇಷವಾಗಿ ಅವರ **ಜೀವನಸ್ಪರ್ಶಿಯಾಗಬೇಕು.** ಅಂದರೆ ಆಸ್ಥೆ ಆನಂದಗಳೆರಡೂ ತಾವಾಗಿಯೇ ಮಕ್ಕಳಲ್ಲಿ ತಲೆದೋರುವವು. ಮಕ್ಕಳ ಮನೋಧರ್ಮವನ್ನರಿತುಕೊಂಡ ಶಿಕ್ಷಕನು ಕಲಿಸುವ ವಿಷಯವು ಯಾವುದಿದ್ದರೂ ಮಕ್ಕಳ ನಿತ್ಯ ಜೀವನಕ್ಕೆ ಹೊಂದಿಕೆಯಾಗುವಂತೆ ಎಲ್ಲ ಬಗೆಯಿಂದಲೂ ಯತ್ನಿಸುವನು. ಉಚಿತವಾದ ಉದಾಹರಣೆಗಳಿಂದಲೂ, ಸರಿಯಾದ ಸಾದೃಶ್ಯಗಳಿಂದಲೂ, ನಕ್ಷೆ ಚಿತ್ರಗಳಿಂದಲೂ, ಪ್ರತ್ಯಕ್ಷವಾದ ಪ್ರಯೋಗಗಳಿಂದಲೂ **ಜ್ಞಾನ ಹಾಗೂ ಜೀವನಗಳ ಸಮರಸವಾದ ಬೆಳೆಕೆಯನ್ನುಂಟುಮಾಡುವನು.** ಆಸ್ಥೆ ಅವಧಾನಗಳನ್ನು ಸಂಪಾದಿಸಲು ಚಿಕ್ಕಮಕ್ಕಳ ಸಕ್ರಿಯ ಸಹಕಾರವು

ಇನ್ನೊಂದು ಮಹತ್ವದ ಸಾಧನವಾಗಿದೆ. ಈ ಬಗೆಯ ಸಹಕಾರವಿಲ್ಲದ ಶಿಕ್ಷಣವು ಪಾತ್ರೆಯಿಂದ ಪಾತ್ರೆಗೆ ನೀರು ಸುರುವಿದಂತೆ ನಿರ್ಜೀವವಾದುದು. ಈ ಬಗೆಯ ಸಹಕಾರವಿರುವ ಶಿಕ್ಷಣವು ಚಿಕ್ಕಮಕ್ಕಳ ಸುಪ್ತಶಕ್ತಿಗಳನ್ನೆಲ್ಲ ಚೇತರಿಸುವದು. ಮನಸ್ಸು–ಮಿದುಳುಗಳೆರಡೂ ತಮ್ಮ ಕಾರ್ಯದಲ್ಲಿ ವಿಶೇಷವಾದ ತೀವ್ರತೆ ತೀಕ್ಷ್ಣತೆಗಳನ್ನು ತಾಳುವವು. **ತಾನು ಬೆಳೆಸಿದ ಗಿಡದ ಹಣ್ಣನ್ನು ತಾನೇ ತಿಂದರೆ ಆಗುವ ಸಂತೋಷವು, ಮಗುವಿಗೆ ತನ್ನ ಸಹಕಾರದ ಬಲದಿಂದ ದೊರೆತ ಜ್ಞಾನದಿಂದ ಆಗುವದು.** ಆತನ ಪ್ರಗತಿಯು ಬಲವತ್ತರವಾಗಿ ಸಾಗುವದು. ಇದಕ್ಕೆ ಅನುಗುಣವಾಗಿಯೇ ದಿನದ ಪಾಠದ ವಿಷಯವನ್ನು ಮಕ್ಕಳೆದುರು ಇಡುವಾಗಲೂ ಶಿಕ್ಷಕನು ದಕ್ಷತೆಯನ್ನು ವಹಿಸಬೇಕು. ಅದು ತೀರ ಸುಲಭವಾಗಿದ್ದರೆ ಅವರ ಪ್ರಯತ್ನಕ್ಕೆ ಎಡೆಯಿಲ್ಲದಂತಾಗುವದು. ವಯೋನುಗುಣವಾದ ಅವರ ಬುದ್ಧಿಶಕ್ತಿಗೆ ನಿಲುಕದಷ್ಟು ಅದು ಬಿಗಿಯಾಗಿದ್ದರೆ, ಮಕ್ಕಳ ನಿರಾಶೆ ನಿರುತ್ಸಾಹಗಳಿಗೆ ಕಾರಣವಾದಂತಾಗುವದು. ಕಲಿಯುವದರಲ್ಲಿ ಕಲಿಸುವದರಲ್ಲಿ ಆಸ್ಥೆ ಅವಧಾನಗಳ ಅವಶ್ಯಕತೆಯು ಶಿಕ್ಷಕನಿಗೆ ಹೆಜ್ಜೆಹೆಜ್ಜೆಗೂ ಅನಿಸುವದು. ಮಾನಸಿಕ ಶಕ್ತಿಗಳಲ್ಲಿ ಒಂದಾಗಿರುವ ಇವುಗಳ ಸ್ವರೂಪವನ್ನು ಆತನು ಚೆನ್ನಾಗಿ ತಿಳಿದುಕೊಳ್ಳಬೇಕು. ತನ್ನ ಕಾರ್ಯದಲ್ಲಿ ಅನೇಕ ಹಾದಿಗಳಿಂದ, ಹಂಚಿಕೆಗಳಿಂದ ಇವೆರಡೂ ಶಕ್ತಿಗಳ ಸಹಕಾರವು ದೊರೆಯುವಂತೆ ಆತನು ಯತ್ನಿಸಬೇಕು.

## ಪರಿಚ್ಛೇದ ೧೦

### ಬುದ್ಧಿಯ ಅಳತೆ

ಮಾನಸ ಶಾಸ್ತ್ರದ ಅಬಾಧಿತವಾದ ಮೂಲ ತತ್ವಗಳೇ ಇಂದಿನ ಶಿಕ್ಷಣಕ್ಕೆ ತಳಹದಿಯಾಗಿವೆ. ಪ್ರಾಯೋಗಿಕವಾದ ಮಾನಸ ಶಾಸ್ತ್ರವು ಅನೇಕ ಹೊಸ ಸಂಗತಿಗಳನ್ನು ಕಂಡುಹಿಡಿದಿದೆ. ಅವುಗಳಲ್ಲಿ ಬುದ್ಧಿಶಕ್ತಿಯ ಕಾರ್ಯ ಹಾಗೂ ಸ್ವರೂಪಗಳ ಬಗ್ಗೆ ಸರಿಯಾದ ಕಲ್ಪನೆಯು ಒಂದಾಗಿದೆ.

'ಓದು ಒಕ್ಕಾಲು, ಬುದ್ಧಿ ಮುಕ್ಕಾಲು '—ಎಂಬ ನಾಣ್ಣುಡಿಯಲ್ಲಿ **ಬುದ್ಧಿಯೆಂಬುದನ್ನು ತಿಳುವಳಿಕೆಯೆಂಬ ಅರ್ಥದಲ್ಲಿ** ಉಪಯೋಗಿಸುವದುಂಟು. ಈ ಬುದ್ಧಿಯು ಮೂರು ತೆರನಾಗಿ ಪ್ರಕಟವಾಗುವದೆಂದು ಹೇಳಬಹುದು :— (೧) ಜೀವನದಲ್ಲಿ ಬರುವ ಅಪರಿಚಿತವಾದ ವಿವಿಧ ಸನ್ನಿವೇಶಗಳಲ್ಲಿ ಸರಿಯಾದ, ಹಿತಕರವಾದ ರೀತಿಯಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ತೋರಿಸಿ ಕೊಡುವದು ಒಂದು ವಿಶಿಷ್ಟ ಶಕ್ತಿಯಾಗಿದೆ. ಈ ಶಕ್ತಿಯೇ 'ಬುದ್ಧಿ' ಯೆಂದು ಕೆಲವರ ಹೇಳಿಕೆ. (೨) ಇನ್ನೊಂದು ರೀತಿಯಲ್ಲಿಯೂ ಇದೇ ಮಾತನ್ನೇ ಹೇಳಬಹುದು. ಇದುವರೆಗೆ ಅಜ್ಞಾತವಾದುದನ್ನು ತಿಳಿದುಕೊಳ್ಳುವ ಶಕ್ತಿಯೇ ಬುದ್ಧಿಯು. ಹಿಂದೆ ನಡೆದುದನ್ನು, ಮುಂದೆ ಆಗುವದನ್ನು ಇಂದಿನ ನಡೆಗೆ ಹೊಂದಿಸಿಕೊಳ್ಳುವದು ಬುದ್ಧಿಶಕ್ತಿಯಿಂದಲೇ. (೩) ಬುದ್ಧಿಯು ಮಾಡುವ ಇದೇ ಕಾರ್ಯವನ್ನೇ ಮತ್ತೊಂದು ರೀತಿಯಲ್ಲಿಯೂ ಹೇಳುವದುಂಟು. ರೂಢವಾದ ಜೀವನದ ರೀತಿಗಳನ್ನು ಪರಿಸ್ಥಿತಿಯು ಬದಲಿಸಿದಂತೆ ಹೆಚ್ಚುಕಡಿಮೆ ಮಾಡುವದು ಬುದ್ಧಿಯ ಬಲದಿಂದಲೇ. ಪ್ರಾಣಿಗಳಲ್ಲಿ ಈ ಶಕ್ತಿಯು ತೀರ ಕಡಿಮೆ ಪ್ರಮಾಣದಲ್ಲಿ ಕಂಡುಬರುವದು. ಬುದ್ಧಿಯುತನಾದ ಮನುಷ್ಯನು ಮಾತ್ರ ಹೊಸ ಪರಿಸ್ಥಿತಿಗಳಲ್ಲಿ ತನಗೆ ಅನುಕೂಲವಾದ ಹೆಚ್ಚುಕಡಿಮೆಗಳನ್ನು ಮಾಡಿಕೊಳ್ಳುವನು.

ಈ ಬುದ್ಧಿಶಕ್ತಿಯು ಜ್ಞಾನಕ್ಕಿಂತಲೂ ಹಿರಿದಾದುದು. ವ್ಯಾಸಂಗದಿಂದ ಜ್ಞಾನವನ್ನು ಹೆಚ್ಚಿಸಬಹುದು. ಆದರೆ ಬುದ್ಧಿಶಕ್ತಿಯ ಮಾತು ಹೀಗಲ್ಲ. **ವ್ಯಕ್ತಿ-ವ್ಯಕ್ತಿಗಳಲ್ಲಿ ಬುದ್ಧಿಯ ಪರಿಮಿತಿಯು ಇಂತಿಷ್ಟೆಂದು ಹುಟ್ಟಿದೊಡನೆ ನಿಶ್ಚಿತವಾಗಿರುವದು. ಬುದ್ಧಿಯು ಬೇರೆಬೇರೆ ಮಕ್ಕಳಲ್ಲಿ ಹೆಚ್ಚು ಕಡಿಮೆಯಾಗಿರುವದು.** ವ್ಯಾಸಂಗವು ವ್ಯಕ್ತಿಗಳ ಬುದ್ಧಿಶಕ್ತಿಗೆ ಅನುಗುಣವಾಗಿರಬೇಕು. ಬುದ್ಧಿಯ ಹೆಚ್ಚುಕಡಿಮೆಯಂತೆ ಶಿಕ್ಷಣದ ರೀತಿ ವಿಧಾನಗಳನ್ನು ಬದಲಿಸಬೇಕು. ಸಾಂಘಿಕ ಶಿಕ್ಷಣದ ಹಾದಿಯನ್ನು ಬಿಟ್ಟುಕೊಟ್ಟು ಶಕ್ಯವಿರುವ ಮಟ್ಟಿಗೆ ಇಂದಿನ ಶಿಕ್ಷಣವು ವ್ಯಕ್ತಿನಿಷ್ಠವಾಗತೊಡಗಿದೆ. ಚಿಕ್ಕಮಕ್ಕಳ ಬುದ್ಧಿಶಕ್ತಿಯನ್ನು ಅಳೆಯುವ ಅನೇಕ ಹಂಚಿಕೆಗಳನ್ನು ಇಂದಿನ ಮಾನಸಶಾಸ್ತ್ರಜ್ಞರು ಯೋಜಿಸಿರುವರು.

ಬುದ್ಧಿಯು ಜ್ಞಾನದೊಡನೆ ನಿಕಟವಾಗಿ ಬೆರೆತುಕೊಂಡಿರುವದು. ಅಂತೆಯೆ ಬುದ್ಧಿಯನ್ನು ಅಳೆಯುವಾಗ್ಗೆ ಜ್ಞಾನದ ಅಳತೆಗೋಲನ್ನೇ ಅನಿವಾರ್ಯವಾಗಿ ಉಪಯೋಗಿಸುವರು. ಅದೃಶ್ಯವಾದ ಉಷ್ಣತೆಯನ್ನು ಅಳೆಯಲು ಪಾದರಸದ 'ಮಾಧ್ಯಮ' ವನ್ನು ನಾವು ತೆಗೆದುಕೊಳ್ಳುವದಿಲ್ಲವೆ? ಬುದ್ಧಿಶಕ್ತಿಯನ್ನು ಅಳೆಯಲು ಬಿನೆಟ್ ಎಂಬ ವಿಜ್ಞಾನಿಯು ಈ ರೀತಿಯನ್ನೇ ಅನುಸರಿಸುವನು. ಸರಿಯಾಗಿ ಬೆಳೆದ ನಿರೋಗಿಯಾದ ಮಗುವು ನಿರ್ದಿಷ್ಟ ವಯಸ್ಸಿನಲ್ಲಿ ಇಂತಿಷ್ಟು ವಿಷಯಜ್ಞಾನವನ್ನು ಪಡೆದಿರಬೇಕು. ಇದನ್ನು ಪಡೆದ ಸಮಾನ ವಯಸ್ಸಿನ ಮಕ್ಕಳಲ್ಲಿ ಬುದ್ಧಿಯ ಪ್ರಮಾಣವಾದರೂ ಸಮಾನವಾದುದು. ಇದನ್ನು ಅರೆಯಾಗಿ ತಿಳಿದುಕೊಂಡ ಇಲ್ಲವೇ ಪೂರ್ಣವಾಗಿ ಗೊತ್ತಿರದ ಮಕ್ಕಳ ಬುದ್ಧಿಯು ಪ್ರಮಾಣದಲ್ಲಿ ಕಡಿಮೆಯಾಗಿರುವದೆಂದು ಭಾವಿಸಬಹುದು. ಥಾರ್ನಡಿಕ್, ಸ್ಪೀಯರಮನ್ ಎಂಬ ಬೇರೆ ವಿಜ್ಞಾನಿಗಳು ಸಾಮಾನ್ಯವಾದ ಒಂದೇ ಒಂದಾದ ಬುದ್ಧಿಶಕ್ತಿಯನ್ನು ಅಲ್ಲಗಳೆಯುವರು. ವಿಶಿಷ್ಟವಾದ ಕಾರ್ಯಗಳಲ್ಲಿ ವಿಶಿಷ್ಟವಾದ ಬುದ್ಧಿಶಕ್ತಿಯು ಕೆಲಸ ಮಾಡುವದೆಂದು ಇವರಿರ್ವರ ಅಭಿಪ್ರಾಯವಾಗಿದೆ. ಈ ಭಿನ್ನವಾದ ಬುದ್ಧಿಶಕ್ತಿಗಳನ್ನು ಅನೇಕ ಉದಾಹರಣೆಗಳಿಂದ ಕಂಡುಹಿಡಿದು ಅವುಗಳ ಪರಸ್ಪರ ಹೊಂದಿಕೆಯನ್ನು ಇವರು ಕಂಡುಹಿಡಿದಿರುವರು. ಬುದ್ಧಿಶಕ್ತಿಯ ಪ್ರವಾಹಗಳು ಭಿನ್ನವಾಗಿ ತೋರಿದರೂ ಅವೆಲ್ಲವೂ ಒಂದೇ ಒಂದು ಸಾಮಾನ್ಯ ಬುದ್ಧಿಶಕ್ತಿಯಿಂದ ಹೊರಡುವವೆಂದು ಸ್ಪೀಯರಮನ್‌ನ ಅಭಿಪ್ರಾಯ. ವ್ಯಕ್ತಿವ್ಯಕ್ತಿಗಳಲ್ಲಿ ಬುದ್ಧಿಶಕ್ತಿಯೂ ಅದರ ಪರಿಮಿತಿಯೂ ಭಿನ್ನವಾಗಿರುವವೆಂಬುದನ್ನು ಇರ್ವರೂ ಒಪ್ಪಿಕೊಳ್ಳುವರು. ಈ ಮಾತನ್ನೇ ಇಂದಿನ ಶಿಕ್ಷಣವು ಹೆಚ್ಚಾಗಿ ಆಚರಣೆಯಲ್ಲಿ ತಂದಿರುವದು. ಈ ಬುದ್ಧಿಶಕ್ತಿಯು 'ಉಪಜತ' ವಾದುದು. ಪರಿಮಿತವಾದ ಬುದ್ಧಿಶಕ್ತಿಯನ್ನು ತೆಗೆದುಕೊಂಡೇ ಮಗುವು ಇಲ್ಲಿ ಜನಿಸುವದು. ಇದು ಆಮರಣ ಕಡಿಮೆಯಾಗುವದಿಲ್ಲ. ಇಲ್ಲವೆ ಶಿಕ್ಷಣ—ಅನುಭವಗಳಿಂದ ಹೆಚ್ಚಿಸಲೂ ಬರುವದಿಲ್ಲ.

ಬುದ್ಧಿಶಕ್ತಿಯು ವ್ಯಕ್ತಿವ್ಯಕ್ತಿಗಳಲ್ಲಿ ಭಿನ್ನವಾಗಿರುವದೆಂದು ಹಿಂದೆ ಹೇಳಿದೆ. ಈ ಹೆಚ್ಚುಕಡಿಮೆಯು ಬುದ್ಧಿಯಲ್ಲಿ ಕಾಡುಬರುವಂತೆ, '**ಬೌದ್ಧಿಕ ವಾದ ಒಂದು ವಯೋಮಾನ**' ವನ್ನು ಕಲ್ಪಿಸುವರು. ಮಗುವಿನ ನಿಜ ವಾದ ವಯಸ್ಸು ಬೇರೆಯಾಗಿರಬಹುದು. ಬುದ್ಧಿಶಕ್ತಿಯ ಪ್ರಮಾಣದ ಮೇರೆಗೆ ಆತನ ಬೌದ್ಧಿಕ ವಯಸ್ಸು ಇದರಿಂದ ಭಿನ್ನವಾಗಿರಬಹುದು. ಸಮಾನ ವಯಸ್ಸಿನ ಎಲ್ಲ ಮಕ್ಕಳು ಬೌದ್ಧಿಕವಾಗಿ ಒಂದೇ ವಯೋಮಾನ ದವರೆಂದು ಹೇಳಲುಬಾರದು. ನಿಸರ್ಗದಿಂದ ಜನ್ಮತಃ ಮಗುವಿನೊಡನೆ ಕೂಡಿ ಬಂದ ಆತನ **ಬುದ್ಧಿಶಕ್ತಿಯು ಹದಿನಾರನೆಯ ಇಲ್ಲವೆ ಕೆಲವರು ಹೇಳು ವಂತೆ ಹದಿಮೂರನೆಯ ವಯಸ್ಸಿನಲ್ಲಿ ತನ್ನ ಪರಾಕಾಷ್ಠೆಯನ್ನು ಮುಟ್ಟುವದು.** ಈ ಹದಿನಾರನೆಯ ವಯಸ್ಸೇ ಬೌದ್ಧಿಕ ವಯೋ ಮಾನದ ಮೇಲಿನ ತುದಿಯಾಗಿರುವದು. ಮಗುವಿನ ಬುದ್ಧಿಶಕ್ತಿಯನ್ನು ಅಳೆ ಯುವದಕ್ಕೆ ಆತನನ್ನು ಪರೀಕ್ಷಿಸುವರು. ಬಿನೆಟ್‌ನ ಪರೀಕ್ಷಾಕ್ರಮವೆ ಈ ಪರೀಕ್ಷೆಗಾಗಿ ಇಂದಿಗೂ ಪ್ರಚಾರದಲ್ಲಿದೆ. ಮಗುವಿನ ಜ್ಞಾನಸಂಪತ್ತಿ ಯನ್ನು ಈ ಪರೀಕ್ಷಾಕ್ರಮದಿಂದ ತಿಳಿದುಕೊಳ್ಳುವರು. ಇದೇ ಬುದ್ಧಿ ಶಕ್ತಿಯ ಪರೀಕ್ಷೆ. ಈ ಪರೀಕ್ಷೆಯಲ್ಲಿ ವಯೋನುಗುಣವಾಗಿ ಪ್ರಶ್ನೆಗಳಿರು ವವು. ಮಗುವು ಕೊಟ್ಟ ಉತ್ತರಗಳನ್ನು ತೂಗಿ ನೋಡಿ ಆತನ ಬೌದ್ಧಿಕ ವಯೋಮಾನವನ್ನು ಗೊತ್ತುಪಡಿಸುವರು. ಐದು ವರ್ಷದ ಮಗುವಿಗಾಗಿ ಹತ್ತು ಪ್ರಶ್ನೆಗಳಿರುವವೆಂದು ತಿಳಿಯುವಾ. ಈ ಹತ್ತೂ ಪ್ರಶ್ನೆಗಳಿಗೆ ಆತನು ಸರಿಯಾದ ಉತ್ತರವನ್ನು ಹೇಳಿದರೆ ಆತನ ನಿಜವಾದ ವಯಸ್ಸು ಐದು– ಬೌದ್ಧಿಕ ವಯಸ್ಸೂ ಐದು. ಆದರೆ ಐದು ವರುಷದ ಒಂದು ಮಗುವು ಇವುಗ ಳಲ್ಲಿ ಆರು ಪ್ರಶ್ನೆಗಳಿಗೆ ಮಾತ್ರ ಸರಿಯಾದ ಉತ್ತರಗಳನ್ನು ಹೇಳಿದರೆ ಆತನ ನಿಜವಾದ ವಯಸ್ಸು ಐದು ಆಗಿದ್ದರೂ ಬೌದ್ಧಿಕ ವಯಸ್ಸು ಮಾತ್ರ ಮೂರೇ ಆಗುವದು. ಇವನ್ನು ಶತಮಾನದ ರೀತಿಯಲ್ಲಿ ಹೇಳಲು ಅನುಕೂಲವಾಗು ವಂತೆ ಬೌದ್ಧಿಕ ವಯಸ್ಸನ್ನು ನಿಜವಾದ ವಯಸ್ಸಿನಿಂದ ಭಾಗಿಸಿ ಅದಕ್ಕೆ ನೂರರಿಂದ ಗುಣಿಸುವದುಂಟು. ಹೀಗೆ ಮಾಡುವದರಿಂದ ಬಂದ ಸಂಖ್ಯೆಯೆ

ಆ ಮಗುವಿನ 'ಬುದ್ಧಿಮಾಪಕ' ವೆನಿಸುವದು. ಇವೆರಡು ವಯೋಮಾನ ಗಳ ಪ್ರಮಾಣವು ಆಮರಣವೂ ಒಂದೇ ವಿಧವಾಗಿ ಉಳಿಯುವದು. ಈ ಬುದ್ಧಿಮಾಪಕಕ್ಕೆ ಅನುಗುಣವಾಗಿ ವ್ಯಕ್ತಿಗಳನ್ನು ವಿಂಗಡಿಸುವದುಂಟು. ಬುದ್ಧಿಮಾಪಕವು ಹೆಚ್ಚಿದ್ದರೆ ಬುದ್ಧಿಶಕ್ತಿಯು ಉನ್ನತವಾದುದು. ಕಡಿಮೆ ಯಾಗಿದ್ದರೆ ಬುದ್ಧಿಶಕ್ತಿಯು ಕೀಳಾಗುತ್ತ ಹೋಗುವದು. ಟರ್ಮನ್ ಎಂಬ ವರು ಬುದ್ಧಿಮಾಪಕಕ್ಕೂ ಬುದ್ಧಿಶಕ್ತಿಗೂ ಇರುವ ಪ್ರಮಾಣವನ್ನು ಒಂದು ಕೋಷ್ಟಕ ರೂಪವಾಗಿ ಗೊತ್ತುಮಾಡಿರುವರು. ಅದನ್ನೇ ಕೆಳಗೆ ಕೊಟ್ಟಿದೆ:—

| ಬುದ್ಧಿಮಾಪಕ | | ಬುದ್ಧಿಶಕ್ತಿ |
|---|---|---|
| ೧೪೦ ಅಥವಾ ಅದಕ್ಕಿಂತಲೂ ಹೆಚ್ಚು | .... | ಪ್ರತಿಭಾಶಾಲಿಯಾದವನು. |
| ೧೨೦ ರಿಂದ ೧೪೦ | .... | ಅತ್ಯಂತ ಶ್ರೇಷ್ಠವಾದಬುದ್ಧಿಮತ್ತೆ |
| ೧೧೦ ರಿಂದ ೧೨೦ | .... | ಶ್ರೇಷ್ಠವಾದ ಬುದ್ಧಿಮತ್ತೆ |
| ೯೦ ರಿಂದ ೧೧೦ | .... | ಸರಾಸರಿಯಾದ ಬುದ್ಧಿಮತ್ತೆ |
| ೮೦ ರಿಂದ ೯೦ | .... | ಮಂದಬುದ್ಧಿ |
| ೭೦ ರಿಂದ ೮೦ | .... | ಬುದ್ಧಿಯ ಕೊರತೆ |
| ೫೦ ರಿಂದ ೭೦ | .... | ದುರ್ಬಲ ಬುದ್ಧಿ |
| ೨೫ ರಿಂದ ೫೦ | .... | ಬುದ್ಧಿಹೀನತೆ |
| ೨೫ ಕ್ಕಿಂತಲೂ ಕಡಿಮೆ | .... | ಮಂಕು ಬುದ್ಧಿ. |

ಇಂದಿನ ಮಾನಸಶಾಸ್ತ್ರವು ಬುದ್ಧಿಶಕ್ತಿಯ ಈ ಹೆಚ್ಚುಕಡಿಮೆಯನ್ನು ತೋರಿಸಿಕೊಟ್ಟು ಶಿಕ್ಷಣಕ್ಕೆ ಅತೀವ ಸಹಾಯ ಮಾಡಿದೆ. 'ಹಿಂದಿನ ಶಿಕ್ಷಕರು ತಪ್ಪು ದಾರಿಯನ್ನು ಹಿಡಿದು ತಾವೂ ವ್ಯರ್ಥವಾಗಿ ಆಯಾಸಗೊಳ್ಳುತ್ತಿದ್ದರು, ವಿದ್ಯಾರ್ಥಿಗಳನ್ನೂ ದಣಿಸುತ್ತಿದ್ದರು. ಎತ್ತು, ಕೋಣ, ಕುದುರೆಗಳನ್ನು ಒಂದೇ ರಥಕ್ಕೆ ಹೂಡಿ ಎಳೆಯಲು ಹಚ್ಚುವಂತೆ, ಭಿನ್ನಶಕ್ತಿಯ ಮಕ್ಕಳನ್ನು ಒಂದೇ ಪಡಿಯಚ್ಚಿನ ಶಿಕ್ಷಣದಲ್ಲಿ ಒಂದೇ ವೇಗದಿಂದ ಒತ್ತಿ ತೆಗೆಯಲು ಹಿಂದಿ ನವರು ಸಾಹಸಪಡುತ್ತಿದ್ದರು. ಆದರೆ ಇಂದಿನ ಶಿಕ್ಷಣವು ಚಿಕ್ಕಮಕ್ಕಳ ಬುದ್ಧಿ ಶಕ್ತಿಯ ಹೆಚ್ಚುಕಡಿಮೆಗಳನ್ನು ಮರೆಯದೆ ಅವುಗಳಿಗೆ ಅನುಗುಣವಾಗಿಯೆ

ಸಾಗುವದು. ಇದಕ್ಕಾಗಿಯೇ ಯೋಜನಾಪದ್ಧತಿ, ಡಾಲ್ಟನ್ ಯೋಜನೆ, ಮೊದಲಾದ ಹೊಸ ಪದ್ಧತಿಗಳೂ ಕೂಡ ಶಿಕ್ಷಣದಲ್ಲಿ ಕಂಡುಬರುವವು. ಭಿನ್ನ ಪ್ರಮಾಣದ ಬುದ್ಧಿಶಕ್ತಿಯುಳ್ಳ ಮಕ್ಕಳಿಂದ ಕೂಡಿದ ಗುಂಪುಗಳಲ್ಲಿ—ವರ್ಗಗಳಲ್ಲಿ—ವ್ಯಕ್ತಿಗತವಾದ ಶಿಕ್ಷಣವನ್ನು ಹೇಗೆ ಹೊಂದಿಸಿಕೊಳ್ಳಬೇಕೆಂಬುದು ಇಂದಿನ ಶಿಕ್ಷಣ ಪ್ರಪಂಚದಲ್ಲಿ ಒಂದು ದೊಡ್ಡ ಸಮಸ್ಯೆಯಾಗಿದೆ. ಡಾಲ್ಟನ್ ಮೊದಲಾದ ಹೊಸ ಪದ್ಧತಿಗಳು ಈ ಸಮಸ್ಯೆಯನ್ನು ಬಿಡಿಸಲು ಮಾಡಿದ ಸಾಹಸಗಳಾಗಿವೆ. ಉದ್ಯೋಗ ಮೂಲವಾದ ವರ್ಧಾಶಿಕ್ಷಣವೂ ಈ ದೃಷ್ಟಿಯಿಂದ ಕೈಕೊಂಡ ಇತ್ತೀಚಿಗಿನ ಪ್ರಯತ್ನವಾಗಿದೆ.

# ಪರಿಚ್ಛೇದ ೧೧

## ವ್ಯಕ್ತಿವ್ಯಕ್ತಿಗಳಲ್ಲಿರುವ ವಿವಿಧ ವ್ಯತ್ಯಾಸಗಳು

### ‘ ಒಂದು ಮಗುವಿನಂತೆ ಮತ್ತೊಂದು ಮಗುವಿರುವದಿಲ್ಲ ’

ಇಂದಿನ ಶಿಕ್ಷಣವನ್ನು ವಿವೇಚಿಸುವಾಗ್ಗೆ ಎಲ್ಲರೂ ಒಂದೆರಡು ಮಾತುಗಳನ್ನು ಎತ್ತಿ ತೋರಿಸುವದುಂಟು. **ಇಂದಿನ ಶಿಕ್ಷಣದಲ್ಲಿ ಕಲಿಸುವ ಶಿಕ್ಷಕನಿಗಿಂತಲೂ ಕಲಿಯುವ ಮಗುವೇ ಪ್ರಧಾನ. ಕಲಿಸುವ ವಿಷಯ ವಿಧಾನಗಳನ್ನೆಲ್ಲ ಮಗುವಿನ ದೃಷ್ಟಿಯಿಂದಲೇ ವಿಚಾರಿಸಬೇಕು, ನಿಯೋಜಿಸಬೇಕು.** ಇದನ್ನೇ ಒಂದು ಸೂತ್ರರೂಪವಾಗಿಯೂ ಹೇಳುವದುಂಟು:—ಶಿಕ್ಷಕನಿಗೆ ಕಲಿಸುವ ವಿಷಯಜ್ಞಾನವೊಂದೇ ಸಾಲದು; ಕಲಿಯುವ ಮಗುವಿನ ಪೂರ್ಣ ಪರಿಚಯವನ್ನೂ ಆತನು ಮಾಡಿಕೊಳ್ಳಬೇಕು. ಇನ್ನೊಂದು ಮಾತೆಂದರೆ, ಈ ಮಗುವು ಕಟ್ಟಿಗೆಯ ತುಂಡಿನಂತೆ—ಅರಲಿನ ಮುದ್ದೆಯಂತೆ ಮಾಡಿದಂತೆ ಆಗುವ ನಿರ್ಜೀವ ವಸ್ತುವಾಗಿಲ್ಲ. ಮಗುವು ಚೈತನ್ಯ-ಮೂರ್ತಿ. ಆತನಿಗೆ ಹೊರಗೆ ಕಾಣುವ ದೇಹವಿರುವಂತೆ, ಒಳಗೆ ಮನಸ್ಸಿದೆ, ಮೆದುಳಿದೆ, ಹೃದಯವಿದೆ. ಸಂಕ್ಷೇಪತಃ ಹೇಳುವದಾದರೆ, ಪ್ರತಿ

ಯೊಂದು ಮಗುವಿಗೂ ತನ್ನದೇ ಆದ ಸ್ವ-ಭಾವವಿದೆ, ವ್ಯಕ್ತಿತ್ವವಿದೆ. ಇದೇ ಮಾತನ್ನೇ '**ಒಂದು ಮಗುವಿನಂತೆ ಮತ್ತೊಂದು ಮಗುವಿರುವದಿಲ್ಲ**' ವೆಂದು ಮಾರ್ಮಿಕವಾಗಿ ಹೇಳುವದುಂಟು.

ಮಗು-ಮಗುವಿನಲ್ಲಿ ನಿಸರ್ಗತಃ ನೆಲೆಸಿರುವ **ಈ ವ್ಯತ್ಯಾಸವು ಬಹು ಮುಖವಾಗಿದೆ.** ಮಕ್ಕಳ ಮೈಕಟ್ಟಿನಲ್ಲಿ, ಮೈಬಣ್ಣದಲ್ಲಿ, ನಿಲುವಿಕೆಯಲ್ಲಿ ಇರುವ ವ್ಯತ್ಯಾಸವು ತಾನಾಗಿಯೇ ಒಡೆದು ತೋರುವದು. ಅವಳಿ-ಜವಳಿಗಳ ಹೋಲಿಕೆಯಲ್ಲಿಯೂ ಸೂಕ್ಷ್ಮ ದೃಷ್ಟಿಗೆ ಕಿಂಚಿತ್ತಾದರೂ ಭೇದವು ಕಂಡು ಬರುವದು. ರೋಗರುಜೆಗಳಿರದಿದ್ದರೂ, ಹುಟ್ಟಿದಂದಿನಿಂದಲೆ ನಿರ್ಬಲವಾದ ಶರೀರವುಳ್ಳವರು ಕೆಲವರು. ಶಕ್ತಿವಂತ ಮಕ್ಕಳು ಕೆಲವರು. ಚಿಕ್ಕಂದಿನಿಂದಲೆ ಕೆಲವು ಮಕ್ಕಳು ಕಷ್ಟಗಳನ್ನಾಗಲಿ ದುಡಿತವನ್ನಾಗಲಿ ಎದುರಿಸುವ ಶಕ್ತಿಯನ್ನು ತೋರಿಸುವರು. ಕೆಲವು ಮಕ್ಕಳು ಮಾತನಾಡುವದನ್ನು, ನಡೆಯುವದನ್ನು ಬೇಗ ಪ್ರಾರಂಭಿಸುವರು. ಕೆಲವರು ತಡೆದು ತಡವಾಗಿ ಪ್ರಾರಂಭಿಸುವರು. ಕೆಲವರಲ್ಲಿ ಮಾತಿನ ಚಪಲತೆ ಮುತ್ತು ಸುರಿದಂತೆ. ಕೆಲವರಲ್ಲಿ ಮುಗ್ಧತೆ ಇಲ್ಲವೆ ತೊದಲ್ನುಡಿ. ಕೆಲವರ ದೃಷ್ಟಿ ತೀಕ್ಷ್ಣ; ಕಣ್ಣು ಕಾಂತಿಪೂರ್ಣ. ಕೆಲವರ ದೃಷ್ಟಿ ಮಂದ; ಕಣ್ಣು ತೇಜೋವಿಹೀನ. ಕೆಲವರು ಪೂರ್ಣ ಕಿವುಡರು; ಕೆಲವರು ಅರೆಗಿವುಡರು.

ಇವೇ ಮೊದಲಾದ **ಶಾರೀರಿಕ ವ್ಯತ್ಯಾಸಗಳು ಸ್ಥೂಲವಾದವುಗಳು;** ಯಾರಿಗಾದರೂ ಹೊರಗಿನಿಂದಲೇ ಕಾಣತಕ್ಕವುಗಳು. ಆದರೆ **ಮಾನಸಿಕ, ಬೌದ್ಧಿಕ, ಹಾಗೂ ಭಾವನಾತ್ಮಕ ವ್ಯತ್ಯಾಸಗಳು ಪ್ರತಿಯೊಂದು ಮಗುವಿನ 'ಸ್ವಭಾವ' ದಲ್ಲಿ ಅಡಗಿರುವವು,** ಅಪಕವಾಗಿರುವವು. ಮಕ್ಕಳ ಜೀವನದ ಸೂಕ್ಷ್ಮವಾದ ಅನುಭವದಿಂದ, ಅವಲೋಕನದಿಂದ ಇವುಗಳನ್ನು ಕಂಡುಹಿಡಿಯಬೇಕಾಗುವದು. ಮಾನಸಿಕ ವ್ಯತ್ಯಾಸಗಳಲ್ಲಿ ಮೊದಲಿಗೆ ತೋರಿಬರುವದು ಸಹಜ ಪ್ರವೃತ್ತಿಗಳಲ್ಲಿ. ಈ ಸಹಜ ಪ್ರವೃತ್ತಿಗಳು ಶಿಕ್ಷಣದ ಮೂಲ ದ್ರವ್ಯವಾದರೂ, ನಮ್ಮ ಉನ್ನತವಾದ ವಿಚಾರಗಳಿಗೂ ಬೆರಗುಗೊಳಿಸುವ ಬೌದ್ಧಿಕ ಚಟುವಟಿಕೆಗಳಿಗೂ ಇವುಗಳೇ

ಅದೃಶ್ಯವಾಗಿ ಆಧಾರವಾಗಿರುವವು. ಇವು ಹುಟ್ಟುಗುಣಗಳಾಗಿವೆ; ಆನುವಂಶಿಕಗಳಾಗಿವೆ. ಕುತೂಹಲ ಪ್ರವೃತ್ತಿಯನ್ನೇ ತೆಗೆದುಕೊಳ್ಳೋಣ. ಕೆಲವು ಮಕ್ಕಳಲ್ಲಿ ಇದು ಹೆಚ್ಚಾಗಿ ತೋರಿಬರುವದು. ಮೈತುಂಬ ಕಣ್ಣುಗಳಿದ್ದಂತೆ ಅವರಿಗೆ ಎಲ್ಲವೂ ಕಾಣುವದು. ಯಾಕೆ,–ಹೇಗೆ,–ಎಂದು ನೂರಾರು ಪ್ರಶ್ನೆಗಳ ಸುರಿಮಳೆಯನ್ನೇ ಅವರು ಮಾಡುವರು. ಕೆಲವು ಮಕ್ಕಳಲ್ಲಿ ಇದು ತೀರ ಕಡಿಮೆಯಾಗಿ ತೋರಿಬರುವದು. ಕಣ್ಣಿದ್ದೂ ಕುರುಡರಂತೆ ಸುತ್ತಲಿನ ವಸ್ತುಗಳನ್ನೂ ಘಟನೆಗಳನ್ನೂ ಅರಿತುಕೊಳ್ಳುವ ಲವಲವಿಕೆಯೇ ಅವರಲ್ಲಿ ತೋರಿಬರುವದಿಲ್ಲ. ಈ ಜಿಜ್ಞಾಸೆಯು ಜ್ಞಾನ–ವಿಜ್ಞಾನಗಳ ಅಡಿಗಲ್ಲಾಗಿದೆ. ಶಿಕ್ಷಣ ಕಾರ್ಯದಲ್ಲಿ ಇವರ ಸಹಕಾರವು ದೊರೆಯದಿದ್ದರೆ, ಶಿಕ್ಷಕನ ಶ್ರಮವೆಲ್ಲವೂ ನಿರರ್ಥಕವಾಗುವದು. ಸರಿಯಾದ ಜಿಜ್ಞಾಸೆಯನ್ನು ತೃಪ್ತಿಗೊಳಿಸಬೇಕು. ಅವಾಸ್ತವವಾದುದನ್ನು ಹಂಚಿಕೆಯಿಂದ ನಿವಾರಿಸಬೇಕು. ಅವಶ್ಯವಾದುದನ್ನು ತನ್ನ ಕುಶಲತೆಯಿಂದ ಶಿಕ್ಷಕನು ಕೆರಳಿಸಬೇಕು. ರಚನಾ ಪ್ರವೃತ್ತಿಯನ್ನು ಇನ್ನೊಂದು ಉದಾಹರಣೆಯಾಗಿ ಹೇಳಬಹುದು. ಕೆಲವು ಮಕ್ಕಳು ಕೈಕಟ್ಟಿಕೊಂಡು ತೆಪ್ಪಗೆ ಕೂಡುವದನ್ನು ನೋಡುವೆವು. ಕೆಲವು ಮಕ್ಕಳ ಕೈಕಾಲು ಒಂದರಗಳಿಗೆಯಾದರೂ ಏನೂ ಮಾಡದೆ ಸ್ತಬ್ಧವಾಗಿರುವದಿಲ್ಲ. 'ಇದನ್ನು ತೆಗೆದುಕೊ. ಏನಾದರೂ ಮಾಡು'–ಎಂದು ಒಳಗಿನಿಂದಲೆ ಸ್ವಾಭಾವಿಕವಾದ ಒಲವು ಅವರನ್ನು ಚಟುವಟಿಕೆಯಲ್ಲಿ ತೊಡಗಿಸುತ್ತದೆ. ಈ ಒಲವಿಗೆ ಸರಿಯಾದ ಸಲಕರಣೆಗಳನ್ನು ಮಾಂಟಿಸೋರಿಯವರು ಕಲ್ಪಿಸಿರುವರು. ಮಕ್ಕಳಲ್ಲಿ ಹೆಚ್ಚುಕಡಿಮೆಯಾಗಿ ತೋರಿಬರುವ ಈ ಕೃತಿಪ್ರೇಮವನ್ನು ಶಿಕ್ಷಕನು ಗುರುತಿಸಬೇಕು. ಉಚಿತವಾದ ಸಾಧನಗಳಿಂದ ಸರಿಯಾದ ರೀತಿಯಲ್ಲಿ ಅದನ್ನು ಬೆಳಸಬೇಕು. ಮೂಲ ಶಿಕ್ಷಣವು ಈ ರಚನಾ ಪ್ರವೃತ್ತಿಯನ್ನೇ ಹೆಚ್ಚಾಗಿ ಅವಲಂಬಿಸಿದೆ. **ಈ ಸಹಜ ಪ್ರವೃತ್ತಿಗಳ ಶಕ್ತಿಯು ಚಿಕ್ಕಮಕ್ಕಳಲ್ಲಿ ಮೊದಲಿನಿಂದಲೂ ಹೆಚ್ಚುಕಡಿಮೆಯಾಗಿ ತೋರಿಬರುವಂತೆ ಅವುಗಳು ಪ್ರಕಟವಾಗುವ ಸಮಯವೂ ಹಿಂದುಮುಂದೆಯಾಗಿರುವದು ಕಂಡುಬರುವದು.** ಶಿಕ್ಷಕನು ಇದನ್ನು

ಸೂಕ್ಷ್ಮ ನಿರೀಕ್ಷಣೆಯಿಂದ ಕಂಡುಹಿಡಿಯಬೇಕು. ಇಲ್ಲವಾದರೆ—'ತತಿ' ತಪ್ಪಿಸಿ ಬಿತ್ತಿದ ಬೆಳೆಯಂತೆ, ವಯಸ್ಸಾದಮೇಲೆ ಸಂಗೀತ ಕಲಿಯುವ ಸಾಹಸದಂತೆ, ಆತನ ಶ್ರಮವೆಲ್ಲವೂ ನಿರರ್ಥಕವಾಗುವದು.

ಊಹೆ, ಸ್ಮರಣ, ಕಲ್ಪನಾ ಮೊದಲಾದ ಬೇರೆ ಮಾನಸಿಕ ಶಕ್ತಿಗಳಲ್ಲಿಯೂ ಚಿಕ್ಕಮಕ್ಕಳಲ್ಲಿ ಹೆಚ್ಚುಕಡಿಮೆ ಪ್ರಮಾಣವು ಕಂಡುಬರುವದು. ಕೆಲವು ಮಕ್ಕಳಲ್ಲಿ 'ಮುನ್ನೋಟ'ವು ಮೊದಲಿನಿಂದಲೂ ಕಾಣುವದು. ಹೀಗಿದ್ದರೆ ಹೀಗಾಗಬಹುದೆಂಬದನ್ನು ಅವರು ಕೂಡಲೇ ತರ್ಕಿಸುವರು, ತಿಳಿದುಕೊಳ್ಳುವರು. ಇಂಥವರಲ್ಲಿ ಗ್ರಾಹಕಶಕ್ತಿಯೂ ಹೆಚ್ಚಿರುವದು. ಹೊಸ ವಿಷಯವನ್ನು ಹಿಂದೆ ಕಲಿತುದಕ್ಕೆ ಸುಲಭವಾಗಿ, ಶೀಘ್ರವಾಗಿ ಹೊಂದಿಸಿಕೊಳ್ಳುವರು. ಕೆಲ ಮಕ್ಕಳಲ್ಲಿ ಸ್ಮರಣಶಕ್ತಿಯು ಪ್ರಭಾವಶಾಲಿಯಾಗಿರುವದು. ಹಿಂದೆ ಎಂದೋ ಕೇಳಿ ನೋಡಿದುದನ್ನು ಅವರು ಬಹುಕಾಲದವರೆಗೆ ಅಚ್ಚಳಿಯದೆ ನೆನಪಿನಲ್ಲಿಡುವರು. ಕೆಲವರು ಬೇಗನೆ ಬಾಯಿಪಾಠ ಮಾಡುವರು; ಬೇಗನೆ ಅದನ್ನು ಮರೆತುಬಿಡುವರು. ಕೆಲವರಲ್ಲಿ ಕಲ್ಪನೆಯ ವೇಗ ಹೆಚ್ಚು. ವರ್ಗದಲ್ಲಿ ಕಥೆ ಹೇಳುವಾಗ್ಗೆ ಇಂಥವರನ್ನು ಕೂಡಲೇ ಕಂಡುಹಿಡಿಯಬಹುದು. 'ಆ ಬಡಹುಡುಗನಿಗೆ ರೊಕ್ಕದ ಕೈಚೀಲ ಬೀದಿಯಲ್ಲಿ ಸಿಕ್ಕಿತು........ಆತನು ಮುಂದೇನು ಮಾಡಿರಬಹುದು?'—ಈಬಗೆಯ ಪ್ರಶ್ನೆಗಳಿಗೆ ಇವರು ಕೂಡಲೇ ಸಮರ್ಪಕ ಉತ್ತರಗಳನ್ನು ಕೊಡುವರು. ಕೆಲವರಲ್ಲಿ ಹೊಗಳಿಕೆಯಿಂದ, ಕೆಲವರಲ್ಲಿ ಹೀಯಾಳಿಕೆಯಿಂದ ಕಾರ್ಯ ಪ್ರವೃತ್ತಿಯನ್ನು ಹುಟ್ಟಿಸಬಹುದು. ಕೆಲವರು ಉತ್ಸಾಹಿಗಳು, ಸದಾ ನಗುಮೋರೆ. ಕೆಲವರು ನಿರುತ್ಸಾಹಿಗಳು, ಸದಾ ಜೋಲುಮೋರೆ. ಕೆಲವರ ಆಸ್ಥೆ—ಅವಧಾನಗಳು ಕೇಂದ್ರೀಕೃತವಾದವುಗಳು. ಇವರು ತಿಳಿದುಕೊಳ್ಳುವ ವಿಷಯ ವ್ಯಾಪ್ತಿ ಕಿರಿದು, ಆದರೆ ಜ್ಞಾನದ ಆಳ ಹೆಚ್ಚು. ಕೆಲವರ ಆಸ್ಥೆ ಅವಧಾನಗಳು ವಿಕೇಂದ್ರೀಕೃತವಾದವುಗಳು. ಇಂಥವರು ಅನೇಕ ವಿಷಯಗಳಲ್ಲಿ ಆಸ್ಥೆ ವಹಿಸುವರು. ಆದರೆ ಜ್ಞಾನದ ಆಳ ಕಡಿಮೆ. ಕೆಲವರದು 'ಪಿತ್ತ' ಪ್ರಕೃತಿ; ಸಿಟ್ಟು ಅವರ ಮೂಗಿನ ತುದಿಯ ಮೇಲೆ. ಕೆಲವರು ಪ್ರಶಾಂತ ಮೂರ್ತಿಗಳು.

**ಇವೆಲ್ಲ ಉದಾಹರಣೆಗಳನ್ನು ನೋಡಿದರೆ, 'ವ್ಯಕ್ತಿ' ಗೊಂದು 'ಪ್ರಕೃತಿ' ಯೆಂದು ಹೇಳಬೇಕಾಗುವದು.** ಇಂಥ 'ಪ್ರಕೃತಿ' ಯ ಪ್ರಕಾರಗಳು ಅನಂತವಾಗಿ ತೋರಬಹುದು. **ಕೆಲವು ಮಕ್ಕಳ ಕಲ್ಪನಾ ಶಕ್ತಿಯಲ್ಲಿ ಒಂದು ವೈಶಿಷ್ಟ್ಯವು ಕಂಡುಬರುವದು.** ಕಲ್ಪಿತ ವಸ್ತುವು ಅವರಿಗೆ ಪ್ರತ್ಯಕ್ಷ ವಸ್ತುವಿನಂತೆಯೇ ವಾಸ್ತವವಾಗಿ ತೋರುವದು. ಮಾನಸ ಶಾಸ್ತ್ರಜ್ಞರು ಇನ್ನೊಂದು ಮಹತ್ವದ ಭೇದವನ್ನು ಗುರುತಿಸುವರು–'**ಅಂತ ರ್ಮುಖ**'–ಹಾಗೂ–'**ಬಹಿರ್ಮುಖ**' ರೆಂದು. ಇಂದ್ರಿಯಗಳು ಹೊರಗಿನ ವಸ್ತುಗಳ ಪರಿಚಯವನ್ನು ಮಾಡಿಕೊಡುವವು. ಇವುಗಳಿಂದಾಗುವ ಸಂವೇ ದನೆಗಳಿಗೆಲ್ಲ—ಆ ವಸ್ತುವು ಹೇಗೆಯೇ ಇರಲಿ—ಕೆಲವು ವ್ಯಕ್ತಿಗಳು ತಮ್ಮ ಮನಸಿನಲ್ಲಿಯ ರೂಪವನ್ನೇ ಕೊಡುವರು. ತಮ್ಮ ಭಾವನೆಯ ಬಣ್ಣವನ್ನೇ ಕಾಣುವರು. ಜ್ಞಾನ ಗಳಿಸುವದರಲ್ಲಿ ಈ ಜನರು ಜ್ಞಾನದ ವಸ್ತುವನ್ನು, ಇದ್ದಕಿದ್ದಂತೆ ನೋಡದೆ ಸ್ವಾನುಭವದ ಬಣ್ಣದ ಕಾಜಿನಿಂದ ಅದನ್ನು ಕಾಣು ವರು. ಇಂಥವರು 'ಅಂತರ್ಮುಖ' ರಾದ ಜನರು. ಇದಕ್ಕೆ ವಿಪರೀತವಾಗಿ ಇರುವವರು 'ಬಹಿರ್ಮುಖ' ರಾದವರು. ಇವರಿಗೆ ಹೊರಗಿನ ವಸ್ತುವು ಮನಸ್ಸಿನ ಯಾವ ಉಪಾಧಿಗೂ ಒಳಗಾಗದೆ ಇದ್ದಕ್ಕಿದ್ದಂತೆ ತೋರುವದು. ಬಹಿರ್ಮುಖರಾದ ಈ ವಾಸ್ತವವಾದಿಗಳಿಗೆ ತಮಗಿಂತಲೂ ಹೊರಗಿನ ವಸ್ತುವೇ ಹೆಚ್ಚು ಪ್ರಧಾನವಾದುದು. ಪೌರ್ವಾತ್ಯರಾದ ನಾವು ಹೆಚ್ಚಾಗಿ ಅಂತರ್ಮುಖರೆಂತಲೂ ಪಾಶ್ಚಿಮಾತ್ಯರು ಹೆಚ್ಚಾಗಿ ಬಹಿರ್ಮುಖರೆಂತಲೂ ಹೇಳುವದುಂಟು. ಬಹಿರ್ಮುಖರಾದ ಜನರು ಲೌಕಿಕ ವ್ಯವಹಾರದಲ್ಲಿ ಹೆಚ್ಚು ಯಶಸ್ವಿಯಾಗಬಹುದು. ಹೊರಗಿನ ಪ್ರತ್ಯಕ್ಷ ವಸ್ತುಗಳಷ್ಟೇ ಅಂತ ರಂಗದ ಭಾವಗಳೂ ವಿಚಾರಗಳೂ ನೈಜವಾದ ಸಂಗತಿಗಳಾಗಿರುವವು. ಅಂತರ್ಮುಖ, ಬಹಿರ್ಮುಖರಿಬ್ಬರಿಗೂ ಜಗತ್ತಿನಲ್ಲಿ ಸ್ಥಾನವಿದೆ, ಕಾರ್ಯ ವಿದೆ. **ನಿಸರ್ಗದ ಯಾವ ವಿಭಾಗಗಳೂ ತೀರ ವಿರುದ್ಧವಾಗಿರುವದಿಲ್ಲ, ಅಂಚಿನಲ್ಲಿ ಒಂದಕ್ಕೊಂದು ಬೆರೆತುಕೊಂಡಿರುವವು.** ಇಷ್ಟೊಂದು ಮಾನಸಿಕ ವಿವಿಧತೆ ವ್ಯತ್ಯಾಸಗಳು ತೋರಿಬಂದರೂ ವ್ಯಕ್ತಿಗಳಲ್ಲಿ ಅವು ಒಂದ

ಕ್ಕೊಂದು ಬೆರೆತುಕೊಂಡಿರುವದು ಕಂಡುಬರುವದು. ಇದೇ ಮೇರೆಗೆ **ಬುದ್ಧಿ ಶಕ್ತಿಯಲ್ಲಾದರೂ, ಒಂದು ಮಗುವಿನಂತೆ ಮತ್ತೊಂದು ಮಗುವಾಗಿರುವದಿಲ್ಲ.** ಹುಟ್ಟಿದಂದಿನಿಂದಲೇ ಮಕ್ಕಳಲ್ಲಿ ಮಾನಸಿಕ ಒಲವುಗಳಂತೆ ಬುದ್ಧಿಯ ಒಲವುಗಳೂ ಬೇರೆ. ಬುದ್ಧಿಶಕ್ತಿಯ ಪ್ರಮಾಣವೂ ಹೆಚ್ಚುಕಡಿಮೆಯಾಗಿರುವದು. ಶಿಕ್ಷಣ–ಅನುಭವಗಳಿಂದ ಬದಲಿಸದಂತೆ ಸ್ಥಿರವಾಗಿರುವದು. ಈ ಬುದ್ಧಿಶಕ್ತಿಯ ಸ್ವರೂಪವನ್ನೂ ವ್ಯತ್ಯಾಸಗಳನ್ನೂ ಹಿಂದೆ ಸಾಕಷ್ಟು ವಿವೇಚಿಸಿದೆ.

ಮಗು–ಮಗುವಿನಲ್ಲಿ ತೋರಿಬರುವ **ಈ ವ್ಯತ್ಯಾಸಗಳಿಗೆ ಎರಡು ಮೂಲಕಾರಣಗಳು– (೧) ಆನುವಂಶಿಕತೆ; (೨) ಪರಿಸ್ಥಿತಿಯ ಪ್ರಭಾವ.** ಆನುವಂಶಿಕತೆ :– ಶರೀರದಲ್ಲಿ ಮಗನು ತಂದೆಯನ್ನು ಪೂರ್ಣವಾಗಿ ಹೋಲುವಂತಿದ್ದರೆ, 'ಅಪ್ಪನ ಮೋರೆ ಹರಿದು ಹಚ್ಚಿದಂತಿದೆ' ಎಂತಲೂ, ಗುಣಗಳಲ್ಲಿ ಹೋಲುತ್ತಿದ್ದರೆ, 'ಅಪ್ಪನ ಗುಣಗಳೆಲ್ಲ ಮಗನಲ್ಲಿ ಇಳಿದುಬಂದಿವೆ'–ಎಂತಲೂ ದಿನದ ಮಾತಿನಲ್ಲಿ ನಾವು ಆಗಾಗ್ಗೆ ಹೇಳುವದುಂಟು. ಹೀಗೆ **ತಂದೆಯಿಂದ ಮಗನಿಗೆ ಸಾಗಿಬರುವ ಶಾರೀರಿಕ ಮಾನಸಿಕ ಸಾಮ್ಯತೆಯೆ ಆನುವಂಶಿಕತೆ.** ಸಹಜ ಪ್ರವೃತ್ತಿಗಳು ಆನುವಂಶಿಕಗಳೆಂದು ಹೇಳುವರು. ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿಬಂದ ಜನಾಂಗದ ಜೀವನರೂಢಿಗಳಿವು. **'ಸದೃಶವು ಸದೃಶವನ್ನೇ ಹುಟ್ಟಿಸುವದು'**–ಎನ್ನುವದು ಆನುವಂಶಿಕತೆಗೆ ಆಧಾರವಾಗಿದೆ. ಜನನ ಪರಂಪರೆಯಲ್ಲಿ ಕೆಲವೊಂದು 'ಕಣಗಳು' ವಿಕಾರ ಹೊಂದದೆ, ಹುಟ್ಟುವ ಜೀವಿಗೆ ಸಾಗಿಸಲ್ಪಡುವವು. ಇವುಗಳೇ ಆನುವಂಶಿಕತೆಯ ಮೂಲ ದ್ರವ್ಯಗಳು. ಸಾಮ್ಯತೆಯ ಸ್ಥಿರತೆ, ಸಂರಕ್ಷಣೆಗಳಾದರೂ ಇವುಗಳಿಂದಲೇ. 'ಸತ್ತು ಹುಟ್ಟುವ, ಹುಟ್ಟಿ ಹಿಂಗುವ'– ಈ ತೊಡಕಿನಲ್ಲಿ ಇವುಗಳಿಂದ ಏಕರೂಪತೆ, ಏಕಸೂತ್ರತೆಯು ಉಂಟಾಗುವದು. ಆದರೆ **ಸ್ವಸಂಪಾದಿತವಾದ ಗುಣಗಳೂ ಶಕ್ತಿಗಳೂ ಆನುವಂಶಿಕವಾಗಿ ಉಳಿಯುವವೆ ?**–ಎಂಬ ಬಗ್ಗೆ ವಿಜ್ಞಾನಿಗಳಲ್ಲಿ ಮತಭೇದದ ತಿಕ್ಕಾಟವಿದೆ. ಇಲಿಗಳ ಬಾಲಗಳನ್ನು

ಕಡಿದು ಅವುಗಳಿಂದ ಹುಟ್ಟುವ ಸಂತತಿಯು ಬಾಲಗಳಿಂದ ಯುಕ್ತವಾದು ದೆಂದು ಕಂಡು ಹಿಡಿದು ಸ್ವಸಂಪಾದಿತ ಅಂಶಗಳು ಆನುವಂಶಿಕಗಳಾಗಲಾ ರವು—ಎಂದು ಕೆಲವರು ತೋರಿಸಲೆತ್ನಿಸಿರುವರು. ತಂದೆತಾಯಿಗಳಲ್ಲಿ ಕಂಡು ಬರುವ '**ಮುನ್ನುಗ್ಗುವ**' ಇಲ್ಲವೆ '**ಹಿಂದೆ ಸರಿಯುವ**' **ಅಂಶಗಳು** ಕೆಲವೊಂದು ಪ್ರಮಾಣ—ಸರದಿಗಳಲ್ಲಿ ಮುಂದಿನ ಸಂತತಿಗಳಲ್ಲಿ ಪ್ರಕಟವಾಗುವ ವೆಂದು ಬೇರೆ ಕೆಲವರು ಹೂಬೀಜಗಳಿಂದ ಮಾಡಿದ ಪ್ರಯೋಗಗಳಿಂದ ಕಂಡು ಹಿಡಿದಿರುವರು.

ಡಾರ್ವಿನ್‌ನ **ಉತ್ಕ್ರಾಂತಿವಾದದಿಂದಲೂ** ಆನುವಂಶಿಕತೆಯನ್ನು ತಿಳಿದುಕೊಳ್ಳುವದುಂಟು. '**ಪ್ರಾಣಿವರ್ಗಗಳೆಲ್ಲವೂ ಒಬ್ಬನೇ ಪೂರ್ವಜ ನಿಂದ ಇಲ್ಲವೇ ತಮ್ಮ ತಮ್ಮ ಪೂರ್ವಜರಿಂದ ಹುಟ್ಟಿ ಬೆಳೆದು ಬಂದ ವುಗಳು. ಕೆಳಗಿನ ಮಟ್ಟದಿಂದ ಮೇಲಿನ ಮಟ್ಟಕ್ಕೆ ಅವು ಕ್ರಮಶಃ ಬಂದಿವೆ**' ಎಂದು ಹೇಳುವದೆ ಉತ್ಕ್ರಾಂತಿಯು. ಉತ್ಕ್ರಾಂತಿ ತತ್ವದ ಮೇರೆಗೆ, ಶಾರೀರಿಕ ವಿಕಾಸವು ಆನುವಂಶಿಕವಾಗಿ ಸಾಗಿ ಬಂದಂತೆ ಮನೋ ಘಟನೆಯು ಮೇಲ್ತರಗತಿಯದಾಗುತ್ತ ಬಂದಿರುವದೆಂದು ಹೇಳಬಹುದು. ಮಂಗನಿಂದ ಮನುಷ್ಯನಾದುದು, ಜಿರಾಫ ಪ್ರಾಣಿಯ ಕುತ್ತಿಗೆಯು ಇಷ್ಟು ದಿರ್ಘವಾದುದು ಉತ್ಕ್ರಾಂತಿಯಿಂದ. ಜಿರಾಫ ಪ್ರಾಣಿಯು ಮೊದಲು ತನಗೆ ನಿಲುಕುವಷ್ಟು ಎಲೆ ತಿನ್ನುತ್ತಿತ್ತು. ಮುಂದೆ ಈ ಪ್ರಾಣಿಗಳ ಸಂಖ್ಯೆ ಹೆಚ್ಚಾಗಹತ್ತಿತು. ಸಾಮಾನ್ಯ ಜಿರಾಫದ ಅಳವಿಗೆ ನಿಲುಕುವ ಎಲೆಕಂಟೆ ಗಳೆಲ್ಲವೂ ತೀರಿಹೋದವು. ಇಂಥವುಗಳಿಗೆ ಆಹಾರ ದೊರೆಯದಂತಾ ಯಿತು. ಇದ್ದವುಗಳಲ್ಲಿಯೇ ಎತ್ತರವಾದವುಗಳು ಮಾತ್ರ ತಮ್ಮ ಕತ್ತನ್ನು ಮುಂದೆ ಚಾಚಿ ಆಹಾರ ದೊರಕಿಸಿಕೊಳ್ಳಲು ಸಮರ್ಥವಾದವು. ಪರಿಸ್ಥಿತಿ ಯೊಡನೆ ಸಾಗಿದ ಈ ಜೀವನ ಸಂಗ್ರಾಮದಲ್ಲಿ ಉದ್ದ ಕುತ್ತಿಗೆಯು ಅವುಗಳಿಗೆ ಅಗತ್ಯವಾಯಿತು. ಹೇಗೋ ಪಡೆದುಕೊಂಡು ಬಂದ ಉದ್ದ ಕುತ್ತಿಗೆಯ ಒಂದು ಸ್ವಾಭಾವಿಕ ವ್ಯತ್ಯಾಸವುಳ್ಳವುಗಳು ಜೀವನ ಪ್ರವಾಹದಲ್ಲಿ ಪರಿಸ್ಥಿತಿಯ ಪ್ರಭಾವದಿಂದ ಅದನ್ನೇ ಬೆಳಿಸಿಕೊಂಡು ಉಳಿದುಕೊಂಡವು. ಇದನ್ನು ಪಡೆದು

ಕೊಳ್ಳದವುಗಳೆಲ್ಲ ಅಳಿದುಹೋದವು. **ಡಾರ್ವಿನ್ನನು ಪ್ರಾಣಿಯನ್ನು ಪರಿಸ್ಥಿತಿಗೆ ಸಂಪೂರ್ಣವಾಗಿ ಅಧೀನವನ್ನಾಗಿ ಮಾಡಿರುವನು. ಪರಿಸ್ಥಿತಿಯೇ ಪ್ರಧಾನ.** ಅದರ ಪ್ರಭಾವದಿಂದಲೆ ಪ್ರಾಣಿಯು ತನ್ನ ಶರೀರದ ರಚನೆಯಲ್ಲಿ ಜೀವನದ ರೀತಿಯಲ್ಲಿ ವಿಕಾಸವನ್ನು ಸಾಧಿಸಿಕೊಳ್ಳುವದೆಂದು ಆತನ ಅಭಿಪ್ರಾಯವು. ಆದರೆ–ಲ್ಯಾಮಾರ್ಕನೆಂಬವನ ವಿಚಾರ ಸರಣಿಯು ಇದಕ್ಕೆ ವಿಭಿನ್ನವಾಗಿದೆ. '**ಬಾಳಬೇಕು-ಬದುಕಬೇಕು**'**ಎನ್ನುವ ಪ್ರಬಲೇಚ್ಛೆಯು ಪ್ರತಿಯೊಂದು ಪ್ರಾಣಿಯಲ್ಲಿ ಕಂಡುಬರುವದು.** ಇದುವೇ ಪ್ರಾಣಶಕ್ತಿ–ಚೈತನ್ಯ. ಪ್ರಾಣಿಯು ಪರಿಸ್ಥಿತಿಯೊಡನೆ ತನ್ನ ಜೀವನದ ರಕ್ಷಣೆಗಾಗಿ ಹೋರಾಡುವದು. ಇದಕ್ಕಾಗಿ ಅವಶ್ಯವಿದ್ದ ವ್ಯತ್ಯಾಸಗಳನ್ನು ತನ್ನ ಶರೀರ ರಚನೆಯಲ್ಲಿಯೂ ಮಾಡಿಕೊಳ್ಳುವದು, ಹೊಸ ಶಕ್ತಿಗಳನ್ನೂ ಸಂಪಾದಿಸುವದು. ಸ್ವಸಂಪಾದಿತವಾದ ಈ ವ್ಯತ್ಯಾಸಗಳೂ ಹಾಗೂ ಶಕ್ತಿಗಳೂ ಅಂಶತಃ ಆದರೂ ಆನುವಂಶಿಕವಾಗಿ ಸಾಗಿಬರುವವೆಂದು–ಎಷ್ಟೇ ಮತಭೇದವಿದ್ದರೂ–ಇಂದಿನ ವಿಜ್ಞಾನಿಗಳು ನಂಬುವರು. **ಲ್ಯಾಮಾರ್ಕನು ಪರಿಸ್ಥಿತಿಯನ್ನು ಪ್ರಾಣಿಗಳಿಗೆ ಅಧೀನವಾಗಿ ಮಾಡಿರುವನು. ಪ್ರಾಣಶಕ್ತಿ–ಚೈತನ್ಯವೇ ಪ್ರಧಾನವಾದುದು.** ಜೀವನದ ರೀತಿ–ರೂಢಿಗಳಲ್ಲಿ ಹಾಗೂ ಶರೀರ ರಚನೆಯಲ್ಲಿ ಚೈತನ್ಯವು ತನಗೆ ಅವಶ್ಯವೆನಿಸಿದುದನ್ನು ಸಾಧಿಸಿಕೊಳ್ಳುವದು. ಆಧುನಿಕ ಶಿಕ್ಷಣಶಾಸ್ತ್ರವು ಈ ವಿಚಾರ–ಸರಣಿಯನ್ನೇ ಎತ್ತಿ ಹಿಡಿದಿದೆ. ಇಂದಿನ ಶಿಕ್ಷಣ ತಜ್ಞರು ಈ ತತ್ವವನ್ನೇ ಪುರಸ್ಕರಿಸುವರು.

ಒಂದು ಮಗುವಿನಿಂದ ಮತ್ತೊಂದು ಮಗುವು ಒಲವು–ಶಕ್ತಿಗಳಲ್ಲಿ, ಆಸ್ಥೆ–ಅವಧಾನಗಳಲ್ಲಿ ಹೇಗೆ ಮತ್ತು ಏಕೆ ವಿಭಿನ್ನವಾಗಿರುವದೆಂಬದನ್ನು ಹಿಂದೆ ಹೇಳಿದೆ. ಇಂದಿನ ಶಿಕ್ಷಣವು ಆನುವಂಶಿಕತೆ ಹಾಗೂ ಪರಿಸ್ಥಿತಿ ಇವೆರಡರ ಮರ್ಯಾದೆಯನ್ನು ಅರಿತುಕೊಳ್ಳುವದು. ಎರಡನ್ನೂ ವ್ಯಕ್ತಿ–ವಿಕಾಸದ ತನ್ನ ಧ್ಯೇಯದಲ್ಲಿ ವಿನಿಯೋಗಿಸಿಕೊಳ್ಳುವದು. ಪರಿಸ್ಥಿತಿ, ಆನುವಂಶಿಕತೆ ಇವುಗಳಲ್ಲಿ ಹೆಚ್ಚು ಪ್ರಭಾವಶಾಲಿಯಾದುದು ಯಾವುದು?– ಈ ಪ್ರಶ್ನೆಯು ವಿಜ್ಞಾನಿಗಳಲ್ಲಿ ವಾದಭೂಮಿಯಾಗಿದೆ. ಮಗುವಿನ ಶಿಕ್ಷ

ಣಕ್ಕೆ ನಿಕಟವಾಗಿ ಸಂಬಂಧಿಸಿದ ಈ ವಿಷಯವನ್ನು ಶಿಕ್ಷಕನು ತಕ್ಕಮಟ್ಟಿಗೆ ತಿಳಿದುಕೊಳ್ಳಬೇಕಾಗುವದು. ನಿರ್ದಿಷ್ಟವಾದ ಆನುವಂಶಿಕ ಗುಣಗಳನ್ನು ಒಂದು ತಲೆಮಾರಿನಿಂದ ಮುಂದಿನ ತಲೆಮಾರಿಗೆ ಸಾಗಿಸುವದು ಅಸಾಧ್ಯ ವಾದರೆ ಶಿಕ್ಷಣಕ್ಕಾಗಿ ಪಡುವ ಶ್ರಮ-ಸಾಹಸಗಳೆಲ್ಲವೂ ನಿರರ್ಥಕವೆನಿಸಬಹುದು. ಶಿಕ್ಷಣವೆಂದರೆ ಶ್ರಮಬಟ್ಟು ಸಂಪಾದಿಸಿದ ಆತ್ಮಸಂಸ್ಕಾರ. ತಾಯಿ ತಂದೆ ಗಳು ತಮ್ಮ ಸಂಸ್ಕೃತಿಯ ಉತ್ತಮವಾದ ಅಂಶಗಳನ್ನು ತಮ್ಮ ಮುಂದಿನ ಸಂತಾನಕ್ಕೆ ಸಾಗಿಸಲು ಬಾರದಂತಿದ್ದರೆ ಪ್ರತಿಯೊಂದು ಸಂಸ್ಕೃತಿಯ ವಿಚ್ಛೇದ ವಾಗುವದು. ತಾಯಿ ತಂದೆಗಳು ತಮ್ಮ ಮಕ್ಕಳ ಶಿಕ್ಷಣಕ್ಕಾಗಿ ತೆಗೆದು ಕೊಂಡ ಶ್ರಮವೆಲ್ಲ ನಿರರ್ಥಕವಾಗಿ ಪ್ರತಿಯೊಂದು ಪೀಳಿಗೆಯು ತನ್ನ ಜೀವ ನವನ್ನು ಹೊಸದಾಗಿ ಪ್ರಾರಂಭಿಸಬೇಕಾಗುವದು—ಇದು ಕೇವಲ ಆನುವಂಶಿ ಕತೆಯ ಮೇಲೆಯೆ ಕೈಯೂರಿ ನಿಲ್ಲುವವರ ವಿಚಾರ ಸರಣಿಯಾಗಿದೆ. ಇನ್ನೊಂದು ವಿಚಾರ ಸರಣಿಯು ಹೀಗಿದೆ:—ಮಗುವಿನ ಆತ್ಮವಿಕಾಸಕ್ಕೆ ಅವಶ್ಯವಿರುವ ಪರಿಸ್ಥಿತಿ ಸಹಾಯಗಳನ್ನು ಉಚಿತವಾದ ರೀತಿಯಲ್ಲಿ ಒದಗಿ ಸುವದೇ ಶಿಕ್ಷಣವು. ಆನುವಂಶಿಕತೆಯ ಅಂಶಗಳು ಎಂತಿದ್ದರೇನಾಯಿತು? ಸರಿಯಾದ ಸನ್ನಿವೇಶಗಳಲ್ಲಿ ಸರಿಯಾದ ರೀತಿಯಿಂದ ಸಂಸ್ಕಾರವನ್ನು ಪಡೆ ಯುವ ಮಗುವು ಪ್ರತಿಕೂಲವಾದ ಆನುವಂಶಿಕತೆಯ ಘಟಕಗಳನ್ನು ಮೀರಿ ತನ್ನ ಏಳ್ಗೆಯನ್ನು ಸಾಧಿಸಬಹುದು. ಪರಿಸ್ಥಿತಿ—ಸಂಸ್ಕಾರ—ಶಿಕ್ಷಣ—ಇವುಗಳ ಪ್ರಭಾವದ ದ್ಯೋತಕವಾಗಿ 'ಮಠದಲ್ಲಿಯ ಗಿಳಿ' ಹಾಗೂ 'ಕಟಕನ ಮನೆಯಲ್ಲಿಯ ಗಿಳಿ'—ಇವುಗಳನ್ನು ನಾವು ಲೌಕಿಕ ದೃಷ್ಟಾಂತಗಳಾಗಿ ಹೇಳುವದುಂಟು. ಇವೆರಡೂ ವಿಚಾರಗಳನ್ನೂ ಬದಿಗೆ ಸರಿಸಿ, ಚೈತನ್ಯ ವಾದಿಗಳಾದ ಇಂದಿನ ಶ್ರೇಷ್ಠ ಶಿಕ್ಷಣ ತಜ್ಞರು ಮತ್ತೊಂದು ರೀತಿಯಾಗಿ ಹೀಗೆ ಹೇಳಿರುವರು:—ಮಗುವಿನ ಆತ್ಮವಿಕಾಸದಲ್ಲಿ ಆತನ ಆನುವಂಶಿ ಕತೆಗೂ ಬೆಲೆಯಿಲ್ಲ, ಪರಿಸ್ಥಿತಿಯೂ ಹೆಚ್ಚಿನದಲ್ಲ. ಆತ್ಮವಿಕಾಸದಲ್ಲಿ ಮಗು ವಿನ ಚೈತನ್ಯವೇ ಪ್ರಭಾವಶಾಲಿಯಾದುದು, ಪ್ರಧಾನವಾದುದು. **ಚೈತನ್ಯ ಸ್ವರೂಪಿಯಾದ ಮಗುವು ತನ್ನ ಆನುವಂಶಿಕತೆಯ ಘಟಕಗಳನ್ನೂ**

**ಹಾಗೂ ತನಗೆ ದೊರೆಯುವ ಶಿಕ್ಷಣದ ಸೌಕರ್ಯಗಳನ್ನೂ ತನಗೆ ಬೇಕಾಗುವ ರೀತಿಯಲ್ಲಿ ವಿನಿಯೋಗಿಸಲು ಸಮರ್ಥನಿರುವನು.**

ಪರಿಸ್ಥಿತಿ ಆನುವಂಶಿಕತೆಗಳ ವಾದಭೂಮಿಯಲ್ಲಿ ಹೊಸದೊಂದು ಶಿಕ್ಷಣ ತತ್ವವು ಉದಯಿಸಿದೆ. ಆದಿಯಿಂದ ಇಂದಿನ ವರೆಗೆ ತನ್ನ ವರ್ಗವು ಬೆಳೆದು ಬಂದ ಸ್ಥಿತ್ಯಂತರಗಳ ಪುನರಾವಲೋಕನವನ್ನು ಪ್ರತಿಯೊಂದು ಪ್ರಾಣಿಯು ತನ್ನ ಜೀವನದಲ್ಲಿ ಮಾಡುವದೆಂಬುದು. ಕಪ್ಪೆಯ ದೇಹರಚನೆಯಲ್ಲಿ ಕಂಡು ಬರುವ ಸ್ಥಿತ್ಯಂತರಗಳು ಕಾಲಕ್ರಮದಲ್ಲಿ ಕಪ್ಪೆಯ ಹಿಂದಿನ ರೂಪಗಳಂತೆ. ಮನುಷ್ಯನ ದೇಹರಚನೆಯಲ್ಲಿಯೂ ಕೂಡ, ಹೆಚ್ಚಾಗಿ ಆತನ ಮಾನಸಿಕ ವಿಕಾಸದಲ್ಲಿ ಈ ಮಾತು ನಿಚ್ಚಳವಾಗಿ ಕಂಡುಬರುವದೆಂದು ಈ ತತ್ವದ ಪುರಸ್ಕರ್ತರು ಹೇಳುವರು. ಬಾಲಕರಲ್ಲಿ ಕಂಡು ಬರುವ ಭಾವೋದ್ರೇಕ, ಕಲಹಪ್ರಿಯತೆ, ಆಟಿಗೆ ಅಲಂಕಾರಗಳ ವ್ಯಾಮೋಹ—ಇವೇ ಮೊದಲಾದ ಪ್ರವೃತ್ತಿಗಳು ಹಿಂದಿನ ಕಾಡುಸ್ಥಿತಿಯ ಹೆಗ್ಗುರುತುಗಳೆಂದು ಇವರು ಹೇಳುವರು. ಶಿಕ್ಷಣದ ಶಾಸ್ತ್ರ–ವಿಧಾನಗಳಲ್ಲಿಯೂ ಈ ತತ್ವವು ತನ್ನ ಛಾಯೆಯನ್ನು ಕೆಡಹಿದೆ. ಮಾನವ ಜನಾಂಗದ ಗತಕಾಲದ ಈ ಹೆಗ್ಗುರುತುಗಳನ್ನು ಶಿಕ್ಷಣವು ಅನುಸರಿಸಬೇಕು. ಪೂರ್ವಜರ ಶಿಕ್ಷಣ ಕ್ರಮದಲ್ಲಿ ಇದುವರೆಗೆ ಬೆಳೆದುಬಂದ ಮೆಟ್ಟಲುಗಳನ್ನೇ ಇಂದಿನ ಶಿಕ್ಷಣ ವಿಧಾನವು ಕ್ರಮಶಃ ಅನುಸರಿಸಬೇಕು. ಇದರಿಂದ ಶಿಕ್ಷಣ ಕಾರ್ಯದಲ್ಲಿ ಸಹಜತೆ ಸಫಲತೆಗಳು ತಾವಾಗಿಯೇ ಒದಗುವವೆಂದು ಇವರ ಅಭಿಪ್ರಾಯವಾಗಿದೆ.

ಮಗು–ಮಗುವಿನಲ್ಲಿ ಕಂಡುಬರುವ ಒಲವು ಶಕ್ತಿಗಳ ವಿಭಿನ್ನತೆಯನ್ನೂ, ಅವುಗಳ ಕಾರಣವನ್ನೂ, ಶಿಕ್ಷಣ ಶಾಸ್ತ್ರ–ವಿಧಾನಗಳಲ್ಲಿ ಅವುಗಳಿಂದ ಉಂಟಾದ ಪರಿಣಾಮವನ್ನೂ ಇದುವರೆಗೆ ಹೇಳಿದೆ. ಬೆಳೆಯುವ ಮಕ್ಕಳ ವಿವಿಧವಾದ ಒಲವು ಶಕ್ತಿಗಳಿಗೆ ಅನುಗುಣವಾಗಿ ಸಾಗುವಂತೆ ಆಧುನಿಕ ಶಿಕ್ಷಣವು ಕೆಲವು ಹೊಸ ಪದ್ಧತಿಗಳನ್ನು ಕಟ್ಟಿದೆ. ಕಿಂಡರ ಗಾರ್ಟನ್, ಮೊಂಟೀಸೋರಿ, ಡಾಲ್ಟನ್ ಪದ್ಧತಿಗಳನ್ನು ಮೊದಲು ಮಾಡಿಕೊಂಡು ಇಂದಿನ ಮೂಲ ಶಿಕ್ಷಣ ಯೋಜನೆಯ ವರೆಗೆ ಈ ಹೊಸ ಪದ್ಧತಿಗಳ ಪರಂಪರೆಯು ಬೆಳೆದು ಬಂದಿದೆ. ಇವುಗಳ ವಿವೇಚನೆಯನ್ನು ಬೇರೊಂದು ಪರಿಚ್ಛೇದದಲ್ಲಿ ಮಾಡಿದೆ.

## ಪರಿಚ್ಛೇದ ೧೨

### ಶಿಕ್ಷಣದಲ್ಲಿ ವ್ಯಕ್ತಿಯೂ ವರ್ಗವೂ.

ಕಲಿಯುವವರಲ್ಲಿಯೂ ಕಲಿಸುವವರಲ್ಲಿಯೂ ವ್ಯಕ್ತಿತತ್ವವು ಪ್ರಧಾನವಾದುದೆಂದು ಹಿಂದೆ ಹೇಳಿದೆ. ಒಲವುಗಳ ವಿವಿಧತೆಯಲ್ಲಿಯೂ ಬುದ್ಧಿಶಕ್ತಿಯ ಹೆಚ್ಚುಕಡಿಮೆಯಲ್ಲಿಯೂ ಈ ವ್ಯಕ್ತಿತತ್ವವು ವ್ಯಕ್ತವಾಗುವದು. ಮಗುವು ವ್ಯಕ್ತಿಶಃ ಕಲಿಯದಿದ್ದರೆ ಕಲಿಸಿದಂತಾಗದು. ವರ್ಗದ ನಾಲ್ಕೆಂಟು ಹುಡುಗರು ಒಳ್ಳೇ ವಿಶಾರದರಾಗಿರಬಹುದು. ತಮ್ಮ ಯಶಸ್ಸಿನಿಂದ ವರ್ಗಕ್ಕೂ ಸಂಸ್ಥೆಗೂ ಕೀರ್ತಿಯನ್ನು ತಂದುಕೊಡಬಹುದು. ಆದರೆ 'ತಮ್ಮ' ಮಕ್ಕಳು ಎಷ್ಟು ಕಲಿತಿರುವರೆಂಬ ಬಗ್ಗೆ ಮಾತ್ರ ಪ್ರತಿಯೊಬ್ಬ ತಾಯಿ-ತಂದೆಗಳು ಆತುರರಾಗಿರುವರು. ಶಾಲೆಯ ಯೋಗ್ಯತೆಯನ್ನಾಗಲಿ, ಶಿಕ್ಷಕನ ಪಾತ್ರತೆಯನ್ನಾಗಲಿ ಇದೇ ಒರೆಗಲ್ಲಿನಿಂದಲೇ ತಾಯಿತಂದೆಗಳು ಅಳೆದು ನೋಡಬಹುದು. ಅಂತೆಯೇ ವರ್ಗದಲ್ಲಿರುವ ಮಗುವೂ ವ್ಯಕ್ತಿಶಃ ಕಲಿಯದಿದ್ದರೆ ಕಲಿಸಿದಂತಾಗದೆಂದು ಹೇಳುವದುಂಟು. **ಈ ವ್ಯಕ್ತಿತತ್ವದ ಮಹಿಮೆಯನ್ನು ಎಲ್ಲರೂ ಒಪ್ಪಿಕೊಳ್ಳುವಂತಿದೆ.** ಇಂದಿನ ಮಾನಸಶಾಸ್ತ್ರವು ಸಪ್ರಮಾಣವಾಗಿ, ಸಪ್ರಯೋಗವಾಗಿ ಅದನ್ನು ಸಿದ್ಧಮಾಡಿಕೊಟ್ಟಿದೆ. ಆದರೆ ವ್ಯಕ್ತಿಯು ಒಂಟಿಗನಾಗಿ ಬಾಳಲಾರನು. ಸಜಾತೀಯರೊಡನೆ ಹೊಂದಿಕೊಂಡು ಹೋಗುವ ಸಾಮಾಜಿಕ ಸೂತ್ರಗಳು ವ್ಯಕ್ತಿಯ ಜೀವನ ತಂತುಗಳಲ್ಲಿ 'ಸಹಜ'ವಾಗಿ ಹೆಣೆದುಕೊಂಡಿವೆ. ವ್ಯಕ್ತಿಯ ಸ್ವಭಾವದಲ್ಲಿರುವ ಈ ಸಾಮಾಜಿಕ ಒಲವುಗಳಿಗೆ ಅನುವು ದೊರೆಯದಿದ್ದರೆ ಆತನ ಜೀವನವು ಅಪೂರ್ಣವೂ ಆಗಬಹುದು. ವ್ಯಕ್ತಿಗಳ ಒಲವು-ವೃತ್ತಿಗಳು, ಬುದ್ಧಿಶಕ್ತಿಗಳು, ವಿವಿಧವಾಗಿರುವದು ನಿಜ. **ಆದರೆ ಅವುಗಳ ವಿವಿಧತೆಯಲ್ಲಿ ಒಂದನ್ನೊಂದು ಬೆರೆತುಕೊಳ್ಳುವ ಗುಣವಿದೆ.** ಹೀಗೆ ಬೆರೆತುಕೊಳ್ಳುವದರಿಂದಲೇ ಅವು ಬಲಿಯುತ್ತವೆ. ವ್ಯಕ್ತಿಯಲ್ಲಿರುವ ಸಾಮಾಜಿಕ ಜೀವನದ ಬೀಜವೇ ಇದಾಗಿದೆ. ಈ ಸಾಮಾಜಿಕ ಸಂಬಂಧದಿಂದಲೇ ವ್ಯಕ್ತಿಗಳನ್ನೆಲ್ಲ ಕೆಲವೊಂದು ಉದ್ದೇಶಕ್ಕಾಗಿ 'ವರ್ಗ'ಗಳನ್ನಾಗಿ ಮಾಡಲು ಬರುವಂತಿದೆ. ಶಿಕ್ಷಣದಲ್ಲಿ ಕಾಣುವ ವರ್ಗಗಳಿಗೂ ಈ ತತ್ವವೇ ನೆಲೆಯಾಗಿದೆ.

ವ್ಯಕ್ತಿವರ್ಗಗಳ ಈ ವಿಮರ್ಶೆಯು ಶಿಕ್ಷಣಶಾಸ್ತ್ರಕ್ಕೆ ನಿಕಟವಾಗಿ ಸಂಬಂಧಿಸಿದ ವಿಷಯವಾಗಿದೆ. ಶಿಕ್ಷಣವು ಸಫಲವಾಗಬೇಕಾದರೆ ಅದು ಕೇವಲ ವ್ಯಕ್ತಿಗತವಾಗಬೇಕೆಂದು ಸಾಧಿಸುವವರು ಕೆಲವರು. ಇವರನ್ನು 'ಕೇವಲ ವ್ಯಕ್ತಿವಾದಿ' ಗಳೆಂದು ಕರೆಯಬಹುದು. ವ್ಯಕ್ತಿತತ್ವಕ್ಕೆ ವಿಶೇಷವಾಗಿ ಮನ್ನಣೆಯನ್ನು ಕೊಡದ ಸಾಂಪ್ರದಾಯಿಕ ಪ್ರಾಚೀನರು ಅನೇಕರು. ಇತ್ತ ಕಡೆಗೆ ವ್ಯಕ್ತಿತತ್ವವನ್ನು ಅಲ್ಲಗಳೆಯುವಂತಿಲ್ಲ; ವರ್ಗವನ್ನು ಸಂಪೂರ್ಣವಾಗಿ ನಿರಾಕರಿಸುವಂತಿಲ್ಲ. ಹೀಗೆ ವ್ಯಕ್ತಿವರ್ಗಗಳೆರಡನ್ನು ಸಮನ್ವಯಿಸುವ ಮಧ್ಯಮಾರ್ಗಾವಲಂಬಿಗಳು ಕೆಲವರು. ವ್ಯಕ್ತಿವರ್ಗಗಳನ್ನು ಪರಸ್ಪರ ಪೋಷಕವಾಗುವಂತೆ ಹೊಂದಿಸಲು ವಿವಿಧವಾದ ಯೋಜನೆಗಳನ್ನು ಕಲ್ಪಿಸಿದ ಇತ್ತೀಚಿನ ಶಿಕ್ಷಣವೇತ್ತರೇ ಇವರಾಗಿರುವರು. ಹೀಗೆ ವ್ಯಕ್ತಿವರ್ಗಗಳ ವಿಚಾರಣೆಯಲ್ಲಿ ಭಿನ್ನಾಭಿಪ್ರಾಯಗಳನ್ನು ಕಟ್ಟಿಕೊಂಡ ಈ ಶಿಕ್ಷಣವೇತ್ತರು ತಮ್ಮೊಳಗೆಯೇ ಅನೇಕ 'ವರ್ಗ'ಗಳನ್ನು ಮಾಡಿಕೊಂಡಿರುವರು!!

ವ್ಯಕ್ತಿತತ್ವವನ್ನು ಒಪ್ಪಿಕೊಂಡು, ಒಲವು ಶಕ್ತಿಗಳ ಭಿನ್ನತೆಯನ್ನು ಪೂರ್ಣವಾಗಿ ನಂಬಿ, ಇಂದಿನ ಹೊಸಹಾದಿಯನ್ನೇ ಹಿಡಿದು ಹೊರಟರೂ ಶಿಕ್ಷಣದಲ್ಲಿ 'ವರ್ಗ'ಗಳನ್ನು ಸಂಪೂರ್ಣವಾಗಿ ಬಿಟ್ಟುಬಿಡಲು ಬರುವಂತಿಲ್ಲ. ಆದುದರಿಂದಲೇ ವರ್ಗಗಳ ವಿಚಾರವು ಶಿಕ್ಷಣಶಾಸ್ತ್ರಕ್ಕೆ ಅತ್ಯವಶ್ಯವಾಗಿದೆ. ಇಂದಿನ ಶಾಲೆ ಮೊದಲಾದ **ಶಿಕ್ಷಣ ಸಂಸ್ಥೆಗಳಲ್ಲಿ ಕೊಡುವ ಪ್ರಾಗತಿಕ ಶಿಕ್ಷಣವು ತಾತ್ವಿಕವಾಗಿ ವ್ಯಕ್ತಿತತ್ವವನ್ನನುಸರಿಸಿದರೂ ವಸ್ತುಸ್ಥಿತಿಯಲ್ಲಿ ಸಾಂಘಿಕವಾಗಿಯೇ ಸಾಗಿದೆ.** ಸಾಂಘಿಕ ಶಿಕ್ಷಣದಲ್ಲಿ ವಿಭಾಗಗಳು ಇರಲೇ ಬೇಕು. ಅವುಗಳಿಗೊಂದು ವ್ಯವಸ್ಥೆ ಬೇಕು. ಅವುಗಳಲ್ಲಿ ನಡೆಯುವ ಕಾರ್ಯವು ಅಚ್ಚುಕಟ್ಟುತನದಿಂದ ಕೂಡಿರಬೇಕು. ಇದಕ್ಕಾಗಿ ಇವೆಲ್ಲವುಗಳನ್ನು ಒಳಗೊಂಡ 'ಆಡಳಿತ'ವೆನ್ನುವದು 'ವರ್ಗ'ಗಳಿದ್ದಲ್ಲಿ ಅವಶ್ಯವಾಗಿದೆ. ಆಡಳಿತದ ಅನುಕೂಲತೆಗಾಗಿ, ಹೀಗೆ ಹಲವು ವ್ಯಕ್ತಿಗಳನ್ನು ಶಿಕ್ಷಣ ಸಂಸ್ಥೆಗಳಲ್ಲಿ ಒಂದೆಡೆಯಲ್ಲಿ ಕೂಡಿಸಿ ಕಲಿಸುವ ಗುಂಪಿಗೆ 'ವರ್ಗ' ವೆಂದು ಹೆಸರು.

ವ್ಯಕ್ತಿಯ ಹಾಗೂ ವರ್ಗದ ಸಂಬಂಧವು ಕಲಿಸುವ ಕ್ರಮವನ್ನು ಸ್ವಲ್ಪ ಮಟ್ಟಿಗೆ ವ್ಯತ್ಯಾಸಗೊಳಿಸುತ್ತದೆ. ವರ್ಗದಲ್ಲಿರಬೇಕಾದ ಒಟ್ಟು ವ್ಯಕ್ತಿಗಳ— ವಿದ್ಯಾರ್ಥಿಗಳ ಸಂಖ್ಯೆಯು ಮಹತ್ವದ್ದಾಗಿದೆ. ಈ ವಿಷಯದ ಬಗ್ಗೆ ಶಿಕ್ಷಣ ತಜ್ಞರಲ್ಲಿ ಏಕವಾಕ್ಯತೆ ಇರುವದೆಂದು ಸಾಮಾನ್ಯವಾಗಿ ಹೇಳಬಹುದು. ಕೆಳಗಿನ ವರ್ಗಗಳಲ್ಲಿ ವಿದ್ಯಾರ್ಥಿಗಳ ಒಟ್ಟು ಸಂಖ್ಯೆಯು ಮೂವತ್ತನ್ನು ಮೀರ ದಂತೆಯೂ ಮೇಲಿನ ವರ್ಗಗಳಲ್ಲಿ ನಾಲ್ವತ್ತನ್ನು ಮಿಕ್ಕದಂತೆಯೂ ಮಾಡು ವದು ವಿಹಿತವೆಂದು ಅನುಭವಿಕರ ಅಭಿಪ್ರಾಯವಾಗಿದೆ. ವಿದ್ಯಾಖಾತೆಯವರು ಗೊತ್ತುಪಡಿಸಿದಂತೆ ವರ್ಗಗಳಲ್ಲಿರಬೇಕಾದ ಒಟ್ಟು ಸಂಖ್ಯೆಯು ಈ ಅಭಿಪ್ರಾ ಯವನ್ನು ಅನುಸರಿಸಿ ಮಾಡಿದ್ದಾಗಿದೆ. ಆದರೆ ಆಡಳಿತದ ಅನುಕೂಲತೆಗಾಗಿ ಹಣದ ಹಿಡಿತಕ್ಕಾಗಿ ವರ್ಗದ ಈ ಸಂಖ್ಯಾಮರ್ಯಾದೆಯನ್ನು ಎಲ್ಲೆಡೆ ಯಲ್ಲಿ ಮೀರುವದೇ ಹೆಚ್ಚಾಗಿ ಕಂಡುಬರುವದು. ಶಿಕ್ಷಕನ ವಶದಲ್ಲಿ ಕೊಡುವ ಪ್ರತಿಯೊಂದು ವರ್ಗದ ಸಂಖ್ಯೆಯು ಅವನ ಶಕ್ತಿಯನ್ನು ಮೀರದಂತಿರಬೇಕು. ವರ್ಗಗಳಿಗಾಗಿ ಕಟ್ಟಿಸಿದ ಕೋಣೆಗಳಿಗೆ ಹಾಳತಾಗುವಂತೆ ಇರಬೇಕು. ವಿವಿಧ ವಾದ ವಿಷಯಗಳನ್ನು ಕಲಿಸುವಾಗಲೂ ವರ್ಗದಲ್ಲಿಯ ಸಂಖ್ಯೆಯು ಆ ವಿಷ ಯಕ್ಕೆ ಸರಿಹೊಂದುವಂತೆ ಹೆಚ್ಚು ಕಡಿಮೆ ಆಗಿರಬೇಕು. ಸಾಮಾನ್ಯವಾಗಿ ಹೇಳಬೇಕಾದರೆ **ವರ್ಗವು ಪ್ರಮಾಣದಲ್ಲಿಯೂ ಕಾರ್ಯದ ಪರಿಮಿತಿ ಯಲ್ಲಿಯೂ ಶಿಕ್ಷಕನ ಶಕ್ತಿಯನ್ನು ಹೊಂದಿಕೊಂಡಿರುವದು** ಅವ ಶ್ಯವಾಗಿದೆ.

ಆದರೆ ಆಡಳಿತದ ಅನುಕೂಲತೆಗಾಗಿ ಹಳ್ಳಿಗಳಲ್ಲಿರುವ ಶಾಲೆಗಳಲ್ಲಿ ವರ್ಗಗಳಲ್ಲಿರಬೇಕಾದ ಸಂಖ್ಯೆಯು ವಿಹಿತವಾದ ಪ್ರಮಾಣವನ್ನು ಮೀರಿರು ವದೇ ಹೆಚ್ಚಾಗಿ ಕಂಡುಬರುವದು. ಈ ಬಗೆಯ ಹಳ್ಳಿಯ ಶಾಲೆಗಳಲ್ಲಿ ಒಬ್ಬನೇ ಶಿಕ್ಷಕನು ಎಲ್ಲ ಕೆಲಸವನ್ನು ತಾನೇ ನೋಡಬೇಕಾಗುವದು. ಪ್ರತಿ ಯೊಂದು ವರ್ಗದ ಸಂಖ್ಯೆಯು ಹೇಗಾದರೂ ಇರಲಿ, ಅನೇಕ ವರ್ಗಗಳಿಗೂ ಒಬ್ಬನೇ ಶಿಕ್ಷಕನು ‘ ಅಧಿಪತಿ ’ ಯಾಗಿರುವದು ನಮ್ಮ ಹಳ್ಳಿಗಳ ಶಾಲೆಗಳಿಗೆ ಅಪವಾದವಾಗಿಲ್ಲ. ಇಂಥ ಶಾಲೆಗಳಲ್ಲಿ ಕೆಲಸಮಾಡುವ ಶಿಕ್ಷಕನು ಪರಮೋ

ಶ್ವರನಂತೆ ಪ್ರತಿಯೊಂದು ವರ್ಗದಲ್ಲಿ ಕೇಳಿದಾಗ್ಗೆ ಪ್ರಕಟವಾಗುವ ಶಕ್ತಿಯು ಳ್ಳವನಾಗಿರಬೇಕು. ಇಲ್ಲವೆ ಕೆಲವು ವಿದ್ಯಾರ್ಥಿಗಳನ್ನು ಹಿರಿಯರನ್ನಾಗಿ ಮಾಡಿ ಅವರಿಂದಲೇ ತಾನೊಬ್ಬನೇ ಮಾಡಲಾರದ ಕಾರ್ಯಗಳನ್ನು ಸಾಗಿ ಸುವ ನೈಪುಣ್ಯವುಳ್ಳವನಾಗಿರಬೇಕು. ಬಹುಸಂಖ್ಯಾಕವಾದ ವರ್ಗಗಳ ಪದ್ಧತಿಯು ಇಂಗ್ಲಂಡದಲ್ಲಿ ಕೂಡ ಕಳೆದ ಶತಮಾನಗಳ ಕೊನೆಯವರೆಗೂ ಪ್ರಚಾರದಲ್ಲಿದ್ದಿತು. ಇಂಥ ವರ್ಗಗಳ ಪ್ರವರ್ತಕರಾದ ಬೆಲ್ ಹಾಗೂ ಲ್ಯಾಂಕ್ಯಾಸ್ಟರ ಎಂಬವರು ಈ ಪದ್ಧತಿಯನ್ನು ಹಿಂದುಸ್ತಾನದಿಂದಲೇ ಎತ್ತಿ ಒಯ್ದರೆಂಬ ಪ್ರತೀತಿಯಿದೆ. ಇತ್ತೀಚೆಗೆ ಅಳತೆ ಮೀರುವ ಸಂಖ್ಯೆಯುಳ್ಳ ವರ್ಗ ಗಳಿಂದ ಆಗುವ ಅನರ್ಥಗಳನ್ನು ತಪ್ಪಿಸಲು "ಶಿಫ್ಟ್" ಪದ್ಧತಿಯೆಂಬ ಹೆಸ ರಿನ ಜೋಡು ವರ್ಗಗಳ ಹೊಸದೊಂದು ಯೋಜನೆಯು ನಮ್ಮಲ್ಲಿಯೂ ಕಂಡುಬರುವದು.

ವ್ಯಕ್ತಿಶಃ ಕಲಿಸುವದರಲ್ಲಿ ಕೆಲವು ಲಾಭಗಳು ಇರುವದೇನೋ ನಿಜ. ಕಲಿಸುವ ಗುರುವಿಗೂ ಕಲಿಯುವ ಮಗುವಿಗೂ ಹೆಚ್ಚು ಸಂಪರ್ಕ ಸಹ ವಾಸಗಳು ಇದರಿಂದ ಒದಗುವವು. ಪರಸ್ಪರ ಪರಿಚಯವು ಕಲಿಸುವವನಿಗೂ ಕಲಿಯುವವನಿಗೂ ಕೂಡಿಯೇ ಸಹಕಾರಿಯಾಗುವದು. ಕಲಿಯುವ ಮಗು ವಿನ ವೃತ್ತಿ–ಶಕ್ತಿಗಳನ್ನು ತೂಗಿ ನೋಡಿ ತಿಳಿದುಕೊಳ್ಳಲು ಕಲಿಸುವ ಗುರುವಿಗೆ ಸಾಕಷ್ಟು ಸಂಧಿಗಳೂ, ಸಮಯವೂ ದೊರೆಯುವವು. ವ್ಯಕ್ತಿತತ್ವಕ್ಕೆ ಇಲ್ಲಿ ಯಾವ ತಡೆಯೂ ಇಲ್ಲ. ಆದರೆ ಹೀಗೆ ಒಂಟಿಗನಾಗಿ ಬೆಳೆಯುವದು ಸಮಾಜ ಜೀವನದ ಅಂಗಭೂತವಾದ ವ್ಯಕ್ತಿಗೆ ಸಾಧ್ಯವೂ ಆಗದು; ಹಿತ ಕರವೂ ಆಗದು. ಸಾಮೂಹಿಕ ಜೀವನಕ್ಕೆ ಅವಶ್ಯವಾದ ಸಹಾನುಭೂತಿ, ಸಹಕಾರ ಮೊದಲಾದ ಸದ್ಗುಣಗಳನ್ನು ವ್ಯಕ್ತಿಯು ಸಮಾಜದಲ್ಲಿದ್ದುಕೊಂಡೇ ಕಲಿಯಬೇಕಾಗುವದು. ಒಂಟಿಗನಾದ ವ್ಯಕ್ತಿಯ ಜೀವನದಲ್ಲಿ ಈ ಗುಣ ಗಳ ಬೆಳವಣಿಗೆಗೆ ಅನುವು ದೊರೆಯಲಾರದು. ಇದಕ್ಕೆ ವಿಪರೀತವಾಗಿ ಅವ ನಲ್ಲಿ ಸಂಕುಚಿತ ವೃತ್ತಿಯೂ ಸ್ವಾರ್ಥಬುದ್ಧಿಯೂ ತಲೆದೋರಬಹುದು. ಇದಲ್ಲದೆ ಇನ್ನೊಂದು ರೀತಿಯಿಂದಲೂ ಕೇವಲವಾದ ವ್ಯಕ್ತಿ ಶಿಕ್ಷಣವು ವ್ಯಾವ

ಹಾರಿಕವಾಗದೆಂದು ತಾನಾಗಿಯೇ ತೋರುವದು. ಶಿಕ್ಷಣದ ವೆಚ್ಚವು, ರಾಷ್ಟ್ರದ ಆರ್ಥಿಕಸ್ಥಿತಿಗೆ ಅನುಗುಣವಾಗಿರಬೇಕಾಗುವದು. ವ್ಯಕ್ತಿಶಃ ಕಲಿಯುವದೆಂದರೆ ಕಲಿಸುವ ಶಿಕ್ಷಕರ ಸಂಖ್ಯೆಗೆ ಮಿತಿಯಿಲ್ಲದಂತಾಗಬಹುದು. ಇಲ್ಲವೆ ಕಲಿಯುವ ವ್ಯಕ್ತಿಗಳ ಸಂಖ್ಯೆಯನ್ನು ಅತೀವ ಮರ್ಯಾದಿತವಾಗಿ ಮಾಡಬೇಕಾಗುವದು. ಶಿಕ್ಷಕರ ಸಂಖ್ಯೆಯನ್ನು ಅಪರಿಮಿತವಾಗಿ ಹೆಚ್ಚಿಸುವದು ಆರ್ಥಿಕ ದೃಷ್ಟಿಯಿಂದ ಅಶಕ್ಯವಾದುದು. ಕಲಿಯುವವರ ಸಂಖ್ಯೆಯನ್ನು ಕಡಿಮೆ ಮಾಡುವದು ರಾಷ್ಟ್ರದ ದೃಷ್ಟಿಯಿಂದ ಅನರ್ಥಕಾರಿಯಾದುದು. ಇವೆರಡೂ ಅನರ್ಥಗಳನ್ನು ತಪ್ಪಿಸಲೂ **ವ್ಯಕ್ತಿವರ್ಗಗಳ ಸಮನ್ವಯವನ್ನು ಮಾಡುವದೇ ಹಿತಕರವಾಗಿದೆ.**

ವ್ಯಕ್ತಿತತ್ವದ ಅತಿರೇಕವಾದ 'ಏಕಾಕಿ' ಶಿಕ್ಷಣವು ಹಿಂದೆ ಹೇಳಿದಂತೆ ಅನೇಕ ಅಡಚಣಿಗಳನ್ನು ಉಂಟುಮಾಡಬಹುದು; ಕೆಲವೊಂದು ರೀತಿಯಿಂದ ಕೆಡಕನ್ನು ಉಂಟುಮಾಡಬಹುದು. ಆದರೆ ಸಾಂಘಿಕ ಶಿಕ್ಷಣವಾದರೂ ಸರ್ವರೀತಿಯಿಂದಲೂ ಶ್ರೇಷ್ಠವೆಂದು ಹೇಳಬರುವಂತಿಲ್ಲ. ಸಮೂಹದೊಡನೆ ಒಂದಾಗಿ ಸೇರಿಕೊಂಡು ವ್ಯಕ್ತಿಯು ತನ್ನನ್ನು ತಾನೇ ಮರೆತು ಬಿಡಬಹುದು. ಮಗುವಿನ ವೃತ್ತಿ—ಶಕ್ತಿಗಳನ್ನು ಅನುಸರಿಸಬೇಕಾದ ಯಥಾರ್ಥವಾದ ಶಿಕ್ಷಣವು ಇಲ್ಲದಂತಾಗುವದು. ಒಂದೇ ಪಡಿಯಚ್ಚಿನಲ್ಲಿ ಒತ್ತಿ ಮೂಡಿಸುವ ಯಂತ್ರದಂತೆ ಶಿಕ್ಷಣವು ಕೇವಲ ಯಾಂತ್ರಿಕವಾಗಬಹುದು. 'ವೃತ್ತಿ'ಗಳಷ್ಟೆ 'ಪ್ರಕೃತಿ'ಗಳು ವಿವಿಧವಾಗಿ ಇರುವವೆಂಬ ಮಾನಸಶಾಸ್ತ್ರದ ಮೂಲ ತತ್ವವು ಶಿಕ್ಷಣ ಶಾಸ್ತ್ರಕ್ಕೆ ತಳಹದಿಯಾಗಿರುವದು. ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಅವಳಿಜವಳಿ ಮಗುಗಳು ಕೂಡ ತಮ್ಮ ಮನೋವೃತ್ತಿಗಳಲ್ಲಿ ಒಂದರಿಂದೊಂದು ಭಿನ್ನವಾಗಿರುವವೆಂಬುದು ಮಾನಸಶಾಸ್ತ್ರವು ಕಂಡುಹಿಡಿದ ಮಾತು; ಎಲ್ಲರ ಅನುಭವವು ಅನುಮೋದಿಸುವ ಮಾತು. ಅವಳಿಜವಳಿಗಳಲ್ಲಿಯೇ ಇಷ್ಟೊಂದು ಮನೋವೃತ್ತಿಗಳು ಭಿನ್ನವಾಗಿರಲು ಒಂದೇ 'ಮಾದರಿಯ' ಪಡಿಯಚ್ಚಿನಲ್ಲಿ ಎಲ್ಲ ಮಕ್ಕಳನ್ನು ಮೂಡಿಸಿ ತೆಗೆಯುವ ಹವಣಿಕೆಯು ವಿಘಾತಕವೂ ಅಸ್ವಾಭಾವಿಕವೂ ಆಗಿರುವದೆಂದು ಬೇರೆ ಹೇಳಬೇಕಾಗಿಲ್ಲ.

ಹೀಗಿದ್ದರೂ ಶಿಕ್ಷಣದಲ್ಲಿ 'ವರ್ಗ'ಗಳು ತಪ್ಪಿಲ್ಲ; ತಪ್ಪಲೂ ಬೇಕಾಗಿಲ್ಲ. ಹಿಂದೆ ಹೇಳಿದಂತೆ **'ಕೂಡಿ' ಕಲಿಯುವದು ಕೆಡಕಾಗಿಲ್ಲ. ಆದರೆ ವ್ಯತ್ಯಾಸಗಳ ವಿವೇಕವಿಲ್ಲದೆ ಎಲ್ಲ ಮಕ್ಕಳನ್ನೂ ಒಂದೇ ರೀತಿಯಾಗಿ 'ಕೂಡಿಸಿ' ಕಲಿಸುವದು ಕೆಡಕು.** ವ್ಯಕ್ತಿ ಶಿಕ್ಷಣವು ವೇಳೆ ವೆಚ್ಚಗಳ ದೃಷ್ಟಿಯಿಂದ ಅವ್ಯವಹಾರ್ಯವಾದುದು. ಕಲಿಯುವ ಪ್ರತಿಯೊಂದು ಮಗು ವಿಗೊ್ಬ ಪ್ರತ್ಯೇಕವಾಗಿ ಕಲಿಸುವ ಶಿಕ್ಷಕನನ್ನು ಪಾಲಕರು ಪೂರೈಸಲಾ ರರು, ಸರಕಾರದ ಸರ್ವಶಕ್ತಿಗೂ ಇದು ನೀಗದ ಮಾತು. ಇಲ್ಲವೇ ವರ್ಗದ ಪ್ರತಿಯೊಂದು ವ್ಯಕ್ತಿಯ ಶಕ್ತಿಯನ್ನು ತೂಗಿ ನೋಡಿ, ಒಲವನ್ನು ತಿಳಿದು ನೋಡಿ, ಇಂತಿಷ್ಟು ಅವಧಿಯಲ್ಲಿ ಇಂತಿಷ್ಟು ವಿಷಯಗಳನ್ನು ಮುಗಿಸಲೇ ಬೇಕೆಂಬ ಮೇಲಿನ ನಿರ್ಬಂಧವನ್ನು ವರ್ಗದ ಶಿಕ್ಷಕನು ಪಾಲಿಸುವದು ಅಶಕ್ಯ ವಾಗಬಹುದು. ಈ ಬಗೆಯ ಆಡಳಿತದ ಅನುಕೂಲತೆಗಾಗಿ, ಸಾಮೂಹಿಕ ಶಿಕ್ಷಣವು ಸಾಂಘಿಕವಾಗಿ ಸಾಗಲೇಬೇಕು. ಆದರೆ ಇತ್ತೀಚಿಗೆ ಸಾಂಘಿಕ ಶಿಕ್ಷಣದ ಸದೋಷತೆಯು ಶಿಕ್ಷಣತಜ್ಞರಿಗೆ ಹೆಚ್ಚಾಗಿ ತಿಳಿದುಬರಹತ್ತಿದೆ. ಬುದ್ಧಿಮಾಪನದ ಹೊಸಹೊಸದಾದ ಪ್ರಯೋಗಗಳು ವ್ಯಕ್ತಿ ವ್ಯಕ್ತಿಗಳಲ್ಲಿರುವ ಬುದ್ಧಿಶಕ್ತಿಯ ಹೆಚ್ಚುಕಡಿಮೆಗಳನ್ನು ಹೆಚ್ಚಾಗಿ ಬೆಳಕಿಗೆ ತರಹತ್ತಿವೆ. ವ್ಯಕ್ತಿ ಗಳ ಬುದ್ಧಿಶಕ್ತಿಯು ಹೆಚ್ಚುಕಡಿಮೆಯಾಗಿರುವಂತೆ, ಒಬ್ಬನ ಬುದ್ಧಿಯೇ ವಿವಿಧ ವಿಷಯಗಳಲ್ಲಿ ಒಂದೇ ಸಮನಾಗಿ ಹರಿಯುವದಿಲ್ಲವೆಂಬುದೂ ಕೂಡ ಸಪ್ರಯೋಗವಾಗಿ ಸಿದ್ಧವಾಗಿದೆ. ಇವೆಲ್ಲ ಸಂಗತಿಗಳನ್ನು ಇಂದಿನ ಶಿಕ್ಷಣವು ದುರ್ಲಕ್ಷಿಸಲಾರದು. ಆಡಳಿತದ ಅನುಕೂಲತೆಗಾಗಿ 'ವರ್ಗ'ಗಳು ಅವಶ್ಯ ವೆಂಬುವದನ್ನು ಯಾರೂ ಅಲ್ಲಗಳೆಯಲಾರರು. ಆದರೆ ಕಲಿಸುವ ಕಾರ್ಯವು ವ್ಯಕ್ತಿತತ್ವಕ್ಕೆ ಹೆಚ್ಚಾಗಿ ಹೊಂದಿಕೊಳ್ಳಬೇಕೆಂದು ಇಂದಿನ ಹೊಸ ಶಿಕ್ಷಣವು ಹೇಳುವದು. ನುರಿತ ಶಿಕ್ಷಿಕೆಯೊಬ್ಬಳು, ಒಬ್ಬಳೇ ಸಹಾಯಕಳೊಡನೆ ನಾಲ್ವತ್ತೈದು ಚಿಕ್ಕಮಕ್ಕಳನ್ನು ಸಂಭಾಳಿಸಬಲ್ಲಳೆಂದು ಮಾತಾ ಮಾಂಟೇ ಸೋರಿಯವರ ಮತವಾಗಿದೆ. ಸಾಹಿತ್ಯ ಸಂಗೀತ ಮೊದಲಾದ ಸ್ಫೂರ್ತಿ ದಾಯಕ ವಿಷಯಗಳಲ್ಲಿ ಸಾಂಘಿಕ ಶಿಕ್ಷಣವೇ ಹೆಚ್ಚು ಶ್ರೇಯಸ್ಕರವೆಂದು ಇನ್ನೊಬ್ಬ ಶಿಕ್ಷಣ ತಜ್ಞರ ಅಭಿಪ್ರಾಯವಾಗಿದೆ.

ಈ ರೀತಿಯಾಗಿ ಇಂದಿನ ಶಿಕ್ಷಣ ಪ್ರಪಂಚದಲ್ಲಿ ವ್ಯಕ್ತಿವರ್ಗಗಳ ಈ ಸಮಸ್ಯೆಯು ಹಿರಿದಾದ ಪ್ರಮೇಯಗಳಲ್ಲಿ ಒಂದಾಗಿದೆ. ಶಿಕ್ಷಣ ಕಲಾವಿದರು ಈ ತೊಡಕನ್ನು ಬಿಡಿಸಲು ಬೇರೆಬೇರೆ ರೀತಿಯಾಗಿ ಹವಣಿಸಿರುವರು. ಮಗುವಿನ ವ್ಯಕ್ತಿತ್ವಕ್ಕೆ ಹಾನಿಯು ಆಗಬಾರದು; ಆತನ ಒಲವು ಶಕ್ತಿಗಳನ್ನು ಅಲಕ್ಷಿಸಕೂಡದು; ಇತ್ತ ಕಡೆಗೆ ಸಾಂಘಿಕ ಜೀವನದ ಇಷ್ಟವಾದ ಸಕಲ ಸೌಕರ್ಯಗಳು ಆತನಿಗೆ ದೊರೆಯಬೇಕು. ಇವೆರಡನ್ನು ಸಮನ್ವಯವಾಗಿ ಸಾಧಿಸಲು ಒಟೇಕ್ವಿಯಾ, ಡಾಲ್ಟನ್ ಮೊದಲಾದ ಹೊಸ ಪದ್ಧತಿಗಳೂ ಯೋಜನೆಗಳೂ ಶಿಕ್ಷಣ ಪ್ರಪಂಚದಲ್ಲಿ ತಲೆದೋರಿವೆ. ಒಟೇಕ್ವಿಯಾ ಪದ್ಧತಿಯಲ್ಲಿ ಒಟ್ಟು ವರ್ಗಕ್ಕೆ ಕಲಿಸುವ ಶಿಕ್ಷಕನು ಬೇರೆ. ವ್ಯಕ್ತಿಶಃ ವಿದ್ಯಾರ್ಥಿಗಳ ಒಲವು ಶಕ್ತಿಗಳನ್ನು ನಿರೀಕ್ಷಿಸಿ, ಅವುಗಳಿಗೆ ಅನುಕೂಲವಾಗುವಂತೆ ಶಿಕ್ಷಣವನ್ನು ಅಳವಡಿಸುವ ಶಿಕ್ಷಕರು ಬೇರೆ. ಈ ದ್ವಿದಲ ಶಿಕ್ಷಣ ಕ್ರಮವೇ ಒಟೇಕ್ವಿಯಾ ಪದ್ಧತಿಯ ವೈಶಿಷ್ಟ್ಯವಾಗಿದೆ. ಡಾಲ್ಟನ್ ಪದ್ಧತಿಯು ವ್ಯಕ್ತಿಗಳ ಒಲವು ಶಕ್ತಿಗಳಿಗೆ ಆತಂಕವಾಗದೆ, ಉಳಿದವರಿಗೆ ಕಾಲ್ತೊಡಕಾಗದೆ, ಶಿಕ್ಷಕರ ಮಾರ್ಗದರ್ಶಿತ್ವದಲ್ಲಿ ವ್ಯಕ್ತಿಯು ತನ್ನ ಪ್ರಗತಿಯನ್ನು ತಾನೇ ಮಾಡಿಕೊಳ್ಳುವ ಯೋಜನೆಯಾಗಿದೆ.

ಇನ್ನೊಂದು ರೀತಿಯಿಂದಲೂ ಈ ಮಾತನ್ನು ವಿಚಾರಿಸಬಹುದು. ಕೇವಲ ಆಡಳಿತದ ಅನುಕೂಲತೆಗಾಗಿ ಶಿಕ್ಷಣದಲ್ಲಿ, 'ವರ್ಗ'ಗಳು ಬೇಕೆಂದು ತಿಳಿಯುವದು ಅನುಚಿತವಾದುದು. ವರ್ಗವು ವ್ಯಕ್ತಿಯ ಹಿತಕ್ಕಾಗಿಯೇ ಇರುವದು. **ಮುಂದಿನ ನಾಗರಿಕರಾದ ಇಂದಿನ ಚಿಕ್ಕಮಕ್ಕಳಿಗೆ ಕೂಡಿ ಹೇಗೆ ಬಾಳುವೆ ಮಾಡಬೇಕೆನ್ನುವದನ್ನು ಕಲಿಸುವದು ಶಿಕ್ಷಣದ ಮೂಲೋದ್ದೇಶಗಳಲ್ಲಿ ಒಂದಾಗಿದೆ.** ಸಾಮಾಜಿಕ ಜೀವನದ ಪ್ರಥಮ ಪಾಠವನ್ನು ಮಗುವು ಮೊದಲು ಶಾಲೆಯ ಈ ವರ್ಗಗಳಲ್ಲಿಯೇ ಕಲಿಯುವದು. ಮಕ್ಕಳ ಆತ್ಮಗತ ಶಕ್ತಿಗಳು ಬಲಿಯಲು, ಬೆಳೆಯಲು, 'ವರ್ಗಗಳು' ಅತ್ಯವಶ್ಯವಾದವುಗಳು. ಅನುಕರಣವು—ನೋಡಿ ಮಾಡಲು ಕಲಿಯುವದು—ಮಕ್ಕಳ ನಿಸರ್ಗದತ್ತವಾದ ಶಕ್ತಿಗಳಲ್ಲಿ ಮಹತ್ವವಾದುದು. ಮಗುವಿನ ಮೂರು

ಪಾಲು ಜೀವನವು ಈ ಅನುಕರಣಶಕ್ತಿಗೆ ಅಧೀನವಾಗಿರುವದು. ಅನುಕರಣ ದಿಂದ ಸಾಧಿಸಿದ ವಿಷಯಗಳಲ್ಲಿ, ಸಂಪಾದಿಸಿದ ಹೊಸಶಕ್ತಿ ಚಾತುರ್ಯ ಗಳಲ್ಲಿ, ಸಾತ್ವಿಕವಾದ ಸ್ಪರ್ಧೆಯೊಂದು ತಲೆದೋರುವದು. ತನ್ನ ಓರಿಗೆ ಯವರು ಮಾಡುವದೆಲ್ಲವನ್ನು ಮಗುವು ಮಾಡಲು ಹವಣಿಸುವದು. ಅವ ರಲ್ಲಿ ತಾನು ಮಿಗಿಲಾಗಬೇಕೆಂಬ ಹುರುಪು ಈ ಸ್ಪರ್ಧೆಯಿಂದ ಬರುವದು. ವರ್ಗವು ಇವೆಲ್ಲ ಇಷ್ಟವಾದ ಗುಣಗಳ ವಿಕಾಸಕ್ಕೆ ಅನುಸನ್ನಿಯಾಗುವದು. **ಬೇರೆ ಬೇರೆ ಹೃದಯಗಳಿಂದ ಹೊರಡುವ ಬಗೆಬಗೆಯ ಭಾವದ ಬಣ್ಣಗಳನ್ನು ತನ್ನ ಹಿರಿದಾದ ಅನುಭವದಲ್ಲಿ ಬೆರಿಸಿ ಮಕ್ಕಳ ಮನದ ಮುಗಿಲಿನಲ್ಲಿ ಭಾವನೆಯ ಬಣ್ಣಬಣ್ಣದ ಕಾಮನಬಿಲ್ಲನ್ನು ಬರೆಯು ವದು ಶಿಕ್ಷಕನ ಪವಿತ್ರವಾದ ಕಾರ್ಯವಾಗಿದೆ. ಸಂಘದಲ್ಲಿ 'ಶಕ್ತಿ'ಯು ಇರುವಂತೆ ಸಂಘದಲ್ಲಿ 'ಸ್ಫೂರ್ತಿ'ಯು ಇರುವದೆಂಬ ಮಾತನ್ನೆ ಶಿಕ್ಷಣದಲ್ಲಿಯ ವರ್ಗಗಳು ಸಮರ್ಥಿಸುವವು.**

## ಪರಿಚ್ಛೇದ ೧೩

### ಕೆಲವು ಶಿಕ್ಷಣ ಸುಭಾಷಿತಗಳು

ಇದುವರೆಗೆ ಶಿಕ್ಷಣೋಪಯೋಗಿಯಾದ ಮಾನಸಶಾಸ್ತ್ರದ ಮೂಲ ತತ್ವಗಳನ್ನು ಸಂಕ್ಷೇಪವಾಗಿ ವಿವೇಚಿಸಿದುದಾಯಿತು. ಶಿಕ್ಷಣದ ಮೂಲೋ ದ್ದೇಶಗಳನ್ನೂ ಹಳೆಯ—ಹೊಸ ಹಾದಿಗಳಲ್ಲಿರುವ ಭೇದವನ್ನೂ ತಿಳಿದು ಕೊಂಡುದಾಯಿತು. **ಮಾನಸಶಾಸ್ತ್ರದ ಮೂಲ ತತ್ವಗಳನ್ನೇ,—ಶಿಕ್ಷಣ ದಲ್ಲಿ ಹೊಸ ದೃಷ್ಟಿಯು ಕಂಡುಹಿಡಿದ ಹೊಸ ಹಾದಿಗಳನ್ನೇ,— ಸೂತ್ರರೂಪವಾಗಿ ಹೇಳತಕ್ಕವುಗಳು ಶಿಕ್ಷಣ ಸುಭಾಷಿತಗಳು.** ಶಿಕ್ಷಣ ಪ್ರಪಂಚದಲ್ಲಿ ಇವು ಗಾದೆಯ ಮಾತುಗಳಿದ್ದಂತೆ. ಉನ್ನತ ಬುದ್ಧಿಗೆ ನಿಲು ಕದ ತತ್ವಗಳು ನಮ್ಮ ಹಿಂದಿನ ಗಾದೆಯ ಮಾತುಗಳಲ್ಲಿ ತುಂಬಿವೆ. ಜೀವನ

ತತ್ವದ ತಿಳಿವು ಇವುಗಳಲ್ಲಿ ತಿಳಿಯಾಗಿ ತೇಲುತ್ತಿದೆ. ನುಡಿಯ ಕಡಲನ್ನು ಕಡೆದು ತೆಗೆದ ನವನೀತಗಳಿವು. ಬಳಕೆಯ ಮಾತಿನಲ್ಲಿ ಮಾರ್ಮಿಕವಾಗಿ ಹೇಳಿದ ಈ ಸುಭಾಷಿತಗಳು ನೇರವಾಗಿ ಮನದಿಂದ ಮನಕ್ಕೆ ಮುಟ್ಟುವವು. ಪ್ರಯಾಸವಿಲ್ಲದೆ ನೆನಪಿನಲ್ಲಿ ನಿಲ್ಲುವವು. ತಿಳಿಯದೆಂತೆ ನಮ್ಮ ನಡತೆಯನ್ನು ನಿಯಂತ್ರಿಸುವವು. ನೂರು ಗ್ರಂಥಗಳ ನೀರೆರೆದರೂ ಕೊನರದ ಬುದ್ಧಿ ಸುಭಾಷಿತಗಳ ಸವಿನೀರಿನಿಂದ ಚೇತರಿಸುವದು. ಮನದಲ್ಲಿ ಮೂಡುವ ವಿಚಾರಗಳನ್ನೆಲ್ಲ, ಹೃದಯದಲ್ಲಿ ಹೊಳೆಯುವ ಭಾವನೆಗಳನ್ನೆಲ್ಲ ಎಲ್ಲರೂ ಹಗುರಾಗಿ ಹೇಳಲು ಶಕ್ತರಾಗರು. ಪ್ರತಿಭಾಶಾಲಿಯಾದವನೊಬ್ಬನು ಎಲ್ಲರ ವಿಚಾರಗಳನ್ನೇ, ಅನುಭವಗಳನ್ನೇ ಅಂದವಾಗಿ ಮಾತಿನಲ್ಲಿ ಹೆಣೆದುಬಿಡುವನು. ಅಲ್ಪ ಶಕ್ತಿಯುವನು ಶಬ್ದಗಳಲ್ಲಿ ಹೇಳಲಾಗದ್ದನ್ನು ತನ್ನ ಮಾತಿನಲ್ಲಿ ಒಂದು 'ಮೂರ್ತಿ'ಯನ್ನಾಗಿ ಮಾಡಿಬಿಡುವನು. ಭಕ್ತಿಭಾವದ ದೇವಮೂರ್ತಿಗಳಂತೆ, ಅನುಭವ ವಿಚಾರಗಳ ಶಬ್ದ ಮೂರ್ತಿಗಳಿವು. ಅಂತೆಯೇ ದೇವತೆಗಳಂತೆ ಇಂದೆಯೂ ಅಮರವಾಗಿ ಉಳಿದಿರುವವು. ಸುಭಾಷಿತಗಳು ಪ್ರತಿಯೊಂದು ರಾಷ್ಟ್ರದ ಸಾಹಿತ್ಯದಲ್ಲಿಯ ಸಾರಸತ್ವಾದ ವಾಕ್ಯಗಳು. ಬಹಳ ಮಾತಿನಲ್ಲಿ ತಿಳಿಸಿ ಹೇಳಿದ್ದನ್ನು—ಹೇಳಬೇಕಾಗುವದನ್ನು, ಸುಭಾಷಿತಗಳು ಸ್ವಲ್ಪೇ ಶಬ್ದಗಳಲ್ಲಿ ಸಂಗ್ರಹಿಸಿ ಹೇಳುವವು.—ಮಾತಿನಲ್ಲಿ ಗಾದೆಯ ಮಾತುಗಳಿದ್ದಂತೆ. ಮನಸಿನಲ್ಲಿ ಮೂಡಿದ ವಿಚಾರಗಳನ್ನು ಮಾತಿನಲ್ಲಿ ಹೇಳಲು ಸಾಮಾನ್ಯ ಜನರಿಗೆ ಚನ್ನಾಗಿ ಸಾಧಿಸುವದಿಲ್ಲ. ಚತುರನಾದ ಕಲ್ಪಕನೊಬ್ಬನು ಅದೇ ವಿಚಾರವನ್ನು ಮಾರ್ಮಿಕವಾದ ರೀತಿಯಲ್ಲಿ ಮನದಟ್ಟಾಗಿ ಹೇಳಿದನೆಂದರೆ ಅದಕ್ಕೆ ಸುಭಾಷಿತದ ಸ್ವರೂಪ ಬರುವದು. ಕೆಲವು ನಾಣ್ಣುಡಿಗಳು ನೀತಿ–ನಡಾವಳಿಗಳನ್ನು ನಿರ್ದೇಶಿಸುವವು. ಮತ್ತೆ ಕೆಲವು ತತ್ವಜ್ಞಾನದ ತಿರಳು ಆಗಿರುವವು. ಶಿಕ್ಷಣ ಶಾಸ್ತ್ರದಲ್ಲಿಯೂ ಈ ಬಗೆಯ ಕೆಲವು ಸುಭಾಷಿತಗಳಿರುವವು.

ಶಿಕ್ಷಣವು ಶಾಸ್ತ್ರವಿರುವಂತೆ, ಹೆಚ್ಚಾಗಿ ಒಂದು ಕಲೆಯಾಗಿದೆ, ಲಲಿತ ಕಲೆಯಂತಿದೆಯೆಂದು ಹಿಂದೆ ಹೇಳಿದೆ. ಪ್ರತಿಯೊಂದು ಕಲೆಯೂ ಕೆಲವು

ಕಟ್ಟು—ಕಟ್ಟಳೆಗಳಿಗೆ ಆಧೀನವಾಗಿರುವದು. ಕಲಾವಿದನ ಪ್ರವೃತ್ತಿ ಸ್ಫೂರ್ತಿಗಳು ಸ್ವತಂತ್ರವಾದರೂ ಆತನ ಕಲಾಕೃತಿಯು ಒಂದು ವಿಶಿಷ್ಟವಾದ, ತನಗೆ ಅನುರೂಪವಾದ 'ಕ್ರಮ'ವನ್ನು ಹಿಡಿದು ಸಾಗಬೇಕಾಗುವದು. ಶಿಕ್ಷಣ ಕಲೆಯೂ ಈ ಮಾತಿಗೆ ಅಪವಾದವಾಗಿಲ್ಲ. **ಶಿಕ್ಷಣ ಸುಭಾಷಿತಗಳು ಕಲಿಸುವ ಹಾಗೂ ಕಲಿಯುವ ಕಾರ್ಯದಲ್ಲಿ ವಿಹಿತವೆಂದು ಕಂಡುಬಂದ ಕೆಲವು ವಿಶಿಷ್ಟ 'ಕ್ರಮ' ರೀತಿಗಳನ್ನು ಸೂಚಿಸುವವು.** ಶಿಕ್ಷಣ ವಿಷಯವನ್ನು ಗೊತ್ತುಪಡಿಸಲು ಶಿಕ್ಷಕನು ಸ್ವತಂತ್ರನಿರದಿದ್ದರೂ ಗೊತ್ತುಪಡಿಸಿದ ವಿಷಯಗಳನ್ನು ಸರಿಯಾದ—ಶುದ್ಧವಾದ ಕ್ರಮದಲ್ಲಿ ಕಲಿಸುವದು ಆತನ ಕರ್ತವ್ಯವಾಗಿದೆ. ಹೀಗೆ ಮಾಡಲು ಅವನು ಸ್ವತಂತ್ರನೂ ಆಗಿರುವನು. ತನಗೆ ಹೊಳೆದ ವಿಚಾರಗಳನ್ನು ಹೆರವರಿಗೆ ಹೇಳಿಕೊಡುವ ಕೃತಿಯಲ್ಲಿ ಕಂಡುಬರುವ ಕೌಶಲ್ಯವೇ 'ಕ್ರಮ'ವೆಂದು ಹೇಳಬಹುದು. 'ಕರ್ಮಸು ಕೌಶಲಂ' ರೂಪವಾದ ಈ ವಿಧಾನವೇ ಶಿಕ್ಷಕನಿಗೆ 'ಯೋಗ'ವಾಗಿರುವದು. **ಈ ಕ್ರಮದಲ್ಲಿ,** ಅಲ್ಲಿಂದ ಹೊರಡಬೇಕಾದ '**ಆದಿ**'ಯೊಂದು, ಹಿಡಿದುಹೋಗಬೇಕಾದ '**ಹಾದಿ**'ಯೊಂದು, ಮುಟ್ಟಬೇಕಾದ '**ತುದಿ**'ಯೊಂದು—ಹೀಗೆ ಮೂರು ಭಾಗಗಳು ಇರುವವು. ಈ ಕ್ರಮವು ಎರಡು ವಿಧವಾಗಿದೆ. (೧) ತಾನೆ ತಿಳಿದುಕೊಳ್ಳುವವರೆಗೆ ಮಗುವು ಶಿಕ್ಷಕನು ಹೇಳುವದನ್ನೆಲ್ಲ ತಾತ್ಪೂರ್ತಿಕವಾಗಿ ನಂಬಬಹುದು; (೨) ಇಲ್ಲವೇ ತಾನಾಗಿಯೇ ತನ್ನ ಪ್ರಯತ್ನದಿಂದ, 'ನೋಡಿ, ಮುಟ್ಟಿ, ಮಾಡಿ,' ತಿಳಿದುಕೊಳ್ಳಬಹುದು. ಕಲಿಯುವವರಲ್ಲಿ ಆಸ್ಥೆ, ಕುತೂಹಲ, ಕಾರ್ಯಪ್ರವೃತ್ತಿಗಳನ್ನು ಹುಟ್ಟಿಸುವ 'ಕ್ರಮ'ವೇ ಶ್ರೇಷ್ಠವೆಂತಲೂ, ಹೆಚ್ಚು ಉಪಯುಕ್ತವೆಂತಲೂ ಸ್ಪಷ್ಟವಾಗಿದೆ. ಈ 'ಕ್ರಮ'ವು ಯಶಸ್ವಿಯಾಗಬೇಕಾದರೆ, ಹೇಳಿದ್ದನ್ನೆಲ್ಲ ನಿಜವೆಂದು ನಂಬಿ ನಡೆಯುವದನ್ನು ಮಗುವು ಬಿಡಲೇಬೇಕು. ಕಲಿಸುವವನಾದರೂ ಕಲಿಯುವ ಮಗುವಿನ ಸ್ಥಾನದಲ್ಲಿ ನಿಂತುಕೊಂಡು ತನ್ನ ಕಾರ್ಯವನ್ನು ನಿರ್ವಹಿಸಬೇಕು.

ಶಿಕ್ಷಣಶಾಸ್ತ್ರದಲ್ಲಿ ಶಿಕ್ಷಣ ಕ್ರಮವನ್ನು ಸೂಚಿಸುವ 'ಸುಭಾಷಿತ'ಗಳು

ಹೇರಳವಾಗಿರುವವು. ಅವುಗಳಲ್ಲಿ ಕೆಲವನ್ನು ಕುರಿತು ಇಲ್ಲಿ ಪರಾಮರ್ಶಿಸ ಬಹುದು.

## (೧) ಕಲಿಯುವವರಲ್ಲಿ ತಾನಾಗಿಯೇ ಕಲಿತುಕೊಳ್ಳುವ ಕಾರ್ಯ ಪ್ರವೃತ್ತಿಯನ್ನು ಹುಟ್ಟಿಸಬೇಕು :—

**ಸಾಂಪ್ರದಾಯಿಕ** ಪ್ರಾಚೀನ ಶಿಕ್ಷಣ ಪದ್ಧತಿಗೂ **ಸಂಶೋಧಕ** ಆಧುನಿಕ ಶಿಕ್ಷಣ ಪದ್ಧತಿಗೂ ಇರುವ ಮಹತ್ವದ ಭೇದವನ್ನೇ **ಈ ಸುಭಾಷಿತವು** ಸೂಚಿಸುವದು. ದೇಹಬಲವನ್ನು ಬೆಳೆಸ ಬಯಸುವ ಮನುಷ್ಯನು ತಾನು ಮಾಡುವ ವ್ಯಾಯಾಮದಿಂದಲೇ ಅದನ್ನು ಸಾಧಿಸುವದಿಲ್ಲವೆ? ಹಾಗೆಯೇ ಮಾನಸಿಕ ಬೌದ್ಧಿಕ ಶಕ್ತಿಗಳನ್ನಾದರೂ ಹೆಚ್ಚಿಸಲು ತನ್ನ ಬುದ್ಧಿಯ ಹಾಗೂ ಮನಸ್ಸಿನ ಕರ್ತೃತ್ವವೇ ಮಿಗಿಲಾದ ಸಾಧನವಾಗಿದೆ. ಆದರೆ ನಾವೆಲ್ಲರೂ ಈ ಮಾತನ್ನು ಮರೆತಿರುವದೂ, ಮರೆಯುವದೂ, ನಿಜವಾಗಿ ಸೋಜಿಗದ ಸಂಗತಿಯಾಗಿದೆ. '**ಹ್ಯೂರಿಜಮ್**' ಅಂದರೆ ಸ್ವಸಂಶೋಧನೆಯೆಂಬುದೊಂದು ಪದ್ಧತಿಯು ಶಿಕ್ಷಣದಲ್ಲಿ ಪ್ರಚಾರದಲ್ಲಿದೆ. ಈ ಪದ್ಧತಿಯ ಮೇರೆಗೆ ಕಲಿಯುವ ಮಗುವು ಸಂಶೋಧಕನಾಗಬೇಕು. ಸ್ವಪ್ರಯತ್ನದಿಂದಲೇ, ಸ್ವಾನುಭವದಿಂದಲೇ ಎಲ್ಲ ಬಗೆಯ ಜ್ಞಾನ ವಿಜ್ಞಾನಗಳನ್ನು ಗಳಿಸಬೇಕು. ಬೆಂಕಿ ಸುಡುವದೆಂಬದನ್ನು ಹಿರಿಯರು ಹೇಳಿದಂತೆ ನಂಬಬೇಕಿಲ್ಲ. ಕೈಸುಟ್ಟುಕೊಂಡು ಕಲಿತುಕೊಳ್ಳಬೇಕು. ಶಿಕ್ಷಣದಲ್ಲಿ ಸ್ವಸಂಶೋಧನೆಯ ಮಹತಿಯನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದರೆ ಸ್ವಸಂಶೋಧನೆಯು ಸರ್ವತ್ರ ಸಾಧ್ಯವಾಗಿರದು, ಇತಿಹಾಸದ ಮುಂಜುಕಾಲದಿಂದ ಇಂದಿನ ವರೆಗೆ ಮಾನವನು ಗಳಿಸಿದ ಜ್ಞಾನ ಭಾಂಡಾರವನ್ನೂ, ಅನುಭವ ಸಂಪತ್ತಿಯನ್ನೂ ಸ್ವಸಂಶೋಧನೆಯಿಂದಲೇ ಮಗುವು ಸಂಪಾದಿಸಬಹುದೆಂಬುದು ತೀರ ಅಸಂಭವನೀಯವಾದ ಮಾತು. ಮಾನವನ ಮಿತವಾದ ಆಯುರ್ಮರ್ಯಾದೆಯೂ, ಅಲ್ಪಶಕ್ತಿಯೂ, ಸನ್ನಿವೇಶ ಪರಿಸ್ಥಿತಿಗಳ ಸಂಕೋಚವೂ, ಪ್ರಭಾವವೂ ಈ ಮಾತಿಗೆ ಪ್ರಮಾಣವಾಗಿವೆ. ಜ್ಞಾನಾರ್ಜನೆಯಲ್ಲಿ ಸ್ವಾನುಭವ—ಸ್ವಪ್ರಯತ್ನಗಳೊಡನೆ, ಉಳಿದವರ ಅನು

ಭವದ, ಪರಿಶ್ರಮದ ಫಲವನ್ನಾದರೂ ಸಹಕರಿಸುವದು ಅವಶ್ಯವಾಗಿದೆ; ಅಗತ್ಯವಾಗಿದೆ. 'ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ಕೇಳುತಾ........' ಎಂದು ಹೇಳುವ ಸೋಮೇಶ್ವರನ ಉಕ್ತಿಯು ಈ ಶಿಕ್ಷಣ ಸುಭಾಷಿತವನ್ನೇ ಒಂದು ರೀತಿಯಲ್ಲಿ ಸಮರ್ಥಿಸುತ್ತದೆ.

## (೨) 'ಕಲಿಯುವದು ಕಹಿಯಾಗಬಾರದು.' :—

ಕಲಿಸುವ ವಿಷಯದಲ್ಲಿ ಮಗುವಿಗೆ ಕುತೂಹಲವು ಉಂಟಾಗಬೇಕು. ಕುತೂಹಲವಿರದಿದ್ದರೆ ಮಗುವಿನ ಮನಸ್ಸು ಆ ವಿಷಯದಲ್ಲಿ ಹರಿಯುವದಿಲ್ಲ, ಹಾಗೂ ಮಗುವು ಕಾರ್ಯಪ್ರವೃತ್ತನಾಗುವದಿಲ್ಲ. ಕಲಿಯುವ ವಿಷಯದಲ್ಲಿ ಮಗುವಿನ ಮನಸ್ಸು ಹರಿಯುವಂತೆ ಮಾಡುವದೇ ಆಧುನಿಕ ಶಿಕ್ಷಣ ಶಾಸ್ತ್ರದ ಸಾರವಾಗಿದೆ. ಅಂದರೆ ಶಿಕ್ಷಣವು ಕೇವಲ ಮನೋರಂಜನವೆಂದು ಮಾತ್ರ ಭಾವಿಸಕೂಡದು. **ಮನಸ್ಸು ಹರಿಯುವದು ಬೇರೆ—ಮನರಂಜನವು ಬೇರೆ.** ಹೀಗೆ ಮನಸ್ಸು ಹರಿಯುವಂತೆ ಮಾಡಲು ಆಧುನಿಕ ಶಿಕ್ಷಣ ಶಾಸ್ತ್ರವು ಅನೇಕ ವಿಧವಾದ ಹಾದಿಯನ್ನು ಹಾಕಿಕೊಟ್ಟಿದೆ. ಅವಶ್ಯವಾದ ಸಾಧನ ಸಾಮುಗ್ರಿಯನ್ನು ಸೂಚಿಸಿಕೊಟ್ಟಿದೆ. ಚಿತ್ರಗಳೂ ಚರಿತ್ರೆಗಳೂ, ಕಥೆಗಳೂ, ಕವಿತೆಗಳೂ, ಆಟಗಳೂ ನಾಟಕಗಳೂ ಮಗುವಿನ ಮನಸ್ಸನ್ನೆಳೆಯಲು ಹಾಗೂ ಇಷ್ಟವಾದ ವಿಷಯದಲ್ಲಿ ನಿಲ್ಲಿಸಲು ಬಲವಾದ ಸಾಧನಗಳಾಗಿವೆ. ಮನಸ್ಸು ಹರಿಯದಿದ್ದರೆ, ಸರಸವಾದ ವಿಷಯವೂ ಬೇವಿನಂತೆ ಕಹಿಯಾಗಬಹುದು. ಮನಸ್ಸು ಹರಿದರೆ, ಕ್ಲಿಷ್ಟವಾದ ವಿಷಯವೂ ಸಕ್ಕರೆಯಂತೆ ಸಿಹಿಯಾಗಬಹುದು. ಶಿಕ್ಷಣ ಪ್ರಪಂಚದಲ್ಲಿ **ಈ ಮನಸ್ಸಿನ ಹರಿಯುವಿಕೆಯು ವೇದಾಂತದಲ್ಲಿಯ ಈಶ್ವರೇಚ್ಛೆಯಿದ್ದಂತೆ. ವಿಷವನ್ನು ಅಮೃತವಾಗಿಯೂ ಮಾಡಬಲ್ಲದು; ಅಮೃತವನ್ನು ವಿಷವಾಗಿಯೂ ಮಾಡಬಲ್ಲದು.**

## (೩) ಶಿಕ್ಷಕನೊಬ್ಬನೇ ಕೂಗಿಕೊಳ್ಳುವದಕ್ಕೆ 'ಕಲಿಸುವದು' ಎಂದು ಕರೆಯಲಾಗದು :—

ಕಲಿಸುವದು ಹಾಗೂ ಕಲಿಯುವದು ಒಂದನ್ನೊಂದು ಅವಲಂಬಿಸಿರುವವು;

ನಿಕಟವಾಗಿ ಹೊಂದಿಕೊಂಡಿರುವವು. ಕಲಿಯುವವರಿಗೆ ಕಲಿಸಿದಂತಾಗದು. ಜೀವನದೊಂದಿಗೆ ಹೊಂದಿಕೊಂಡು, ಕಾರ್ಯಪ್ರವೃತ್ತಿಯನ್ನು ಹುಟ್ಟಿಸುವ ವರೆಗೆ ಕಲಿತಂತಾಗದು. ಹೀಗಾಗಬೇಕಾದರೆ ಕಲಿಯುವ ಕಾರ್ಯದಲ್ಲಿ ಮಗುವು ಮನಸ್ಸು ಹಾಕಬೇಕು; ಕೈ ಹಾಕಬೇಕು; ಹಾಗೂ ಕಲಿಸುವವ ನೊಡನೆ ಕೂಡಿ ಕೆಲಸ ಮಾಡಬೇಕು. ಈ ದೃಷ್ಟಿಯಿಂದ ನೋಡಿದರೆ 'ಕಲಿಸುವದು' ಎಂಬ ಸ್ವತಂತ್ರ ಕಾರ್ಯವೂ ಇಲ್ಲ. 'ಕಲಿಸುವದು' ಎಂಬ ಶಬ್ದವೂ ಯಥಾರ್ಥವಾಗದು. ಈ ಹೊಸ ವಿಚಾರಗಳ ಸಂಸ್ಕಾರವಿಲ್ಲದ ಶಿಕ್ಷಕರಲ್ಲಿ ತಾವೇ ಕೂಗಿಕೊಳ್ಳುವದೇ ಕಲಿಸುವದೆಂಬ ಸಾಮಾನ್ಯವಾದ ತಪ್ಪು ಕಲ್ಪನೆಯು ಕಂಡುಬರುವದು. ಶಿಕ್ಷಕನು ಎಲ್ಲ ಶ್ರಮವನ್ನು ತಾನೇ ವಹಿಸುವನು. ವಿದ್ಯಾರ್ಥಿಯು ಕುಳಿತು ಹೇಗಾದರೂ ಕೇಳುವದು ಮಾತ್ರ. ಈ 'ಪುರಾಣ ಪದ್ಧತಿ'ಯು—ನಿಜವಾಗಿ ಗುಡಿಗುಂಡಾರಗಳಲ್ಲಿ ನಡೆಯುವ ಪುರಾಣವಿದ್ದಂತೆ; ಹರಿಕಥೆಯಂತೆ; ವ್ಯಾಖ್ಯಾನವಿದ್ದಂತೆ. ಹೀಗಾಗದಂತೆ ನೋಡಿಕೊಳ್ಳಲು ಈ ಸುಭಾಷಿತವು ಶಿಕ್ಷಕ ವರ್ಗಕ್ಕೆ ಎಚ್ಚರಿಕೆಯನ್ನು ಕೊಡುವದು.

**(೪) ಒಂದು ವೇಳೆಗೆ ಒಂದೇ ವಿಷಯವನ್ನು ಕಲಿಸಬೇಕು:—**

ತಮಗೆ ಬಂದದ್ದನ್ನೆಲ್ಲ ಹೇಳಬೇಕು, 'ಹೆಚ್ಚಿಗೆ' ಹೇಳಬೇಕೆನ್ನುವ ಬಯಕೆಯು ಸಾಮಾನ್ಯವಾಗಿ ಎಲ್ಲ ಶಿಕ್ಷಕರಲ್ಲಿಯೂ, ವಿಶೇಷವಾಗಿ ಶಿಕ್ಷಣ ವೃತ್ತಿಯನ್ನು ಹೊಸದಾಗಿ ಕೈಕೊಂಡ ಹೊಸ ಹುರುಪಿನ ಶಿಕ್ಷಕರಲ್ಲಿ ಕಂಡು ಬರುವದು. ಇಂಥ ಶಿಕ್ಷಕರು ಅನೇಕ ವಿಷಯಗಳನ್ನು ಅನಾವಶ್ಯಕ ವಾಗಿ ಬೆರಿಕೆ ಮಾಡಿ ಹೇಳುವರು. ಈ ಬೆರಿಕೆಯಲ್ಲಿ ತಾಳಮೇಳವಿರುವದಿಲ್ಲ; ಸುಸಂಬದ್ಧತೆಯಿರುವದಿಲ್ಲ. ಯಾವದು ಪ್ರಧಾನವಾದುದು, ಯಾವದು ಅಪ್ರಧಾನವಾದುದು ಎಂಬುದು ಸ್ಪಷ್ಟವಾಗುವದಿಲ್ಲ, ಈ ಸಮಬೆರಿಕೆಯಲ್ಲಿ ಎಲ್ಲ ವಿಷಯಗಳ ಕಡೆಗೂ ಮಗುವಿನ ಮನಸ್ಸು ಎಳೆದು, ಹುರುಳಿಲ್ಲದ ಅನೇಕ ಸಂಗತಿಗಳೇ ಅದರ ಮನಸ್ಸನ್ನೆಲ್ಲ ಸೆಳೆದುಬಿಡಬಹುದು. ಹೇಳು ವಾಗ್ಗೆ ಒಂದೇ ವಿಷಯ ಮುಂದಿಟ್ಟುಕೊಂಡು, ಅದಕ್ಕೆ ಸಂಬಂಧಿಸಿದ ಬೇರೆ

ಸಂಗತಿಗಳನ್ನು, ಅವುಗಳ ಸ್ಥಾನವನ್ನರಿತುಕೊಂಡು, ಯೋಗ್ಯವಾದ ವೇಳೆಯಲ್ಲಿ, ಯೋಗ್ಯ ಕ್ರಮದಿಂದ ಹೆಣೆದು ಹೇಳಬೇಕು. ಈ ಮಾತನ್ನೇ ಮೇಲಿನ ಸುಭಾಷಿತವು ಸೂಚಿಸುತ್ತಿದೆ.

## (೫) ಕಲಿಸುವ ವಿಷಯವು ಕಲಿಯುವವನಿಗೆ ಎಲ್ಲ ರೀತಿಯಿಂದಲೂ ಅನುರೂಪವಾಗಿರಬೇಕು :—

ಕಲಿಸುವ ಹಾಗೂ ಕಲಿಯುವ ಕಾರ್ಯದಲ್ಲಿ, ಕಲಿಯಬೇಕಾದ ವಿಷಯವು ಎಷ್ಟು ಮಹತ್ವದ ಪ್ರಶ್ನೆಯಾಗಿರುತ್ತದೆಂಬದನ್ನು ಹಿಂದೆ ಹೇಳಿಕೊಟ್ಟಿದೆ. ವಿಷಯವು ತೀರ ಕ್ಲಿಷ್ಟವಾದರೆ, ಕಠಿಣವಾದರೆ, ಕಲಿಯುವವನ ಶ್ರಮವು ನಿಷ್ಫಲವಾಗುವದು. ವಿಷಯವು ತೀರ ಸುಗಮವಾದರೆ, ಸರಳವಾದರೆ, ಕಲಿಯುವವನ ಶ್ರಮವು ನಿರರ್ಥಕವಾಗುವದು. ಹೀಗಾಗದಂತೆ ನೋಡಿಕೊಳ್ಳುವದು ಶಿಕ್ಷಕನ ಕಾರ್ಯವಾಗಿದೆ. ವರ್ಗದಲ್ಲಿ ಹೇಳಿಕೊಡುವ ವಿಷಯವಾಗಲಿ, ಇಲ್ಲವೆ ಮನೆಯಲ್ಲಿ ಮಾಡಿಕೊಂಡು ಬರಹೇಳಿದ ವಿಷಯವೇ ಆಗಲಿ, ವಿದ್ಯಾರ್ಥಿಯ ಬುದ್ಧಿಯ ಶಕ್ತಿಯನ್ನು ಮೀರದಂತೆ, ಅವನಿಗೆ ದೊರೆಯಬಹುದಾದ ಬಿಡುವಿನ ವೇಳೆಗೆ ಹಾಳತಾಗುವಂತೆ, ಕಲಿಸಬೇಕಾದ ವಿಷಯಗಳಲ್ಲಿ ಸರಿಯಾದ ಹೆಚ್ಚುಕಡಿಮೆಗಳನ್ನು ಮಾಡಬೇಕು. ಕಲಿಯುವ ವಿಷಯವು ತೀರ ಕ್ಲಿಷ್ಟವಾಗಿಯೂ ಇರಕೂಡದು, ಅಥವಾ ತೀರ ಸುಗಮವಾಗಿಯೂ ಇರಕೂಡದು. ಕಲಿಯುವ ಮಗುವಿನ ಮನಸ್ಸನ್ನು ಒಲಿಸುವಷ್ಟು ಅದು ಸರಳವಾಗಿರಬೇಕು. ನಿರಾಶೆಗೊಳಿಸದೆ ಆತನನ್ನು ಕಾರ್ಯಪ್ರವೃತ್ತನನ್ನಾಗಿ ಮಾಡುವಷ್ಟು ಅದು ಗಡಚಾಗಿಯೂ ಇರಬೇಕು. ಇದೇ ಮಾತನ್ನೇ ಮೇಲಿನ ಸುಭಾಷಿತವು ಹೇಳುವದು.

## (೬) ತಿಳಿದ ವಿಷಯದಿಂದ ತಿಳಿಯದ ವಿಷಯವನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕು :—

ಗೊತ್ತಿದ್ದದ್ದು ಗೊತ್ತಿಲ್ಲದ್ದನ್ನು ಗುರುತಿಸಲು ಸಾಧನವಾಗಬೇಕು. ಹೊಸದು ಹಳೆಯದರೊಂದಿಗೆ ಹೊಂದಿಕೊಳ್ಳಬೇಕು. ಹಿಂದೆ ಹೇಳಿದಂತೆ ಮನಸ್ಸು ಅಖಂಡವಾಗಿದೆ, ಮನಸ್ಸಿನ ಕಾರ್ಯವು ಬಹುಮುಖವಾದರೂ

ಒಟ್ಟು ಮನಸ್ಸಿನ ಅನುಭವವು ಏಕರೂಪವಾಗಬೇಕು. ಈ ಅನುಭವಗಳು ಪರಸ್ಪರವಾಗಿ ಹೆಚ್ಚಾಗಿ ಹೊಂದಿಕೊಂಡಂತೆ ಹೆಚ್ಚು ಶಕ್ತಿಯುಳ್ಳವುಗಳಾಗು ವವು; ಹಾಗೂ ಹೆಚ್ಚು ಕಾಲ ಬಾಳುವವು. ನಿತ್ಯದ ಸಾಮಾನ್ಯ ವ್ಯವಹಾರ ಗಳಲ್ಲಿಯೂ ನಾವು ಗೊತ್ತಿದ್ದುದರ ಮೇಲೆ ಕಾಲಿಟ್ಟು ಗೊತ್ತಿಲ್ಲದುದರ ಕಡೆಗೆ ಕೈ ಚಾಚುತ್ತೇವೆ. ಕಲಿಸುವ ವಿಷಯದಲ್ಲಿ ತಿಳಿದದ್ದರೊಡನೆ ತಿಳಿಯದಿರುವದನ್ನು ಕೂಡಿಸಿದರೆ ಮಾತ್ರ ಕಲಿಯುವವನಲ್ಲಿ ಕುತೂಹಲದೊಡನೆ ಕಾರ್ಯಪ್ರವೃ ತ್ತಿಯೂ, ಪರಿಚಯದೊಡನೆ ಪರಿಶ್ರಮವೂ ಜನಿಸುವವು.

**(೭) ವಸ್ತುವಾಚಕಗಳು ಮೊದಲು, ಆಮೇಲೆ ಭಾವವಾಚಕಗಳು:–**

ವಸ್ತುಗಳ ನಿರೀಕ್ಷಣೆಯಿಂದ ಮಗುವು ಅವುಗಳ ಗುಣಧರ್ಮಗಳನ್ನು ಬೇರೆಯಾಗಿ ತಿಳಿದುಕೊಳ್ಳಬೇಕು. ಆದರೆ ಈ ಗುಣಧರ್ಮಗಳ ಜ್ಞಾನವು ಮಗುವಿಗೆ ಹೇಳಿಕೊಡತಕ್ಕ ವಿಷಯವಲ್ಲ. ವಸ್ತುಗಳನ್ನು ಹೋಲಿಸಿ ನೋಡು ವದರಿಂದ ಮಗುವಿಗೆ ಈ ಜ್ಞಾನವು ತಾನಾಗಿಯೇ ಹೊಳೆಯಬೇಕು. ಆದರೆ ವಸ್ತುವಾಚಕಗಳಿಂದ ಮೊದಲು ಮಾಡಿದರೂ ಅವುಗಳಿಂದಲೇ ಮುಗಿಸ ಬಾರದು. ಹೊಳೆ–ಕೊಳ್ಳಗಳನ್ನು ತಿಳಿಸುವ ಯತ್ನದಲ್ಲಿ ತಮ್ಮ ಊರ ಮುಂದಿ ರುವವುಗಳಷ್ಟೇ ಹೊಳೆ–ಕೊಳ್ಳಗಳೆಂಬ ಹುಚ್ಚು ಕಲ್ಪನೆಯು ಕೊನೆಯು ವರೆಗೂ ನೆಲೆಗೊಳ್ಳದಂತೆ ನೋಡಿಕೊಳ್ಳಬೇಕು. ಮೊದಲು ವಸ್ತುಗಳು, ಆ ಮೇಲೆ ಅವುಗಳ ಭಾವಚಿತ್ರಗಳು, ಕೊನೆಗೆ ಅವುಗಳನ್ನು ಸೂಚಿಸುವ ಸಂಜ್ಞೆಗಳು. ಶಿಕ್ಷಣಕ್ರಮದಲ್ಲಿ ಈ ಪರಂಪರೆಯನ್ನು ಅನುಸರಿಸಿದರೆ ಕಲಿಯು ವವರಲ್ಲಿ ಆಸ್ಥೆಯೊಡನೆ ಆತ್ಮವಿಶ್ವಾಸವೂ ಅಂಕುರಿಸುವದು.

**(೮) ಮೊದಲು ನಿರೀಕ್ಷಣೆ, ಆಮೇಲೆ ಸಮಾಲೋಚನೆ :—**

ವಸ್ತುಗಳನ್ನು ಪ್ರತ್ಯಕ್ಷವಾಗಿ ನೋಡುವದರಿಂದ ಮಗುವಿನಲ್ಲಿ ಅವು ಗಳ ಬಗ್ಗೆ ಕುತೂಹಲವು ಉಂಟಾಗುವದು. ಹೆಚ್ಚು ತಿಳಿದುಕೊಳ್ಳಬೇಕೆಂಬ ಹಂಬಲವು ಹುಟ್ಟುವದು. 'ಹೇಗೆ'–'ಯಾಕೆ'–'ಇದು ಹೀಗೇಕೆ'– 'ಅದು ಹಾಗೇಕೆ' ಎನ್ನುವ ಪ್ರಶ್ನೆಗಳ ಮಳೆಯನ್ನೇ ಮಗುವು ಸುರಿಸು ವದು. **ಕೊಟ್ಟ ಉತ್ತರಗಳಿಂದ ಸಮಾಧಾನ ಹೊಂದದೆ, ತಾನು**

**ನೋಡಿದ್ದಕೊಡನೆ ತುಲನೆ ಮಾಡಿ ನೋಡುವದು. ಇದುವೇ ಸಮಾ ಲೋಚನೆ.** ಈ ಬಗೆಯ ಸಮಾಲೋಚನೆಯನ್ನೇ ಮೇಲಿನ ಸುಭಾಷಿತವು ಸಮರ್ಥಿಸುತ್ತದೆ.

## (೯) ಮೊದಲು ಉದಾಹರಣೆಗಳು, ಆಮೇಲೆ ಸಿದ್ಧಾಂತಗಳು ಸಾಮಾನ್ಯೋಕ್ತಿಗಳು :—

ಅನುಮಾನದ ವಿವೇಚನೆಯಲ್ಲಿ ಈ ಮಾತನ್ನು ಸಾಕಷ್ಟು ವಿವರಿಸ ಲಾಗಿದೆ. ಸಾಕಷ್ಟು ಉದಾಹರಣೆಗಳ ನಿರೀಕ್ಷಣೆಯಿಂದ, ಸಮಾಲೋಚನೆ ಯಿಂದ ಸಾಮಾನ್ಯೋಕ್ತಿಯನ್ನು ಕಂಡುಕೊಳ್ಳುವ 'ಅನುಮಾನ' ವು ಶಾಸ್ತ್ರೀ ಯವಾಗಿದೆ; ಶ್ರೇಷ್ಠತರವಾಗಿದೆ. ಈ ಬಗೆಯ ಅನುಮಾನವೇ ವಿಜ್ಞಾನದ ಅಡಿಗಲ್ಲಾಗಿದೆ. 'ಕ್ರಿಯೆ'ಯನ್ನು ಹೇಳುವ ಪದಕ್ಕೆ ಕ್ರಿಯಾಪದವೆನ್ನುವರು ಎಂಬ ವ್ಯಾಖ್ಯೆಯಿಂದಲೇ ವ್ಯಾಕರಣವನ್ನು ಕಲಿಸುವದಕ್ಕಿಂತಲೂ, ಉದಾ ಹರಣೆಗಳಿಗಾಗಿ ತೆಗೆದುಕೊಂಡ ವಾಕ್ಯಗಳಲ್ಲಿ ಕ್ರಿಯಾಸೂಚಕವಾದ ಪದಗ ಳನ್ನು ವಿದ್ಯಾರ್ಥಿಗಳು ಸಂಗ್ರಹಿಸಬಹುದು; ಸಮಾಲೋಚಿಸಬಹುದು. ಕ್ರಿಯೆಗಳು ಭಿನ್ನವಾಗಿದ್ದರೂ, 'ಕ್ರಿಯೆ'ಯೆಂಬ ಸಾಮಾನ್ಯ ಕಲ್ಪನೆಯೂ, ಕ್ರಿಯಾಸೂಚಕವಾದ ಪದವು ಕ್ರಿಯಾಪದವೆಂಬ ತಿಳುವಳಿಕೆಯೂ ಸಮಾ ಲೋಚನೆಯಿಂದ ತಾನಾಗಿಯೇ ಹೊಳೆಯುವವು. ಗಣಿತ, ವಿಜ್ಞಾನ, ಭೂಗೋಲ, ವ್ಯಾಕರಣಗಳ ಶಿಕ್ಷಣದಲ್ಲಿ ಈ ಸುಭಾಷಿತವು ಅತ್ಯಂತ ಸಹಾ ಯಕವಾದುದು.

## (೧೦) ಮೊದಲು ಸುಲಭವಾದುದು, ಆಮೇಲೆ ಗಡಚಾದುದು :—

ಕಲಿಯುವ ವಿಷಯವು ಮಗುವಿನ ಬುದ್ಧಿಗೆ ನಿಲುಕದಂತೆ ಬಿಗಿಯಾಗಿರ ಕೂಡದೆಂದು ಹಿಂದೆ ಹೇಳಿದೆ. 'ಹೇಗೆ ಮಾಡಲಿ?' ಎಂದು ಆತನನ್ನು ಹೆದರಿಸುವಂತೆಯೂ ಇರಕೂಡದು. ಇಲ್ಲವೆ 'ಇದರಲ್ಲಿ ಏನಿದೆ' ಎಂದು ಆತನು ಹೀಯಾಳಿಸುವಂತೆಯೂ ಆಗಬಾರದು. ವಿಷಯ ವಿವೇಚನೆಯಲ್ಲಿ, ಕಲಿಸುವ ರೀತಿಯಲ್ಲಿ, ಇದೇ ಮಾರ್ಗವನ್ನೇ ಅನುಸರಿಸಬೇಕು. ಶಿಕ್ಷಕನಲ್ಲಿ ತನ್ನ ಜ್ಞಾನದ ಬಗ್ಗೆ ಅಭಿಮಾನವು ಅತಿರೇಕವಾದರೆ ಈ ಬಗೆಯ ಪಾಂಡಿತ್ಯ

ಪ್ರದರ್ಶನದ ಪ್ರಸಂಗಗಳೂ ಒಮ್ಮೊಮ್ಮೆ ಕಂಡುಬರುವವು. **ಕಲಿಸುವಾಗ್ಗೆ ಕಲಿಸುವ ವಿಷಯದ ಪದರುಗಳನ್ನು ಒಂದೊಂದಾಗಿ ಎತ್ತಿ ತೆಗೆದು ವಿದ್ಯಾರ್ಥಿಗಳೆದುರು ಇಡಬೇಕು.** ಸಮಯವರಿತು, ಔಚಿತ್ಯವನ್ನರಿತು ಅವುಗಳನ್ನು ಮುಂದೆ ಹೊಂದಿಸಿಕೊಳ್ಳಬೇಕು. ಇಂದಿನ ಶಿಕ್ಷಣ ಶಾಸ್ತ್ರದ ಆದಿಪುರುಷರಲ್ಲಿ ಒಬ್ಬನಾದ ಪೆಸ್ಟೆಲೋಝಿಯು ಈ ಸಂಗತಿಯನ್ನು ಮೊದಲು ಕಂಡುಹಿಡಿದವನು; ಶಿಕ್ಷಣ ವಿಧಾನದಲ್ಲಿ ಅದನ್ನು ಬಳಕೆಗೆ ತಂದವನು. ಮಕ್ಕಳಿಗೆ ಬರಹವನ್ನು ಕಲಿಸುವಾಗ್ಗೆ ಅಕ್ಷರಗಳನ್ನು ಇದ್ದಕ್ಕಿದ್ದಂತೆ ಇಡಿಯಾಗಿ ಕಲಿಸದೆ, ಅವುಗಳ ಅವಯವಗಳಿಂದ ಪ್ರಾರಂಭಿಸುವದು ಲೇಸೆಂದು ಆತನು ಹೇಳಿದುದನ್ನು ಇಂದಿಗೂ ನಾವು ಅನುಸರಿಸುವೆವು. ಗೆರೆ—ವರ್ತುಲಗಳಿಂದ ಪ್ರಾರಂಭಿಸಿ, ಅವುಗಳ ಜೋಡಣೆಯಿಂದ ಅಕ್ಷರಗಳ ಆಕೃತಿಗಳನ್ನು ತೆಗೆಯುವವರೆಗೆ, ಮಗುವು ಅನೇಕ ಹೆಜ್ಜೆಗಳನ್ನಿಟ್ಟು ಮುಂದೆ ಸಾಗಬೇಕಾಗುವದು. ಮಗುವಿನ ಅವಧಾನದ ಅವಧಿಯು ಮಿತವಾಗಿರುವಂತೆ, ತಿಳಿದುಕೊಳ್ಳುವ ಆತನ ಬುದ್ಧಿಶಕ್ತಿಯಾದರೂ ಮರ್ಯಾದಿತವಾಗಿರುವದು. ವಿಷಯ ವಿವೇಚನೆಯಲ್ಲಿ ಶಿಕ್ಷಕನು ಈ ಮಾತನ್ನು ಮರೆಯಕೂಡದು. ಮೇಲಿನ ಸುಭಾಷಿತವಾದರೂ ಇದೇ ಮಾತನ್ನೇ ಮತ್ತೊಮ್ಮೆ ಆತನ ನೆನಪಿಗೆ ತಂದುಕೊಡುವದು.

ಈ ಶಿಕ್ಷಣ ಸುಭಾಷಿತಗಳು ಹಿಂದೆ ಹೇಳಿದ ಶಿಕ್ಷಣ ಶಾಸ್ತ್ರದಲ್ಲಿಯ ಹೊಸ ಹಾದಿಗಳನ್ನು ತೋರಿಸುವ ಕೈಗಂಬಗಳಂತಿವೆ. ಮಗುವಿನ ಮನೋಧರ್ಮಗಳ ಸೂಕ್ಷ್ಮವಾದ ನಿರೀಕ್ಷಣೆಯಿಂದಲೇ ಇವು ಹೊಳೆದಿರುವವು. ಅಂತೆಯೇ ಮಾನಸಶಾಸ್ತ್ರದ ಮೂಲ ತತ್ವಗಳಷ್ಟೇ ಇವುಗಳ ಮಹತಿಯಾಗಿದೆ. ಅನುಭವದ ಬೆಳಕಿನಲ್ಲಿ ಹಿಂದೊಮ್ಮೆ ಮಾನ್ಯವಾಗಿದ್ದ ಶಿಕ್ಷಣತತ್ವಗಳೆಷ್ಟೋ ಅಳಿದು ಹೋಗಿರುವವು. ಶಿಕ್ಷಣ ಕ್ರಮದಲ್ಲಿ ಅನೇಕ ಬಗೆಯ ಹೆಚ್ಚುಕಡಿಮೆಗಳಾಗಿರುವವು; ಮುಂದೆಯಾದರೂ ಆಗಲುಬಹುದು. ಆದರೆ ಈ ಶಿಕ್ಷಣ ಸುಭಾಷಿತಳು ಮಾತ್ರ ಮಾನಸಶಾಸ್ತ್ರದ ಬಂಡೆಗಲ್ಲನ್ನೇ ತಳಹದಿಯನ್ನಾಗಿ ಮಾಡಿಕೊಂಡು, ಅಬಾಧಿತವಾಗಿ ತಲೆಯೆತ್ತಿಕೊಂಡು ನಿಂತಿವೆ. **ಅನನುಭವಿಕ**

**ರಾದ ಶಿಕ್ಷಕರಿಗೆ ಇವು ಕುರುಡನ ಕೈಯಲ್ಲಿರುವ ಕೈಗೋಲಿನಂತೆ; ಸಾಮಾನ್ಯವಾಗಿ ಎಲ್ಲ ಶಿಕ್ಷಕರಿಗೂ ತಿಳಿದೂ ತಿಳಿಯದೆಯೂ ತಪ್ಪು ದಾರಿಯನ್ನು ಹಿಡಿಯದಂತೆ ತಡೆಹಾಕುವ ಆತ್ಮಗತವಾದ ನಿರ್ಬಂಧ ಗಳಿದ್ದಂತೆ!**

## ಪರಿಚ್ಛೇದ ೧೪

### ಶಿಕ್ಷಣ ಮಂದಿರಗಳು

ಮಾನವನು ತನ್ನ ಸುಖಸೌಕರ್ಯಗಳಿಗಾಗಿ ಸ್ಥಾಪಿಸಿದ ಸಾಂಘಿಕ ಸಂಸ್ಥೆಗಳಲ್ಲಿ ಶಿಕ್ಷಣ ಸಂಸ್ಥೆಯೂ ಒಂದಾಗಿದೆ. ಸಮಾಜವು ಶೈಶವಾವಸ್ಥೆ ಯಲ್ಲಿ ಇರುವಾಗ್ಗೆ ಶಿಕ್ಷಣವು ಮನೆಮನೆಯ ಕಾರ್ಯವಾಗಿತ್ತು. ಪರಂಪರಾ ಗತವಾಗಿ ಬಂದ ವೃತ್ತಿ–ಉದ್ಯೋಗಗಳನ್ನು ತಂದೆಯು ಮಗನಿಗೆ ಹೇಳಿ ಕೊಡುತ್ತಿದ್ದನು. ಉತ್ತರೋತ್ತರ ಸಾಮಾಜಿಕ ಜೀವನವು ಹೆಚ್ಚು ಸುಸಂಘಟಿತ ವಾಯಿತು. ಸಹಕಾರವೂ ಶ್ರಮವಿಭಾಗವೂ ಅವಶ್ಯವೆನಿಸಿದವು. ಮನೆಮನೆಯ ಶಿಕ್ಷಣವು 'ಮಠ'ವನ್ನು ಸೇರಬೇಕಾಯಿತು. **ಒಂಟಿಗನಾಗಿ ಕಲಿಯು ವದನ್ನು ಬಿಟ್ಟು ಮಗುವು ಎಲ್ಲರೊಡನೆ 'ಕೂಡಿ' ಕಲಿಯಬೇಕಾ ಯಿತು. ಹೀಗಾಗಿ ಶಿಕ್ಷಣ ಸಂಸ್ಥೆಗಳು ಹುಟ್ಟಿದವು. ಮಗುವಿನ ಅಖಂಡವಾದ ಜೀವನ ಶಕ್ತಿಯು ಬಲಿಯುವದಕ್ಕೂ ಬೆಳೆಯುವ ದಕ್ಕೂ ಎಲ್ಲ ಅನುಕೂಲತೆಗಳನ್ನು ಶಿಕ್ಷಣ ಸಂಸ್ಥೆಯು ಒದಗಿಸಬೇಕು.** ಇದಕ್ಕೆ ಅನುಕೂಲವಾದ ಪರಿಸ್ಥಿತಿಯನ್ನು ಉಂಟುಮಾಡಿ, ಯತ್ನಪೂರ್ವಕ ವಾಗಿ ಆರಿಸಿದ ಸಂಸ್ಕಾರದ ಸಾಧನೆಗಳನ್ನು ಉಚಿತವಾದ ರೀತಿಯಲ್ಲಿ, ಕ್ರಮದಲ್ಲಿ, ಪ್ರಮಾಣದಲ್ಲಿ ಮಗುವಿಗೆ ದೊರೆಯುವಂತೆ ಮಾಡುವದೆ ಶಿಕ್ಷಣ ಸಂಸ್ಥೆಯ ಕಾರ್ಯವಾಗಿದೆ.

**ಶಿಕ್ಷಣವು ಜೀವನದೊಂದಿಗೆ ಸಮಾಂತರವಾಗಿ ನಡೆಯಬೇಕು.**

ಶಾಲೆಗಳೆಂದರೆ ವಿಷಯಜ್ಞಾನದ ಮಾರಾಟದ ಮನೆ, ಪರೀಕ್ಷೆಗಳ ಕಾರ ಖಾನೆ ಎನ್ನುವ ತಪ್ಪು ತಿಳುವಳಿಕೆಯು ದೂರವಾಗಬೇಕು. ಪ್ರಾಚೀನಕಾಲದ ಆಶ್ರಮಗಳಿದ್ದಂತೆ, **ಅಧ್ಯಯನವೂ ಅನುಭವವೂ, ಆದರ್ಶವೂ ಆಚರ ಣೆಯೂ, ಒಂದಕ್ಕೊಂದು ಹೊಂದಿಕೊಂಡು ಸರಾಗವಾಗಿ ಸಾಗ ಬೇಕು. ಓದು ಹಾಗೂ ಬಾಳುವೆಗಳನ್ನು ಹೇಗೆ ಒಂದುಗೂಡಿಸ ಬೇಕೆಂಬುದು ಆಧುನಿಕ ಶಿಕ್ಷಣದ ಆದರ್ಶವಾಗಿದೆ. ಜ್ಞಾನ ಹಾಗೂ ಜೀವನಗಳಲ್ಲಿ ಸಂಪರ್ಕಸಹಕಾರಗಳು ತಪ್ಪಿದವೆಂದರೆ ಬಾಳುವೆಯು ಬಯಲು ಭ್ರಾಂತಿಯಾಗುತ್ತದೆ.** ಬಿಸಿಲುಗುದುರೆಯನ್ನು ಬೆನ್ನಟ್ಟುವ ಗುರಿಯಿಲ್ಲದ ಸಾಹಸದಂತೆ ಆಗುತ್ತದೆ. ಮಗುವನ್ನು ಮುಂದಿನ ಬಾಳುವೆಗೆ ಅಣಿಮಾಡುವದೆ ಶಿಕ್ಷಣದ ಉದ್ದೇಶವೆಂದು ಹೇಳುವದುಂಟು. ಆದರೆ ಇಷ್ಟೊಂದು ವ್ಯಾಪಕವಾದ ಉದ್ದೇಶವೂ ಕೂಡ ಇಂದು ಸಂಕುಚಿತವೆನಿಸ ತೊಡಗಿದೆ. **'ಶಿಕ್ಷಣವು ಜೀವನದ ಸಾಧನವಲ್ಲ, ಶಿಕ್ಷಣವೇ ಜೀವ ನವು'** ಎಂದು ಅಮೇರಿಕೆಯ ಶಿಕ್ಷಣ ತಜ್ಞರಾದ 'ಡ್ಯೂಯಿ' ಯೆನ್ನು ವರು ಹೇಳಿರುವರು. 'ಜೀವಿಗೆ ಜೀವನವನ್ನು ಜೀವನದಿಂದ ಜೀವನ ಮುಖಾಂತರವಾಗಿ ಮುಂದೆ ಸಾಗಿಸುವದೆ ಶಿಕ್ಷಣವೆ'ಂದು ಬೇರೊಬ್ಬ ಶಿಕ್ಷಣ ತಜ್ಞರು ಹೇಳಿರುವರು. ಹೀಗೆ ಶಿಕ್ಷಣದ ದಿಶೆಯು ಬದಲಿಸಿದಂತೆ ಶಿಕ್ಷಣ ಮಂದಿರಗಳ ಸ್ವರೂಪದಲ್ಲಿಯೂ ಮಾರ್ಪಾಟು ಅಗತ್ಯವೆನಿಸಿತು. ಆಧುನಿಕ ಶಿಕ್ಷಣಕ್ಕೆ ಅನುಗುಣವಾದ ಈ ಮಾರ್ಪಾಟುಗಳನ್ನು ಇಂದಿನ ಶಿಕ್ಷಣ ಮಂದಿರ ಗಳಲ್ಲಿ ನಾವು ಕಾಣಬಹುದು. **ಶಿಕ್ಷಣವು ರಾಷ್ಟ್ರಜೀವನದ ಉಸುರಿ ನಂತಿರಬಹುದು. ಶಿಕ್ಷಣ ಸಂಸ್ಥೆಗಳು ರಾಷ್ಟ್ರಪುರುಷನ ಶರೀರದಲ್ಲಿ ಕಣ್ಣುಗಳಿದ್ದಂತೆ– ಶಿಕ್ಷಣ ಕಲೆಯು ಕಲಾಮಂದಿರಗಳಂತೆ.**

ನಾಗರಿಕರನ್ನು ನಿರ್ಮಾಣಮಾಡುವ ಶಿಕ್ಷಣ ಸಂಸ್ಥೆಗಳು ನಾಗರಿಕತೆ ಯನ್ನೆ ನಿರ್ದೇಶಿಸುವ ಕುರುಹುಗಳಾಗಿವೆ. ಸಮಾಜದ ಆದರ್ಶ ಆಕಾಂಕ್ಷೆ ಗಳನ್ನು ಅಳೆಯಬಹುದಾದ ಅಳತೆಗಲ್ಲುಗಳಾಗಿವೆ. ಶಿಕ್ಷಣವು ಆತ್ಮವಿಕಾಸದ ಸಾಧನವಿರುವಂತೆ ಶಿಕ್ಷಣ ಕಲೆಯೂ ಒಂದು ವಿಧವಾದ ಈಶ್ವರೋಪಾಸನೆ

ಯಾಗಿದೆ. ಶಿಕ್ಷಣ ಕಾರ್ಯವು ನಡೆಯುವ **ಶಿಕ್ಷಣ ಮಂದಿರಗಳು ದೇವ ಮಂದಿರಗಳಷ್ಟೇ ಪವಿತ್ರಸ್ಥಾನಗಳಾಗಿರಬೇಕು.** ಜನಜೀವನದ ಮಾನಸಿಕವಾದ ಆದರ್ಶ-ಆಕಾಂಕ್ಷೆಗಳು ಶಿಕ್ಷಣ ಮಂದಿರದ ಮಣ್ಣುಕಲ್ಲುಗಳಲ್ಲಿ ಮೂರ್ತಿಗೊಂಡು ವ್ಯಕ್ತವಾಗುವವು. ಉನ್ನತವಾದ ಆದರ್ಶ ಆಕಾಂಕ್ಷೆಗಳಿಗೆ ಈ ಮಂದಿರಗಳು ಅನುರೂಪವಾಗಿರಬೇಕು.

ವ್ಯಕ್ತಿಗತವಾದ ಶಿಕ್ಷಣವು ಪ್ರಾಚೀನಕಾಲದ ಆಶ್ರಮಗಳಲ್ಲಿ ನಡೆಯುತ್ತಿರುವಾಗ್ಗೆ ಅವರಿಗೆ ಶಿಕ್ಷಣ ಮಂದಿರಗಳ ವಿಚಾರವು ಅಗತ್ಯವಾಗಿರಲಿಲ್ಲ, ಪ್ರಧಾನವಾಗಿರಲಿಲ್ಲ. ತಪೋವನಗಳಲ್ಲಿ ಬೆಳೆಯುವ ಬಾಲಬಟುಗಳನ್ನು ನಿಸರ್ಗಮಾತೆಯು ತನ್ನ ಮಡಲಿನಲ್ಲಿಟ್ಟುಕೊಂಡು ಮಮತೆಯಿಂದ ಜೋಕೆ ಮಾಡುತ್ತಿದ್ದಳು. ಅವರಿಗೆ ಬೇನೆ ಬೇಸರಿಕೆಗಳ ಭಯವಿರಲಿಲ್ಲ. ಆಲಸ್ಯ ಅನಾಸ್ಥೆಗಳ ಆತಂಕವಿರಲಿಲ್ಲ. ಮುಂದೆ ನಳಂದಾ, ತಕ್ಷಶಿಲೆ ಇಲ್ಲವೇ ಅನೇಕ ಬುದ್ಧವಿಹಾರ-ಚೈತ್ಯಾಲಯಗಳಲ್ಲಿ ಸಾಂಘಿಕ ಶಿಕ್ಷಣಕ್ಕೆ ಅನುಗುಣವಾದ ಶಿಕ್ಷಣ ಮಂದಿರಗಳನ್ನು ನಾವು ಮೊದಲು ಕಾಣುವೆವು. **ಇಂದಿನ ನಮ್ಮ ಶಿಕ್ಷಣ ಮಂದಿರಗಳು ಸ್ವಚ್ಛತೆ ಅಚ್ಚುಕಟ್ಟುತನಗಳಲ್ಲಿ ಆದರ್ಶಭೂತವಾಗಿರಬೇಕು.** ಚಿಕ್ಕಮಕ್ಕಳ ಮನಸ್ಸನ್ನು ಎಳೆಯುವಂತೆ ಕಟ್ಟಡವು ಚೆಲುವಾಗಿರಬೇಕು. ಅವರಿಗೆ ತಮ್ಮ ಶಾಲೆಯ ಬಗ್ಗೆ ಮೊದಲು ಜನಿಸುವ ಈ ಮಮತೆಯೇ ತಮ್ಮ ರಾಷ್ಟ್ರ-ಸಮಾಜಗಳ ಬಗ್ಗೆ ಅವರಲ್ಲಿ ಮುಂದೆ ನೆಲಿಸಬೇಕಾದ ಅಭಿಮಾನದ ತಳಹದಿಯಾಗಬಹುದು. ಇದಲ್ಲದೆ ಕಲಿಸುವದಕ್ಕೂ ಕಲಿಯುವದಕ್ಕೂ ಅನುಕೂಲವಾದ ಪರಿಸ್ಥಿತಿಯನ್ನು ಎಲ್ಲ ರೀತಿಯಿಂದಲೂ ಈ ಶಿಕ್ಷಣ ಮಂದಿರಗಳು ಒದಗಿಸಿಕೊಡಬೇಕಾಗುವದು.

**ಸ್ಥಳ :—** ಶಿಕ್ಷಣ ಮಂದಿರಗಳಿಗಾಗಿ ಆರಿಸಿದ ಸ್ಥಳವು ಜನ ಸಮ್ಮರ್ದದಿಂದ ಆದಷ್ಟು ದೂರವಾಗಿರಬೇಕು. ಏಕಾಂತತೆಯೂ ಶಾಂತಿಯೂ, ಕಲಿಸುವದಕ್ಕೂ ಕಲಿಯುವದಕ್ಕೂ ಅತ್ಯವಶ್ಯವಾದ ಸಂಗತಿಗಳಾಗಿವೆ. ಜನರ ಒದರಾಟಕ್ಕೂ ಗಾಡಿಗಳ ಗಡಗಡಾಟಕ್ಕೂ ಸನ್ನಿಧವಾದ ಶಿಕ್ಷಣ ಮಂದಿರಗಳಲ್ಲಿ ಕಲಿಸುವದೂ ಕಲಿಯುವದೂ ಸುಗಮವಾಗಿ ಸಾಗಲಾರವು. ೨೩೫.

ಮಕ್ಕಳಿಗೆ ಚಿನ್ನಾಟವಾಡಲು ಬೇಕು. ಈ ಚಿನ್ನಾಟದ–ಓಡಾಟದ ಭರದಲ್ಲಿ ಆಕಸ್ಮಿಕವಾದ ಗಾಡಿಗಳ ಹೋಗಿ ಬರುವಿಕೆಯು ಅವರಿಗೆ ಅಪಾಯವನ್ನು ಉಂಟುಮಾಡಬಹುದು. ಈ ಆಘಾತಗಳ ಅಂಜಿಕೆಯು ಕೇವಲ ಕಾಲ್ಪನಿಕವಾದುದಲ್ಲ. ವೃತ್ತಪತ್ರಗಳನ್ನು ಓದುವವರಿಗೆ ದೊಡ್ಡಪಟ್ಟಣಗಳ ಬೀದಿಯಲ್ಲಿ ಈ ಬಗೆಯ ಅಪಘಾತಗಳು ಸಾಮಾನ್ಯವಾದವುಗಳೆಂದು ಕಂಡುಬರುವದು. ಇವುಗಳನ್ನು ತಪ್ಪಿಸಲು ಶಿಕ್ಷಣಮಂದಿರಗಳ ಮುಂದೆ ಹಾದು ಹೋಗುವಾಗ್ಗೆ ಮೋಟಾರು ಮೊದಲಾದವುಗಳ ವೇಗವನ್ನು ಕಡಿಮೆ ಮಾಡಬೇಕೆಂಬ ಎಚ್ಚರಿಕೆಯನ್ನು ಬರೆದು ಹಚ್ಚಿರುವದು ಕಂಡುಬರುವದು. ಆದರೆ ಈ ಯೋಜನೆಯು ಅಷ್ಟೊಂದು ಯಶಸ್ವಿಯಾಗದು. ಶಿಕ್ಷಣ ಮಂದಿರಗಳು ರಹದಾರಿಯಿಂದ ದೂರವಾಗಿರುವದೇ ಲೇಸು. ದೂರವಾಗಿದ್ದರೆ, ಸಾಂಕು ರೋಗಗಳಿಂದಾಗುವ ಪಿಡುಗಿನ ಪೀಡೆಯನ್ನು ತಪ್ಪಿಸಬಹುದು. ಹೀಗೆಯೇ ಕ್ಷಣಕ್ಷಣಕ್ಕೂ ಹೊಗೆಕಾರುವ ಗಿರಣಿಗಳಿಂದಲೂ ಅವು ದೂರವಾಗಿರಬೇಕು. ಕಟ್ಟಡಕ್ಕಾಗಿ ಆರಿಸಿದ ಸ್ಥಳವು ಎತ್ತರವಾಗಬೇಕು. ನೀರು ನಿಂತು ಮಲೆತು ಹೋಗದಂತೆ ಸುತ್ತಲೂ ಮೋರಿಗಳನ್ನೂ ಹರಿಗಳನ್ನೂ ಮಾಡಿರಬೇಕು.

**ರಚನೆ:**— ಶಾಲೆಯ ಪ್ರಾಕಾರವು ಪ್ರತ್ಯೇಕವಾಗಿರಬೇಕು. ಶಾಲೆಗೆ ಸಂಬಂಧಿಸಿರುವದೆಲ್ಲವನ್ನೂ ಒಳಕೊಳ್ಳುವಂತೆಯೂ ಹೊರಗಾದುದೆಲ್ಲವನ್ನೂ ಹೊರಗಿಡುವಂತೆಯೂ ಪ್ರಾಕಾರವು ವಿಸ್ತೃತವಾಗಿರಬೇಕು; ಸ್ವತಂತ್ರವಾಗಿರಬೇಕು. ಹೀಗಾದರೆ ಇಷ್ಟವಾದ ಸಂಸ್ಕೃತಿಯ ಸಾಧನಗಳೆಲ್ಲವೂ ಒಳಗುಳಿದು ಅನಿಷ್ಟವಾದ ಸಂಗತಿಗಳ ಸಂಪರ್ಕವೂ ಸಮಾಗಮವೂ ತಪ್ಪುವದು. ಮೊದಲು ವರ್ಗಗಳ ಕ್ರಮವನ್ನು ಗೊತ್ತುಪಡಿಸಿ, ಆಮೇಲೆ ಶಾಲೆಯ ಮಂದಿರವನ್ನು ಕಟ್ಟಲು ಕೈಕೊಳ್ಳಬೇಕು. ಯಾಕಂದರೆ, ವರ್ಗಗಳೇ ಶಿಕ್ಷಣ ಮಂದಿರದ ಮುಖ್ಯ ವಿಭಾಗಗಳಾಗಿರುವದರಿಂದ ಅವುಗಳ ಯಥಾಯೋಗ್ಯವಾದ ರಚನೆಯು ಉಳಿದ ಎಲ್ಲ ಸಂಗತಿಗಳಿಗಿಂತಲೂ ಹೆಚ್ಚಿಗೆ ಮಹತ್ವದ್ದಾಗಿರುವದು. ಮಂದಿರವು ಅಂದವಾಗಿರಬೇಕೆಂಬುದು ನಿಜ. ಆದರೆ ಅದರ **ಚೆಲುವು ಸ್ವಚ್ಛತೆಯಲ್ಲಿ, ಅಚ್ಚುಕಟ್ಟುತನದಲ್ಲಿದೆ. ಭವ್ಯತೆಯಲ್ಲಿಲ್ಲ; ಆಡಂಬರದಲ್ಲಿಲ್ಲ.**

ಶಿಕ್ಷಣ ಮಂದಿರಗಳು ನಿಜವಾದ ತಮ್ಮ ಉದ್ದೇಶವನ್ನು ಸಾರ್ಥಕಗೊಳಿಸು ವಂತೆ ಉಪಯುಕ್ತವಾಗಿರಬೇಕು, ಕೇವಲವಾದ ಅಭಿಮಾನಕ್ಕೆ ಬಲಿಯಾಗಿ ಕೆಲಸಕ್ಕೆ ಬಾರದ ಭವ್ಯವಾದ ಕಟ್ಟಡಗಳಿಗಾಗಿ ಎಷ್ಟೋ ಶಿಕ್ಷಣ ಸಂಸ್ಥೆಗಳು ನೀರಿನಂತೆ ದುಡ್ಡು ಸುರುವಿರುವದು ಕೆಲವು ಸ್ಥಳಗಳಲ್ಲಿ ಕಂಡುಬರುವದು. ಶಾಲಾಗೃಹಗಳ ಕಿಡಿಕಿ ಬಾಗಿಲುಗಳನ್ನು ಕೂಡ ವಿಚಾರಪೂರ್ವಕವಾಗಿ ಗೊತ್ತುಪಡಿಸಬೇಕಾಗುವದು. ಮಕ್ಕಳು ಹೋಗುವದಕ್ಕೂ ಬರುವದಕ್ಕೂ ಪ್ರತ್ಯೇಕವಾದ ಸಾಕಷ್ಟು ಮಾರ್ಗಗಳಿರಬೇಕು. ಸ್ಥಳದ ಅನುಕೂಲತೆಯಂತೆ ವರ್ಗಗಳ ಆಕಾರವನ್ನೂ ಗೊತ್ತುಪಡಿಸಬೇಕಾಗುವದು. ಅಂದವಾಗಿ ಕಾಣ ಬೇಕೆಂದು ವರ್ಗಗಳಿಗೆ ಸಂಪೂರ್ಣವಾಗಿ ಚೌಕೋನದ ಆಕೃತಿಯನ್ನು ಕೊಡುವದು ಸರಿಯಾಗದು. ಉದ್ದಳತೆಯಲ್ಲಿ ವರ್ಗಗಳು ಕಿಂಚಿತ್ ಹೆಚ್ಚಿಗೆ ಉದ್ದವಾಗಿರುವದು ಲೇಸು. ವರ್ಗಗಳ ಉದ್ದಳತೆಯು ಅವುಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆಯನ್ನು ಅವಲಂಬಿಸಿರುವದು. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುಕಡಿಮೆಯಾದಂತೆ ಇಲ್ಲವೆ ಬೇರೆ ಪ್ರಸಂಗಗಳಿಗೆ ಅನು ಕೂಲವಾಗುವಂತೆ ಅತ್ತಿತ್ತ ಸರಿಸಬಹುದಾದ ಕಟ್ಟಿಗೆಯ ಹಲಿಗೆಗಳ ಮರೆ ಯನ್ನು ಮಾಡುವದು ಕೆಲವೆಡೆಯಲ್ಲಿ ಕಂಡುಬರುವದು. ಶಾಲಾಗೃಹದಲ್ಲಿ ವಿಸ್ತೃತವಾದುದೊಂದು ಮಧ್ಯಮಂದಿರವು ಅತ್ಯಾವಶ್ಯಕವಾಗಿದೆ. ಎಲ್ಲ ವಿದ್ಯಾ ರ್ಥಿಗಳು ಒಂದೆಡೆಗೆ ಸೇರಿ ನಡೆಸುವ ಪ್ರಾರ್ಥನೆಗೂ ಇಲ್ಲವೆ ಉಳಿದ ಸಮಾ ರಂಭಗಳಿಗೂ ವಿಸ್ತೃತವಾದ ಮಧ್ಯವರ್ತಿ ಮಂದಿರವು ಸಭಾಗೃಹದಂತೆ ಉಪ ಯುಕ್ತವಾಗಿದೆ. ಇಂಥ ಮಧ್ಯವರ್ತಿ ಮಂದಿರದ ಸುತ್ತಲೂ ವರ್ಗಗಳ ಕೋಣೆ ಗಳನ್ನು ಕಟ್ಟಬೇಕು. ಪ್ರತಿಯೊಂದು ವರ್ಗದಿಂದ ಮಧ್ಯವರ್ತಿ ಮಂದಿರಕ್ಕೆ ಹೋಗಲು ಪ್ರತ್ಯೇಕವಾದ ಮಾರ್ಗಗಳಿರಬೇಕು. ವರ್ಗಗಳ ಸುತ್ತಲೂ ಹತ್ತಡಿಯಗಲದ ಬೈಲು ಚಪ್ಪರವಿರಬೇಕು. ಮಕ್ಕಳಿಗೆ ಮಳೆಬಿಸಿಲುಗಳಲ್ಲಿ ಕೂಡ ಆಡಲು ಇದರಿಂದ ಅತಿಶಯವಾದ ಅನುಕೂಲವಾಗುವದು. ವರ್ಗದ ಕೋಣೆಯ ಎತ್ತರವು ಹದಿನಾಲ್ಕು ಅಡಿಯಾಗಿರಬೇಕೆಂದೂ, ಪ್ರತಿಯೊಬ್ಬ ವಿದ್ಯಾರ್ಥಿಗೆ ೧೦–೧೫ ಚೌರಸ ಅಡಿಯಷ್ಟು ಸ್ಥಳವು ದೊರೆಯುವಂತೆ ಅದರ ಉದ್ದಳತೆಯಿರಬೇಕೆಂದೂ ತಜ್ಞರ ಅಭಿಪ್ರಾಯವಾಗಿದೆ.

**ಬೆಳಕು :—** ಚಿಕ್ಕಮಕ್ಕಳ ಚೈತನ್ಯವು ಸಸಿಯಂತೆ! ಅದು ಭರದಿಂದ ಬೆಳೆಯಲು ಬೆಳಕು ಬೇಕು. ಕತ್ತಲೆ ಕವಿದ ಕೋಣೆಯಾಗಲಿ, ಅದರ ನಾಲ್ಕು ಮೂಲೆಗಳಾಗಲಿ ಸರ್ವರೀತಿಯಿಂದಲೂ ಕೆಡಕನ್ನುಂಟುಮಾಡುವವು. **ಎಡ ಬದಿಯಿಂದ ಬರುವ ಬೆಳಕೇ ಯಾವಾಗಲೂ** ಇಷ್ಟವಾದುದು. ಬೆಳಕು ಮುಂದಿನಿಂದ ಬಂದರೆ ಮಕ್ಕಳ ಕಣ್ಣು ಕುಕ್ಕುವವು, ಒಲದಿಂದ ಬರುವ ಬೆಳಕು ಓದುವ ಪುಸ್ತಕದ ಮೇಲೆಯೂ ಬರೆಯುವ ಪಾಟಿ ಕಾಗದಗಳ ಮೇಲೆಯೂ ನೆಳಲು ಕೆಡವಿ ಕತ್ತಲೆಯನ್ನುಂಟುಮಾಡುವದು. ಇದರಿಂದ ಎಡದಿಂದ ಬರುವ ಬೆಳಕೇ ಹಿತಕಾರಿಯಾಗಿದೆ. ವರ್ಗಗಳಲ್ಲಿ ಬೀಳುವ ಬೆಳಕು ಸಾಕಷ್ಟಿರಬೇಕು, ಹಾಗೂ ಸಂಕೀರ್ಣವಾಗಿರಬೇಕು. ಬೆಳಕು ಕಡಿಮೆಯಾದರೆ ಕಣ್ಣು ಹಿಗ್ಗಿಸಬೇಕಾಗುವದರಿಂದ ದೃಷ್ಟಿ ಶಕ್ತಿಯು ದುರ್ಬಲ ವಾಗುವದು. ಬೆಳಕು ಸಂಕೀರ್ಣವಾಗಿರದಿದ್ದರೆ ಮೂಲೆ ಮೂಲೆಗಳಲ್ಲಿ ಅವಿತು ಕೊಂಡಿರುವ ಕತ್ತಲೆಯು ಹಾಗೆ ಉಳಿದು ಅಪಾಯವನ್ನುಂಟುಮಾಡ ಬಹುದು. ಗೋಡೆಗಳಿಗೆ ಬಳಿದ ಬಣ್ಣವು ಕೂಡ ಬೆಳಕಿಗೆ ಅನುಕೂಲವಾ ಗುವಂತೆ ಮಂದವೂ ಕಣ್ಣಿಗೆ ಹಿತಕರವೂ ಆಗಿರಬೇಕು. ಸಾಕಷ್ಟು ಬೆಳಕನ್ನು ಒಳಗೆ ಬಿಡಲು ಕೋಣೆಗಳಿಗೆ ಕಿಡಿಕಿಗಳಿರಬೇಕು. ಗಾಳಿ ಬಿಸಿಲುಗಳ ಬಾಧೆ ಯನ್ನು ಬೇಕಾದಾಗ್ಗೆ ತಪ್ಪಿಸಲು ಕಿಡಿಕಿಬಾಗಿಲುಗಳನ್ನು ಮುಚ್ಚಿದರೂ ಬೆಳಕಿಗೆ ಮಾತ್ರ ತಡೆಯಾಗದಂತೆ ಅವುಗಳಲ್ಲಿ ಕನ್ನಡಿಗಳನ್ನು ಕೂಡಿಸಬೇಕು. ಮೇಲಿಂದಲೂ ಬೆಳಕು ಬರುವಂತೆ ಒಂದೆರಡು ಬೆಳಕಿಂಡಿಗಳನ್ನು ಬಿಡುವದು ಲೇಸು.

**ಹವೆ :—** ಸಜೀವ ಪ್ರಾಣಿಗಳಿಗೆ ಪ್ರಾಣವಾಯು ನಿಜವಾಗಿ ಪ್ರಾಣ ವಿದ್ದಂತೆ. ಸಾಕಷ್ಟು ವಿಶುದ್ಧವಾದ ಹವೆಯು ದೊರೆಯದಿದ್ದರೆ ಮಕ್ಕಳ ಬೆಳವ ಣಿಗೆ ಕುಂಠಿತವಾಗುವದು. ಬುದ್ಧಿಯು ಕೂಡ ಬಲಿಯದು. ಮನಸ್ಸು ಮೈಗಳ್ಳತನಕ್ಕೆ ಮೊದಲು ಮಾಡುವದು. ಹಿರಿಯರಿಗಿಂತಲೂ ಚಿಕ್ಕಮಕ್ಕಳು ಹೆಚ್ಚು ಹೊಲಸು ಪದಾರ್ಥಗಳನ್ನು ತಮ್ಮ ದೇಹಗಳಿಂದ ಹೊರಗೆ ಹಾಕುವ ರೆಂದು ಕಂಡುಬರುವದು. ಮಕ್ಕಳು ದಿನದ ಹೆಚ್ಚು ವೇಳೆಯನ್ನು ತಮ್ಮ

ವರ್ಗಗಳ ಕೋಣೆಗಳಲ್ಲಿಯೇ ಕಳೆಯುವರು. ಅದಕ್ಕಾಗಿ ಈ ಕೋಣೆಗಳು ಆದರ್ಶವಾಗುವಂತೆ, ಸ್ವಚ್ಛವಾಗಿಯೂ ಆರೋಗ್ಯಕರವಾಗಿಯೂ ಇರುವದು ಒಳ್ಳೇದು. ಉಸುರಿನ ಉಚ್ಛ್ವಾಸವು ಕೂಡಲೆ ಹೊರಗೆ ಹೋಗುವದಕ್ಕೆ ಅನು ಕೂಲವಾಗುವಂತೆ ಸಾಕಷ್ಟು ಮಾರ್ಗಗಳಿರಬೇಕು. ಇದೇ ಮೇರೆಗೆ ಹೊರ ಗಿನ ಶುದ್ಧ ಹವೆಗೆ ಒಳಗೆ ಬರಲು ಬಾಧೆಯಾಗದಂತೆಯೂ ಹಾದಿಗಳನ್ನು ಮಾಡಬೇಕು. ಮಗುವು ಒಂದು ಮಿನಿಟಿಗೆ ಹಾದಿನಾರು ಸಾರೆ ಉಸುರಾಡಿ ಸುತ್ತದೆ. ಮಗುವಿಗೆ ಒಂದು ತಾಸಿನಲ್ಲಿ ೧೮ ನೂರು ಘನಫೂಟಿನಷ್ಟು ವಿಶುದ್ಧವಾದ ಹವೆಯನ್ನು ಪೂರೈಸಬೇಕೆಂತಲೂ ಈ ವಿಷಯವನ್ನು ತಿಳಿದು ಕೊಂಡ ಪಂಡಿತರು ಹೇಳುವರು. **ಗಾಳಿ ಬೆಳಕುಗಳ ಅಭಾವದಿಂದ ಶರೀ ರದ ಮೇಲಾಗುವ ಶಾಶ್ವತವಾದ ಕೆಡಕಂತೂ ಹೆಚ್ಚಿನದೇ. ಆದರೆ ಶಿಕ್ಷಕನ ನಿತ್ಯಕ್ರಮವಾದ ಕಲಿಸುವ ಕಾರ್ಯದಲ್ಲಿಯೂ ಅವುಗಳ ಅವಶ್ಯಕತೆಯು ಹೆಚ್ಚಿಹೆಚ್ಚಿಗೆ ಕಂಡುಬರುವದು.** ಗವ್ವುಕುದಿಸುವ ಮುಬ್ಬುಗತ್ತಲೆಯ ಕೋಣೆಗಳಲ್ಲಿ ಮಕ್ಕಳನ್ನು ಕಲೆಹಾಕಿ ಕಲಿಸತೊಡಗಿದರೆ, ಕಲಿಸುವ ವಿಷಯಗಳಲ್ಲಿ ಅವರ ಮನಸ್ಸು ಹರಿಯದು, ಲಕ್ಷ್ಯವು ತೊಡಗದು; ತಲೆ ನೋವು ಸಹ ಉಂಟಾಗುವದು.

ಹವೆ ಬೆಳಕುಗಳನ್ನು ಹಿತವಾಗಿ, ಮಿತವಾಗಿ ಒದಗಿಸುವಂತೆ, ಮಕ್ಕಳ ಮಲ ಮೂತ್ರ ವಿಸರ್ಜನೆಗಾಗಿ ಅನುಕೂಲತೆಯನ್ನು ಮಾಡಿಕೊಡುವದೂ ಶಿಕ್ಷಣ ಮಂದಿರಗಳ ಕರ್ತವ್ಯವಾಗಿದೆ. ಇತ್ತೀಚೆಗೆ ದೊಡ್ಡ ಪಟ್ಟಣಗಳಲ್ಲಿಯ ಶಾಲೆಗಳಲ್ಲಿ ಈ ಬಗೆಯ ಯೋಜನೆಯನ್ನು ಮಾಡಿರುವರು. ಆದರೆ ಪ್ರಾಥ ಮಿಕ ಶಾಲೆಗಳಲ್ಲಿ, ವಿಶೇಷವಾಗಿ ಹಳ್ಳಿಗಳ ಶಾಲೆಗಳಲ್ಲಿ ಈ ವಿಷಯಕ್ಕೆ ಯೋಜನೆಯನ್ನೇ ಮಾಡಿದಂತೆ ತೋರುವದಿಲ್ಲ. ಮೂತ್ರಾಶಯ ಮೊದಲಾ ದವುಗಳು ಶಾಲೆಯ ಮಂದಿರಕ್ಕೆ ತೀರ ಸಮೀಪವಾಗಿರಕೂಡದು. ಅವುಗ ಳನ್ನು ಸ್ವಚ್ಛವಾಗಿಡುವ ಕಾರ್ಯದಲ್ಲಿ ಸರ್ವರೂ ದಕ್ಷರಾಗಿರಬೇಕಾಗುವದು.

ಮೇಲೆ ವಿವೇಚಿಸಿದ ವಿವರಗಳು ಹಳೆಯ ಹಾಗೂ ಹೊಸ ಪದ್ಧತಿಯ ಶಿಕ್ಷಣ ಮಂದಿರಗಳೆರಡಕ್ಕೂ ಸಮನಾಗಿ ಅನ್ವಯಿಸುವವು. ಆದರೆ ಕ್ರಿಯಾ

ತ್ಮಕವಾದ **ಮೂಲ ಶಿಕ್ಷಣದ ಮಂದಿರಗಳಲ್ಲಿ** ಕೆಲವೊಂದು ಮಾರ್ಪಾಡು ಗಳು ಅಗತ್ಯವೆನಿಸಬಹುದು. ಇವುಗಳಲ್ಲಿ **ಸೇವಾಗ್ರಾಮದಲ್ಲಿರುವಂತೆ ಸರಿಸಲು ಬರುವ ಹೊಸ ನಮೂನೆಯ ಪಾಯಖಾನೆಗಳನ್ನು ಬಳಿಸ ಬಹುದು.** ಒಂದು ಅಡಿ ತೆಗ್ಗಿನಲ್ಲಿ ದಿನದಿನಕ್ಕೆ ಮಣ್ಣನ್ನು ಬದಲಿಸಿ ಮಲ ಮೂತ್ರಗಳಿಂದ ಉಪಯುಕ್ತವಾದ ಗೊಬ್ಬರವನ್ನು ಹೇಗೆ ಮಾಡಿಕೊಳ್ಳಲು ಬರುವದೆಂಬದನ್ನು ಹಳ್ಳಿಗರಿಗೆ ತಿಳಿಸಿ ಹೇಳಲು ಮೂಲ ಶಿಕ್ಷಣದ ಶಾಲೆಗಳು ಸಹಾಯಕವಾಗುವವು. ಮೂಲೋದ್ಯೋಗಕ್ಕೆ ಅನುಗುಣವಾಗಿ ವಿದ್ಯಾರ್ಥಿ ಗಳಿಗೆ ಬೇಕಾಗುವಷ್ಟು ಸ್ಥಳ ದೊರೆಯಬೇಕು. ಮೂಲೋದ್ಯೋಗವು ನೂಲುವ ದಾಗಿದ್ದರೆ, ತಕಲಿಯಿಂದ ನೂಲುವಾಗ್ಗೆ ೧೨ ಚೌ. ಫೂಟು, ರಾಟಿಯಿಂದ ನೂಲುವಾಗ್ಗೆ ೨೦ ಚೌ. ಫೂ. ಹಾಗೂ ಅರಳಿಯನ್ನು ಹಿಂಜಿ ಹೊಡೆಯುವ ದಾದರೆ ೩೦ ಚೌ. ಫೂ. ಗಳಷ್ಟು ಕ್ಷೇತ್ರವು ಪ್ರತಿಯೊಬ್ಬ ವಿದ್ಯಾರ್ಥಿಗೆ ಆವಶ್ಯಕವೆಂದು ತಜ್ಞರು ಹೇಳುವರು. ವಿವಿಧ ಕಲೆಗಳಿಗಾಗಿ ಬೇಕಾಗುವ ಉಪಕರಣಗಳನ್ನೂ ಮೂಲದ್ರವ್ಯಗಳನ್ನೂ ಓರಣವಾಗಿ ಸಂಗ್ರಹಿಸಲೂ ಸಂರ ಕ್ಷಿಸಲೂ ಸೆಲ್ಫುಗಳೂ ಕಪಾಟುಗಳೂ ಇರಬೇಕು. ಸಿದ್ಧವಾದ ಸರಕುಗಳನ್ನು ಜತನ ಮಾಡಲೂ ಇಲ್ಲವೇ ಶ್ರೇಷ್ಠವಾದವುಗಳನ್ನು ಪ್ರದರ್ಶಿಸಲೂ ಇವುಗಳು ಬೇಕಾಗಬಹುದು. ಸಾಮಾನ್ಯ ಶಾಲೆಗಳಿಗಿಂತಲೂ ಮೂಲ ಶಿಕ್ಷಣ ಶಾಲೆಗಳಿಗೆ ಹೆಚ್ಚು ಸ್ಥಳ–ವಿಸ್ತಾರ ಬೇಕೆನ್ನುವದು ಇದರಿಂದ ತಿಳಿಯುವದು. ಆದರೆ, **ಸಾದಾ ಜೀವನದ ಆದರ್ಶವನ್ನಿಟ್ಟುಕೊಂಡಿರುವ ಮೂಲ ಶಿಕ್ಷಣದ ಶಾಲೆಗಳೂ ಅಷ್ಟೇ ಸಾದಾರೀತಿಯವಾಗಿರಬಹುದು. ಆಡಂಬರ ಭವ್ಯತೆಗಳನ್ನು ಬಿಟ್ಟುಕೊಟ್ಟು ಅನುಕೂಲತೆ, ಉಪಯುಕ್ತತೆಗಳ ಕಡೆಗೆ ಹೆಚ್ಚು ಲಕ್ಷಕೊಟ್ಟು ನಮ್ಮ ರಾಷ್ಟ್ರದ ಆರ್ಥಿಕ ಸ್ಥಿತಿಗೆ ಹಾಗೂ ಆಶ್ರಮ ಸಂಸ್ಥೆಗಳ ಪೂರ್ವಪರಂಪರೆಗೆ ಹೊಂದಿಕೊಂಡು ಇವುಗಳ ಕಟ್ಟಡಗಳನ್ನು ರಚಿಸುವದು ಶ್ರೇಯಸ್ಕರವಾದುದು.**

## ಪರಿಚ್ಛೇದ ೧೫

### ವಿಷಯಯೋಜನೆ

ಶಿಕ್ಷಣದ ಉದ್ದೇಶವು ಎಷ್ಟು ವ್ಯಾಪಕವಾಗಿದೆಯೆಂಬುದನ್ನು ಹಿಂದೆ ಹೇಳಿದೆ. ಶಿಕ್ಷಣವು ಜೀವನದ ವಿವಿಧವಾದ ಅಂಗಗಳನ್ನೆಲ್ಲ ವ್ಯಾಪಿಸುವದು. ಇಂದ್ರಿಯಗಳ ಸಹಕಾರದಿಂದ ಜೀವನದಲ್ಲಿ ಒದಗುವ ಅನುಭವಗಳು ಶಿಕ್ಷಣದ ಮೂಲ ವಸ್ತುವೆಂಬುದು ನಿಜವು. ಹುಟ್ಟಿದಂದಿನಿಂದ ಈ ಬಗೆಯ ಸಂಸ್ಕಾರವು ಅವ್ಯಾಹತವಾಗಿ ಸಾಗುವದು. ಆದರೆ ತಾನಾಗಿಯೇ, ಯಾವ ನಿಯಮ ನಿರ್ಬಂಧಗಳಿಲ್ಲದೆ ಸ್ವಚ್ಛಂದವಾಗಿ ನಡೆಯುವ ಈ ಸಂಸ್ಕಾರವು ವ್ಯಕ್ತಿಯ ಉನ್ನತಿಯನ್ನು ಸಾಧಿಸಲಾರದು. ಶಾಲೆಯಲ್ಲಿ ನಡೆಯುವ ಶಿಕ್ಷಣವು ಇದೇ ಬಗೆಯ ಸಂಸ್ಕಾರದ ಸುವ್ಯಸ್ಥಿತ ಸ್ವರೂಪವಾಗಿರುವದು. **ವ್ಯಕ್ತಿ ಸಮಾಜಗಳ ಹಿತಕ್ಕೆ ವಿರೋಧವಾಗದಂತೆ ಉಚಿತವಾದ ಶಿಕ್ಷಣವನ್ನು ಶಾಲೆಯು ಒದಗಿಸಬೇಕು.** ನಿಜವಾದ ಶಿಕ್ಷಣವು ಮಗುವಿನ ಮಾನಸಿಕ, ನೈತಿಕ, ಶಾರೀರಿಕ ಶಕ್ತಿಗಳೆಲ್ಲ ಬಲಿಯುವಂತೆ ಬೆಳೆಸುವದು. ಶಿಕ್ಷಣದ ವಿಷಯ ಯೋಜನೆಯಲ್ಲಿ ಈ ಮೂರು ಬಗೆಯ ಉದ್ದೇಶವನ್ನು ಇಟ್ಟುಕೊಳ್ಳಬೇಕಾಗುವದು.

**ಸ್ವಾನುಭವವೇ-ಶಿಕ್ಷಣವೆ ? :—** ಅನುಭವವು ಶಿಕ್ಷಣದ ಮೂಲ ವಸ್ತುವೆಂದು ಒಪ್ಪಿಕೊಂಡರೂ, ಶಿಕ್ಷಣದ ಕಾರ್ಯವನ್ನು ಕೇವಲ ಸ್ವಾನುಭವಕ್ಕೆ ಒಪ್ಪಿಸುವದು ಸರಿಯಾಗದು. ಅಲ್ಪಶಕ್ತಿಗಳುಳ್ಳ ಬೆಳೆಯುವ ಮಗುವು ಶಿಕ್ಷಣದ ಅಲ್ಪಾವಧಿಯಲ್ಲಿ ಜೀವನೋಪಯೋಗಿಯಾದ ಆವಶ್ಯಕ ವಿಷಯ ಜ್ಞಾನವೆಲ್ಲವನ್ನೂ ಸಂಗ್ರಹಿಸಲಾರದು. **ತನ್ನ ಅನುಭವಗಳೊಡನೆ ಹಿಂದಿನ ಹಿರಿಯರ ಅನುಭವವೆಲ್ಲವನ್ನು ತನ್ನದಾಗಿ ಮಾಡಿಕೊಳ್ಳುವದು ಬೆಳೆಯುವ ಮಗುವಿನ ಕಾರ್ಯವಾಗಿದೆ.** ಶಿಕ್ಷಣ ಸಂಸ್ಥೆಗಳೆಲ್ಲವೂ ಮಗುವಿಗಾಗಿ ಮಾಡಬೇಕಾದ ಕಾರ್ಯವಾದರೂ ಇದೇ ಆಗಿರುವದು. ಹಿಂದಿನ ಹಿರಿಯರ ಅನುಭವಗಳೇ ಇಂದಿನ ಜ್ಞಾನದ ವಿಷಯಗಳಾಗಿವೆ. ಹಿಂದಿನ ಹಿರಿಯರು ಮುಂದಿನ ಪೀಳಿಗೆಗಾಗಿ ಒಪ್ಪಿಸುವ ಅನುಭವ ಸಂಪತ್ತಿಯೇ ಇಂದಿನ

ಜ್ಞಾನ ಭಾಂಡಾರ. ಶಿಕ್ಷಣ ಸಂಸ್ಥೆಗಳಲ್ಲಿ ಮಗು ಈ ಜ್ಞಾನ ಭಾಂಡಾರವನ್ನು ಮೊದಲು ಪ್ರವೇಶಿಸುವನು. ಆದರೆ ಅಜ್ಞನಾದ **ಮಗುವು ಅಪಾರವಾದ ಜ್ಞಾನ ಸಂಪತ್ತಿನಲ್ಲಿ ತನಗೆ ಬೇಕಾದುದನ್ನು ತಾನೇ ಆಯ್ದುಕೊಳ್ಳಲಾರನು.** ಮಗುವಿನ ಕಾಲೋಚಿತವಾದ ಒಲವು–ಶಕ್ತಿಗಳಿಗೆ ಅನುಗುಣವಾದ ಜ್ಞಾನದ ವಿಷಯಗಳನ್ನು ಶಿಕ್ಷಕನೂ ಶಿಕ್ಷಣ ಸಂಸ್ಥೆಗಳೂ ತೂಗಿ, ತಿಳಿದು ನೋಡಿ ಒದಗಿಸಬೇಕಾಗುವದು. ಇದನ್ನೇ **ವಿಷಯ ಯೋಜನೆ** ಎಂದು ಹೇಳುವದುಂಟು. ವಿಷಯಗಳನ್ನು ಗೊತ್ತುಪಡಿಸುವದು ಸುಲಭವಾದ ಸಂಗತಿಯಲ್ಲ. ಮುಂದಿನ ನಾಗರಿಕರಾಗಿರುವ ಇಂದಿನ ಎಳೆಯ ಮಕ್ಕಳಿಗೆ ಕಲಿಯುವ ಅವಧಿಯಲ್ಲಿ ಯಾವ ವಿಷಯಗಳನ್ನು ಕ್ರಮಶಃ ಒದಗಿಸಬೇಕೆಂಬುವದನ್ನು **ಮಗುವಿನ ಹಾಗೂ ಸಮಾಜದ ಹಿತವನ್ನು ಮುಂದಿಟ್ಟುಕೊಂಡು ಗೊತ್ತುಪಡಿಸಬೇಕಾಗುವದು. ಶಿಕ್ಷಣದಲ್ಲಿಯ ವಿಷಯ ಯೋಜನೆಯು ಒಂದು ಜನಾಂಗದ ಆಶೆ–ಆಕಾಂಕ್ಷೆಗಳನ್ನೆಲ್ಲ ತೋರಿಸುವ ಕೈಗನ್ನಡಿಯಂತಿರಬೇಕು.**

**ವಿಷಯ ಯೋಜನೆಯ ಕೆಲವು ಸಾಮಾನ್ಯ ತತ್ವಗಳು :—**

ಮುಂದಿನ ನಾಗರಿಕ ಜೀವನದ ವಿವಿಧವಾದ ಕಾರ್ಯಗಳನ್ನು ಕೈಕೊಳ್ಳಲು, ಬೆಳೆಯುವ ಮಕ್ಕಳನ್ನು ಇಂದಿನಿಂದಲೇ ಅಣಿಗೊಳಿಸುವದು ವಿಷಯ ಯೋಜನೆಯ ಮೂಲೋದ್ದೇಶವಾಗಿದೆ. ಹಿಂದಿನ ವಿಷಯಯೋಜನೆಯು ಒಂದು ತಪ್ಪು ತಿಳುವಳಿಕೆಯನ್ನು ಆಧರಿಸಿತ್ತು. ಮನಸ್ಸೆನ್ನುವದು ಸ್ಮರಣ, ತರ್ಕ, ಕಲ್ಪಕತೆ ಇವೇ ಮೊದಲಾದ ಶಕ್ತಿಗಳನ್ನು ಸಂಗ್ರಹಿಸುವ ಪೆಟ್ಟಿಗೆ,—ಈ ಮಾನಸಿಕ ಶಕ್ತಿಗಳು ಪರಸ್ಪರ ಭಿನ್ನವಾದವುಗಳು,—ವಿಶಿಷ್ಟವಾದ ವಿಷಯಗಳ ಶಿಕ್ಷಣದಿಂದ ಈ ಶಕ್ತಿಗಳನ್ನು ತಿದ್ದಿ ಒಲಿಸಬಹುದು,—ಎನ್ನುವದೇ ಹಿಂದಿನ ಶಿಕ್ಷಣದಲ್ಲಿಯ ತಪ್ಪು ತಿಳುವಳಿಕೆಯು. ಆದರೆ ಅಖಂಡವಾದ ಮನಸ್ಸು ಇವೆಲ್ಲ ಕಾರ್ಯಗಳನ್ನು ಸಾಗಿಸುವದೆಂಬ ಇಂದಿನ ಮಾನಸಶಾಸ್ತ್ರದ ತತ್ವವು ಈ ತಪ್ಪು ತಿಳುವಳಿಕೆಯನ್ನು ತೆಗೆದು ಹಾಕಿದೆ.

ವಿಷಯ ಯೋಜನೆಗಾಗಿ ವ್ಯಾವಹಾರಿಕವಾದ ಇನ್ನೊಂದು ಉದ್ದೇಶವು

ಕಂಡುಬರುವದು. ಶಾಲೆಯಲ್ಲಿ ಕಲಿಸುವ ವಿಷಯಗಳು ಮುಂದಿನ ಚರಿತಾರ್ಥಕ್ಕೆ ಬೇಕಾದ ಶಕ್ತಿಯನ್ನು ತಂದುಕೊಡಬೇಕೆಂದು ಕೆಲವರ ಹೇಳಿಕೆ. ಜೀವನ ಸಂಗ್ರಾಮದಲ್ಲಿ ಚರಿತಾರ್ಥಸಾಧನವು ವ್ಯಕ್ತಿಗೆ ಅತ್ಯಂತ ಅವಶ್ಯವಾದುದು. **ಆದರೆ ಚರಿತಾರ್ಥದ ಸಾಧನದೊಂದಿಗೆ ಆತ್ಮಸಂಸ್ಕೃತಿಯ ಸಾಧನವನ್ನೂ ಶಿಕ್ಷಣವು ಒದಗಿಸಬೇಕಾಗುವದು. ಇವೆರಡನ್ನೂ ಸಮರಸವಾಗಿ ಕೂಡಿಸಲು ಮಾಡಿದ ಪ್ರಯತ್ನಗಳಲ್ಲಿ ಇಂದಿನ ವರ್ಧಾಯೋಜನೆಯು ಒಂದಾಗಿದೆ.**

ಸರಿಯಾದ ವಿಷಯ ಯೋಜನೆಯನ್ನು ಗೊತ್ತುಪಡಿಸುವಾಗ್ಗೆ ಕೆಳಗಿನ ಕೆಲವು ತತ್ವಗಳನ್ನು ಲಕ್ಷದಲ್ಲಿಟ್ಟುಕೊಳ್ಳುವದು ಅವಶ್ಯವಾಗಿದೆ :—

**(೧) ಕಲಿಸುವ ವಿಷಯಗಳು ಮಗುವಿಗಾಗಿ ಇರುವವೆಂಬುದನ್ನು ಮರೆಯಕೂಡದು.** ಭಿನ್ನ ಭಿನ್ನವಾದ ವಯೋಮಾನಗಳಲ್ಲಿ ಭಿನ್ನ ಭಿನ್ನವಾಗುವ ಮಗುವಿನ ಒಲವು ಶಕ್ತಿಗಳಿಗೆ ವಿಷಯ ಯೋಜನೆಯು ಅನುಗುಣವಾಗಿರಬೇಕು; ಅವುಗಳಿಗೆ ಪೂರ್ಣವಾಗಿ ಹೊಂದಿಕೊಂಡು ನಾಗಬೇಕು. ಒಲವುಗಳು ಬದಲಿಸಿದಂತೆ ವಿಷಯಗಳಲ್ಲಿಯೂ ವ್ಯತ್ಯಾಸವಾಗಬೇಕು. ಬುದ್ಧಿಶಕ್ತಿಯಲ್ಲಿ ಹೆಚ್ಚುಕಡಿಮೆಯಾದಂತೆ, ವಿಷಯಗಳ ಪರಿಮಿತಿಯೂ ಹೆಚ್ಚುಕಡಿಮೆಯಾಗಬೇಕು. **ಬಾಲ್ಯವು ಜೀವನದ ಪ್ರಭಾತಕಾಲ.** ಅಂದು ಚಿಕ್ಕಮಕ್ಕಳಿಗೆ ಒದಗಿಸಲಾಗುವ ವಿಷಯವು ಜೀವನದ ಸ್ವಾರಸ್ಯವನ್ನು ಎಲ್ಲ ರೀತಿಯಿಂದಲೂ ಒಡೆದು ತೋರುವಂತಿರಬೇಕು.

**(೨) ಇಂದಿನ ಚಿಕ್ಕಮಕ್ಕಳು ಮುಂದಿನ ನಾಗರಿಕರಾಗುವರೆಂಬುದನ್ನು ವಿಷಯ ಯೋಜನೆಯು ಮರೆಯಕೂಡದು.** ಚಿಕ್ಕಮಕ್ಕಳ ಇಂದಿನ ವಯೋಮಾನಕ್ಕೆ ಅನುಗುಣವಾಗುವಂತೆ ವಿಷಯಗಳನ್ನು ಆರಿಸುವದರಲ್ಲಿ ಮುಂದಿನ ಅವರ ಜೀವನದ ಕಡೆಗೂ ದೃಷ್ಟಿಯನ್ನಿಡಬೇಕಾಗುವದು. ಸಮಾಜದ ಕುಂದುಕೊರತೆಗಳೇನು ? ಅವುಗಳನ್ನು ಕಳೆದುಕೊಳ್ಳಲು ಸಮಾಜವು ಯಾವ ಪ್ರಯತ್ನವನ್ನು ಮಾಡುತ್ತಲಿದೆ? ಇಂದಿನ ಸಮಾಜದ ಆಶೆಗಳೇನು ? ಮುಂಬರುವ ಸಮಾಜದ ಆಕಾಂಕ್ಷೆಗಳು ಯಾವವು?

ಇವೆಲ್ಲ ಸಂಗತಿಗಳ ಪೂರ್ಣವಾದ ವಿಚಾರವನ್ನು ವಿಷಯಯೋಜನೆಯು ಮೊದಲು ಮಾಡಬೇಕಾಗುವದು. **ಸಮಾಜದ ಆಶೆ-ಆಕಾಂಕ್ಷೆಗಳನ್ನು ನೆರವೇರಿಸುವವರೂ ಇಂದಿನ ಬಾಲಕರೇ; ಆ ಪ್ರಯತ್ನಗಳ ಫಲಿತಾಂಶವನ್ನು ಉಪಭೋಗಿಸುವವರೂ ಅವರೇ ಆಗಿರುವರು.** ಇದಕ್ಕಾಗಿ ಅವಶ್ಯವಾಗಿರುವ ಪಾತ್ರತೆಯನ್ನೂ ಸದ್ಗುಣಗಳನ್ನೂ ಸರಿಯಾದ ರೀತಿಯಲ್ಲಿ ಚಿಕ್ಕಮಕ್ಕಳಿಗೆ ಮೊದಲಿನಿಂದಲೇ ತಂದುಕೊಡಲು ವಿಷಯ ಯೋಜನೆಯು ಯತ್ನಿಸಬೇಕು. ತಮ್ಮ ನಾಡಿನ ಪೂರ್ವದ ವೈಭವವನ್ನು ಚಿಕ್ಕಮಕ್ಕಳು ಮರೆಯದಂತೆ ವಿಷಯಯೋಜನೆಯಲ್ಲಿ ಅತ್ಯಂತ ದಕ್ಷತೆ ವಹಿಸಬೇಕು. **ತಮ್ಮ ನಾಡು ನುಡಿಗಳ ಬಗ್ಗೆ ಸಮಂಜಸವಾದ ಆಸ್ಥೆ ಅಭಿಮಾನಗಳು ಜನಿಸಬೇಕಾದರೆ ಗತವೈಭವದ ಅರಿವು ಚಿಕ್ಕಮಕ್ಕಳಿಗೆ ಮೊದಲಿನಿಂದಲೂ ಅವಶ್ಯವಾದುದು.**

(೩) ವಿಸ್ತಾರವಾದ ನಮ್ಮ ದೇಶದಲ್ಲಿ ಪ್ರಾದೇಶಿಕವಾದ ಅನೇಕ ವಿಷಯಗಳಿರುವವು. ಭಿನ್ನಭಿನ್ನವಾದ ಸಮಸ್ಯೆಗಳಿರುವವು. ವಿಷಯಯೋಜನೆಯು ಇವೆಲ್ಲವುಗಳನ್ನೂ ಲಕ್ಷದಲ್ಲಿಡಬೇಕಾಗುವದು. ಆ ಭಾಗದ ಭಾಷೆ, ಅಲ್ಲಿಯ ಐತಿಹ್ಯ, ಆ ಜನರ ಆಶೆ ಆಕಾಂಕ್ಷೆಗಳು-**ಹೀಗೆ ಸ್ಥಳೀಯವಾದ ಪರಿಸ್ಥಿತಿಯನ್ನು ವಿಷಯಯೋಜನೆಯು ಪರ್ಯಾಲೋಚಿಸಬೇಕಾಗುವದು.** ಇದೇ ಮೇರೆಗೆ ಅಲ್ಲಿಯ ಜನರಲ್ಲಿ ಪರಂಪರೆಯಿಂದ ಸಾಗಿಬಂದಿರುವ ಉದ್ಯೋಗಗಳಿಗೂ ವ್ಯವಸಾಯಗಳಿಗೂ ವಿಷಯಯೋಜನೆಯಲ್ಲಿ ಎಡೆಯಿರಬೇಕು. ವಿಷಯಗಳ ಜೋಡಣೆಯು ಇವುಗಳಿಗೆಲ್ಲ ಹೊಂದಿಕೊಳ್ಳುವಂತಿರಬೇಕು.

(೪) ಜೀವನದ ರೀತಿಯು ಬದಲಿಸಿದರೂ, ಇಲ್ಲವೇ ಶಿಕ್ಷಣದ ಗುರಿಯೇ ಬೇರೆಯಾದರೂ, ಯಾವಾಗಲೂ ಹಿಂದಿನ ವಿಷಯಗಳೆಲ್ಲಕ್ಕೂ ಅಂಟಿಕೊಳ್ಳುವದು ಸರಿಯಾಗದು. **ಹೊಸ ಜೀವನದ ಹೊಸ ಪರಿಸ್ಥಿತಿಗಳನ್ನೆದುರಿಸಲು ಮುಂದಿನ ನಮ್ಮ ನಾಗರಿಕರಿಗೆ ಹೊಸ ವಿಷಯಗಳ ಜ್ಞಾನವು ಅವಶ್ಯವಾಗಿದೆ.** ವಿಷಯಯೋಜನೆಯಲ್ಲಿ ಇಂದಿನ ಜೀವನಕ್ಕೆ

ಬಾರದ ವಿಷಯಗಳನ್ನು ಬಿಟ್ಟುಕೊಡಬೇಕಾಗಬಹುದು; ಉಪಯುಕ್ತವಾದ ಹಲವು ಹೊಸ ವಿಷಯಗಳನ್ನು ಹೆಚ್ಚಿಗೆ ಸೇರಿಸಬೇಕಾಗುವದು. ಕಾಲದೇಶಗಳಿಗೆ ಅನುಗುಣವಾಗಿ ಹೆಚ್ಚುಕಡಿಮೆ ಹೊಂದುವ ಗುಣವು ವಿಷಯಯೋಜನೆಯಲ್ಲಿರಬೇಕು.

(೫) **ಆರಿಸಿದ ವಿಷಯಗಳೂ, ಅವುಗಳ ಪರಿಮಿತಿಯೂ ಮಿತವಾಗಿರಬೇಕು; ಹಿತವಾಗಿರಬೇಕು.** ಅನೇಕ ವಿಷಯಗಳ ಅರ್ಧಮರ್ಧ ಜ್ಞಾನಕ್ಕಿಂತಲೂ ಸರಿಯಾದ ರೀತಿಯಲ್ಲಿ ಆರಿಸಿದ ಕೆಲವೇ ವಿಷಯಗಳಲ್ಲಿ ತಕ್ಕಮಟ್ಟಿಗೆ ಪ್ರಾವೀಣ್ಯತೆಯನ್ನು ತಂದುಕೊಡಲು ವಿಷಯಯೋಜನೆಯಲ್ಲಿ ಆಸ್ಪದವಿರಬೇಕು. ವಿವಿಧ ವಿಷಯಗಳ ಜ್ಞಾನವು ವ್ಯಕ್ತಿಗೆ ಅವಶ್ಯವೆಂಬುದು ನಿಜವು. ಆದರೆ ವಿವಿಧತೆಯನ್ನು ತರುವದು ಇಷ್ಟವಾದರೂ **ಕಲಿಯುವವರಿಗೆ ವಿಷಯಗಳು ತಲೆಭಾರವಾಗದಂತೆ ಇರಬೇಕು.**

ಒಟ್ಟಿನಲ್ಲಿ ವಿಷಯ ಯೋಜನೆಯು ಚಿಕ್ಕಮಕ್ಕಳ ಹಿತವನ್ನೇ ಮುಂದಿಟ್ಟುಕೊಳ್ಳಬೇಕು. ಅವರ ಒಲವು ಶಕ್ತಿಗಳಿಗೆ ಹೊಂದಿಕೊಂಡು ಸಾಗಬೇಕು. ಬದಲಿಸುವ ಜೀವನದೊಡನೆ ಹಿಂದೆ ಬೀಳದೆ, ಇಲ್ಲವೆ ಸಿಡಿದು ದೂರ ನಿಲ್ಲದೆ, ಸಮವಾಗಿ ಸಾಗಿಕೊಂಡು ಬರಬೇಕು. ನಾಡಿನ ಹಿಂದಿನ ಹಿರಿಮೆಯನ್ನು ಬೆಳೆಯುವ ಮಕ್ಕಳ ದೃಷ್ಟಿಗೆ ತಂದುಕೊಡಬೇಕು. ನಾಡು–ನುಡಿಗಳ ಬಗ್ಗೆ ಅವರಲ್ಲಿ ಅಭಿಮಾನವನ್ನು ಹುಟ್ಟಿಸಬೇಕು. ಇಂದಿನ ಜೀವನದ ಸಮಸ್ಯೆಗಳನ್ನು ಎದುರಿಸಲು ಸಾಕಷ್ಟು ಶಕ್ತಿಸಾಮರ್ಥ್ಯಗಳನ್ನು ಅವರಲ್ಲಿ ತಂದುಕೊಡಬೇಕು. ಮುಂದಿನ ಉನ್ನತಿಯ ಬಗ್ಗೆ ಆಶೆ ಆಕಾಂಕ್ಷೆಗಳನ್ನು ಅವರು ತಾಳುವಂತೆ ಮಾಡಬೇಕು. ವಿಷಯಯೋಜನೆಯು ಉದ್ದೇಶಗಳನ್ನೆಲ್ಲ ಈಡೇರಿಸಿದರೆ ಮಾತ್ರ ಸಫಲವಾಗುವದು.

## ಮೂಲ ಶಿಕ್ಷಣವೂ ವಿಷಯ ಯೋಜನೆಯೂ :—

ಮೂಲ ಶಿಕ್ಷಣದಲ್ಲಿ ವಿಷಯಯೋಜನೆಯು ಹೊಸ ಹಾದಿಯನ್ನು ಹಾಕಿಕೊಂಡಿದೆ. ಹಿಂದಿನ ಶಿಕ್ಷಣವು ಒಂದು ಪರೀಕ್ಷಾಪದ್ಧತಿಗೆ ಆಧೀನವಾದುದು. ಪರೀಕ್ಷೆಯೇ ಪ್ರಧಾನ. ಪರೀಕ್ಷೆಗಾಗಿ ಮಕ್ಕಳನ್ನು ಅಣಿಗೊಳಿ

ಸುವದೇ ಶಿಕ್ಷಣ. ಶಿಕ್ಷಣದ ಸಫಲತೆ ಪರೀಕ್ಷೆಯ ಫಲಿತಾಂಶದಿಂದ. ವಿಶಿಷ್ಟ ಪರೀಕ್ಷೆಗಳಿಗಾಗಿ ಗೊತ್ತುಪಡಿಸಿದ ವಿಷಯಗಳೇ ವಿಷಯಯೋಜನೆ. ಈ ವಿಷಯಗಳು ತಮ್ಮ ಜೀವನಕ್ಕೆ ಆವಶ್ಯಕವೆಂಬ ಅರಿವು, ನಂಬಿಕೆ ಬಾಲಕರಿಗಿರುವದಿಲ್ಲ. ನಿತ್ಯ ಜೀವನದ ತೊಡಕುಗಳನ್ನು ಬಿಡಿಸಲು ಇಲ್ಲವೆ, ಎದುರಿಸಿದ ಸನ್ನಿವೇಶಗಳನ್ನು ತಿಳಿದುಕೊಳ್ಳಲು ಅವರಿಗೆ ಈ ವಿಷಯಗಳ ಸಹಾಯಕತೆಯೆನಿಸುವದಿಲ್ಲ. ಮಕ್ಕಳ ಜೀವನಕ್ಕೂ ಈ ವಿಷಯಗಳಿಗೂ ಹೊಂದಿಕೆಯಿಲ್ಲ. ವಿಷಯಗಳಲ್ಲಿಯೂ ಪರಸ್ಪರ ಹೊಂದಿಕೆಯಿಲ್ಲ. **ಬೆಳೆಯುವ ಮಗುವಿನ ಮುಖ್ಯ ಬೇಡಿಕೆಯಾದ ಚಟುವಟಿಕೆಯನ್ನು ಹಿಂದಿನ ವಿಷಯ ಯೋಜನೆಯು ಮನ್ನಿಸುವದಿಲ್ಲ. ಇದರಿಂದ ಕಲಿಸುವದೂ ಕಲಿಯುವದೂ ತುಂಬಾ ಕೃತ್ರಿಮವಾಗುವವು.**

ಮೂಲ ಶಿಕ್ಷಣವು ಜೀವನ ಶಿಕ್ಷಣವು. **ಜೀವನದ ಉಸಿರಾದ ಚಟುವಟಿಕೆಯೆ ಇದರಲ್ಲಿ ವಿಷಯಯೋಜನೆಯ ಕೇಂದ್ರವಾಗಿದೆ.** ಜೀವನೋಪಯೋಗಿಯಾದ ಚಟುವಟಿಕೆಯು ಜೀವನಕ್ಕೂ ವಿವಿಧ ವಿಷಯಗಳಿಗೂ ಸಮವಾಯ ಸಂಬಂಧವನ್ನು ಕಲ್ಪಿಸುವದು. ಚಟುವಟಿಕೆಯಲ್ಲಿ ತೊಡಗಿದ ಮಗುವಿಗೆ ಅದಕ್ಕೆ ಸಂಬಂಧಿಸಿದ ವಿಷಯಗಳ ಜ್ಞಾನದ ಕೊರತೆಯೆನಿಸುವದು. ಮಗುವಿಗೆ ಹೀಗೆ ಕೊರತೆಯೆನಿಸಿದಾಗ್ಗೆ–ಅದರ ಕುತೂಹಲವು ಕೆರಳಿದಾಗ್ಗೆ–ನಾವು ಕೊಡುವ ವಿಷಯಜ್ಞಾನವು ಹಸಿದ ಹೊಟ್ಟೆಗೆ ಸತ್ವಯುಕ್ತವಾದ ಆಹಾರವನ್ನು ಒದಗಿಸಿದಂತೆ ಸಾರ್ಥಕವಾಗುವದು. ಚಟುಟಿಕೆಗೆ ಮೂಲ ದ್ರವ್ಯಗಳು ಬೇಕು. ಮೂಲ ದ್ರವ್ಯಗಳ ಪರಿಚಯಮಾಡಿಕೊಳ್ಳಲು ಮಗುವು ನಿಸರ್ಗದ ಸಂಪರ್ಕ–ನಿರೀಕ್ಷಣೆಗಳಿಂದ ವಿವಿಧ ವಿಷಯಗಳನ್ನು ತಿಳಿದುಕೊಳ್ಳಬಹುದು. ಮಗುವು ಸಿದ್ಧಗೊಳಿಸಿದ ವಸ್ತುವು ಸಮಾಜಕ್ಕೆ ಬೇಕು. ಇದರಿಂದ ಮಗುವಿಗೂ ಸಮಾಜಕ್ಕೂ ಸಂಪರ್ಕವು ಒದಗುವದು. ಇದರಿಂದ ಮಗುವು ತನ್ನ ಜೀವನವನ್ನು ಸಮಾಜದ ಜೀವನದೊಡನೆ ಹೊಂದಿಸಿಕೊಳ್ಳುವದು. **ಜೇಡದ ಬಲೆಯ ಎಳೆಗಳಂತೆ ಜೀವನದ ಅಂಗೋಪಾಂಗಗಳೆಲ್ಲವೂ ಒಂದರಲ್ಲಿ ಒಂದು ಕೂಡಿಕೊಂಡಿರು**

**ವವು; ಹೊಂದಿಕೊಂಡಿರುವವು. ಜೀವನದ ಅಂಗವಾಗಿ, ಚಟು ವಟಿಕೆಯ ಮುಖಾಂತರ ದೊರೆಯುವ ಜ್ಞಾನವು 'ಸಮಗ್ರ' ವಾದುದು, ಅಖಂಡವಾದುದು.** ಅದು ಕೆಲವು ಬೇಕಾದ ಹಾಗೂ ಬೇಡಾದ ವಿಷಯಗಳ ತುಣುಕುಗಳ ಕೃತ್ರಿಮವಾದ ಜೋಡಣೆಯಾಗದು. ಜೀವನ ದ್ವಾರ ಕಲಿಯುವ ಮಗುವಿಗೆ ವಿಷಯಜ್ಞಾನವು ಸಮಗ್ರವಾಗಿಯೇ ಆಗು ವದು. ಅಖಂಡವಾದ ಮನಸ್ಸಿಗೆ ಜೀವನದ ವಿವಿಧ ಅನುಭವಗಳಿಂದಾಗುವ ಸಂಸ್ಕಾರವದು. ಮೊದಲು ಸಮಗ್ರಜ್ಞಾನ. ಹಿಂದುಗಡೆ ಅದರ ವಿಭಜನೆ ಹಾಗೂ ವರ್ಗೀಕರಣ.

**ಹೀಗೆ ತಾತ್ವಿಕವಾಗಿ ತಿಳಿದು ನೋಡಿದರೆ ಜೀವನ-ಶಿಕ್ಷಣದಲ್ಲಿ ಕೃತಕವಾದ ವಿಷಯಯೋಜನೆ-ವೇಳಾಪತ್ರಿಕೆಗಳಿಗೆ ಸ್ಥಾನವೇ ದೊರೆಯದು.** ಆದರೆ ಶಿಕ್ಷಣದ ಗೊತ್ತುಗುರಿಗಳಾದ, ಜೀವನದ ಪಾತ್ರತೆ ಗಾಗಿ ಹಾಗೂ ಜ್ಞಾನದ ಪೂರ್ಣತೆಗಾಗಿ, ಕೆಲವೊಂದು ವಿಷಯಗಳನ್ನು ಶಿಕ್ಷಣದ ಅವಧಿಯಲ್ಲಿ ಹೇಗೆ ಹೊಂದಿಸಿಕೊಳ್ಳಬಹುದೆಂಬುದನ್ನು ಝಕೀರ ಹುಸೇನ ಸಮಿತಿಯವರು ದಿಗ್ದರ್ಶನವಾಗಿ ಮಾತ್ರ ನಿರೂಪಿಸಿದ್ದಾರೆ. ಆದರೆ ಜೀವನ ಶಿಕ್ಷಣವನ್ನು ಕೈಕೊಳ್ಳುವ ಶಿಕ್ಷಕರು ಒಂದು ಎಚ್ಚರಿಕೆಯನ್ನು ಯಾವಾಗಲೂ ವಹಿಸಬೇಕಾಗುವದು. ಅದೆಂದರೆ **ವಿಷಯಗಳಿಗಾಗಿ 'ಚಟುವಟಿಕೆ' ಯ ಯೋಜನೆ ಮಾಡಕೂಡದು. ಚಟುವಟಿಕೆ ಯನ್ನು ಮಾಡುವದರಲ್ಲಿ, ಒದಗುವ ಸಹಜವಾದ ಸನ್ನಿವೇಶಗಳಲ್ಲಿ, ವಿಷಯಜ್ಞಾನವು ಮಗುವಿಗೆ ದೊರೆಯಬೇಕು. ಮೂಲ ಶಿಕ್ಷಣದಲ್ಲಿ ವಿಷಯಯೋಜನೆಗೆ ಇದೇ ತತ್ವವೇ ತಳಹದಿಯಾಗಿದೆ.** ಝಕೀರ ಸಮಿತಿಯ ವರದಿಯಲ್ಲಿ (೧) ಕೇಂದ್ರಕಲೆ (ಮೂಲೋದ್ಯೋಗ); (೨) ಮಾತೃಭಾಷೆ; (೩) ಗಣಿತ; (೪) ಸಮಾಜ ವಿಜ್ಞಾನ; (೫) ಚಿತ್ರಕಲೆ; (೬) ಸಾಮಾನ್ಯವಿಜ್ಞಾನ; (೭) ಸಂಗೀತ ಹಾಗೂ (೮) ಹಿಂದುಸ್ತಾನಿ ಇವೆಲ್ಲ ವಿಷಯಗಳನ್ನು ಶಿಕ್ಷಣದ ಅವಧಿಗಳಲ್ಲಿ ಇಯತ್ತೆಗಳಲ್ಲಿ ಮೂಲೋ ದ್ಯೋಗದ ವಿವಿಧ ವಿಧಾನಗಳಲ್ಲಿ ಹೇಗೆ ಹೊಂದಿಸಿಕೊಳ್ಳಬಹುದೆಂಬದನ್ನು

ಹೇಳಿದೆ. **ಈ ಹೊಂದಿಕೆಯ ಹೊಲಬನ್ನು-ಸಮವಾಯದ ಸ್ವರೂಪವನ್ನು** ಮುಂದಿನ ಪರಿಚ್ಛೇದಗಳಲ್ಲಿ ತಿಳಿದುಕೊಳ್ಳಬಹುದು.

## ಪರಿಚ್ಛೇದ ೧೩

### ಶಿಕ್ಷಕನು

'ಯೋಗಃ ಕರ್ಮಸು ಕೌಶಲಂ' -ಶ್ರೀಗೀತಾ.

ಆಧುನಿಕ ಶಿಕ್ಷಣದಲ್ಲಿ ಕಲಿಯುವ ಮಗುವೇ ಮುಖ್ಯವಾದುದು. ಅಂತೆಯೇ ಅದಕ್ಕೆ '**ಶಿಶು ಪ್ರಧಾನ**'-ಇಲ್ಲವೆ '**ಶಿಶು ಕೇಂದ್ರ**' ಶಿಕ್ಷಣವೆಂದು ಹೆಸರು. **ಶಿಶು ಪ್ರಧಾನ ಶಿಕ್ಷಣವೆಂದು** ಹೇಳುವದು ಶಿಕ್ಷಣದಲ್ಲಿ ಮಗುವಿನ ಮಹತಿಯನ್ನು ತೋರಿಸುವದಕ್ಕಾಗಿ ಮಾತ್ರ. ಶಿಕ್ಷಕನ ಅವಶ್ಯಕತೆಯನ್ನು ಅಲ್ಲಗಳೆಯುವದಕ್ಕಲ್ಲ; ಇಲ್ಲವೆ ಆತನು ಅಪ್ರಾಧಾನ್ಯನೆಂದು ಅನಾದರಿಸುವದಕ್ಕಾಗಿಯೂ ಅಲ್ಲ. ಮಕ್ಕಳ ಜೀವನ ವಿಕಾಸದ ನಾಟಕದಲ್ಲಿ ಶಿಕ್ಷಕನು ಸೂತ್ರಧಾರನಂತೆ. ಮಕ್ಕಳ ಜೀವನ ವಿಕಾಸಕ್ಕೆ ಸರಿಯಾದ ಸನ್ನಿವೇಶಗಳನ್ನು ಆತನು ಒದಗಿಸಬೇಕು. ಜೀವನ ನಾಟಕದಲ್ಲಿ ಅವರಿಗೆ ಅನುರೂಪವಾದ ಪಾತ್ರವನ್ನು ಅವರ ಒಲವು ಶಕ್ತಿಗಳ ಪರೀಕ್ಷೆಯಿಂದ ತಿಳಿದುಕೊಳ್ಳಬೇಕು. ಆ 'ಪಾತ್ರ'ಕ್ಕೆ ಅವಶ್ಯವಾದ ಪಾತ್ರತೆಯನ್ನು ಅವರಿಗೆ ತಂದುಕೊಡಬೇಕು. **ಇದೆಲ್ಲವನ್ನೂ ತೆರೆಯ ಮರೆಯಲ್ಲಿರುವ ಸೂತ್ರಧಾರನಂತೆ** ಮಕ್ಕಳಿಗೆ ಗೊತ್ತಾಗದ ಹಾಗೆ ಮಾಡಬೇಕು. '**ಕೂಗಿ ಕಲಿಸುವ**' ಶಿಕ್ಷಣಕ್ಕಿಂತಲೂ ಮರೆಯಲ್ಲಿ ನಿಂತು ಮಾಡುವ ಶಿಕ್ಷಕನ ಈ ಕಾರ್ಯವು ಮಹತ್ತರವಾದುದು. ಇದಕ್ಕೆ ಹೆಚ್ಚು ಜಾಣ್ಮೆ ಬೇಕು; ಹೆಚ್ಚು ತಿಳುವಳಿಕೆ ಬೇಕು; ಹೆಚ್ಚು ತತ್ವನಿಷ್ಠತೆ ಬೇಕು. ಫ್ರೋಬೆಲ್‌ನು ಶಿಕ್ಷಕನ ಕಾರ್ಯವನ್ನು ಇನ್ನೊಂದು ರೀತಿಯಲ್ಲಿ ಮಾರ್ಮಿಕವಾಗಿ ಹೇಳಿರುವನು. **ಮಗುವು ಬೆಳೆಯುವ ಸಸಿಯಂತೆ; ಶಿಕ್ಷಕನು ಅದರ ಆರೈಕೆಯನ್ನು**

**ಕೈಕೊಂಡ ತೋಟಿಗನಂತೆ. ಮಕ್ಕಳ ಸರ್ವತೋಮುಖವಾದ ಉನ್ನತಿಗೆ ಸಹಾಯಕವಾಗುವ ಸಂಗತಿಗಳನ್ನೆಲ್ಲ ಶಿಕ್ಷಕನು ಜಾಣ್ಮೆಯಿಂದ ಶೇಖರಿಸಬೇಕು.** ಅದಕ್ಕೆ ಬಾಧಕವಾದವುಗಳೆಲ್ಲ ದೂರವಾಗಿರುವಂತೆ ಜಾಗರೂಕತೆಯಿಂದ ನೋಡಿಕೊಳ್ಳಬೇಕು. ಈ ರೀತಿಯಾಗಿ ಇಂದಿನ ಶಿಕ್ಷಣದಲ್ಲಿ ಶಿಕ್ಷಕನ ಕಾರ್ಯವು ಬದಲಿಸಿದರೂ ಆತನ ಹೊಣೆಗಾರಿಕೆಯು ಮಾತ್ರ ಹೆಚ್ಚಿದೆ.

ಶಿಕ್ಷಕನಿಗೆ ಆತನ ಕಾರ್ಯದಲ್ಲಿ ಆವಶ್ಯಕವಾದ, ಅನುಕೂಲವಾದ ಕೆಲವು ಗುಣಗಳಿವೆ. ಅವುಗಳಲ್ಲಿಯ ಮೊದಲನೆಯದು ಮಕ್ಕಳಲ್ಲಿ **ನೈಜವಾದ ಮಮತೆ. ಮಕ್ಕಳನ್ನು ಅಕ್ಕರತೆಯಿಂದ ಕಾಣದ,** ಅವರ ಸಹವಾಸದಲ್ಲಿ **ಸಂತೋಷವನ್ನು** ಪಡೆಯದ ಜನರು ಶಿಕ್ಷಕವೃತ್ತಿಗೆ **ಸರ್ವಥಾ ಕೈಹಾಕಬಾರದು.** ಶಿಕ್ಷಕನು ಪಂಡಿತನಾಗಿರಬಹುದು. ಪದವಿಗಳ ಹೊರೆಯನ್ನೇ ಹೊತ್ತ '**ಪದವೀಧರ**' ನಾಗಿರಬಹುದು. ಆದರೆ ಆತನಲ್ಲಿ '**ಶಿಕ್ಷಣ ಪ್ರೇಮ**' ವಿಲ್ಲದಾದರೆ, ಶಿಕ್ಷಕವೃತ್ತಿಯ ಬಗ್ಗೆ ಆದರವಿಲ್ಲದಾದರೆ ಆತನ **ಪ್ರತಿಭೆ, ಪಾಂಡಿತ್ಯಗಳು ನಿಷ್ಪ್ರಯೋಜಕವಾದವುಗಳು.** ಮಕ್ಕಳ ಮೇಲಿನ ನೈಸರ್ಗಿಕ ಮಮತೆಯು ಶಿಕ್ಷಕನ ವ್ಯಕ್ತಿತ್ವವನ್ನೇ ಉಜ್ವಲಗೊಳಿಸುವದು. ಆತನಲ್ಲಿರುವ ಉದಾತ್ತ ಗುಣಗಳನ್ನೆಲ್ಲ ಬೆಳಕಿಗೆ ತರುವದು. ಇದೇ ಮೇರೆಗೆ ಶಿಕ್ಷಣ ಪ್ರೇಮವು ಆತನ ಶಿಕ್ಷಕವೃತ್ತಿಯನ್ನು ಉನ್ನತವಾಗಿ ಮಾಡುವದು; ಆತನಲ್ಲಿರುವ ನ್ಯೂನತೆಗಳನ್ನೆಲ್ಲ ತುಂಬಿಕೊಳ್ಳುವದು. ಈ ಬಗೆಯ ಶಿಕ್ಷಣ ಪ್ರೇಮವಿದ್ದವರೇ '**ಪ್ರಕೃತ್ಯಾ**' **ಶಿಕ್ಷಕರು ; ಹುಟ್ಟು ಶಿಕ್ಷಕರು.** ಇದಿಲ್ಲದವರು ಕೇವಲ '**ವೃತ್ತ್ಯಾ**', **ಉದ್ಯೋಗದಲ್ಲಿ ಮಾತ್ರ ಶಿಕ್ಷಕರು.** ಹೊಟ್ಟೆ ಹೊರೆದುಕೊಳ್ಳಲು ಉಳಿದ ವೃತ್ತಿಗಳ ಆಶ್ರಯವು ದೊರೆಯದೆ ಶಿಕ್ಷಕ ವೃತ್ತಿಯನ್ನು ಕೈಕೊಳ್ಳುವವರ ಸಂಖ್ಯೆಯೇ ಹೆಚ್ಚಾದರೆ, ಶಿಕ್ಷಣಕಾರ್ಯವು ಎಲ್ಲ ರೀತಿಯಿಂದಲೂ ಹದಗೆಡುವದು. ರಾಷ್ಟ್ರದ ಎಲ್ಲ ಬಗೆಯ ಹಾನಿಗೆ, ಅವನತಿಗೆ ಕಾರಣವಾಗುವದು.

ಶಿಕ್ಷಕನ ವೃತ್ತಿಯು ಅತ್ಯಂತ ಪವಿತ್ರವಾಗಿದೆ. ಆತನ ವೃತ್ತಿಯಲ್ಲಿ

ತಗಲು ಮೋಸಗಳಿಗೆ ಆಸ್ಪದವಿಲ್ಲ. **ತನ್ನ ಬೆವರಿನಿಂದ ಭೂದೇವಿಯನ್ನು ತಣಿಸಿ ಹೊನ್ನಾಗಿ ಮಾಡುವ ಒಕ್ಕಲಿಗನ ಕಾರ್ಯದಂತೆ ಶಿಕ್ಷಕನ ವೃತ್ತಿಯು ಅತ್ಯಂತ ವಿಧಾಯಕವಾದುದು.** ತಿಳಿದು ನೋಡಿದರೆ ಶಿಕ್ಷಕನೂ ಒಂದು ಬಗೆಯ **ಕೃಷಿಕ**ನಿದ್ದಂತೆ. ಮಕ್ಕಳ ಮಿದುವಾದ ಮನೋಭೂಮಿಕೆಯಲ್ಲಿ **ಸುಜ್ಞಾನ-ಸುವಿಚಾರಗಳ ಬೀಜವನ್ನು** ಬಿತ್ತಿ, ತನ್ನ ಅನುಭವದ ಗೊಬ್ಬರವನ್ನಿತ್ತು, ಕಾಲಕಾಲಕ್ಕೆ ತನ್ನ ವ್ಯಕ್ತಿತ್ವದ ನೀರನ್ನೊದಗಿಸಿ, ಬೆಳೆಯುವ ಮಕ್ಕಳ ಆತ್ಮಶಕ್ತಿಗಳೆಲ್ಲ ಅರಳುವಂತೆ ಮಾಡುವದು ಕೃಷಿಕನಾದ ಶಿಕ್ಷಕನ ಕಾರ್ಯವಾಗಿದೆ. ಒಕ್ಕಲಿಗನು ಆಹಾರವನ್ನು ಪೂರೈಸಿ ರಾಷ್ಟ್ರದ ಜೀವನವನ್ನು ಸಾಗಿಸುವನು. ಶಿಕ್ಷಕನು **ಶೀಲ-ಸಂಸ್ಕೃತಿ**ಗಳನ್ನು ಸಂರಕ್ಷಿಸಿ **ರಾಷ್ಟ್ರದ ಜೀವನವನ್ನು** ಉಜ್ವಲಗೊಳಿಸುವನು. ನಮ್ಮ ಪ್ರಾಚೀನ ಪರಂಪರೆಯಲ್ಲಿ ಜ್ಞಾನದಾತೃವಾದ ಗುರುವಿಗೆ ಅರಸುಮಕ್ಕಳು ಕೂಡ ತಲೆಬಾಗಿಸುತ್ತಿದ್ದರು. '**ಗುರುರ್ಬ್ರಹ್ಮಾ, ಗುರುರ್ವಿಷ್ಣುಃ, ಗುರುರ್ದೇವೋ ಮಹೇಶ್ವರಃ**'—ಎಂದು ಸಾಕ್ಷಾತ್ ಪರಬ್ರಹ್ಮನೊಡನೆ ಗುರುವನ್ನು ಗೌರವಿಸಿದವರು ನಮ್ಮ ಹಿಂದಿನ ಹಿರಿಯರು. ಶಿಕ್ಷಣವು ಯಶಸ್ವಿಯಾಗಬೇಕಾದರೆ ಗುರುಶಿಷ್ಯರ ನಡುವೆ ಈ ಬಗೆಯ ಆದರದ, ಗೌರವದ ಸಂಬಂಧವು ಅಗತ್ಯವಾದುದು.

ಯಾರ ತಪ್ಪುಗಳಿಂದಲೇ ಆಗಲಿ, ಇಂದು ಶಿಕ್ಷಕನು ಹಿಂದಿನ ತನ್ನ ಸ್ಥಾನಮಾನಗಳನ್ನು ಕಳೆದುಕೊಂಡಿರುವನು. ಸಮಾಜದ ಆದರವನ್ನೂ ವಿಶ್ವಾಸವನ್ನೂ ಶಿಕ್ಷಕನು ಪುನಃ ಗಳಿಸಬೇಕಾದರೆ, ಸಮಾಜದ ಜೀವನದೊಡನೆ ಆತನು ಸಮರಸವಾಗಿ ಬೆರೆತುಕೊಳ್ಳಬೇಕು. ಸಮಾಜದ ಆಶೆ-ಆಕಾಂಕ್ಷೆಗಳನ್ನು ತಿಳಿದುಕೊಳ್ಳಬೇಕು. ಯಾವ ಪಕ್ಷಕ್ಕೂ ಅಧೀನನಾಗದೆ, ಜನತೆಯ ಒಟ್ಟು ಹಿತವನ್ನು ಸಾಧಿಸುವ ಸಾಮಾಜಿಕ ಕಾರ್ಯಗಳಲ್ಲಿ ಮುಂದುವರಿಯಬೇಕು. ಹಳ್ಳಿಗಳಲ್ಲಿ ಕೆಲಸ ಮಾಡುವ ಶಿಕ್ಷಕ ಶಿಕ್ಷಿಕೆಯರು ಈ ಮಾತನ್ನು ಲಕ್ಷಿಸಿ, ಪಕ್ಷ ಪಂಗಡಗಳನ್ನು ಕಟ್ಟಿಕೊಂಡು ಗ್ರಾಮದ ಪ್ರಗತಿಗೆ ಕಾಲ್ತೊಡಕಾಗದಂತೆ ಅವರು ಕಾರ್ಯ ಮಾಡಬೇಕು. ಹಳ್ಳಿಗಳಲ್ಲಿ ಇವರೇ

ಹಿರಿಯರು ; ಇವರು ಹೇಳಿದುದೇ ಪ್ರಮಾಣ. ಪಟ್ಟಣದ 'ಹೊರಮಿಂಚಿ'ಗೆ ಮನಸೋಲದೆ, ಹಳ್ಳಿಯ ಜೀವನವನ್ನು ಹೀಯಾಳಿಸದೆ, ದೇಶದ ಸೇವೆಗಾಗಿ ದುಡಿಯಲು ದೊರೆತ ಇದೊಂದು ಸುಸಂಧಿಯೆಂದು ಇವರು ಭಾವಿಸಬೇಕು. ನಿರಕ್ಷರತೆಯಿಂದ 'ಕಣ್ಣಿದ್ದರೂ ಕುರುಡ' ರಂತಿರುವ ಹಳ್ಳಿಗರಿಗೆ ತಮಗೆ ದೊರೆತ ಜ್ಞಾನದ ಬೆಳಕನ್ನು ಶಕ್ಯವಿದ್ದಷ್ಟು ನೀಡಬೇಕು. ಶಿಕ್ಷಕನು ತನ್ನ ಒಲವು ಶಕ್ತಿಗಳಿಗೆ ಅನುಗುಣವಾದ ಸಮಾಜಸೇವೆಯ ಯಾವುದೊಂದು ಕಾರ್ಯವನ್ನು ಕೈಕೊಂಡು ಸುತ್ತಲಿನ ಸಮಾಜದೊಡನೆ ಸಂಪರ್ಕ ಸಂಬಂಧಗಳನ್ನು ತಂದುಕೊಳ್ಳಬೇಕು. ಬಾಲಕರ ತಂದೆ ತಾಯಿಗಳೊಡನೆ ಸೌಜನ್ಯದಿಂದ ವರ್ತಿಸಿದರೆ, ಮಕ್ಕಳ ಹಿತಕ್ಕಾಗಿ ಆಸ್ಥೆಯಿಂದ ದುಡಿದರೆ, ಇಂಥ ಶಿಕ್ಷಕನ ಬಗ್ಗೆ ತಂದೆ ತಾಯಿಗಳು ತಾವಾಗಿಯೇ ಪ್ರೇಮಾದರಗಳನ್ನು ತೋರಿಸುವರು.

**ಮುಖ್ಯಾಧ್ಯಾಪಕನು :—** ಶಿಕ್ಷಕನು ಮುಖ್ಯಾಧ್ಯಾಪಕನಾಗಿರಬಹುದು. ಮುಖ್ಯಾಧ್ಯಾಪಕನ ಹೊಣೆಗಾರಿಕೆಯು ಹೆಚ್ಚಿನದು. ಆತನ ಕಾರ್ಯವೂ ಅನೇಕಮುಖವಾದುದು. ಶಾಲೆಯ ಕೀರ್ತಿ ಅಪಕೀರ್ತಿಗಳು ಆತನನ್ನೇ ಕೂಡಿರುವವು. ಈ ಸ್ಥಾನಕ್ಕೆ ತಕ್ಕಂತೆ ಹಲವು ಸದ್ಗುಣಗಳೂ ಆತನಲ್ಲಿ ಇರಬೇಕು. ತಾಳ್ಮೆಯೊಡನೆ ನಿಷ್ಠುರತೆಯೂ, ದೂರದೃಷ್ಟಿಯೊಡನೆ ತಾತ್ಕಾಲಿಕ ನಿರ್ಣಯವೂ ಆತನಲ್ಲಿ ಸರಿಯಾಗಿ ಕೂಡಿಕೊಂಡಿರಬೇಕು. ವಿವಿಧ ಮನೋವೃತ್ತಿಗಳುಳ್ಳ ಉಳಿದ ಶಿಕ್ಷಕರೊಡನೆ ಕೂಡಿ ಕೆಲಸಮಾಡುವಾಗ್ಗೆ ಮುಖ್ಯಾಧ್ಯಾಪಕನು ತಾಳ್ಮೆಯಿಂದ ನಡೆದುಕೊಳ್ಳಬೇಕು. ಆತನು ಕೇವಲ 'ಅಧ್ಯಾಪಕ'ನಲ್ಲ; 'ಆಡಳಿತೆಗಾರ'ನು ಕೂಡ ಆಗಿರುವನು. ಆತನ ಕಲಿಸುವಿಕೆಯು **ಅನನುಭವಿಕರಾದ ಶಿಕ್ಷಕರಿಗೆ ಆದರ್ಶವಾಗಿರಬೇಕು.** ಆದರೆ ಆತನ ಕರ್ತವ್ಯದಲ್ಲಿ **ಆಡಳಿತೆ, ಸಂಘಟನೆಗಳ ಅಂಶವೇ ಹೆಚ್ಚಾಗಿದೆ.** ಶಾಲೆಯ ಕಾರ್ಯವು ಸುಗಮವಾಗಿ ಸಾಗುವಂತೆ ಮಾಡುವದು; ವಿದ್ಯಾರ್ಥಿಗಳಲ್ಲಿ **ಶಿಸ್ತು-ಶೀಲಗಳೊಡನೆ** ಜ್ಞಾನದ ಅಭಿಲಾಷೆಯನ್ನು ಹೆಚ್ಚಿಸುವದು; ಉದಾತ್ತವಾದ ಸಂಪ್ರದಾಯಗಳನ್ನು ಹಾಕುವದು

ಹಾಗೂ ರಕ್ಷಿಸುವದು—ಇವುಗಳೆಲ್ಲ ಮುಖ್ಯಾಧ್ಯಾಪಕನು ತನ್ನ ಸಂಗಡಿಗರ ಸಹಕಾರದಿಂದ ಮಾಡಬೇಕಾದ ಕಾರ್ಯಗಳಾಗಿವೆ. ಒಮ್ಮನಸ್ಸಿನಿಂದ ಶಾಲೆಯ ಪ್ರಗತಿಗಾಗಿ, ಚಿಕ್ಕಮಕ್ಕಳ ಹಿತಕ್ಕಾಗಿ ಎಲ್ಲರೂ ಕೂಡಿ ಕೆಲಸ ಮಾಡುವ ಸದ್ಬುದ್ಧಿಯೂ, ಕರ್ತವ್ಯನಿಷ್ಠೆಯೂ ಇವರೆಲ್ಲರಲ್ಲಿ ಸದಾ ಜಾಗೃತವಾಗಿರಬೇಕು. **ಶಿಕ್ಷಕರು ಆಮರಣ ವಿದ್ಯಾರ್ಥಿಗಳಾಗಿಯೇ ಉಳಿದು ಬೆಳೆಯುತ್ತಿರುವ ಜ್ಞಾನದ ಪರಿಚಯವನ್ನು ಮಾಡಿಕೊಳ್ಳಬೇಕು.** ತಾನು ಕಲಿಸುವ ವಿಷಯದಲ್ಲಿ ಸಾಕಷ್ಟು ಪ್ರಭುತ್ವವಿರದಿದ್ದರೆ ವರ್ಗದಲ್ಲಿ ಶಿಕ್ಷಕನ ಸ್ಥಿತಿಯು ಶೋಚನೀಯವಾಗುವದು. ಚಾಣಾಕ್ಷರಾದ ವಿದ್ಯಾರ್ಥಿಗಳು ಆತನ '**ನೀರಿಷ್ಟಿದೆ**' ಯೆಂಬುದನ್ನು ಕೂಡಲೆ ಕಂಡುಹಿಡಿಯುವರು. ಎಲ್ಲಕ್ಕಿಂತಲೂ ಹೆಚ್ಚಾಗಿ, ಶಿಕ್ಷಕರಲ್ಲಿ ಮನೋವಿಶುದ್ಧಿಯೂ, **ಮಿತ–ಹಿತವಾದ ಮಾತಿನ ಹವಣು** ಹಾಗೂ ಪವಿತ್ರವಾದ ಆಚರಣೆಯೂ ಅವಶ್ಯವಾದವುಗಳು. ಅನುಕರಣಶೀಲರಾದ ಎಳೆಯ ಮಕ್ಕಳಿಗೆ ಅವರ ಜೀವನವು ರೂಪುಗೊಳ್ಳುತ್ತಿರುವ ಮಹತ್ವದ ಅವಧಿಯಲ್ಲಿ ತಾವು ಆದರ್ಶ ವ್ಯಕ್ತಿಗಳೆಂಬುದನ್ನು ಶಿಕ್ಷಕರು ಎಂದಿಗೂ ಮರೆಯಕೂಡದು.

### ಜೀವನ ಶಿಕ್ಷಣದಲ್ಲಿ ಶಿಕ್ಷಕನು :—

ಜೀವನ ಶಿಕ್ಷಣವು ಹೊಸ ತತ್ವಗಳ ಮೇಲೆ ನಿಂತಿದೆ. ಹೊಸ ದೃಷ್ಟಿಯನ್ನು ಅಪೇಕ್ಷಿಸುತ್ತಿದೆ. ಹೊಸ ಹಾದಿಯನ್ನು ಹಿಡಿಯ ಹಚ್ಚುತ್ತಿದೆ. ಖುರ್ಚಿಗೆ ಬಿಗಿದುಕೊಂಡು, ಪಠ್ಯಪುಸ್ತಕದ ಮೇಲೆಯೆ ಕೈಯ್ಯಾರಿ, ಕರಿಹಲಿಗೆಯನ್ನು ಬೆಂಬಲವಾಗಿಟ್ಟುಕೊಂಡು, ಬೆತ್ತದ ಅಧಿಕಾರಾರೂಢರಾಗಿ ಮಕ್ಕಳೆದುರು '**ಮಾಸ್ತರ**' ರೆಂದು ನಿಲ್ಲುವ ಮಹಾವೀರರಿಗೆ ಶಿಕ್ಷಣ ಜೀವನದಲ್ಲಿ ಸ್ಥಾನವಿಲ್ಲ. ಇದಕ್ಕಿಂತಲೂ ಹೆಚ್ಚಿನ ಪಾತ್ರತೆಯನ್ನು ಜೀವನ ಶಿಕ್ಷಣವು ಬಯಸುತ್ತಿದೆ. ವಿಶಿಷ್ಟವಾದ ಹಲವು ಸದ್ಗುಣಗಳನ್ನು ಬೇಡುತ್ತಿದೆ. **ಏನೂ ಮಾಡಲಾಗದವನು ಇಲ್ಲಿ ಶಿಕ್ಷಕನಾಗಲಾರ.** ಏನಾದರೂ ಒಳ್ಳೇದನ್ನು ಮಾಡಬೇಕೆಂಬ ಹಂಬಲವುಳ್ಳವನು, ಮಾಡಿಬಿಡುವೆನೆಂಬ ಹುಮ್ಮಸ್ಸುಳ್ಳವನು ಈ ಹೊಸ ಶಿಕ್ಷಣ ಕ್ಷೇತ್ರದಲ್ಲಿ ಮುಂದಡಿಯಿಡಬಲ್ಲನು.

‘ **ಯೋಜಕಸ್ತತ್ರ ದುರ್ಲಭಃ** ’ ಎಂದು ಹೇಳುವಂತೆ, ಯಾವ ಯೋಜನೆಯೆ ಆಗಲಿ, ಅದರ ಯಶಾಪಯಶಗಳು ಅದನ್ನು ನಿರ್ವಹಿಸುವವರ ಮೇಲೆಯೇ ಅವಲಂಬಿಸಿರುವವು. ಜೀವನ ಶಿಕ್ಷಣದ ಯಶಸ್ವಿತೆಯು ಅದನ್ನು ಕೈಕೊಳ್ಳುವ ಶಿಕ್ಷಕರನ್ನೇ ಅವಲಂಬಿಸಿದೆ. ಅಂತೆಯೇ ಝುಕೀರ ಸಮಿತಿಯು ವರದಿಯಲ್ಲಿ—‘ ಶಿಕ್ಷಕರನ್ನು ಆರಿಸುವಾಗ್ಗೆ **ವಿಶೇಷವಾದ ದಕ್ಷತೆಯನ್ನು ವಹಿಸಬೇಕೆ** ’**ಂದು** ಹೇಳಿರುವರು.

**ಮಕ್ಕಳ ಮನೋಭೂಮಿಯ ಪರಿಚಯ :**—ಜೀವನಶಿಕ್ಷಣದಲ್ಲಿ ‘ ಚಟುವಟಿಕೆಯು ’ ಶಿಕ್ಷಣದ ಕೇಂದ್ರವಾಗಿದೆ. ಮಕ್ಕಳಲ್ಲಿ ತೋರಿಬರುವ ಸಹಜವಾದ ಕೃತಿಪ್ರೇಮವೇ ಈ ಶಿಕ್ಷಣದ ತಳಹದಿಯಾಗಿದೆ. ಶಿಕ್ಷಕನು ಈ ಕೃತಿಪ್ರೇಮವನ್ನು ಗುರುತಿಸಬೇಕು. ಅದನ್ನು ಗೌರವಿಸಬೇಕು. ಬೆಳೆಯುವ ಮಕ್ಕಳ ವಯೋವಿಭಾಗಗಳಲ್ಲಿ ಈ ಕೃತಿಪ್ರೇಮದ ವಿಕಾಸವನ್ನು ಅವನು ಕಂಡುಹಿಡಿಯಬೇಕು. ಒಂದು ಮಗುವಿನಂತೆ ಮತ್ತೊಂದು ಮಗುವಿರುವದಿಲ್ಲೆಂಬ ಜೀವನದ ವಿವಿಧತೆಯನ್ನು ನಿರೀಕ್ಷಣೆಯಿಂದ ತಿಳಿದುಕೊಳ್ಳಬೇಕು. ಇಂದ್ರಿಯಗಳ ಚಟುವಟಿಕೆ ಹಾಗೂ ಮನೋವಿಕಾಸಗಳಲ್ಲಿರುವ **ಅನ್ಯೋನ್ಯತೆಯನ್ನೂ, ದೇಹ ಹಾಗೂ ಮನಸ್ಸುಗಳ ಅವಿಭಾಜ್ಯತೆ ಅಖಂಡತೆಗಳನ್ನೂ** ಆತನು ಅರಿತುಕೊಳ್ಳಬೇಕು. ಮಕ್ಕಳ ಮನೋಭೂಮಿಕೆಯ ಈ ಹಿನ್ನೆಲೆಯಲ್ಲಿ ಮಾತ್ರ ಆತನು ತನ್ನ ಕಾರ್ಯವನ್ನು ಸರಿಯಾಗಿ ಸಾಗಿಸಬಹುದು.

**ಮೂಲೋದ್ಯೋಗದಲ್ಲಿ ತರಬೇತಿ :**— ಉದ್ಯೋಗ ಮೂಲವಾದ ಜೀವನ ಶಿಕ್ಷಣದಲ್ಲಿ, ಅದನ್ನು ಕೈಕೊಳ್ಳುವ ಶಿಕ್ಷಕನು ಮೂಲೋದ್ಯೋಗದ ಪರಿಜ್ಞಾನವನ್ನು ಸಾಕಷ್ಟು ಮಾಡಿಕೊಂಡಿರಬೇಕು. ನಿತ್ಯರೂಢಿಯಿಂದ ಅದರಲ್ಲಿ ನಿಪುಣತೆಯನ್ನು ಪಡೆಯಬೇಕು. ಕಲೆಯ ಹೊರಮೈ–ಒಳಮೈಗಳಾದ ತಂತ್ರ ಹಾಗೂ ಶಾಸ್ತ್ರಗಳೆರಡನ್ನೂ ಚನ್ನಾಗಿ ತಿಳಿದುಕೊಂಡಿರಬೇಕು. ಅಂದರೆ ಆ ಕಲೆಯನ್ನು ಚಿಕ್ಕಮಕ್ಕಳಿಗೆ ‘ ಶಾಸ್ತ್ರೀಯ ’ವಾಗಿ ಕಲಿಸಲು ಆತನು ಸಮರ್ಥನಾಗುವನು. ಅವರು ಕುತೂಹಲದಿಂದ ಕೇಳಬಹುದಾದ–ಹೇಗೆ, ಏಕೆ ?–

ಎಂಬ ಪ್ರಶ್ನೆಗಳಿಗೆ ಆತನು ಉತ್ತರ ಕೊಡಲು ಸಮರ್ಥನಾಗುವನು. ಇದು ಮಾತ್ರವಲ್ಲದೆ, ಜೀವನ ಶಿಕ್ಷಣದ ಜೀವಾಳದಂತಿರುವ ಮೂಲೋದ್ಯೋಗಕ್ಕೂ ವಿವಿಧ ವಿಷಯಗಳಿಗೂ ಸಂಬಂಧೀಕರಣವನ್ನು ಸುಗಮವಾಗಿ ಸಾಧಿಸಲು ಸಹ ಮೂಲೋದ್ಯೋಗದಲ್ಲಿ ಸಾಕಷ್ಟು ತರಬೇತು ಅವಶ್ಯವಾಗಿದೆ.

**ಶೋಧಕಬುದ್ಧಿ ಹಾಗೂ ಕ್ರಿಯಾನಿಷ್ಠೆ** :— ಪಠ್ಯಪುಸ್ತಕಗಳ ಮುಖಾಂತರವಾಗಿ ಕಲಿಸುವದು ಒಳ್ಳೇ ಸುಲಭವಾದುದು. ಆದರೆ ಉದ್ಯೋಗದ ಚಟುವಟಿಕೆಯ ಮುಖಾಂತರವಾಗಿ ಶಿಕ್ಷಣ ಕೊಡುವದು ಪ್ರಯಾಸ ಕರವು. ಇದೊಂದು ನೂತನ ಪ್ರಯೋಗ. ವಿಜ್ಞಾನದ ಪ್ರಯೋಗಗಳಂತೆ ಈ ಶಿಕ್ಷಣದ ಪ್ರಯೋಗದಲ್ಲಿಯೂ ಶಿಕ್ಷಕನಿಗೆ **ಶೋಧಕ ಬುದ್ಧಿ ಹಾಗೂ ಕ್ರಿಯಾನಿಷ್ಠೆಗಳು** ಅವಶ್ಯವಾದವುಗಳು. ಪಠ್ಯಪುಸ್ತಕದ ಶಿಕ್ಷಣದಲ್ಲಿ 'ಪಾತ್ರೆಯಿಂದ ಪಾತ್ರೆಗೆ ನೀರು ತುಂಬುವಂತೆ,' ವರ್ಷಾಂತ್ಯದಲ್ಲಿ ಇಂತಿಷ್ಟು ವಿಷಯಜ್ಞಾನವನ್ನು ಮಕ್ಕಳ ತಲೆಯಲ್ಲಿ ತುಂಬಿದರೆ ತೀರಿತು. ಇಲ್ಲಿ ಹಾಗಲ್ಲ. ಉದ್ಯೋಗವು ಮಗುವಿನ ಜೀವನವನ್ನು ಹೇಗೆ ಉಜ್ವಲಗೊಳಿಸುತ್ತಿದೆ ? ಆತನಲ್ಲಿ ಸಾಮಾಜಿಕ ಸದ್ಗುಣಗಳು ಎಷ್ಟರ ಮಟ್ಟಿಗೆ ಸ್ಥಿರವಾಗಿ ನೆಲಸಹತ್ತಿವೆ? ಮಗುವಿನ ಸುಪ್ತವಾದ ಶಾರೀರಿಕ, ಮಾನಸಿಕ ಒಲವು ಶಕ್ತಿಗಳನ್ನೆಲ್ಲ ಹೇಗೆ ಬೆಳಕಿಗೆ ತರಬಹುದು ? ಹೇಗೆ ಬಲಿಸಬಹುದು ? ಇವೇ ಮೊದಲಾದವುಗಳನ್ನು ಜೀವನ ಶಿಕ್ಷಣದಲ್ಲಿ ಶಿಕ್ಷಕನು ಕಂಡುಹಿಡಿಯಬೇಕು. ಅದಕ್ಕಾಗಿ **ಹೊಸ ಹಾದಿಗಳನ್ನು** ಪ್ರಯೋಗಗಳಿಂದ ಕಂಡುಹಿಡಿಯಬೇಕು.

**ಧ್ಯೇಯವಾದಿ** :— ಕೊನೆಯ ಗಂಟೆಯಾದರೆ ಶಾಲೆಯಲ್ಲಿ ತಮ್ಮ ಕೆಲಸ ತೀರಿತೆನ್ನುವ ಕೇವಲ ಪಗಾರಿ ವೃತ್ತಿಯ ಶಿಕ್ಷಕನು ಜೀವನ ಶಿಕ್ಷಣದಿಂದ ದೂರವಾಗಿರಬೇಕು. ತಾನೊಂದು ಒಳ್ಳೇ ಕೆಲಸ ಮಾಡುತ್ತಿರುವೆ; **ರಾಷ್ಟ್ರ-ನಿರ್ಮಾಣ ಕಾರ್ಯದಲ್ಲಿ** ತನ್ನ ಕೆಲಸವು ಸಹಾಯಕವಾಗಬೇಕು ಎಂಬ ಅರಿವು ಶ್ರದ್ಧೆಗಳು ಆತನಲ್ಲಿ ದೃಢವಾಗಿ ನೆಲೆಯೂರಬೇಕು. ವಿದೇಶದ ವಿಧರ್ಮಿಗಳು ಸಾವಿರಾರು ಮೈಲುಗಳಾಚೆಗೆ ಹೋಗಿ ತಮ್ಮ ಕಾರ್ಯವನ್ನು ಮಾಡುತ್ತಾರೆ. ತಮ್ಮ ಕಾರ್ಯದೊಡನೆ ಅವರು **ತಾದಾತ್ಮ್ಯವನ್ನು**

ಪಡೆದಿರುವರು. ಯಾವುದೇ ಹೆದರಿಕೆಯಿಂದ ಅವರು ಹಿಂಜರಿಯುವದಿಲ್ಲ. ನಿರಾಶೆಯಿಂದ ಕಂಗೆಡುವದಿಲ್ಲ. ಸತತ ಪ್ರಯತ್ನಶೀಲರು. ಧ್ಯೇಯಸಾಧನೆಯು ಈ ಮನೋವೃತ್ತಿಯು ಜೀವನ ಶಿಕ್ಷಣದ ಶಿಕ್ಷಕರಲ್ಲಿ ಬರಬೇಕು. ಇಲ್ಲಿ ಕೇವಲ ಮಾತುಗಾರಿಕೆ ನಡೆಯದು. ಮೂಲೋದ್ಯೋಗದಲ್ಲಿ ಬಾಲಕರು ಪಡೆಯುವ **ಗತಿ-ಪ್ರಗತಿಗಳನ್ನೂ ಗಳಿಕೆ ಉಳಿಕೆಗಳನ್ನೂ ಅಂಕಿ ಸಂಖ್ಯೆಗಳಿಂದ, ಪಟ ಪತ್ರಿಕೆಗಳಿಂದ** ಪ್ರತ್ಯಕ್ಷವಾಗಿ ಶಿಕ್ಷಕನು ಮನಗಾಣಿಸಿ ಕೊಡಬೇಕಾಗುವದು.

**ಗ್ರಾಮನಿಷ್ಠೆ:**— ಜೀವನ ಶಿಕ್ಷಣವು ಹೆಚ್ಚಾಗಿ ಹಳ್ಳಿಗರಿಗಾಗಿ. ಭಾರತದ ಹೃದಯುವೇ ಹಳ್ಳಿಗಳಲ್ಲಿದೆ. ನಮ್ಮ ಸಂಸ್ಕೃತಿಯೂ ಗ್ರಾಮನಿಷ್ಠವಾಗಿದೆ. ಹಳ್ಳಿಗಳ ಉದ್ಧಾರವೂ, ಹಳ್ಳಿಗರ ಉನ್ನತಿಯೂ ಈ ಶಿಕ್ಷಣದ ಗೊತ್ತು ಗುರಿಗಳಾಗಿವೆ. ಜೀವನದ ಶಿಕ್ಷಣದ ಶಿಕ್ಷಕನಿಗೆ ಈ ಮಾತಿನ ಮನವರಿಕೆಯಾಗಿರಬೇಕು. ಹಳ್ಳಿಯ ಜೀವನಕ್ಕೆ ಆತನ ಮನಸ್ಸು ಮುದುಡಿಕೊಳ್ಳಬಾರದು. ಹಳ್ಳಿಯಲ್ಲಿ ಹೊಲಸಿದೆ, ಹಳ್ಳಿಗರಲ್ಲಿ ನಿರಾಶೆಯಿದೆ, ನಿಸ್ಸತ್ವ ಜೀವನವಿದೆ, ‘ಹಣೇಬರಹ’ದ ಹೇಡಿತನವಿದೆ ಇಲ್ಲವೇ ಹಾನಿಕಾರಕ ಹುಂಬತನವಿದೆ. ಇಂದಿನ ಹಳ್ಳಿಗಳ ಈ ಸ್ಥಿತಿಯನ್ನು ಯಾರೂ ಅಲ್ಲಗಳೆಯುವದಿಲ್ಲ. ಆದರೆ ಹಳ್ಳಿಯಲ್ಲಿ ನೆಲೆಸುವ ಶಿಕ್ಷಕನು ಈ ಪರಿಸ್ಥಿತಿಯನ್ನು ತಿದ್ದುವ ಕಾರ್ಯವನ್ನು ಜಾಣ್ಮೆಯಿಂದ ಪ್ರಾರಂಭಿಸಬೇಕು. ಅಲ್ಲಿಯ ಜನಜೀವನದೊಡನೆ ಸಮರಸವಾಗಿ ಬೆರೆತು ತಾನು ಅವರ ನಿಜವಾದ ಹಿತಕರ್ತೃವೆಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕು. ತನಗೆ ಅನುಕೂಲವಾಗಿರುವ ಬಹುವಿಧದ **ವಿಧಾಯಕ ಕಾರ್ಯಕ್ರಮದಿಂದಲೂ, ಸೇವಾ ತತ್ಪರತೆಯಿಂದಲೂ** ಅವರ ಆದರ ವಿಶ್ವಾಸವನ್ನು ಗಳಿಸಬೇಕು.

**ಸಮಭಾವ ಹಾಗೂ ಸಮದೃಷ್ಟಿ :**— ಕಾರಣಗಳೇನೆ ಇರಲಿ. ನಮ್ಮ ಸಮಾಜದಲ್ಲಿ ಅನೇಕ ಜಾತಿಗಳಿವೆ, ವರ್ಗಗಳಿವೆ. ಸ್ವಾತಂತ್ರ್ಯಸಂಪಾದನೆಗೆ ಇವು ಹಿಂದೆ ಕಾಲ್ತೊಡಕಾದವು. ಜಾತ್ಯತೀತವಾದ ಇಂದಿನ ಸ್ವತಂತ್ರ ಭಾರತದಲ್ಲಿ ಮಧ್ಯಯುಗೀನವಾದ ಈ ಸಂಸ್ಥೆಗಳಿಗೆ ಸ್ಥಾನವಿಲ್ಲ. **ಮೇಲು ಕೀಳೆಂಬ**

ಭಾವನೆಯಿಂದ ಸಮಾಜದ ಬಂಧನವು ಶಿಥಿಲವಾಗಿದೆ. ಸಮಾಜವು ಒಡೆದು ಹೋಗಿದೆ. ಈ ವಿಷಮತೆಯಿಂದ ಸ್ವಾರ್ಥ–ಅಸೂಯೆಗಳು ತಲೆಯೆತ್ತಿ ನಿಂತಿವೆ. ಜೀವನ ಶಿಕ್ಷಕನು ಜಾತೀಯತೆಯಿಂದ ಅಲಿಪ್ತನಾಗಿರಬೇಕು. ಮೇಲು ಕೀಳೆಂಬ ಭಾವನೆಯನ್ನು ಬಿಟ್ಟುಕೊಟ್ಟು ಎಲ್ಲರೊಡನೆ ಸಮತೆಯಿಂದ, ಬಂಧುಭಾವದಿಂದ ನಡೆದುಕೊಳ್ಳಬೇಕು. ಸರ್ವಧರ್ಮಗಳಲ್ಲಿಯೂ **ಸಮದೃಷ್ಟಿಯಿರಬೇಕು.** ಎಲ್ಲ ಧರ್ಮಗಳೂ ಸತ್ಯದ ವಿವಿಧ ಸ್ವರೂಪಗಳೆಂದು ಭಾವಿಸಿ ಅವುಗಳನ್ನು ಗೌರವಿಸಬೇಕು.

**ಪೂರ್ಣಜೀವನ :**—ಕೊನೆಯದಾಗಿ **ಜೀವನಶಿಕ್ಷಣ**ವೆಂದರೆ ಒಂದು ಉದ್ಯೋಗ ಕಲಿಸುವದಲ್ಲ. **ಸತ್ಯ-ಶಾಂತಿಗಳ ತತ್ವಗಳ ಮೇಲೆ** ನೂತನ ಸಮಾಜವನ್ನು—**ಸರ್ವೋದಯ ಸಮಾಜವನ್ನು—** ಕಟ್ಟುವದೇ ಅದರ ಧ್ಯೇಯವಾಗಿದೆಯೆಂಬುದನ್ನು ಜೀವನ ಶಿಕ್ಷಕನು ಚನ್ನಾಗಿ ಅರಿತುಕೊಂಡಿರಬೇಕು. ಈ ಕಾರ್ಯದಲ್ಲಿ ತನ್ನ **ಅಳಿಲುಸೇವೆಯನ್ನು** ಸಲ್ಲಿಸಲು ಆತನು **ಪಾತ್ರತೆಯನ್ನು** ತಂದುಕೊಳ್ಳಬೇಕು. ತನ್ನ ಆರೈಕೆಯಲ್ಲಿರುವ ಮಕ್ಕಳ ಜೀವನವು ತುಂಬುಜೀವನ–ಪೂರ್ಣಜೀವನವಾಗುವಂತೆ ಅವರ ಶಕ್ತಿಗಳೆಲ್ಲವನ್ನೂ ವಿಕಸಿತಗೊಳಿಸಬೇಕು. **ಪರಿಪಕ್ವವಾದ ಹಣ್ಣನ್ನು ಎಲ್ಲಿ ಚಿವುಟಿದರೂ ಮಧುರ ರಸ ಹೊರಹೊಮ್ಮುವಂತೆ** ತನ್ನ ಜೀವನದಲ್ಲಿಯೂ ಪಾವಿತ್ರ್ಯ–ಪೂರ್ಣತೆಗಳನ್ನು ತಂದುಕೊಂಡು, ಅದನ್ನು ಮಕ್ಕಳಲ್ಲಿ, ಸಮಾಜದಲ್ಲಿ ಪಸರಿಸಲು ಯತ್ನಿಸಬೇಕು.

# ಪರಿಚ್ಛೇದ ೧೭

## ಶಿಕ್ಷಣದ ನಿತ್ಯೋಪಕರಣಗಳು

### (೧) ಪಾಠದ ಸಿದ್ಧತೆ.

ಶಿಕ್ಷಣವು ಲಲಿತಕಲೆಗಳಂತೆ ಒಂದು ಕಲೆಯಾಗಿರುವದೆಂಬುದನ್ನು ಹಿಂದೆ ಹೇಳಿದೆ. ಕಲೆಯು ಕೃತಿರೂಪವಾಗಿದೆ. ಕೃತಿಯಲ್ಲಿ ಒಂದು ಕ್ರಮ

ವಿರಬೇಕು. ಅನೇಕ ಸಾಧನೆಗಳ ಅವಶ್ಯಕತೆಯಿರುವದು. ಚಿತ್ರಗಾರನು ಚಿತ್ರ ತೆಗೆಯುವ ಮೊದಲು ತನಗೆ ಬೇಕಾಗುವ ಸಾಮುಗ್ರಿಗಳನ್ನೆಲ್ಲ ಆರಿಸಿ ಕೊಳ್ಳುವನು ; ಸಂಗ್ರಹಿಸಿಕೊಳ್ಳುವನು. ಚಿತ್ರದ ಸ್ಥೂಲವಾದ ರೂಪರೇಷೆ ಯೊಂದನ್ನು ಮಾಡಿಕೊಳ್ಳುವನು. ಮುಂದೆ ಆ ಚಿತ್ರದ ವಿವರಗಳನ್ನೆಲ್ಲ ಹೊಂದಿಕೆಯಾಗುವಂತೆ ಆತನು ತುಂಬಿಕೊಳ್ಳುವನು. ಶಿಕ್ಷಣಕಲೆಯಲ್ಲಿ ಕಾರಾಗೀರನಂತಿರುವ ಶಿಕ್ಷಕನು ಇದೇ ಕ್ರಮವನ್ನೇ ಅನುಸರಿಸಬೇಕಾಗು ವದು. ಅವನು ಪಾಠದ ಪೂರ್ವಸಿದ್ಧತೆಯನ್ನೆಲ್ಲ ಚನ್ನಾಗಿ ಮಾಡಿಕೊಳ್ಳ ಬೇಕು. ಅವಶ್ಯವಾದ ವಿಷಯ ಜ್ಞಾನವನ್ನು ಸಂಪಾದಿಸಬೇಕು. ಬೇಕಾ ಗುವ ಸಾಮುಗ್ರಿಗಳನ್ನು ಸಂಗ್ರಹಿಸಬೇಕು. **ಹೀಗೆ ಪೂರ್ವಸಿದ್ಧತೆ ಮಾಡದ ಶಿಕ್ಷಕನು ವರ್ಗದಲ್ಲಿ ಕಲಿಸುವ ದೃಶ್ಯವು ಶೋಚನೀಯ ವಾಗಿರುವದು.** ಇದರಿಂದ ಶಿಕ್ಷಕನಿಗೂ ತೊಂದರೆ—ಮಕ್ಕಳಿಗೂ ಹಾನಿ. ಇದನ್ನು ತಪ್ಪಿಸಲು ಪಾಠದ ಪೂರ್ವಸಿದ್ಧತೆಯು ಅವಶ್ಯವಾದುದು.

ಎಳೆಮಕ್ಕಳು ಕುತೂಹಲದಿಂದ ಅನೇಕ ವಿಷಯಗಳನ್ನು ಕೇಳಿ ತಿಳಿದು ಕೊಳ್ಳುವರು. ಆದರೆ ಶಾಲೆಯ ಕೃತ್ರಿಮವಾದ: ಸನ್ನಿವೇಶದಲ್ಲಿ ಈ ಬಗೆಯ ಸಹಜವಾದ ಜಿಜ್ಞಾಸೆಯು ಉಂಟಾಗದು. ಅದನ್ನು ಹಲವು ಹಂಚಿಕೆಗಳಿಂದ ಹುಟ್ಟಿಸಬೇಕಾಗುವದು. ಇದಕ್ಕಾಗಿಯೂ ಪೂರ್ವಾಲೋಚನೆಯಿಂದ ಪಾಠದ ಸಿದ್ಧತೆಯನ್ನು ಮಾಡಬೇಕಾಗುವದು. ಟ್ರೇನಿಂಗ್ ಕಾಲೇಜುಗಳಲ್ಲಿ ಪ್ರವೇಶ ಹೊಂದಿದ ಪ್ರಾಥಮಿಕ ಶಿಕ್ಷಕನಿಗೆ ಈ ಪಾಠದ ಸಿದ್ಧತೆಯು ಒಳ್ಳೇ ತೊಡಕಿನ ದಾಗುವದು. ಶಿಕ್ಷಣ ತತ್ವಗಳ ಸಾಮಾನ್ಯ ಪರಿಚಯವೂ ಕೂಡ ಆತನಿಗೆ ಇನ್ನೂ ಸಾಕಷ್ಟು ಆಗಿರುವದಿಲ್ಲ. ಅಷ್ಟರಲ್ಲೇ ಪಾಠಗಳ ರಚನೆಯನ್ನು ಆತನು ಕೈಕೊಳ್ಳಬೇಕಾಗುವದು. ದಾರಿತಪ್ಪಿದವನು ಕಂಡವರನ್ನೆಲ್ಲ ಕೇಳುತ್ತ ಹೋಗುವಂತೆ ಅಭಿನವಶಿಕ್ಷಕನಾದರೂ ಅನ್ಯರ ಟಿಪ್ಪಣಿಗಳನ್ನು ಆಶ್ರಯಿಸಿ, ಇಲ್ಲವೆ ಅಚ್ಚಾದ ಟಿಪ್ಪಣಿಗಳನ್ನು ಅವಲಂಬಿಸಿ, ತನ್ನ ಕಾರ್ಯವನ್ನು ಹೇಗೋ ಸಾಧಿಸುವನು. ಈ ಸಮಯದಲ್ಲಿ ಹಿಂದೆ ಹೇಳಿಕೊಟ್ಟ ಶಿಕ್ಷಣ ಸುಭಾಷಿತಗಳನ್ನು ಆತನು ಚನ್ನಾಗಿ ತಿಳಿದುಕೊಳ್ಳಬೇಕು. ಶಿಕ್ಷಣ ಕಾರ್ಯ

ದಲ್ಲಿ ಅವುಗಳ ಉಪಯೋಗವು ಅನುಭವದಿಂದ ಆತನಿಗೆ ಮನವರಿಕೆಯಾಗು ವದು. ಸಾಮಾನ್ಯ ಶಿಕ್ಷಣದ **ರೂಢಿಯ ಪಾಠದ ಟಿಪ್ಪಣಿಯಲ್ಲಿ ಪರಂಪರೆಯಿಂದ ಬಂದ ಒಂದು ಪದ್ಧತಿಯಿದೆ.** ಹರ್ಬಾರ್ಟನೆಂಬ ಶಿಕ್ಷಣ ಕಲಾವಿದನು ಈ ಪರಂಪರೆಯನ್ನು ಹಾಕಿಕೊಟ್ಟವನು. ಈ ಪಾಠಕ್ರಮದಲ್ಲಿ ಐದು ಮೆಟ್ಟಲುಗಳಿವೆ. ಮೊದಲನೆಯದನ್ನು '**ಪಾಠಪ್ರವೇಶ**' ಅಥವಾ '**ಉಪಕ್ರಮ**' ವೆಂದು ಕರೆಯಬಹುದು. ಕಲಿಯುವ ಮಕ್ಕಳಲ್ಲಿ ಹೊಸ ಪಾಠದ ಬಗ್ಗೆ ಈಗಾಗಲೇ ಗೊತ್ತಿರುವ ಸಂಗತಿಗಳನ್ನು ಶಿಕ್ಷಕನು ಈ ಮೆಟ್ಟಲಿನಲ್ಲಿ ಕಂಡುಹಿಡಿಯುವನು. ವಿಚಾರಗಳಲ್ಲಿ ಒಂದಕ್ಕೊಂದು ಕೂಡಿಕೊಳ್ಳುವ ಶಕ್ತಿಯಿದೆ. ಹೊಸ ವಿಷಯದ ಬಗ್ಗೆ ಕುತೂಹಲವನ್ನಾದರೂ ಶಿಕ್ಷಕನು ಇಲ್ಲಿಯೇ ಹುಟ್ಟಿಸುವನು. ಈ ಉಪಕ್ರಮವು ತಲೆಭಾರವಾಗದಂತೆ ಮಿತವಾಗಿರಬೇಕು. ಮುಂದಿನ ಮೆಟ್ಟಲು—'**ಪ್ರತಿಪಾದನೆ**' '**ವಿಷಯ ವಿವೇಚನೆ**'. ಈ ಭಾಗದಲ್ಲಿ ಹೊಸ ವಿಷಯದ ವಿವೇಚನೆಯು ಸಾಂಗವಾಗಿ ಸಾಗಬೇಕು. ಹೇಳುವದನ್ನು ತಿಳಿಯಾದ ಭಾಷೆಯಲ್ಲಿ, ಮನಸ್ಸಿನಲ್ಲಿ ನಾಟುವಂತೆ ತಿಳಿಸಿ ಹೇಳಬೇಕು. ಎಲ್ಲ ಸಂಗತಿಗಳನ್ನೂ ವಿದ್ಯಾರ್ಥಿಗಳಿಂದಲೇ ಹೊರಡಿಸಬೇಕೆಂಬ ಹುಚ್ಚು ವ್ಯಾಮೋಹಕ್ಕೆ ಶಿಕ್ಷಕನು ಬಲಿಯಾಗಬಾರದು. ಹೊಸಪದ್ಧತಿಯೆಂದರೆ ಪ್ರಶ್ನೆಗಳ ಸುರಿಮಳೆಯೆಂಬ ತಪ್ಪು ತಿಳುವಳಿಕೆಯನ್ನು ತೆಗೆದುಹಾಕಬೇಕು. ಹೊಸ ವಿಷಯವನ್ನು ಹೇಳಲೇ ಬೇಕಾಗುವದು. ಇದಕ್ಕೆ '**ಕಥನ**' ವೆಂದು ಕರೆಯುವರು. **ವಿಷಯ ಪ್ರತಿಪಾದನೆಯಲ್ಲಿ ಸ್ಪಷ್ಟತೆಯೂ ಹೊಂದಿಕೆಯೂ ಅವಶ್ಯವಾದ ಗುಣಗಳಾಗಿವೆ.** ಕೆಲವು ವಿಷಯಗಳ ಪ್ರತಿಪಾದನೆಯಲ್ಲಿ ಅನೇಕ ಉದಾಹರಣೆಗಳಿಂದ ಶಿಕ್ಷಕನು ಸಾಮಾನ್ಯ ತತ್ವವನ್ನು ವಿದ್ಯಾರ್ಥಿಗಳೇ ಕಂಡುಹಿಡಿಯುವಂತೆ ಯತ್ನಿಸಬೇಕು. ಈ ರೀತಿಗೆ ಉದ್ಗಾಮಿ ಅನುಮಾನವೆನ್ನುವರು. ಕಂಡುಹಿಡಿದ ಸಾಮಾನ್ಯ ತತ್ವವನ್ನು ಬೇರೆ ಕೆಲವು ಉದಾಹರಣೆಗಳಿಗೆ ವಿದ್ಯಾರ್ಥಿಗಳೇ ಹೊಂದಿಸಿ ನೋಡುವಂತೆ ಮಾಡಬೇಕು. ಇದರಿಂದ, ಕಂಡುಹಿಡಿದ ಸಾಮಾನ್ಯ ತತ್ವದ ಸತ್ಯತೆಯು ಹೆಚ್ಚು ದೃಢವಾಗಿ ಬಿಂಬಿ

ಸುವದು. ಈ ಬಗೆಯ ಅನುಮಾನಕ್ಕೆ 'ಅವಗಾಮಿ' ಅನುಮಾನವೆನ್ನು ವರು. ಮೂರನೆಯ, ನಾಲ್ಕನೆಯ ಮೆಟ್ಟಲುಗಳು '**ತುಲನೆ**' ಹಾಗೂ '**ಹೊಂದಿಕೆ**'. ಇವುಗಳಾದರೂ ಮೇಲೆ ಹೇಳಿದ ಅನುಮಾನಗಳ ರೀತಿಯ ಲ್ಲಿಯೇ ಸಾಗುವವು. ಪಾಠದ ಕೊನೆಯ, ಐದನೆಯ ಮೆಟ್ಟಲು ಹೊಸ ದಾಗಿ ಕಲಿತ ವಿಷಯದ '**ಉಪಸಂಹಾರ**'. ಇಲ್ಲಿ, ಕಲಿತ ವಿಷಯವನ್ನು ವಿದ್ಯಾರ್ಥಿಗಳು ಸರಿಯಾಗಿ ತಿಳಿದುಕೊಂಡಿರುವರೆಂಬ ಬಗ್ಗೆ ಶಿಕ್ಷಕನು ಹಲವು ಪ್ರಶ್ನೆಗಳಿಂದ ಕಂಡು ಹಿಡಿಯಬೇಕು. ಆರನೆಯದು **ಗೃಹಪಾಠ.** ವಿದ್ಯಾರ್ಥಿ ಗಳಿಗೆ ಮನೆಯಲ್ಲಿ ಮಾಡಲು ಹೇಳಿದ ಕೆಲಸ.

ಪಾಠಕ್ಕಾಗಿ ಆಯ್ದುಕೊಂಡ ಭಾಗವು ಹಾಕಿಕೊಂಡ ಅವಧಿಯನ್ನು ಮೀರದಂತಿರಬೇಕು. ವಿಷಯವಾದರೂ ಕಲಿಯುವವರನ್ನು ಬೆದರಿಸುವಂತೆ ಹೆಚ್ಚು ಗಡಚಾಗಿರಕೂಡದು; ಇಲ್ಲವೆ ಅದರಲ್ಲಿ ಏನೊ ಹುರುಳಿಲ್ಲವೆಂದು ಬಿಟ್ಟುಕೊಡುವಷ್ಟು ಹಗುರಾಗಿರಕೂಡದು. ಒಟ್ಟಿನಲ್ಲಿ ಅದು ಅವರ ಕುತೂ ಹಲವನ್ನು ಕೆರಳಿಸಿ, ಹೆಚ್ಚಿಗೆ ತಿಳಿದುಕೊಳ್ಳಲು ಅವರು ಯತ್ನಮಾಡು ವಂತಿರಬೇಕು. **ಎಲ್ಲ ವಿಷಯುಗಳಲ್ಲಿಯೂ ಇದೇ ಸಾಂಪ್ರದಾಯಿಕ ರೀತಿಯ ಅಂಧಾನುಕರಣವನ್ನು ಶಿಕ್ಷಕನು ಮಾಡಕೂಡದು.** ಈ ಮೆಟ್ಟಲುಗಳಲ್ಲಿ ಅಡಕವಾದ ಮಾನಸಶಾಸ್ತ್ರದ ಮರ್ಮವನ್ನಷ್ಟು ನೆನಪಿನಲ್ಲಿ ಟ್ಟರೆ ಸಾಕು. **ವಿಷಯುಗ್ರಹಣದಲ್ಲಿ ಮನಸ್ಸು ಹೇಗೆ ವರ್ತಿಸುವ ದೆಂಬುದನ್ನು ಮಾತ್ರ ಈ ಮೆಟ್ಟಲುಗಳು ಸೂಚಿಸುವವು.**

**ಜೀವನಶಿಕ್ಷಣದಲ್ಲಿ ಸಮವಾಯ ಪಾಠದ ರಚನೆ.** (ಮೆಟ್ಟಲು ಗಳು, ಅವುಗಳ ಉದ್ದೇಶ).

ಅಭ್ಯಾಸ ಪತ್ರಿಕೆಯಲ್ಲಿಯ ಇಲ್ಲವೆ ಪಠ್ಯಪುಸ್ತಕಗಳಲ್ಲಿಯ ವಿಷಯುಗ ಳನ್ನು ಪಾಠದ ಅವಧಿಗೆ ಹವಣಾಗುವಂತೆ ವಿಭಾಗಿಸಿ ತೆಗೆದುಕೊಳ್ಳುವದು ಹಿಂದಿನ ಪಾಠಗಳ ರೀತಿ. ಸಾಮಾನ್ಯ ಪಾಠಗಳಲ್ಲಿ, ಈ ವಿಭಾಗಗಳೇ ಅಂದಿನ ಪಾಠದ '**ಘಟಕ**'ವಾಗುತ್ತಿದ್ದವು. ಆದರೆ ಕೃತಿಮೂಲವಾದ ಸಮವಾಯ ಪಾಠದ ರಚನೆಯು ಸಾಂಪ್ರದಾಯಿಕವಾದ ಪಾಠದ 'ಷಟ್ಪದಿಗಳನ್ನು ಬಿಟ್ಟು

ಕೊಟ್ಟಿದೆ. **ಸಮವಾಯ ಪಾಠವು 'ಕೃತಿಮೂಲ'ವಾದುದು. ಒಂದು ಕೃತಿ, ಒಂದು ಚಟುವಟಿಕೆಯಿಂದಲೇ ಈ ಪಾಠದ ಪ್ರಾರಂಭ.** ಈ ಚಟುವಟಿಕೆಯು ಮಕ್ಕಳ ವಯೋಮಾನದ ಒಲವು ಶಕ್ತಿಗಳಿಗೆ ಅನುರೂಪವಾಗಿರಬೇಕು. ಹಾಗೂ ಮಕ್ಕಳ ಮನಸ್ಸಿಗೆ ಅದು ಹಿಡಿಯುವಂತಿರಬೇಕು. ಅಂದಿನ ಇಲ್ಲವೆ ಮುಂದಿನ ಜೀವನಕ್ಕೆ ಅದು ಹೊಂದಿಕೊಂಡಿರಬೇಕು. ಅಂದರೆ ಅದು **ಉದ್ದೇಶ–ಪ್ರೇರಿತವಾದ ಕೆಲಸವಾಗುವದು.** 'ಉದ್ದೇಶವಿಲ್ಲದೆ ಎಂಥ ಮೂರ್ಖನೂ ಕೂಡ ಕೆಲಸ ಮಾಡಲಾರನು' ಎಂದು ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ. **ಉದ್ದೇಶವಿರುವಲ್ಲಿ ಆಸ್ಥೆ. ಆಸ್ಥೆಯೊಡನೆ ಅವಧಾನ.** ಅಂದಿನ ಚಟುವಟಿಕೆಯ ಉದ್ದೇಶವನ್ನು ಮಕ್ಕಳಿಗೆ ಮನವರಿಕೆ ಮಾಡಿಕೊಟ್ಟು ಅವರನ್ನು ಆ ಚಟುವಟಿಕೆಯಲ್ಲಿ ತೊಡಗಿಸುವದೇ ಮೊದಲನೆಯ ಹೆಜ್ಜೆ. ಸಮವಾಯಪಾಠದಲ್ಲಿ ಇದು ಮೊದಲನೆಯ ಮೆಟ್ಟಿಲು (೧) 'ಪ್ರೇರಣೆ' ಯೆಂದು. ಒಂದು 'ಪರಿಸ್ಥಿತಿ'ಯಲ್ಲಿ, ಒಂದು 'ಉದ್ದೇಶ'ಕ್ಕಾಗಿ, ಒಂದು ಚಟುವಟಿಕೆಯ 'ಅವಶ್ಯಕತೆ' ಯುಂಟಾಯಿತು. ಇದರಿಂದಲೆ ಮಕ್ಕಳಿಗೆ ಅದರಲ್ಲಿ 'ಪ್ರೇರಣೆ' ಯಾಗಿದೆ ಎನ್ನುವದನ್ನು ಸೂಚಿಸುವದಕ್ಕಾಗಿ ಸಮವಾಯ ಪಾಠದ ಮೊದಲನೆಯ ಮೆಟ್ಟಿಲಿನಲ್ಲಿ ಈ ನಾಲ್ಕು ಪದಗಳನ್ನು ಸಮವಾಗಿ ಒಂದೇ ಅರ್ಥದಲ್ಲಿ ಪ್ರಯೋಗಿಸುವದುಂಟು.

ಇಂಗ್ಲಿಷೀನಲ್ಲಿ ಹೇಳುವರು: 'ಭಾವನೆ ವಿಚಾರಕ್ಕೆ ಜನಕ; ವಿಚಾರ ಕೃತಿಗೆ ಜನಕ' ಎಂದು. ಪ್ರೇರಣೆಯಿಂದ ಅಂದಿನ ಚಟುವಟಿಕೆಯನ್ನು ಕೈಕೊಳ್ಳುವ ಭಾವನೆ ಮಕ್ಕಳಲ್ಲಿ ಉಂಟಾಯಿತು. **ಕೈಕೊಂಡ ಕೆಲಸವನ್ನು ಹೇಗೆ ಸರಿಯಾಗಿ ಪೂರ್ತಿಗೊಳಿಸಬೇಕೆಂಬ ಯೊಚನೆಯನ್ನು ಅವರು ಇನ್ನು ಮಾಡಬೇಕು.** ವಿಷಯ ಪ್ರಧಾನವಾದ ಸಾಮಾನ್ಯ ಪಾಠಗಳಲ್ಲಿ ಅವರಿಗೆ ಈ ಯೋಚನೆಯು ತೊಡಗಿರಲಿಲ್ಲ. ಶಿಕ್ಷಕನು ಹೇಳುವದನ್ನು ಕೇಳುವದು ಇಲ್ಲವೇ ಹೇಳಿದಂತೆ ಮಾಡುವದು– ಇಷ್ಟೇ ಅವರ ಕಾರ್ಯ. ಆದರೆ ಚಟುವಟಿಕೆಯು ಇದಕ್ಕಿಂತ ಭಿನ್ನವಾಗಿರುವದು. ಅದಕ್ಕೆ ಸಂಬಂಧಿಸಿರುವ ಕೆಲವು '**ಉಪ-ಕೃತಿ**'ಗಳ ಬಗ್ಗೆ ಯೋಚಿಸಬೇಕು. ಅದಕ್ಕೆ ಅವಶ್ಯವಿರುವ

**ಸಾಧನ ಸಾಮುಗ್ರಿಯನ್ನು** ಕಂಡುಹಿಡಿಯಬೇಕು, ಸಂಗ್ರಹಿಸಬೇಕು. ಯಾವ **ಕ್ರಮದಿಂದ** ಅದನ್ನು ನಡೆಸಬೇಕೆಂಬುದನ್ನು ಗೊತ್ತುಪಡಿಸಬೇಕು. ಚಟುವಟಿಕೆ ಒಬ್ಬರದೆ ಕಾರ್ಯವಲ್ಲ. ಅದಕ್ಕೆ ಅನೇಕರ ನೆರವು ಸಹಕಾರಗಳು ಬೇಕು. **ಅದರಿಂದ ಸಾಧನ-ಸಂಗ್ರಹದೊಡನೆ 'ಸಂಘಟನೆ'ಯೂ ಅವಶ್ಯವಾಗಿದೆ.** ಹೀಗೆ 'ಉಪ-ಕೃತಿಗಳು', 'ಸಾಧನಸಾಮುಗ್ರಿ' ಹಾಗೂ 'ಸಂಘಟನೆ'- ಇವುಗಳಿಂದ ಕೂಡಿದುದು ಸಮವಾಯಪಾಠದ ಎರಡನೆಯ ಮೆಟ್ಟಲಾದ (೨) **ಯೋಜನೆ** ಅಥವಾ ಚಟುವಟಿಕೆಯ ವಿವರಗಳು. ಇದರಲ್ಲಿ ಚಟುವಟಿಕೆಗೆ ಬೇಕಾಗುವ ಸಮಯ, ಮೂಲದ್ರವ್ಯಗಳು, ಅವುಗಳನ್ನು ವರ್ಗದಲ್ಲಿ ವ್ಯವಸ್ಥಿತವಾಗಿ ಹಂಚಲು ಚುನಾಯಿತರಾದ ಮಂತ್ರಿ ಇಲ್ಲವೆ ಕಾರ್ಯದರ್ಶಿಗಳನ್ನು ಆರಿಸುವದು- ಇವೆಲ್ಲವೂ ಸಾಗುವವು.

ಇದುವರೆಗೆ ಚಟುವಟಿಕೆಯ ಪ್ರೇರಣೆ, ಪೀಠಿಕೆಗಳಾದವು. ಇನ್ನು **ಕಾರ್ಯಾರಂಭ.** ಇದಕ್ಕೆ ಸಮವಾಯಪಾಠದ ಮೂರನೆಯ ಮೆಟ್ಟಲು (೩) **ಸುವ್ಯವಸ್ಥಿತಕಾರ್ಯ ಅಥವಾ 'ಕಾರ್ಯನಿರ್ವಹಣ'** ವೆಂದು ಕರೆಯುವರು. ಅಚ್ಚುಕಟ್ಟಾಗಿ ಕೆಲಸ ಮಾಡುವ ರೀತಿ ಬಾಲಕರಿಗೆ ಇನ್ನೂ ರೂಢವಾಗಿರುವದಿಲ್ಲ. ಮೇಲಾಗಿ, ಮಾಡುವದು ಹೊಸ ಕೆಲಸ. ಅದಕ್ಕಾಗಿ ಶಿಕ್ಷಕನು ಬಾಲಕರಿಗೆ ತಿಳಿಯುವಂತೆ ತಾನು ಅದನ್ನು ಮೊದಲು ಮಾಡಿ ತೋರಿಸಬಹುದು. '**ಇದು ಶಿಕ್ಷಕನ ಮಾದರಿಯ ಕೃತಿ**'. ಆ ಮೇಲೆ ಒಬ್ಬ ಬಾಲಕನಿಂದ ಅದನ್ನು ಮಾಡಿಸಿ ತೋರಿಸಬಹುದು. ಇದು '**ಬಾಲಕನ ಮಾದರಿಯ ಕೃತಿ**'. ಶಿಕ್ಷಕನ ಮಾದರಿ ಕೃತಿಯಿಂದ ಚಟುವಟಿಕೆಯ ಸರಿಯಾದ ವಿಧಾನದ ತಿಳಿವಳಿಕೆಯೂ ಬಾಲಕನ ಮಾದರಿ ಕೃತಿಯಿಂದ ಅವನಂತೆ **ತಾವೂ ಮಾಡಬಲ್ಲರೆಂಬ ಆತ್ಮವಿಶ್ವಾಸವೂ ಬಾಲಕರಿಗೆ ಲಭಿಸುವವು.** ಹಾಗೂ ಈ ಮಾದರಿಕೃತಿಯು ನಡೆಯುವಾಗ್ಗೆ, ಚಟುವಟಿಕೆಯ ವಿವಿಧ ವಿಧಾನಗಳ ಬಗ್ಗೆ ಬಾಲಕರು ಗಮನಿಸಬೇಕಾದ ಅಂಶಗಳನ್ನು ಅವರ ಲಕ್ಷಕ್ಕೆ ಶಿಕ್ಷಕನು ತಂದುಕೊಡುವನು. ಇವು '**ಲಕ್ಷದಲ್ಲಿಡಬೇಕಾದ ಸಂಗತಿ**'ಗಳು. ಆ ಮೇಲೆ ಬಾಲಕರು ಸ್ವಂತವಾಗಿ ಆ ಚಟುವಟಿಕೆಯನ್ನು

ಪೂರ್ತಿಗೊಳಿಸುವರು. ಇದು '**ಬಾಲಕರ ಕೃತಿ**'. ಶಿಕ್ಷಕನು ತಾನೂ ಮಾಡುತ್ತ ಬಾಲಕರಿಗೆ ನೆರವಾಗುವನು. ಮಾರ್ಗದರ್ಶನ ಮಾಡುವನು. ಈ ರೀತಿಯಾಗಿ ಮೂರನೆಯ ಮೆಟ್ಟಲಾದ 'ಸುವ್ಯವಸ್ಥಿತಕಾರ್ಯ' ದಲ್ಲಿ ಶಿಕ್ಷಕನ ಮಾದರಿ ಕೃತಿ, ಬಾಲಕರ ಮಾದರಿ ಕೃತಿ, ಲಕ್ಷ್ಯದಲ್ಲಿಡಬೇಕಾದ ಸಂಗತಿಗಳು ಹಾಗೂ ಬಾಲಕರ ಸ್ವಂತಕಾರ್ಯ– ಹೀಗೆ ನಾಲ್ಕು ಅಂಶಗಳಿರುವವು. ಈ ಮೂರನೆಯ ಮೆಟ್ಟಲು ಸಾಂಪ್ರದಾಯಿಕ ಪಾಠದ 'ವಿಷಯವಿವೇಚನೆ' ಯಿದ್ದಂತೆ. ನಾಲ್ಕನೆಯ ಮೆಟ್ಟಲು– '**ಕಾರ್ಯಸಮಾರೋಪ**' **ಹಾಗೂ** '**ಪರಿಶೀಲನೆ**' :— ಅಂದಿನ ಪಾಠಕ್ಕೆ ಆಯ್ದುಕೊಂಡ ಚಟುವಟಿಕೆಯನ್ನು ಬಾಲಕರು ಪೂರ್ತಿಗೊಳಿಸಿರುವರು. ಇನ್ನು ಅದರ ಸಮಾರೋಪ ಹಾಗೂ ಪರಿಶೀಲನೆಯಾಗಬೇಕು. ಮೊದಲು ಅಂದಿನ ಚಟುವಟಿಕೆಗಾಗಿ ಬಾಲಕರಿಗೆ ಒದಗಿಸಿದ ಉಪಕರಣಗಳನ್ನೆಲ್ಲ ಅವುಗಳನ್ನು ಹಂಚಿದ ಚುನಾಯಿತ ಮಂತ್ರಿಗಳಿಂದಲೆ ಅಚ್ಚುಕಟ್ಟಾಗಿ ತೆಗೆದಿಡಿಸಬೇಕು. ಇದಾದರೂ ಕಾರ್ಯ–ಸಂಘಟನೆಯಲ್ಲಿಯ ಒಂದು ಭಾಗವೆಂದೇ ಭಾವಿಸಬೇಕು. ಈ ನಾಲ್ಕನೆಯ ಮೆಟ್ಟಲಿನಲ್ಲಿ– (೧) **ಬಾಲಕರ ಕಾರ್ಯವನ್ನು ನಿರೀಕ್ಷಿಸುವದು** :— ಚಟುವಟಿಕೆಯು ಕೈಕೆಲಸವಿದ್ದರೆ, ಬಾಲಕರು ತಾವು ಸಿದ್ಧಗೊಳಿಸಿದ ವಸ್ತುವನ್ನು ತಮ್ಮ ಮುಂದೆ ವ್ಯವಸ್ಥಿತವಾಗಿ ಇಡಬೇಕು. ಶಿಕ್ಷಕನು ಅವುಗಳನ್ನೆಲ್ಲ ಪರೀಕ್ಷಿಸಬೇಕು. (೨) **ಪ್ರೋತ್ಸಾಹ**:— ಚಟುವಟಿಕೆಯ ವಿವಿಧ ವಿಧಾನಗಳನ್ನು ಯಾರು ಅಥವಾ ಯಾವ ಗುಂಪಿನವರು ಚೆನ್ನಾಗಿ ಸಾಗಿಸಿಕೊಂಡು ಬಂದಿರುವರು? ಒಳ್ಳೆ ವಸ್ತುವನ್ನು ಯಾರು ಸಿದ್ಧಗೊಳಿಸಿರುವರು?– ಇದನ್ನು ಬಾಲಕರೇ ಕಂಡುಕೊಳ್ಳುವಂತೆ ಮಾಡಬೇಕು. ಚನ್ನಾಗಿ ಕೆಲಸ ಮಾಡಿದವರಿಗೆ ಪ್ರೋತ್ಸಾಹ, ಪ್ರಶಂಸೆ, ಉತ್ತೇಜನವನ್ನೀಯಬೇಕು. **ಸರಿಯಾದ ಪ್ರೋತ್ಸಾಹ ಬಾಲಕರಲ್ಲಿ ಸರಿಯಾದ ಸ್ವಾಭಿಮಾನವನ್ನು ಹುಟ್ಟಿಸುವದು**, ಹಾಗೂ ಅವರನ್ನು ಅನುಕರಿಸಲು ಉಳಿದವರಿಗೆ ಪ್ರೇರೇಪಿಸುವದು. (೩) **ವಿಮರ್ಶೆ** :— ಬಾಲಕರ ಕೃತಿಗಳಲ್ಲಿ ಉಂಟಾದ ತಪ್ಪುತಡೆಗಳು ಏಕೆ, ಹೇಗೆ ಉಂಟಾಗುವವು? ತೆಗೆದುಕೊಂಡ ಸಮಯವು ಹಾಕಿಕೊಂಡ ಸಮ

ಯಕ್ಕಿಂತ ಏಕೆ ಹೆಚ್ಚುಕಡಿಮೆ ಆಯಿತು ? ಇವೆಲ್ಲ ಸಂಗತಿಗಳನ್ನು ಬಾಲಕರ ಕೂಡ ವಿವೇಚಿಸಿ ಅವರು ತಿಳಿದುಕೊಳ್ಳುವಂತೆ ಮಾಡಬೇಕು. ಈ ಬಗೆಯ ತಪ್ಪುತಡೆಗಳು ಇನ್ನು ಮುಂದೆ ಆಗದಂತೆ ಯಾವ ದಕ್ಷತೆಗಳನ್ನು ಅವರು ವಹಿಸಬೇಕೆಂಬುದನ್ನು ತಿಳಿಸಿ ಹೇಳಬೇಕು.

**ಸಾಂಪ್ರದಾಯಿಕ ಪಾಠವು ಷಟ್ಪದಿಯಾಗಿದ್ದರೆ, – ಚಟುವಟಿಕೆಯ ಸಮವಾಯ ಪಾಠವು ಚತುಷ್ಪದಿಯಾಗಿದೆ.** ಸಾಮಾನ್ಯ ಪಾಠದಲ್ಲಿ ' ವಿಷಯ ' ' ವಿಧಾನ ' ಗಳೆಂದು ಎರಡೇ ವಿಭಾಗಗಳು. ಸಮವಾಯ ಪಾಠದಲ್ಲಿ (೧) **ಚಟುವಟಿಕೆ,** (೨) **ಸಮವಾಯಜ್ಞಾನ,** (೩) **ಕಲಿಸುವ ವಿಧಾನ**ಗಳೆಂಬ ಮೂರು ವಿಭಾಗಗಳು. ಚಟುವಟಿಕೆಯಲ್ಲಿ ಪ್ರಾರಂಭದಿಂದ, ಅದು ಸಾಗುತ್ತಿರುವಾಗ್ಗೆ ಬಾಲಕರಿಗೆ ಅನೇಕ ಅವಶ್ಯಕ ವಿಷಯಗಳನ್ನು ತಿಳಿದುಕೊಳ್ಳುವ ಇಲ್ಲವೆ ತಿಳಿಸಿ ಹೇಳುವ ಸಹಜವಾದ ಪ್ರಸಂಗಗಳು ಒದಗುವವು. ' ಸಮವಾಯಜ್ಞಾನ 'ದ ವಿಭಾಗದಲ್ಲಿ, ಇವುಗಳಿಗೆ ' **ಜ್ಞಾನಸಾಧನದ ಸುಸಮಯಗಳು** ' ಎಂದು ಹೇಳುವದುಂಟು. **ಚಟುವಟಿಕೆಯೊಡನೆ ಸಮರಸವಾಗಿ ಹೀಗೆ ಹೊಂದಿಕೊಂಡುಬಂದ ಜ್ಞಾನವು 'ಸಮನ್ವಿತಜ್ಞಾನ 'ವು.** ವಾಸ್ತವ ಜೀವನದ ಚಟುವಟಿಕೆಯೊಡನೆ ಹೊಂದಿಕೊಂಡು ಬರುವದರಿಂದ **ಈ ಬಗೆಯ ಜ್ಞಾನವೇ ಜೀವನದ ಶಿಕ್ಷಣವು.**

ಚಟುವಟಿಕೆಯಿಂದ ' ಸಮನ್ವಿತ ಜ್ಞಾನ 'ದ ಕಡೆಗೆ ಸಾಗುವಾಗ್ಗೆ ಬಾಲಕರ ಮನಸ್ಸು ಅದರಲ್ಲಿ ಸಹಜವಾಗಿ ನುಸುಳುವಂತಿರಬೇಕು. ಇಲ್ಲವಾದರೆ ಒತ್ತಾಯದ ಕೃತ್ರಿಮತೆಯು ಅದರಲ್ಲಿ ತಲೆದೋರಿ ಪಾಠವನ್ನೇ ಕೆಡಿಸಬಹುದು. ಶಿಕ್ಷಕನ ಪ್ರತಿಭೆ ಹಾಗೂ ತರಬೇತಿನ ಪೂರ್ಣತೆ ಈ ಹೊಂದಿಕೆಯನ್ನು ಸ್ವಾಭಾವಿಕವಾಗಿ ತರುವದರಲ್ಲಿಯೇ ಕಂಡುಬರುವದು. ಹೀಗೆ ಪ್ರಾಸಂಗಿಕವಾಗಿ ಬಂದ ಸಮನ್ವಿತ ಜ್ಞಾನದಲ್ಲಿ ಸ್ಪಷ್ಟತೆ–ಸುಸಂಬದ್ಧತೆಗಳು ಬರಬೇಕು. ಮಕ್ಕಳ ಜೀವನದಲ್ಲಿ ಅದರ ಉಪಯೋಗವಾಗಬೇಕು. ಜ್ಞಾನದ **ಉಪಯೋಗವೇ ' ರೂಢಿ '.** ರೂಢಿಯಿಂದಲೇ ಈ ಜ್ಞಾನದ ' **ದೃಢೀಕರಣ** ' ವಾಗುವದು. ಇದುವೇ ಸಮವಾಯ ಪಾಠದ ಕೊನೆಯ ಮೆಟ್ಟಲು.

## (೨) ವೇಳಾಪತ್ರಿಕೆ.

ಶಿಕ್ಷಣದ ಅಂಗಗಳಲ್ಲಿ ವೇಳಾಪತ್ರಿಕೆಗೂ ಮಹತ್ವದ ಸ್ಥಾನವಿದೆ. ಆದರೆ ವೈಯಕ್ತಿಕವಾಗಿ ನಡೆಯಬೇಕೆನ್ನುವ ಇಂದಿನ ಶಿಕ್ಷಣ ಯುಗದಲ್ಲಿ ವೇಳಾ ಪತ್ರಿಕೆಗೆ ಒಂದು ಬಗೆಯ ಅನಾದರವು ಬಂದಿದೆ. ಭಿನ್ನ ಶಕ್ತಿಗಳುಳ್ಳ, ವಿವಿಧ ವಾದ ಒಲವುಗಳಿಂದ ಕೂಡಿದ ವಿದ್ಯಾರ್ಥಿಗಳೆಲ್ಲರೂ ಒಂದೇ ಸಮಯಕ್ಕೆ ಒಂದೇ ವಿಷಯದಲ್ಲಿ ಆಸ್ಥೆಯುಳ್ಳವರಾಗಬೇಕೆನ್ನುವದನ್ನು ಇಂದಿನ ಹೊಸ ಶಿಕ್ಷಣವು ಒಪ್ಪದು. ವೇಳಾಪತ್ರಿಕೆಯು, ಈ ದೃಷ್ಟಿಯಿಂದ ನೋಡಿದರೆ, ಚಿಕ್ಕ ಮಕ್ಕಳ ಸ್ವಾಭಾವಿಕವಾದ ಒಲವುಗಳಿಗೆ ತಡೆಹಾಕುವ ಒಂದು ಬಗೆಯ ಬಲಾ ತ್ಕಾರವೆನಿಸುವದು. ವೇಳಾಪತ್ರಿಕೆಯ ಈ ಬಲಾತ್ಕಾರವನ್ನು ತಪ್ಪಿಸಲು, ಹೊಸ ಶಿಕ್ಷಣದಲ್ಲಿ ವಿವಿಧವಾದ ಯೋಜನೆಗಳು ಬಂದಿವೆ. ಮಾಂಟಿಸೋರಿ, ಡಾಲ್ಟನ್ ಪದ್ಧತಿಗಳು ಇಂಥವುಗಳಲ್ಲಿ ಕೆಲವು. ಆದರೆ ಮತ್ತೊಂದು ರೀತಿ ಯಿಂದ ವಿಚಾರಿಸಿದರೆ, **ವೇಳಾಪತ್ರಿಕೆಯ ಉಪಯುಕ್ತತೆಯನ್ನು ಮಾನಸಶಾಸ್ತ್ರವೂ ಅಲ್ಲಗಳೆಯುವಂತಿಲ್ಲ.** ಚಿಕ್ಕ ಮಕ್ಕಳ ಮನಸ್ಸು ಒಂದೇ ವಿಷಯದಲ್ಲಿ ಹೆಚ್ಚು ಕಾಲ ನಿಲ್ಲುವದಿಲ್ಲ. ಅವರ ಮನಸ್ಸಿನ ಕಾರ್ಯ ಶಕ್ತಿಯಲ್ಲಿ ಏರಿಳಿತಗಳು ಕಂಡುಬರುವವು. ಇದಲ್ಲದೆ ಕಾರ್ಯವು ವಿವಿಧ ವಾಗುತ್ತ ಹೋದರೆ, ಅವರ ಉತ್ಸಾಹವು ಇಮ್ಮಡಿಯಾಗುವದು. ಆಸ್ಥೆ- ಅವಧಾನಗಳು ಸ್ಥಿರವಾಗುವವು. ನಿತ್ಯ ಜೀವನದಲ್ಲಿ ಮನಸ್ಸನ್ನು ಒಂದು ವಿಷಯದಿಂದ ಮತ್ತೊಂದು ವಿಷಯದಕಡೆಗೆ ಅನೇಕ ಸಲ ತಿರುಗಿಸಬೇಕಾಗು ವದು. ವೇಳಾಪತ್ರಿಕೆಯು ಎಳೆಯತನದಲ್ಲಿಯೆ ಚಿಕ್ಕಮಕ್ಕಳಿಗೆ ಈ ರೂಢಿ ಯನ್ನು ತಂದುಕೊಡುವದು.

ವೇಳಾಪತ್ರಿಕೆಯ ಬಗ್ಗೆ ಕೆಲವು ಸಾಮಾನ್ಯ ತತ್ವಗಳು:— **ಕಲಿಸುವ ಅವಧಿಯು ವಿಷಯದ ಸ್ವರೂಪಕ್ಕೂ ಕಲಿಯುವ ವಿದ್ಯಾರ್ಥಿಯ ವಯಸ್ಸಿಗೂ ಅನುಗುಣವಾಗಿರಬೇಕು.** ವಿಷಯವು ಗಡುಚಾಗಿದ್ದರೆ, ಅವಧಿಯು ಇನ್ನೂ ಕಡಿಮೆಯಾಗಬೇಕು. ವಿಷಯದ ಸ್ವರೂಪದಂತೆ, ಅವು ಗಳನ್ನು ತೆಗೆದುಕೊಳ್ಳುವ ಕ್ರಮವೂ ಕಾಲವೂ ಯುಕ್ತವಾಗಿರಬೇಕು. ಗಡು

ಚಾದ ಹಾಗೂ ಸುಲಭವಾದ ವಿಷಯುಗಳನ್ನು ಒಂದರ ಹಿಂದೆ ಮತ್ತೊಮ್ಮೆ ಅವೇ ಬರದಂತೆ ನೋಡಿಕೊಳ್ಳಬೇಕು. ಶಿಕ್ಷಕನು ಹೆಚ್ಚು ಮಾತಾಡಬೇಕಾದ ವಿಷಯುಗಳೆಲ್ಲವೂ ಕೂಡಿ ಬಾರದಂತೆ ಒಂದು ಕ್ರಮವನ್ನು ಅನುಸರಿಸಬೇಕು. ಹೀಗೆ ಮಾಡದಿದ್ದರೆ ಇಬ್ಬರಿಗೂ ದಣಿವು ಬೇಸರಗಳುಂಟಾಗಬಹುದು.

**ಮೂಲ ಶಿಕ್ಷಣದಲ್ಲಿ ವೇಳಾಪತ್ರಿಕೆಯು ಸ್ಥಾನ:—**

ವಿಷಯಪ್ರಧಾನವಾದ ಸಾಂಪ್ರದಾಯಿಕ ಶಿಕ್ಷಣಕ್ಕೆ ದೈನಂದಿನ ವೇಳಾ ಪತ್ರಿಕೆಯ ದಿಗ್ಬಂಧನವು ಅನಿವಾರ್ಯವಾಗಿದೆ. ವಿಷಯುಗಳ ಮಹತಿ ಹಾಗೂ ವ್ಯಾಪ್ತಿಗಳನ್ನು ಅನುಲಕ್ಷಿಸಿ ಶಾಲೆಯ ಸಮಯುದಲ್ಲಿ ಕೆಲವೊಂದು ಅವಧಿ ಗಳನ್ನು ಅವುಗಳಿಗಾಗಿ ಮೀಸಲಾಗಿರಿಸಬೇಕಾಗುವದು, ಇಲ್ಲವೆ ಹಿಂದು ಮುಂದಾಗಿ ಅವುಗಳ ಕ್ರಮವನ್ನು ನಿರ್ದಿಷ್ಟಗೊಳಿಸಬೇಕಾಗುವದು. ಮಕ್ಕಳ ಒಲವು ಶಕ್ತಿಗಳನ್ನು ಕಡೆಗಣಿಸಿ, ಗಂಟೆಯಾದೊಡನೆ ಕೈಯೊಳಗಿನ ವಿಷಯು ವನ್ನು ಕೆಳಗಿಟ್ಟು ಬೇರೊಂದು ವಿಷಯುದಕಡೆಗೆ ಅವರ ಅವಧಾನವನ್ನು ಅಸ್ವೈಚ್ಛಿಕವಾಗಿ, ಬಲಾತ್ಕಾರದಿಂದಾಗಲೀ, ತಿರುಗಿಸಬೇಕು. ಈ ಕೃತ್ರಿಮತೆ ಮನೋವಿಕಾಸಕ್ಕೆ ಅತ್ಯಂತ ವಿಘಾತುಕವಾದುದು. **ಕೃತಿಪ್ರಧಾನವಾದ ಶಿಕ್ಷಣಕ್ಕೆ ವೇಳಾಪತ್ರಿಕೆಯು ಈ ಸಂಕೋಲೆಗಳಿಲ್ಲ.** ಮಕ್ಕಳು ಜೀವ ನೋಪಯೋಗಿಯಾದ ಚಟುವಟಿಕೆಗಳಲ್ಲಿ ತೊಡಗಿರಲು ಅನೇಕ ತೊಡಕು ಗಳು ಅವರಿಗುಂಟಾಗುವವು. ಇವುಗಳನ್ನು ಬಿಡಿಸಲು ವಿವಿಧ ವಿಷಯುಗಳ ತಾತ್ಕಾಲಿಕವಾದ ಜ್ಞಾನವು ಅವರಿಗೆ ಅಗತ್ಯವೆನಿಸುವದು. ಹೀಗೆ **ಅಗತ್ಯ ವೆನಿಸಿದ ಅಥವಾ ಕುತೂಹಲ ಜನಿತವಾದ ಜ್ಞಾನದ ಬೇಡಿಕೆಯನ್ನು** ಶಿಕ್ಷಕನು ಸಕಾಲದಲ್ಲಿ ಪೂರೈಸುವನು. **ಇಂಥ ಜ್ಞಾನವು ಜೀವನದೊಡನೆ ನಿಗಡಿತವಾಗಿ ಬರುವದರಿಂದ, ಅದುವೇ ಜೀವನ ಶಿಕ್ಷಣವೆನಿಸುವದು.** ಪ್ರಾಸಂಗಿಕವಾಗಿ ಮಗುವು ಗಳಿಸಿದ ಈ ಜ್ಞಾನದ ತುಣುಕುಗಳು ಆತನ ಬುದ್ಧಿ ವಿಕಾಸನನ್ನು ಸರಿಯಾಗಿ ಸಾಧಿಸಬಹುದೆ ? ಹೀಗೆ ಸಂಪಾದಿಸಿದ ಜ್ಞಾನದಲ್ಲಿ ಪೂರ್ಣತೆ, ಸುಸಂಬದ್ಧತೆಗಳು ಉಂಟಾಗಬಹುದೇ ?— ಎಂಬುದೊಂದು ಆಕ್ಷೇಪವಿದೆ. ಮಾನಸಶಾಸ್ತ್ರವೇ ಇದಕ್ಕೆ ಸಮಾಧಾನಕರವಾದ ಉತ್ತರವನ್ನು

ಹೇಳಬೇಕು. ಸದೃಶವಾದ-ಸಜಾತೀಯವಾದ ಸಂವೇದನೆಗಳನ್ನು ಏಕರೂಪವಾಗುವಂತೆ ಕೂಡಿಸಿಕೊಳ್ಳುವ ಶಕ್ತಿಯು ಮಿದುಳಿಗುಂಟೆಂಬ ಹರ್ಬಾರ್ಟನ **ಹೊಂದಿಕೆ ಅಥವಾ 'ಸಂಸಕ್ತಿ'ಯು** ತತ್ವವೇ ಇದಕ್ಕೆ ಆಧಾರವಾಗಿದೆ. ಮನಸ್ಸಿನ ಅಖಂಡತೆಯು ಇನ್ನೊಂದು ಪ್ರಮಾಣವು. ಜೀವನದ ಬೇಡಿಕೆಗಳನ್ನು ಪೂರೈಸಿ ಜೀವನದೊಡನೆ ಒಂದಾಗಿ ಬಂದ **ಈ ಜ್ಞಾನತುಣುಕುಗಳು ಬಿಡಿಯಾಗಿ ಉಳಿಯದೆ ಇಡಿಯಾಗಿ ಹೊಂದಿಕೊಳ್ಳುವವು.** ವಿಷಯಾನುಬಂಧವು—ಸಂಬಂಧೀಕರಣವು ಈ ತತ್ವವನ್ನೇ ಆಧರಿಸಿ ನಿಂತಿರುವದು.

ಮೂಲ ಶಿಕ್ಷಣದಲ್ಲಿ ವಿಷಯಾನುಕ್ರಮದ ಪರಂಪರೆಯ ವೇಳಾಪತ್ರಿಕೆಯಿರದಿದ್ದರೂ ಶಾಲೆಯ ಹಾಗೂ ವಸತಿಗೃಹದ **ದಿನಚರ್ಯೆಯ ವೇಳಾಪತ್ರಿಕೆಯು** ಅವಶ್ಯವಾದುದು. ಸರಿಯಾದ ಸಾಮಾಜಿಕ ಜೀವನದಲ್ಲಿ ಮಗುವಿಗೆ ಮೊದಲಿನಿಂದಲೂ ದೀಕ್ಷೆಗೊಟ್ಟು, ಅಂಥ ಜೀವನಕ್ಕೆ ಆತನನ್ನು ಅಣಿಗೊಳಿಸುವದೇ ಈ ದಿನಚರಿಯ ಉದ್ದೇಶವಾಗಿದೆ. ಈ ವೇಳಾಪತ್ರಿಕೆಯಲ್ಲಿ—

೧) **ಸ್ವಚ್ಛತೆ ಹಾಗೂ ಸಫಾಯಿ** (ವೈಯಕ್ತಿಕ, ಶಾಲೆಯ, ಇಲ್ಲವೆ ಗ್ರಾಮದ.)

೨) **ಪ್ರಾರ್ಥನೆ:**—ಮೂಕಪ್ರಾರ್ಥನೆ, ಸಾಂಘಿಕ ಪ್ರಾರ್ಥನೆ (ಸರ್ವಧರ್ಮ ಸಮನ್ವಯ ರೂಪವಾದ ವಚನಗಳಿಂದ ಕೂಡಿದುದು)

೩) **ಆಯ್ದುಕೊಂಡ ಮೂಲೋದ್ಯೋಗ.**

೪) **ನೂಲುವದು.**

೫) **ಚಟುವಟಿಕೆಯ ಮುಖಾಂತರ ಸಮವಾಯ ಪಾಠಗಳು.**

೬) **ರೂಢಿಯ ಪಾಠಗಳು—ಸಂಗೀತ, ಚಿತ್ರಕಲೆ.**

೭) **ಆಟಗಳು—ಶಾರೀರಿಕಶಿಕ್ಷಣ.**

ಇಷ್ಟೊಂದು ವಿಷಯಗಳ ಸಮಾವೇಶವಾಗುವದು. ಇವುಗಳಲ್ಲಿ ಮೂಲ ಉದ್ಯೋಗಕ್ಕೆ ೨ ತಾಸುಗಳು; ಉಳಿದ ವಿಷಯಗಳ ಸಮಯ ಹಾಗು ಅವಧಿಯನ್ನು ಸ್ಥಾನಿಕ ಪರಿಸ್ಥಿತಿಗೆ ಅನುಗುಣವಾಗುವಂತೆ ಸ್ವಲ್ಪ ಹೆಚ್ಚುಕಡಿಮೆಯಾಗಿ ಮಾಡಿ ಇಟ್ಟುಕೊಳ್ಳಬಹುದು. ವಸತಿಗೃಹದಲ್ಲಿ ಇವುಗಳಲ್ಲದೆ—

ಪಂಚಾಂಗಶ್ರವಣ, ಅಂದಿನ ವೃತ್ತಪತ್ರಗಳನ್ನು ಓದುವದು, ನಾಳಿನ ಕಾರ್ಯ ಕ್ರಮವನ್ನು ಗೊತ್ತುಪಡಿಸುವದು, ಅಡಿಗೆ ಮೊದಲಾದ ನಿತ್ಯಜೀವನದ ಕಾರ್ಯಗಳಲ್ಲಿ ಶ್ರಮವಿಭಾಗದ ಮೇರೆಗೆ ಹಂಚಿಕೊಂಡು ಅವುಗಳ ಸರತಿ ಮತ್ತು ಅವಧಿಯನ್ನು ಗೊತ್ತುಪಡಿಸುವದು ಇವೇ ಮೊದಲಾದ ಉಳಿದ ವಿಷಯಗಳ ವೇಳಾಪತ್ರಿಕೆಯನ್ನೂ ರಚಿಸಬೇಕಾಗುವದು.

## (೩) ಪ್ರಶ್ನೆಗಳು

ಶಿಕ್ಷಣಕಾರ್ಯದಲ್ಲಿ ಶಿಕ್ಷಕನಿಗೆ **ಅತ್ಯಂತ ಮಹತ್ವದ ಸಾಧನ**ವೆಂದರೆ ಪ್ರಶ್ನೆಗಳು. ಪ್ರಶ್ನೆ ಕೇಳುವ 'ಅಧಿಕಾರ'ವು ಶಿಕ್ಷಕನಿಗೂ ಬಾಲಕರಿಗೂ ಸಮ ನಾಗಿಯೇ ಇರುವದು. ಬಾಲಕರು ಜ್ಞಾನಗಳಿಸುವದಕ್ಕಾಗಿ, ಶಿಕ್ಷಕರು ಜ್ಞಾನ ಬೆಳೆಸುವದಕ್ಕಾಗಿ ಪ್ರಶ್ನೆಯು ಒಂದು ಸ್ವಾಭಾವಿಕವಾದ ಸಾಧನವಾಗಿದೆ. ಬಾಲಕರು ಜಿಜ್ಞಾಸೆಯಿಂದ ಕೇಳುವರು, ಶಿಕ್ಷಕನು ವರ್ಗದ ಕೃತ್ರಿಮ ಸನ್ನಿ ವೇಶದಲ್ಲಿ ಆ ಜಿಜ್ಞಾಸೆಯನ್ನು ಹುಟ್ಟಿಸಿ ಅದನ್ನು ತೃಪ್ತಿಗೊಳಿಸುವನು. ಪ್ರಶ್ನೆ ಗಳನ್ನು ವಿವಿಧ ಉದ್ದೇಶಗಳಿಗಾಗಿ ಉಪಯೋಗಿಸಬಹುದು. ೧) ಅಂದು ಕಲಿಸುವ ವಿಷಯದ ಬಗ್ಗೆ ಈಗಾಗಲೇ ಬಾಲಕರಿಗೆ ಏನು ಗೊತ್ತಿದೆ? ಎಷ್ಟು ಗೊತ್ತಿದೆ? ಎಂಬುದನ್ನು ತಿಳಿದುಕೊಳ್ಳುವ ಪ್ರಶ್ನೆಗಳು '**ಶೋಧಕ**' ಪ್ರಶ್ನೆ ಗಳು. ೨) ಮಕ್ಕಳಿಗೆ ತಿಳಿಯದ ನೂತನ ವಿಷಯವನ್ನು ಅವರ ಮುಂದಿಟ್ಟು ಅವರಲ್ಲಿ ಆ ಬಗ್ಗೆ ಆಸ್ಥೆಯನ್ನು ಹುಟ್ಟಿಸುವವು, **ಕುತೂಹಲಜನಕ** ಪ್ರಶ್ನೆ ಗಳು. ಸಾಕ್ರೇಟಿಸನು ಜನರ ತಪ್ಪುತಿಳುವಳಿಕೆಯನ್ನು ಅವರೇ ಕಂಡು ಹಿಡಿಯಲು ಹೀಗೆ ಪ್ರಶ್ನೆ ಕೇಳುತ್ತಿದ್ದನಂತೆ. ಇಂಥ ಪ್ರಶ್ನೆಗಳಿಗೆ '**ವಿಚಾರ ಜನಕ**'—ಪ್ರಶ್ನೆಗಳೆಂತಲೂ ಹೇಳಬಹುದು. ೩) ವಿಷಯನಿರೂಪಣೆಯಲ್ಲಿ ವಿಷಯವನ್ನು ಮುಂದರಿಸಲು ಕೇಳುವ ಪ್ರಶ್ನೆಗಳು '**ವಿವೇಚನಾತ್ಮಕ**' ಪ್ರಶ್ನೆ ಗಳು. ೪) ಹೇಳಿಕೊಟ್ಟ ವಿಷಯವು ಬಾಲಕರಿಗೆ ಎಷ್ಟರ ಮಟ್ಟಿಗೆ ತಿಳಿದಿದೆ ಯೆಂದು ತಿಳಿದುಕೊಳ್ಳುವ ಪ್ರಶ್ನೆಗಳು '**ಪರೀಕ್ಷಾತ್ಮಕ**' ಪ್ರಶ್ನೆಗಳು. ೫) ಮುಗಿಸಿದ ವಿಷಯವನ್ನು ನೆನಪಿಗೆ ತಂದುಕೊಡಲು ಮತ್ತೊಮ್ಮೆ ಕೇಳುವ ಪ್ರಶ್ನೆಗಳು '**ಉಜಳಣಿ**'ಯ ಪ್ರಶ್ನೆಗಳು. ಇನ್ನೊಂದು ರೀತಿಯಲ್ಲಿಯೂ

ಇದೇ ಮಾತನ್ನು ಹೇಳುವದುಂಟು:—೧) **ಕೇಂದ್ರ** ಪ್ರಶ್ನೆಗಳು; ೨) **ದೃಢೀಕರಣ** ಪ್ರಶ್ನೆಗಳು; ೩) **ವಿಕಸನ** ಪ್ರಶ್ನೆಗಳು—ಎಂದು.

ಸರಿಯಾದ ಪ್ರಶ್ನೆಗಳನ್ನು ಸರಿಯಾದ ರೀತಿಯಲ್ಲಿ ಕೇಳುವ ಶಕ್ತಿಯು ಶಿಕ್ಷಕನಿಗೆ ಅತ್ಯವಶ್ಯವಾದುದು. **ಶಿಕ್ಷಣಕಲೆಯ ಜೀವಾಳವೆ ಸರಿಯಾದ ಪ್ರಶ್ನೆಗಳನ್ನು ಕೇಳುವದರಲ್ಲಿ ಕಂಡುಬರುವದು.** ಕಲಿಸುವದು ಪ್ರಶ್ನೆಗಳಿಂದಲೇ ಮೊದಲಾಗಿ, ಪ್ರಶ್ನೆಗಳಲ್ಲಿಯೇ ಮುಕ್ತಾಯಗೊಳ್ಳುವದು.

ಕೆಳಗೆ ಕೊಟ್ಟವುಗಳು ತಪ್ಪು ರೀತಿಯ ಪ್ರಶ್ನೆಗಳಿಗೆ ಉದಾಹರಣೆಗಳಾಗಿವೆ. (೧) **'ಅಹುದು' 'ಇಲ್ಲ' ವೆನ್ನುವ** ಒಂದೇ ಶಬ್ದದ ಉತ್ತರ ಬರುವ ಪ್ರಶ್ನೆಗಳು ಸರಿಯಾದವುಗಳಲ್ಲ. ಯಾಕೆಂದರೆ, ಒಮ್ಮೊಮ್ಮೆ ತಿಳಿಯದೆಯೆ ಕೊಡುವ ಇಂಥ ಉತ್ತರಗಳೂ ದೈವಯೋಗದಿಂದ ಸರಿಯಾಗುವದುಂಟು. "ಹಿಂದುಸ್ತಾನವು ಉಷ್ಣಪ್ರದೇಶವೆ?" ಎಂದು ಕೇಳುವ ಪ್ರಶ್ನೆ ಈ ಮಾದರಿಯದು. ಇದಕ್ಕೆ ಪ್ರತಿಯಾಗಿ 'ಹಿಂದುಸ್ತಾನದ ಹವೆಯು ಎಂತಹದು?' ಎಂದು ಕೇಳುವದು ಹೆಚ್ಚು ಸರಿಯಾದುದು. (೨) **ಪ್ರಶ್ನೆಯು ಉತ್ತರವನ್ನು ಸೂಚಿಸುವಂತಿರಕೂಡದು.** 'ಕಾಶೀ ಪಟ್ಟಣವು ಗಂಗಾನದಿಯ ದಂಡೆಯ ಮೇಲಿರುವದೆ?'– ಎಂದು ಕೇಳುವದಕ್ಕಿಂತಲೂ 'ಅದು ಯಾವ ನದಿಯ ದಂಡೆಯಮೇಲಿದೆ?'– ಎಂದು ಕೇಳುವದು ಸರಿಯಾದ ರೀತಿಯು. (೩) **ಒಂದಕ್ಕಿಂತಲೂ ಹೆಚ್ಚು ಉತ್ತರ ಬರಬಹುದಾದ** ಪ್ರಶ್ನೆಗಳನ್ನು ಕೇಳಕೂಡದು. "ಯಾರು ಶ್ರೇಷ್ಠರು? ಅಕಬರನೋ, ಶಿವಾಜಿಯೋ?" ಎಂದು ಕೇಳುವದು ವಿದ್ಯಾರ್ಥಿಗಳನ್ನು ಪೇಚಿನಲ್ಲಿ ಹಾಕಿದಂತೆ. ಒಮ್ಮೊಮ್ಮೆ ಹೀಗೆ ಕೇಳಬೇಕಾದರೂ, 'ಯಾಕೆ'? 'ಎನಿತು'? ಎಂಬ ಪ್ರಶ್ನೆಗಳಿಂದ ಕೊಟ್ಟ ಉತ್ತರಗಳನ್ನು ಸ್ಪಷ್ಟಗೊಳಿಸಬೇಕು. (೪) ಉತ್ತರದ ಅರ್ಧಭಾಗವನ್ನೇ ಶಿಕ್ಷಕರು ಪ್ರಶ್ನೆರೂಪವಾಗಿ ಉಚ್ಚರಿಸಿ ಅದನ್ನು ಪೂರ್ತಿಗೊಳಿಸಲು ವಿದ್ಯಾರ್ಥಿಗಳಿಗೆ ಬಿಡುವದುಂಟು. 'ಹಿಮಾಲಯವು ಉನ್ನತವಾದ........ ಅಲ್ಲವೆ?' ಹೀಗೆ ಕೇಳಿ ಶಬ್ದ ಪೂರ್ತಿಯನ್ನು ಮಾಡುವದನ್ನು ಮಾತ್ರ ವಿದ್ಯಾರ್ಥಿಗಳಿಗೆ ಅನೇಕ ಶಿಕ್ಷಕರು ಬಿಡುವದುಂಟು. ತಪ್ಪು ರೀತಿಯ ಪ್ರಶ್ನೆಗಳಲ್ಲಿ ಇದು ಒಳ್ಳೇ ರೂಢವಾಗಿದೆ. (೫)

**ಸಂದಿಗ್ಧ ಪ್ರಶ್ನೆಗಳು**—ಇವುಗಳಿಗೆ ನಿಶ್ಚಿತಾರ್ಥವೇ ಇರುವದಿಲ್ಲ. "ಕಿಡಕಿಯ ಹೊರಗೆ ಏನು ಕಾಣುತ್ತಿದೆ?"— ಎಂದು ಕೇಳಿದರೆ, ಪಾಪ! ಆ ಬಡ ವಿದ್ಯಾರ್ಥಿಗಳು ಅಲ್ಲಿ ನೂರೆಂಟು ವಸ್ತುಗಳನ್ನು ನೋಡುತ್ತಿರುವಾಗ್ಗೆ ಯಾವುದು ಕಾಣುವದೆಂದು ಹೇಳಬಹುದು? (೫) ಒಮ್ಮೆಲೆ ನಾಲ್ಕೆಂಟು ಪ್ರಶ್ನೆಗಳನ್ನು ಜೋಡಿಸಿ '**ಸರಪಳಿಯ ಪಶ್ನೆ**'ಗಳನ್ನು ಕೇಳಬಾರದು. ಉದಾ:– 'ಮನ್ಸೂನ ಗಾಳಿಗಳು ಎಲ್ಲಿ ಹುಟ್ಟುವವು? ಯಾವ ದಿಕ್ಕಿನಲ್ಲಿ ಬೀಸುವವು? ಯಾವ ಪ್ರದೇಶದಲ್ಲಿ ಹೆಚ್ಚಿನ ಮಳೆಯನ್ನು ಕೊಡುವವು?'—ಇತ್ಯಾದಿ ಪ್ರಶ್ನೆಗಳ ಮಾಲಿಕೆಯನ್ನು ಒಮ್ಮೆಗೇ ರಚಿಸಬಾರದು. (೬) ಪ್ರಶ್ನೆಗೆ ಅನವಶ್ಯಕವಾದ ವಿಷಯವನ್ನು ಹಿಂದೆ ಜೋಡಿಸಿ ಕೇಳಬಾರದು. (೭) 'ಪುನರುಕ್ತಿಯ ಪಶ್ನೆ' ಯನ್ನು ಕೇಳಬಾರದು. ಉದಾ:— ವಿಂಧ್ಯಾದ್ರಿಯು ಹಿಂದುಸ್ತಾನದ ಮಧ್ಯ ದಲ್ಲಿದೆ ಎಂದು ಮೊದಲು ತಿಳಿಸಿಹೇಳಿದ ಕೂಡಲೆ 'ವಿಂಧ್ಯಾದ್ರಿಯು ಎಲ್ಲಿದೆ'? ಎಂದು ಮತ್ತೆ ಕೇಳಕೂಡದು.

ಸರಿಯಾದ ಪ್ರಶ್ನೆಯಲ್ಲಿ ಕೆಳಗಿನ ಗುಣಗಳಿರಬೇಕು:— ೧) ಅದು **ಸ್ಪಷ್ಟ**ವಾಗಿರಬೇಕು. ೨) ಅದು **ಸಂಕ್ಷೇಪ**ವಾಗಿರಬೇಕು. ಅನವಶ್ಯಕವಾದ ಶಬ್ದಗಳನ್ನು ಅದರಲ್ಲಿ ಉಪಯೋಗಿಸಕೂಡದು. ತಿಳಿದುಕೊಳ್ಳಲು ಅದು ಸುಲಭವಾಗಿರಬೇಕು. ೩) ಅಪೇಕ್ಷಿತವಾದ, ವಿಶಿಷ್ಟವಾದ ಉತ್ತರವನ್ನು ಅದು ಹೊರಡಿಸುವಂತಿರಬೇಕು, ೪) ಪ್ರಶ್ನೆಗೆ **ಸರಿಯಾದ ಒಂದೇ ಉತ್ತರವು ಬರುವಂತಿರ**ಬೇಕು. ಪ್ರಶ್ನೆಯು **ಚಿತ್ತಾಕರ್ಷಕ**ವಾಗಿರಬೇಕು. ನೀರಸ ವಾಗಿರಬಾರದು. ಅದರಲ್ಲಿ ಒಂದು ಹೊಸತನ ಕಂಡು ಬರಬೇಕು. ವಿದ್ಯಾರ್ಥಿ ಗಳ ಕುತೂಹಲವನ್ನು ಕೆರಳಿಸುವಂತಿರಬೇಕು, ಉದ್ಬೋಧಕವಾಗಿರಬೇಕು. ಪ್ರಶ್ನೆಯು ವಿದ್ಯಾರ್ಥಿಗಳ ಬುದ್ಧಿಶಕ್ತಿಗೆ ಒಂದು ಬಗೆಯ ಆಹ್ವಾನದಂತಿರ ಬೇಕು.

ಪ್ರಶ್ನೆಗಳ ಬಗ್ಗೆ ಇನ್ನೂ ಕೆಲವು ಸಂಗತಿಗಳನ್ನು ಶಿಕ್ಷಕರು ಲಕ್ಷದಲ್ಲಿಡ ಬೇಕಾಗುವದು. **ಪ್ರಶ್ನೆಗಳನ್ನು ವಿದ್ಯಾರ್ಥಿಗಳಲ್ಲಿ ಸರಿಯಾಗಿ ಹಂಚ ಬೇಕು.** ಮುಂದೆ ಕೂತವರಿಗೆ ಮಾತ್ರ ಪ್ರಶ್ನೆಗಳನ್ನು ಮೀಸಲಾಗಿಡಕೂಡದು.

ಹಿಂದಿನವರಿಗೂ ನಡುವಿನವರಿಗೂ ಎಲ್ಲರಿಗೂ ಸಂಧಿಯು ದೊರೆಯುವಂತೆ ಪ್ರಶ್ನೆಗಳನ್ನು ಹಂಚಬೇಕು. ಪ್ರಶ್ನೆಗಳನ್ನು ಕೇಳುವಾಗ್ಗೆ—ನೀನು, ನೀನು, ನೀನು,—ಎಂದು ಬೊಟ್ಟು ತೋರಿಸಿ ಬಾಲಕರನ್ನು ಆರಿಸಿ ಕೇಳುವ ಪರಿಪಾಠವು ತಪ್ಪಾಗಿರುವದು. ವರ್ಗದೆದುರು ಆತ್ಮವಿಶ್ವಾಸದಿಂದ ನಿಂತುಕೊಂಡು, ಪ್ರಶ್ನೆಯನ್ನು ಒಮ್ಮೆ ಮಾತ್ರ ಎಲ್ಲರಿಗೂ ಕೇಳಬರುವಂತೆ ಕೇಳಿಬಿಡಬೇಕು. ಇದರಿಂದ ಪುನರುಕ್ತಿಯ ಅವಶ್ಯಕತೆಯೆ ಇಲ್ಲದಂತಾಗುವದು. ಕೇಳಿದ್ದನ್ನೇ ಕೇಳುವ ಅನಿಷ್ಟವಾದ ರೂಢಿಯು ತಮ್ಮಲ್ಲಿ ಬಾರದಂತೆ ಶಿಕ್ಷಕರು ಯತ್ನಿಸಬೇಕು. ಹೇಗಾದರೂ ಮತ್ತೊಮ್ಮೆ ಅದೇ ಪ್ರಶ್ನೆಯನ್ನೇ ಶಿಕ್ಷಕನು ಕೇಳುವನೆಂಬ ಕಲ್ಪನೆಯು ವಿದ್ಯಾರ್ಥಿಗಳಿಗುಂಟಾದರೆ ಅವರು ಶಿಕ್ಷಕನ ಪ್ರಶ್ನೆಗಳ ಕಡೆಗೆ ಲಕ್ಷ ಕೊಡುವದನ್ನೇ ಬಿಟ್ಟುಕೊಡುವರು. ಇನ್ನೊಂದು ಸಂಗತಿಯೆಂದರೆ, ಗಾಳಿಗೆ ಉದುರಿ ಬೀಳುವ ಹೂಕಾಯಿಗಳಂತೆ ಅನನುಭವಿಕನಾದ ಶಿಕ್ಷಕನು ಪ್ರಶ್ನೆಗಳ ಸುರಿಮಳೆಯಲ್ಲಿಯೇ ತನ್ನ ಪ್ರಾವೀಣ್ಯವನ್ನು ತೋರಿಸುವದುಂಟು. ಈ ಪ್ರಶ್ನೆಗಳ ಹೊಡತಕ್ಕೆ ಸಿಕ್ಕ ವಿದ್ಯಾರ್ಥಿಗಳು ವಿಷಯಗ್ರಹಣದಲ್ಲಿ ಮುಂದುಗಾಣದೆ ತೊಳಲಾಡುವದುಂಟು. ಶಿಕ್ಷಕನು ಇವೆಲ್ಲ ತಪ್ಪುಗಳಿಂದ ದೂರವಾಗಿರಬೇಕು. ಕೇಳಿದ ಪ್ರಶ್ನೆಗಳೆಲ್ಲ ಹುಸಿಹೋಗದಂತೆ, ಅವುಗಳ ರಚನೆಯಲ್ಲಿ, ಅವುಗಳನ್ನು ಹಂಚುವದರಲ್ಲಿ, ಶಿಕ್ಷಕನು ಆದಷ್ಟು ದಕ್ಷತೆಯನ್ನು ವಹಿಸಬೇಕು.

## (೪) ಉತ್ತರಗಳು

ಶಿಕ್ಷಕನ ಕಲಿಸುವ ಕಾರ್ಯದಲ್ಲಿ ಮೂರುನಾಲ್ಕಾಂಶ ಭಾಗವು ಪ್ರಶ್ನೋತ್ತರಗಳಲ್ಲಿಯೇ ತೊಡಗಿರುವದೆಂದು ಹೇಳಿದರೆ ತಪ್ಪಾಗದು. ಪಶ್ನೆ ಕೇಳುವವನು ಶಿಕ್ಷಕನಾದರೆ, ಉತ್ತರವನ್ನು ಕೊಡುವವರು ವಿದ್ಯಾರ್ಥಿಗಳು. ಆದರೆ ಸರಿಯಾದ ಉತ್ತರಗಳನ್ನೂ ತನಗೆ ಬೇಕಾದ ಉತ್ತರಗಳನ್ನೂ ವಿದ್ಯಾರ್ಥಿಗಳಿಂದ ಹೊರಡಿಸಲು ಶಿಕ್ಷಕನಲ್ಲಿ ಜಾಣ್ಮೆಯೂ ಚತುರತನವೂ ಇರಬೇಕಾಗುವದು. ಇಂದಿನ ಪ್ರತ್ಯಕ್ಷ ಪದ್ಧತಿಯಲ್ಲಿ ಪ್ರಶ್ನೋತ್ತರಗಳಿಗೆ ಪ್ರಧಾನಸ್ಥಾನವಿದೆ. ಸರಿಯಾದ ಉತ್ತರಗಳನ್ನು ವಿದ್ಯಾರ್ಥಿಗಳಿಂದ ತೆಗೆದುಕೊಳ್ಳಬೇಕಾದರೆ ಶಿಕ್ಷಕನು ವಿದ್ಯಾರ್ಥಿಗಳೊಡನೆ ಒಂದು ಬಗೆಯ ಆತ್ಮೀಯತೆಯನ್ನು

ತನ್ನಲ್ಲಿ ತಂದುಕೊಳ್ಳಬೇಕಾಗುವದು. **ವಿದ್ಯಾರ್ಥಿಗಳ ಸ್ಥಾನದಲ್ಲಿ ನಿಂತುಕೊಂಡು, ಅವರ ಬುದ್ಧಿಯ ಮಾನಕ್ಕೆ ಅನುಗುಣವಾಗುವಂತೆ ಪ್ರಶ್ನೆಗಳನ್ನು ಕೇಳಬೇಕಾಗುವದು.** ಇದಕ್ಕಾಗಿ ಶಿಕ್ಷಕನಲ್ಲಿ ವಿಪುಲವಾದ ಸಹಾನುಭೂತಿಯೂ, ಅತುಲವಾದ ತಾಳ್ಮೆಯೂ ಅವಶ್ಯವಾದವುಗಳು. ಉತ್ತರಗಳ ವಿಷಯದಲ್ಲಿ ಶಿಕ್ಷಕನು ಕೆಳಗಿನ ಮಾತುಗಳ ಬಗ್ಗೆ ದಕ್ಷತೆಯನ್ನು ವಹಿಸಬೇಕಾಗುವದು. (೧) ಪ್ರಶ್ನೆಯು ಸದೋಷವೂ ಸಂದಿಗ್ಧವೂ ಆಗಿದ್ದರೆ, ಪ್ರಶ್ನೆಗೆ ಸರಿಯಾದ ಉತ್ತರವು ಬರಲಾರದು. ಶಿಕ್ಷಕರು ಮೊದಲು ತಮ್ಮ ಪ್ರಶ್ನೆಯನ್ನು ಸರಿಪಡಿಸಿಕೊಳ್ಳಬೇಕು. (೨) ಉತ್ತರವು ಪ್ರಶ್ನೆಯಲ್ಲಿ ಅಪೇಕ್ಷಿಸಿದಂತೆ ಇರತಕ್ಕದ್ದು. **ಹಾರಿಕೆಯ ಇಲ್ಲವೆ ಕಾಲ್ಪನಿಕ ಉತ್ತರಗಳನ್ನು ಶಿಕ್ಷಕನು ಸ್ವೀಕರಿಸಬಾರದು.** ಬೇರೆ ಪ್ರಶ್ನೆಗಳಿಂದ ಹಾಗು ಹಂಚಿಕೆಯಿಂದ ಉತ್ತರದ ಸದೋಷತೆಯನ್ನು ಅದನ್ನು ಹೇಳಿದವರ ನಿದರ್ಶಕ್ಕೆ ತಂದುಕೊಡಬೇಕು. ತಪ್ಪಾದ ಉತ್ತರಗಳನ್ನು ತಿದ್ದದೆ ದುರ್ಲಕ್ಷಿಸುವದು ಶಿಕ್ಷಣದಲ್ಲಿ ಒಂದು ಪ್ರಮಾದವಾಗಿದೆ. ಆದರೆ ತಪ್ಪು ತಿದ್ದುವ ಕೆಲಸವನ್ನು ಶಿಕ್ಷಕನು ತಾನೇ ಮಾಡದೆ ಉಳಿದ ವಿದ್ಯಾರ್ಥಿಗಳಿಂದ ಮಾಡಿಸಬೇಕು. ಹಾಗು ತಪ್ಪು ಉತ್ತರವನ್ನು ಕೊಟ್ಟ ವಿದ್ಯಾರ್ಥಿಯು ತನ್ನ ತಪ್ಪನ್ನು ಕೂಡಲೆ ತಿದ್ದಿಕೊಳ್ಳುವಂತೆ ನೋಡಿಕೊಳ್ಳಬೇಕು. (೩) **ವಿದ್ಯಾರ್ಥಿಯು ಕೊಟ್ಟ ಉತ್ತರದಲ್ಲಿ ಪೂರ್ಣತೆಯಿರಬೇಕು.** ಪೂರ್ಣವಾಕ್ಯದಲ್ಲಿ ಉತ್ತರವನ್ನು ಹೇಳಬೇಕೆನ್ನುವ ಒಂದು ಬಗೆಯ ಸಾಂಪ್ರದಾಯವನ್ನು ಮೊದಲಿನಿಂದಲೇ ಶಿಕ್ಷಕನು ಹಾಕಿಕೊಡಬೇಕು. ಆದರೆ ಎಲ್ಲ ಸಂದರ್ಭಗಳಲ್ಲಿಯೂ ಉತ್ತರವು ಪೂರ್ಣವಾಕ್ಯದಲ್ಲಿರಬೇಕೆಂಬ ಹಟವನ್ನು ಹಿಡಿಯಕೂಡದು. ಉತ್ತರವು ಎಲ್ಲರಿಗೂ ತಿಳಿಯುವಂತೆ ಇರಬೇಕು. ಇಲ್ಲವಾದರೆ ಅರ್ಧವುರ್ಧ ವಾಕ್ಯಗಳಲ್ಲಿ ಹೇಳಿದ ಉತ್ತರದಿಂದ ವಿದ್ಯಾರ್ಥಿಗಳು ಶಿಕ್ಷಕನನ್ನೂ ವಂಚಿಸಬಹುದು; ಆತ್ಮವಂಚನೆಯನ್ನೂ ಮಾಡಬಹುದು. (೪) ವಿದ್ಯಾರ್ಥಿಗಳು ಕೊಟ್ಟ ಉತ್ತರದಲ್ಲಿ ಸತ್ಯಾಂಶವಿದ್ದರೆ, ಉತ್ತರವು ಅಂಶತಃ ಸರಿಯಾಗಿದ್ದರೆ, ಶಿಕ್ಷಕನು ಅದನ್ನು ನಿರಾಕರಿಸಬಾರದು. ಹೆಚ್ಚುಕಡಿಮೆ ಸರಿಯಾಗಿದ್ದ ಉತ್ತರವನ್ನು ಮೊದಲು

ಸ್ವೀಕರಿಸಬೇಕು. ಬೇರೆ ವಿದ್ಯಾರ್ಥಿಗಳ ಸಹಾಯದಿಂದ ಅಂಥ ಉತ್ತರಗಳನ್ನು ತಿದ್ದಿಸಿ ಸರಿಮಾಡಬೇಕು. ಇದು ಸಾಧ್ಯವಿರದಿದ್ದರೆ, ಇಲ್ಲವೆ ಕೆಲವು ಕಾರಣ ಗಳಿಂದ ಇಷ್ಟವಾಗಿರದಿದ್ದರೆ, ಶಿಕ್ಷಕನು ಸರಿಯಾದ ಉತ್ತರವನ್ನು ತಾನಾಗಿಯೇ ಹೇಳಿ ಮುಂದೆ ಸಾಗಬೇಕು. (೫) **ಉತ್ತರವು ಶಬ್ದಗಳಲ್ಲಿ ಸಂಕ್ಷೇಪ ವಾಗಿರಬೇಕು; ಸಾರವತ್ತಾಗಿರಬೇಕು; ಸಮಯೋಚಿತವಾಗಿರ ಬೇಕು.** ಇಲ್ಲದ ರಗಳೆಯನ್ನು ಕಲ್ಪಿಸಿಕೊಂಡು ಮುಖ್ಯ ಮಾತನ್ನೇ ಮರೆ ಯುವ ಹಾಗೂ ಮರೆಯಿಸಿಬಿಡುವ ಪ್ರವೃತ್ತಿಯು ಬಹುಜನ ವಿದ್ಯಾರ್ಥಿಗಳಲ್ಲಿ ಕಂಡುಬರುವದು. ಶಿಕ್ಷಕನು ಇಂಥ ಪ್ರವೃತ್ತಿಗೆ ಉತ್ತೇಜನವನ್ನೀಯದೆ ಮೊದಲಿನಿಂದಲೇ ಅದನ್ನು ತೆಗೆದು ಹಾಕಬೇಕು. ಉತ್ತರದ ಭಾಷೆಯು ತಿಳಿಯಾಗಿಯೂ ವ್ಯಾಕರಣಶುದ್ಧವಾಗಿಯೂ ಇರುವಂತೆ ಶಿಕ್ಷಕನು ಯಾವಾ ಗಲೂ ಯತ್ನಿಸಬೇಕು. (೬) ತಾವು ಕೇಳಿದ ಪ್ರಶ್ನೆಗೆ ಉತ್ತರವು ದೊರೆ ಯಲು ಕೊಂಚ ತಡವಾದರೂ, ಶಿಕ್ಷಕರು ಒಮ್ಮೊಮ್ಮೆ ಕೆರಳುವದುಂಟು; ಬಿರುಸು ಮಾತುಗಳಿಂದ ಬೆದರಿಸುವದುಂಟು. ಆದರೆ ಶಿಕ್ಷಣಶಾಸ್ತ್ರಗಳಲ್ಲಿ ಇದು ಒಂದು ಅಪರಾಧವೆಂದು ಶಿಕ್ಷಕನು ನೆನಪಿನಲ್ಲಿಡಬೇಕು. ಒಮ್ಮೊಮ್ಮೆ ಈ ವಿಳಂಬಕ್ಕೆ ಶಿಕ್ಷಕನ ಸದೋಷವಾದ ಪ್ರಶ್ನೆಯೇ ಕಾರಣವಾಗಿರಬಹುದು. ಪ್ರಶ್ನೆಯು ವಿದ್ಯಾರ್ಥಿಗಳ ಬುದ್ಧಿಶಕ್ತಿಗೆ ನಿಲುಕದಂತಿರಬಹುದು; ಇಲ್ಲವೆ ಅದರ ಭಾಷೆ ತಿಳಿಯಲು ಕಠಿಣವಾಗಿರಬಹುದು. ಇದಲ್ಲದೆ ವಿದ್ಯಾರ್ಥಿಗಳಿಗೆ ವಿಚಾರ ಮಾಡಿ ಹೇಳಲು ಅವಧಿಯೂ ಕೂಡ ಬೇಕಾಗುವದು. (೭) ಕೇಳಿದ ಪ್ರಶ್ನೆಯು ಇಡೀ ವರ್ಗವನ್ನು ಉದ್ದೇಶಿಸಿ ಇರುವಂತೆ, ಪ್ರತಿಯೊಬ್ಬ ವಿದ್ಯಾರ್ಥಿಯು ಕೊಟ್ಟ ಉತ್ತರಕ್ಕೆ ಎಲ್ಲ ವಿದ್ಯಾರ್ಥಿಗಳೂ ಲಕ್ಷ ಕೊಡುವಂತೆ ಮಾಡಬೇಕು. ಒಬ್ಬನು ಹೇಳಿದ ಉತ್ತರವನ್ನು ಅಲ್ಲಲ್ಲಿ ಬೇರೆ ವಿದ್ಯಾರ್ಥಿಗಳಿಂದ ಪುತ್ತೆ ಹೇಳಿಸುವದರಿಂದ ಈ ಮಾತು ತಾನಾಗಿಯೇ ಸಾಧಿಸುವದು. ಉತ್ತರದ ವಿಷಯವೂ ಅವರ ಮನಸ್ಸಿನಲ್ಲಿ ದೃಢವಾಗುವದು. ಒಬ್ಬನ ವಿಷಯದ ಜ್ಞಾನವು ವರ್ಗದ ಎಲ್ಲ ವಿದ್ಯಾರ್ಥಿಗಳ ಸಾಮಾನ್ಯವಾದ ಸೊತ್ತಾಗಿರುವ ದೆಂಬುದನ್ನು ವಿದ್ಯಾರ್ಥಿಗಳು ಇದರಿಂದ ತಿಳಿದುಕೊಳ್ಳುವರು. (೮) ವಿದ್ಯಾರ್ಥಿ

ಗಳು ಕೊಟ್ಟ ಉತ್ತರವನ್ನು ಶಿಕ್ಷಕನು ತಾನೇ ತಿರುಗಿ ಅನ್ನಕೂಡದು. ಹೀಗೆ ಮಾಡಿದರೆ, ಆತನ ವೇಳೆಯೂ ವ್ಯರ್ಥವಾಗಿ ಹೋಗುವದು. ವಿದ್ಯಾರ್ಥಿಗಳಲ್ಲಿ ಆಲಸ್ಯವೂ ಅಲಕ್ಷ್ಯವೂ ಹೆಚ್ಚಾಗಿ ಬೆಳೆಯುವವು. ಉತ್ತರಗಳ ಪುನರುಕ್ತಿಯು ಶಿಕ್ಷಕರಲ್ಲಿ ಸಾಮಾನ್ಯವಾದ ದೋಷವಾಗಿದೆ. ಇದನ್ನು ತಪ್ಪಿಸಲು ಎಲ್ಲ ರೀತಿ ಯಿಂದಲೂ ಅವರು ಯತ್ನಿಸಬೇಕು. (೯) ಚಿಕ್ಕಮಕ್ಕಳಿಗೆ ಹೊಸದಾಗಿ ಭಾಷಾ ವಿಷಯವನ್ನು ಹೇಳುವಾಗ್ಗೆ ಶಬ್ದಗಳ ಸರಿಯಾದ ಉಚ್ಚಾರವನ್ನು ಸ್ಥಿರಗೊಳಿಸುವದಕ್ಕಾಗಿ, ಎಲ್ಲ ವಿದ್ಯಾರ್ಥಿಗಳಿಂದಲೂ ಕೆಲವು ಉತ್ತರಗಳನ್ನು ಸಾಂಘಿಕವಾಗಿ ಹೇಳಿಸಬೇಕಾಗುವದು.

ಪರೀಕ್ಷೆಯಲ್ಲಿ ಕೊಟ್ಟ ಉತ್ತರಗಳಿಂದ ವಿದ್ಯಾರ್ಥಿಗಳ ಪರಿಶ್ರಮವನ್ನು ಅಳೆಯುವಂತೆ, ಕಲಿಸುವ ಪಾಠಗಳಲ್ಲಿ ವಿದ್ಯಾರ್ಥಿಗಳಿಂದ ಹೊರಡಿಸುವ ಉತ್ತರಗಳಿಂದ ಶಿಕ್ಷಕನ ಕುಶಲತೆಯನ್ನು ಕಂಡುಹಿಡಿಯುವದುಂಟು.

### (೫) ದೀಪಕ ದೃಷ್ಟಾಂತಗಳು (ಶೈಕ್ಷಣಿಕ ಸಾಧನಗಳು)

ಕಲಿಸುವ ವಿಷಯವು ವಿದ್ಯಾರ್ಥಿಗಳಿಗೆ ವಿಶದವಾಗಬೇಕು, ಸ್ಪಷ್ಟವಾಗಿ ತಿಳಿಯಬೇಕು—ಎನ್ನುವದು ಶಿಕ್ಷಣದ ಮುಖ್ಯ ಸೂತ್ರಗಳಲ್ಲಿ ಒಂದಾಗಿದೆ. ವಿಷಯವನ್ನು ತಿಳಿಯುವಂತೆ ಮಾಡಲು, ಶಿಕ್ಷಕನಿಗೆ ವಿವಿಧವಾದ ಸಾಧನೆ ಗಳಿರುವವು. ಹೊಸ ವಿಷಯವನ್ನು ತಿಳಿದುಕೊಳ್ಳುವಾಗ್ಗೆ ಕತ್ತಲೆಯಲ್ಲಿ ದಾರಿಕಾಣದ ಹಾದಿಕಾರನಂತೆ ವಿದ್ಯಾರ್ಥಿಗಳ ಸ್ಥಿತಿಯು ಆಗುವದುಂಟು. ಆ ಸಮಯದಲ್ಲಿ **ಶಿಕ್ಷಕನು ಉಪಯೋಗಿಸುವ ವಿವಿಧ ದೃಷ್ಟಾಂತಗಳು—ಸಾಧನಗಳು—ಕತ್ತಲೆಯ ದಾರಿಯಲ್ಲಿ ಬೆಳಕು ಕೆಡವಿದಂತೆ ಆಗುವವು.** ಇದರಿಂದ ಕಲಿಯುವ ವಿಷಯವನ್ನು ಬೆಳಕಿನಲ್ಲಿ ತಂದು, ಅಪರಿಚಿತ ವಾದುದನ್ನು ಪರಿಚಿತವಾಗಿ ಮಾಡಲು ಸಹಾಯಕವಾಗುವದು. ಅಂತೆಯೆ ದೀಪಕ ದೃಷ್ಟಾಂತಗಳೆಂದು ಇವುಗಳನ್ನು ಇಲ್ಲಿ ಕರೆದಿದೆ. ಕಣ್ಣಿನಿಂದ ನೋಡಿ ಗಳಿಸಿದ ಜ್ಞಾನವು ಕಿವಿಯಿಂದ ಕೇಳಿ ತಿಳಿದುಕೊಂಡ ಜ್ಞಾನಕ್ಕಿಂತಲೂ ಮಿಗಿ ಲಾದುದು. ಅಂತೆಯೇ ಇಂದಿನ ಶಿಕ್ಷಣದಲ್ಲಿ ಚಾಕ್ಷುಷ ಸಲಕರಣೆಗಳಿಗೆ ಹಿರಿ ದಾದ ಸ್ಥಾನವಿದೆ. ಇವುಗಳಿಂದ ವಿಷಯವು ಸ್ಪಷ್ಟವಾಗುವದಲ್ಲದೆ ಬಾಲಕರ

ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯುವದು. **ವಿಷಯಗ್ರಹಣದಲ್ಲಿ ಹೆಚ್ಚು ಇಂದ್ರಿಯಗಳ ಸಹಕಾರವನ್ನೂ ಸಹಾಯವನ್ನೂ ತೆಗೆದುಕೊಳ್ಳಬೇಕೆನ್ನುವ** ಮಾನಸಶಾಸ್ತ್ರದ ತತ್ವವು ಇವುಗಳಿಗೆ ಬೆಂಬಲವಾಗಿದೆ.

ಈ ದೀಪಕ ದೃಷ್ಟಾಂತಗಳು, ಶೈಕ್ಷಣಿಕ ಸಾಧನಗಳು ಹಲವು ಪ್ರಕಾರಗಳಾಗಿರುವವು. ಮೊದಲು ಚಿತ್ರಗಳನ್ನು ಮಾತ್ರ ಈ ಅರ್ಥದಲ್ಲಿ ಭಾವಿಸುತ್ತಿದ್ದರು. ಮುಂದೆ ಉದಾಹರಣೆಗಳೂ ಈ ವರ್ಗಕ್ಕೆ ಸೇರಿದವು. ಬರಬರುತ್ತ **ಇಂದ್ರಿಯಗಳ ಸಹಕಾರವನ್ನು ಒದಗಿಸುವ ಎಲ್ಲ ಸಾಧನಗಳಿಗೂ ಈ ಗುಂಪಿನಲ್ಲಿ ಸ್ಥಾನವಿದೆ.** ಅತ್ಯಂತ ಸ್ಥೂಲರೂಪದ ದೃಷ್ಟಾಂತವೆಂದರೆ **ಪ್ರತ್ಯಕ್ಷ ಒಡವೆಯನ್ನೇ** ವರ್ಗದ ಮುಂದಿಟ್ಟು ತಿಳಿಸಿಹೇಳುವದು. ಇದು ಯಾವಾಗಲೂ ಸಾಧ್ಯವಾಗದು. ಅಂಥ ಸಮಯದಲ್ಲಿ ಅದರದೊಂದು ಕಲ್ಲು–ಮಣ್ಣು ಮೊದಲಾದವುಗಳಿಂದ ಮಾಡಿದ **ಚಿಕ್ಕ ಆಕೃತಿ–ಮೊಡೆಲ್‌ನ್ನು** ವಸ್ತುವಿಗೆ ಪ್ರತಿಯಾಗಿ ಉಪಯೋಗಿಸುವದುಂಟು. ಭೂಗೋಲ ಶಿಕ್ಷಣದಲ್ಲಿ 'ಗ್ಲೋಬ'ನ್ನು ಉಪಯೋಗಿಸುವೆವು. ಕಣ್ಣು ಕಿವಿಗಳ ಕಾರ್ಯವನ್ನೂ ಆಂತರಿಕ ಭಾಗಗಳನ್ನೂ ತಿಳಿಸುವದಕ್ಕಾಗಿ ಅವುಗಳ ಆಕೃತಿಯನ್ನು ಉಪಯೋಗಿಸುವೆವು. ಶಿಕ್ಷಣದಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ದೃಷ್ಟಾಂತಗಳೆಂದರೆ, ಸಾಧನಗಳೆಂದರೆ **ಚಿತ್ರಗಳು.** ಪಶುಪಕ್ಷಿಗಳ ವರ್ಣನೆಯಲ್ಲಿ ಚಿತ್ರಗಳ ಬಳಕೆಯು ಒಳ್ಳೇ ಸಹಾಯಕವಾಗುವದು. **ನೂರು ಮಾತಿನಿಂದ ಆಗದ ಪರಿಣಾಮವನ್ನು ಸರಿಯಾದ ಒಂದೇ ಚಿತ್ರವು ಸುಲಭವಾಗಿ ಸಾಧಿಸಬಹುದು.** ಶಾಲೆಯಲ್ಲಿ ಉಪಯೋಗಿಸುವ ಮಾಯಾದೀಪ, ಹಾಗೂ ಇತ್ತೀಚೆಗಿನ ಶೈಕ್ಷಣಿಕ ಚಲಚಿತ್ರಗಳು ಇದೇ ವರ್ಗಕ್ಕೆ ಸೇರಿದವು. **ಛಾಯಾಚಿತ್ರಗಳು** ದೊರೆಯದಿದ್ದರೆ **ಭಾವಚಿತ್ರಗಳನ್ನು** ಉಪಯೋಗಿಸಬಹುದು. ಇದೂ ಸಾಧ್ಯವಿರದಿದ್ದರೆ, ತಾತ್ಕಾಲಿಕವಾಗಿ ತೆಗೆದ **ರೇಖಾಚಿತ್ರಗಳು** ವಿಷಯವನ್ನು ವಿಶದಗೊಳಿಸಲು ಸಹಾಯಕವಾಗುವವು. ರೇಖಾಚಿತ್ರಗಳಲ್ಲಿ ಪ್ರಾಸಂಗಿಕವಾಗಿ ಅಂದಿನ ವಿಷಯಕ್ಕೆ ಅವಶ್ಯವಾದುದನ್ನೂ, ಅನುರೂಪವಾದುದನ್ನೂ ಮಾತ್ರ ಎತ್ತಿ ತೋರಿಸಲು ಬರುವದು. ಶಿಕ್ಷಕನು ಈ ಬಗೆಯ

ರೇಖಾಚಿತ್ರಗಳನ್ನು ಕೂಡಲೆ ತೆಗೆಯಲು ಕಲಿತುಕೊಂಡಿರಬೇಕು. **ಇವೆಲ್ಲ ಸಾಧನಗಳಿಂದ ವಿಷಯವು ವಿದ್ಯಾರ್ಥಿಗಳಿಗೆ ಹೆಚ್ಚು ಸ್ಪಷ್ಟವಾಗುವದು.** ಅವರ ಆಸ್ಥೆ–ಕುತೂಹಲಗಳು ಹೆಚ್ಚುವವು. ತಿಳಿದುಕೊಂಡ ವಿಷಯವನ್ನು ನೆನಪಿನಲ್ಲಿ ಇಡಲು ಇವುಗಳಿಂದ ಅತ್ಯಂತ ಸಹಾಯವಾಗುವದು.

ಇವುಗಳಲ್ಲದೆ **ಶಾಬ್ದಿಕ ದೃಷ್ಟಾಂತಗಳು,** ವೈಯಕ್ತಿಕ ದೃಷ್ಟಾಂತಗಳು ಬೇರೆಯಾಗಿರುವವು. ನಡೆದು ಹೋದ ಒಂದು ಸಂಗತಿಯನ್ನು ಶಿಕ್ಷಕನು ಮಾತುಗಳಿಂದ ಮನೋವೇಧಕವಾಗಿ ವರ್ಣಿಸಬಹುದು. ವಿದ್ಯಾರ್ಥಿಗಳ ಕಲ್ಪನಾಶಕ್ತಿಯನ್ನು ಜಾಗೃತಗೊಳಿಸಬಹುದು. ಈ ಕಾರ್ಯದಲ್ಲಿ ಮಾತು ಒಳ್ಳೇ ಪ್ರಬಲ ಸಾಧನವಾಗಿದೆ. ಅನುಭವದ ವಿಷಯದೊಡನೆ ಹೊಸ ವಿಷಯವನ್ನು ಹೊಂದಿಸಲು ಶಿಕ್ಷಕನ ಮಾತುಗಳೇ ಬೆಸುಗೆಯಂತಾಗುವವು. ತನ್ನ ಮಾತಿನ ಮಾಟಗಾರಿಕೆಯಿಂದ ನೂರಾರು ವರ್ಷಗಳ ಹಿಂದೆ, ಇಲ್ಲವೆ ಸಾವಿರಾರು ಮೈಲುಗಳ ದೂರದಲ್ಲಿ, ವಿದ್ಯಾರ್ಥಿಗಳನ್ನು ಆತನು ಕರೆದು ಕೊಂಡು ಹೋಗಬಲ್ಲನು. ವಸ್ತು–ವ್ಯಕ್ತಿಗಳನ್ನು ಪರಸ್ಪರ ಹೋಲಿಸಿ, ಅವುಗಳ ಗುಣಾವಗುಣಗಳನ್ನು ಕಲಿಯುವವರ ನಿದರ್ಶನಕ್ಕೆ ತನ್ನ ಮಾತುಗಳ ಸಹಾಯದಿಂದ ಶಿಕ್ಷಕನು ತರಬಲ್ಲನು. ಆದರೆ ವ್ಯಕ್ತಿಗತವಾದ ಉದಾಹರಣೆಗಳನ್ನು ಯಾವಾಗಲೂ ಕೊಡುವದು ಸರಿಯೆನಿಸದು. ಸರಿಯಾದ ಸಂದರ್ಭದಲ್ಲಿ ಸ್ವಾನುಭವದ ನಾಲ್ಕು ಮಾತುಗಳನ್ನು ಹೇಳುವದು ತಪ್ಪೆನಿಸದು. ಒಬ್ಬನ ದೋಷಗಳನ್ನು ಉಳಿದವರಿಗೆ ಯಾವಾಗಲೂ ಎತ್ತಿ ತೋರಿಸುವದು ಸರಿಯಾಗದು. ಇದರಿಂದ ಆ ವ್ಯಕ್ತಿಗೂ ಮನೋವೇದನೆ; ಉಳಿದ ಬಾಲಕರಿಗೂ ಈ ಬಗ್ಗೆ ತಿರಸ್ಕಾರವೆನಿಸುವದು.

ಈ ದೀಪಕ ದೃಷ್ಟಾಂತಗಳನ್ನು ಶಿಕ್ಷಣದ ವಿವಿಧ ಸಾಧನಗಳನ್ನು ಉಪಯೋಗಿಸುವಾಗ್ಗೆ ಕೆಲವು ಮಾತುಗಳನ್ನು ನೆನಪಿನಲ್ಲಿಡಬಹುದು. ಚಿತ್ರಗಳನ್ನು ಇಲ್ಲವೆ ಆಕೃತಿಗಳನ್ನು ತೋರಿಸುವಾಗ್ಗೆ ಸಂದರ್ಭೋಚಿತವಾದ ನಾಲ್ಕು ಮಾತುಗಳಿಂದ, ತಮಗೆ **ಬೇಕಾದ ಅಂಶಗಳ ಕಡೆಗೆ ಮಾತ್ರ ವಿದ್ಯಾರ್ಥಿಗಳ ಲಕ್ಷವನ್ನೆಳೆಯಬೇಕು.** ತಮ್ಮ ಮುಂದಿರುವ ಚಿತ್ರದಲ್ಲಿ ಇಲ್ಲವೆ

ಆಕೃತಿಯಲ್ಲಿ ತಾವು ಗ್ರಹಿಸಬೇಕಾದ ಅಂಶಗಳೇನೆಂಬುದು ವಿದ್ಯಾರ್ಥಿಗಳಿಗೆ ನಿಚ್ಚಳವಾಗಿ ಹೊಳೆಯುವಂತಿರಬೇಕು. ಇಲ್ಲವಾದರೆ ಕಣ್ಣಿಗೆ ಮೋಹಕವಾದ ಬೇರೆ ಅಸಂಬದ್ಧ ಸಂಗತಿಗಳನ್ನು ಮಾತ್ರ ತೆಗೆದುಕೊಂಡು, ನಿಜವಾಗಿ ತಿಳಿಯಬೇಕಾದುದನ್ನು ಅವರು ಬಿಟ್ಟುಕೊಡುವರು. ಇದಕ್ಕಾಗಿಯೇ ರೇಖಾಚಿತ್ರಗಳು ಶಿಕ್ಷಣಕಾರ್ಯದಲ್ಲಿ ಹೆಚ್ಚು ಸಹಾಯಕಗಳಾಗಿವೆ. ಚಿತ್ರಗಳನ್ನು **ಸರಿಯಾದ ಸಮಯದಲ್ಲಿ ತೋರಿಸಬೇಕು.** ಪಾಠದ ಪ್ರಾರಂಭದಲ್ಲಿಯೇ ಅವುಗಳನ್ನು ಬೈಲಿಗಿಟ್ಟುಬಿಟ್ಟರೆ, ವಿದ್ಯಾರ್ಥಿಗಳ ಚಿತ್ತವೃತ್ತಿಯು ಚಂಚಲವಾಗುವದು. ಇತ್ತ ಪಾಠದ ಕಡೆಗೂ ಪೂರ್ಣಲಕ್ಷವಿಲ್ಲ; ಅತ್ತ ಚಿತ್ರವನ್ನು ನೋಡುವ ಅಪೇಕ್ಷೆಯನ್ನೂ ಬಿಟ್ಟುಕೊಡಲಾರರು. ಇದನ್ನು ತಪ್ಪಿಸಲು ಸರಿಯಾದ ಸಮಯದಲ್ಲಿ ಶಿಕ್ಷಕನು ಚಿತ್ರಗಳನ್ನು ಹೊರಗೆ ತೆಗೆದು ತೋರಿಸಬೇಕು. ಈಗಿನ ಪ್ರತ್ಯಕ್ಷ ಪದ್ಧತಿಯೊಳಗೆ, ಬಹಳ ಚಿತ್ರಗಳನ್ನು ತಂದು ತೋರಿಸುವ ಒಂದು ಹುಚ್ಚು ಹವ್ಯಾಸವು ಕೆಲವರಲ್ಲಿ ಕಂಡುಬರುವದು. ಅನಾವಶ್ಯಕವಾದ ಚಿತ್ರಗಳಿಂದ ವಿಷಯವು ಹೆಚ್ಚು ವಿಶದವಾಗದೆ, ವಿದ್ಯಾರ್ಥಿಗಳ ಮನಸ್ಸುಮಾತ್ರ ಗೊಂದಲದಲ್ಲಿ ಮುಳುಗುವದು. ಚಿತ್ರಗಳಿರಲಿ, ಆಕೃತಿ ಮೊದಲಾದವುಗಳಿರಲಿ—ಇವೆಲ್ಲವೂ ವಿಷಯದ ಸ್ಪಷ್ಟತೆಗೆ ಸಾಧನಗಳು ಮಾತ್ರ ಎಂಬುದನ್ನು ಶಿಕ್ಷಕರು ಮರೆಯತಕ್ಕದ್ದಲ್ಲ. ಚಿತ್ರಗಳನ್ನು ಒಂದೊಂದಾಗಿ ತೋರಿಸಬೇಕು; ಸಕಾಲಕ್ಕೆ ತೋರಿಸಬೇಕು. ಇಲ್ಲವಾದರೆ ಅವುಗಳ ಉದ್ದೇಶವೇ ವಿಫಲವಾಗುವದು. ಒಟ್ಟು ವರ್ಗಕ್ಕೆ ತೋರಿಸುವ ಚಿತ್ರಗಳೂ, ಆಕ್ರತಿಗಳೂ ಎಲ್ಲರಿಗೂ ಕಾಣುವಂತೆ ದೊಡ್ಡ ಪ್ರಮಾಣದಲ್ಲಿರಬೇಕು. ನಿರೂಪಣೆಯಲ್ಲಿ ಕ್ರಿಯಾತ್ಮಕವಾದ ಅನೇಕ ಚಿತ್ರಗಳುಳ್ಳ ಪಟವನ್ನು ತೋರಿಸುವಾಗ್ಗೆ ವಿದ್ಯಾರ್ಥಿಗಳು ನೋಡಬೇಕಾದ ಭಾಗವನ್ನು ಮಾತ್ರ ಹೊರಗೆ ತೆಗೆದು ಉಳಿದ ಚಿತ್ರಗಳನ್ನೆಲ್ಲ ಕಪ್ಪು ಕಾಗದದಿಂದ ಬಚ್ಚಿಡಬೇಕು. ಯಾವ ಚಿತ್ರವನ್ನು ವಿಷಯಪ್ರತಿಪಾದನೆಯ ಯಾವ ಮೆಟ್ಟಲಿನಲ್ಲಿ ತೋರಿಸಬೇಕೆಂಬುದನ್ನು ಶಿಕ್ಷಕನು ಮೊದಲೇ ವಿಚಾರಿಸಿ ಗೊತ್ತುಮಾಡಿಕೊಂಡಿರಬೇಕು. ಒಟ್ಟಿನಲ್ಲಿ ಚಿಕ್ಕಮಕ್ಕಳಲ್ಲಿ ಚಿತ್ರಗಳ ಬಗ್ಗೆ ಇರುವ ಪ್ರೇಮವನ್ನೂ, ಶಿಕ್ಷಣ

ದಲ್ಲಿ ಅವುಗಳಿಂದಾಗುವ ಅನುಪಮ ಸಹಾಯವನ್ನೂ ಶಿಕ್ಷಕನು ಲಕ್ಷದಲ್ಲಿಟ್ಟು ಕೊಂಡು, ಈ ವಿವಿಧ ಸಾಧನಗಳಾದ **ನಕ್ಷೆ ನಕಾಶಗಳಿಂದ, ಚಿತ್ರ ಆಕೃತಿ ಗಳಿಂದ ಕಲಿಸುವ ಕಾರ್ಯವು ಸಫಲವಾಗುವಂತೆ** ಯಾವಾಗಲೂ ಯತ್ನಿಸಬೇಕು.

## (೬) ಕರಿಹಲಿಗೆ–ಖಡುವು

ಶಿಕ್ಷಣವು ಸಫಲವಾಗಲೇಬೇಕಾದರೆ ಹೆಚ್ಚು ಇಂದ್ರಿಯಗಳ ಸಹಕಾರ ವನ್ನು ತೆಗೆದುಕೊಳ್ಳುವದು ಅಗತ್ಯವೆಂದು ಹಿಂದೆ ಹೇಳಿದೆ. ಈ ಕಾರ್ಯದಲ್ಲಿ ಶಿಕ್ಷಕನಿಗೆ ಕರಿಹಲಿಗೆಯ ಸಹಾಯವು ಅತ್ಯಂತ ಅವಶ್ಯವಾದುದು. ಬೇರೆ ಯಾವ ಶೈಕ್ಷಣಿಕ ಸಾಧನದ ಕೊರತೆಯನ್ನೂ ಕರಿಹಲಿಗೆಯಿಂದ ಹೇಗಾದರೂ ತುಂಬಿಕೊಳ್ಳಬಹುದು. ಕರಿಹಲಿಗೆಯ ಉಪಯೋಗವಾಗದ ಯಾವ ವಿಷ ಯವೂ ಇಲ್ಲವೆಂದು ಹೇಳಬಹುದು. ಅಂತೆಯೆ ಅದರ ಉಪಯೋಗವು ಮೊದಲಿನಿಂದಲೂ ಸಾಗಿಬಂದಿದೆ. **ಕರಿಹಲಿಗೆಯು ಶಿಕ್ಷಕನ ಪರಮ ಸ್ನೇಹಿತನೆಂದು ಹೇಳುವದುಂಟು.**

ಕಲಿಸುವದರಲ್ಲಿ ಕರಿಹಲಿಗೆ–ಖಡುವುಗಳ ಉಪಯುಕ್ತತೆಯನ್ನು ಹೇಗೆ ಹೆಚ್ಚಿಸಬಹುದೆಂಬ ಬಗ್ಗೆ ಇಲ್ಲಿ ನಾಲ್ಕು ಮಾತುಗಳನ್ನು ಹೇಳಬಹುದು. (೧) ಭಾಷಾವಿಷಯದಲ್ಲಿ ಶಬ್ದಗಳ ವಿಶೇಷಾರ್ಥವನ್ನು ವಿದ್ಯಾರ್ಥಿಗಳ ಲಕ್ಷಕ್ಕೆ ತಂದುಕೊಡಲು ಬರುವದು. (೨) ಪ್ರಬಂಧ ಶಿಕ್ಷಣದಲ್ಲಿ ವಿಷಯದ ಮೆಟ್ಟಲುಗಳನ್ನೂ, ತಿದ್ದುವಾಗ್ಗೆ ಕಂಡುಬಂದ ಸಾಮಾನ್ಯವಾದ ಲೋಪ ದೋಷಗಳನ್ನೂ ಎತ್ತಿ ತೋರಿಸಬಹುದು. (೩) ಗಣಿತ ಶಿಕ್ಷಣದಲ್ಲಿ ಲೆಕ್ಕದ ತೊಡಕುಗಳನ್ನು ಬಿಡಿಸಿತೋರಿಸುವದು. ಭೂಮಿತಿಯ ಸಿದ್ಧಾಂತಗಳನ್ನು ತಿಳಿಸುವಾಗ್ಗೆ ಪುಸ್ತಕದಲ್ಲಿ ಕೊಟ್ಟ ಸಣ್ಣ ನಕ್ಷೆಗಳಿಗಿಂತಲೂ, ಕರಿಹಲಿಗೆಯ ಮೇಲೆ ತೆಗೆದ ದೊಡ್ಡ ಆಕೃತಿಗಳು ವಿಷಯವನ್ನು ಹೆಚ್ಚು ಸುಬೋಧವನ್ನಾಗಿ ಮಾಡುವವು. (೪) ಇತಿಹಾಸದಲ್ಲಿ ನಿರೂಪಣೆಯ ಜೊತೆಯಲ್ಲಿಯೇ ಸಾರಾಂಶ ರೂಪವಾದ ಟಿಪ್ಪಣಿಗಳನ್ನು ಬರೆಯುವದು ಹಾಗೂ ಕಾಲರೇಷೆಯನ್ನು ತೆಗೆ ಯುವದು. ಇದೇ ರೀತಿಯಾಗಿ ಭೂಗೋಲ ಶಿಕ್ಷಣದಲ್ಲಿ ಕಾರ್ಯಕಾರಣ

ಗಳನ್ನು ವಿವರಿಸುವದು ಹಾಗೂ ಜ್ವಾಲಾಮುಖಿ, ಗಾಳಿಗಳ ದಿಕ್ಕು, ತುಲನಾತ್ಮಕವಾದ ವಿವರಗಳು ಇವುಗಳನ್ನು ಪ್ರಾಸಂಗಿಕವಾದ ರೇಖಾಚಿತ್ರಗಳಿಂದ ತೋರಿಸುವದು. (೫) ವಿಜ್ಞಾನ ಶಿಕ್ಷಣದಲ್ಲಿ, ಪ್ರಯೋಗದ ವಿಧಾನಗಳನ್ನೂ ಪರಿಣಾಮಗಳನ್ನೂ ಸಚಿತ್ರವಾಗಿ ತೋರಿಸಬಹುದು.

ಹೀಗೆ ವಿವಿಧವಾದ ವಿಷಯಗಳಿಗೆ ಸಂಬಂಧಿಸಿದ :ವಿವರಗಳನ್ನಾಗಲಿ, ಆಕೃತಿಗಳನ್ನಾಗಲಿ ಕರಿಹಲಿಗೆಯ ಮೇಲೆ ತೆಗೆದು ತೋರಿಸಲು ಬರುವಂತಿದೆ. ಮೊದಲೇ ತೆಗೆದ–ತೆಗೆಯಿಸಿಕೊಂಡು ಬಂದ–ಚಿತ್ರಗಳಿಗಿಂತಲೂ ವಿದ್ಯಾರ್ಥಿಗಳ ಎದುರಿನಲ್ಲಿಯೇ ಸಮಯೋಚಿತವಾಗಿ ತೆಗೆದ ರೇಖಾಚಿತ್ರಗಳಿಂದ ಹೆಚ್ಚು ಪರಿಣಾಮವಾಗುವದು. ಅನುಕರಣಶೀಲರಾದ ಬಾಲಕರು ಶಿಕ್ಷಕನು ತೆಗೆದಂತೆ ತಾವೂ ತೆಗೆಯಲು ಯತ್ನಿಸುವರು. ಕರಿಹಲಿಗೆಯ ಮೇಲೆ ಬರೆಯುವ ಸಾರಾಂಶ–ಟಿಪ್ಪಣಿಗಳ ಬಗ್ಗೆ ಶಿಕ್ಷಕನು ಮೊದಲಿನಿಂದಲೂ ದಕ್ಷತೆ ವಹಿಸಬೇಕು; ಸಿದ್ಧತೆ ಮಾಡಿಕೊಂಡಿರಬೇಕು. ಟಿಪ್ಪಣಿಗಳು ಭಾಷೆಯಲ್ಲಿ ಸ್ಪಷ್ಟವಾಗಿರಬೇಕು; ವಿಶುದ್ಧವಾಗಿರಬೇಕು. ಶಿಕ್ಷಕನು ತಾನು ಕರಿಹಲಿಗೆಯ ಉಪಯೋಗ ಮಾಡುವಂತೆ ವಿದ್ಯಾರ್ಥಿಗಳಿಗೂ ಅದನ್ನು ಉಪಯೋಗಿಸಲು ಆಗಾಗ್ಗೆ ಸಂಧಿಯನ್ನೊದಗಿಸಬೇಕು. ಚಿಕ್ಕಮಕ್ಕಳಿಗೆ ಹೀಗೆ ಮಾಡುವದರಲ್ಲಿ ಒಂದು ಅಭಿಮಾನವೆನಿಸುವದಲ್ಲದೆ, ಶಿಕ್ಷಣದಲ್ಲಿ ಅವರ ಸಹಕಾರವನ್ನು ದೊರಕಿಸಿದಂತಾಗುವದು.

ಇಂದು ಬಳಕೆಯಲ್ಲಿರುವ ಕರಿಹಲಿಗೆಗಳು ವಿವಿಧವಾಗಿರುವವು. ಕಟ್ಟಿಗೆಯ ಮೂರು ಕಾಲಿನ ‘ಕುದುರೆ’ಯ ಮೇಲೆ ನಿಲ್ಲುವ ಕರಿಹಲಿಗೆಯೇ ಹೆಚ್ಚು ಪ್ರಚಾರದಲ್ಲಿರುವದು. ಕೆಲವೆಡೆಗೆ ಗೋಡೆಯ ಒಂದು ಭಾಗವನ್ನೇ ಕರಿಹಲಿಗೆಯಂತೆ ಮಾರ್ಪಡಿಸಿ ಉಪಯೋಗಿಸುವದುಂಟು. ಮತ್ತೆ ಕೆಲವು ಶಾಲೆಗಳಲ್ಲಿ ಹಲಿಗೆಯ ಬದಲಾಗಿ ಪಾಟಿಯ ಕರಿಕಲ್ಲನ್ನೇ ಕರಿಹಲಿಗೆಯಂತೆ ಉಪಯೋಗಿಸುವದುಂಟು. ಮೇಲೆ ಕೆಳಗೆ ಸರಿಸಬಹುದಾದ ಕರಿಹಲಿಗೆಗಳುಂಟು. ಬೇಕಾದತ್ತ ತಿರುಗಿಸಲು ಬರುವ ಕರಿಹಲಿಗೆಗಳೂ ಇರುವವು. ಕರಿಹಲಿಗೆಯ ಬಣ್ಣವು ಮಿಂಚುವಂತಾದರೆ ಬರೆದ ವಿಷಯವು ವರ್ಗದ ವಿದ್ಯಾರ್ಥಿಗಳಿಗೆ

ಚೆನ್ನಾಗಿ ಕಾಣಿಸದು. **ಬರೆಯುವಾಗ್ಗೆ ಶಿಕ್ಷಕನು ಓರೆಯಾಗಿ ನಿಂತು ಬರೆಯಬೇಕು.** ಬಾಲಕರಿಗೆ 'ಬೆನ್ನು ತೋರಿಸ' ಬಾರದು. ಇದರಿಂದ ಬಾಲಕರ ತುಂಟತನಕ್ಕೆ ತಡೆ ಹಾಕಿದಂತಾಗುವದು. ಮೂಲಶಿಕ್ಷಣದ ಪಾಠಗಳಲ್ಲಿ ಶಿಕ್ಷಕನೂ ಬಾಲಕರೂ ಕೆಳಗೆ ನೆಲದ ಮೇಲೆಯೇ ಕುಳಿತುಕೊಳ್ಳುವರು. ಇಂಥ ಪಾಠಗಳಲ್ಲಿ ಕರಿಹಲಿಗೆಯನ್ನು 'ಕುದುರೆ'ಯ ಮೇಲೆ ಎತ್ತರವಾಗಿ ನಿಲ್ಲಿಸದೆ ನೆಲದಮೇಲೆಯೇ ಎಲ್ಲರಿಗೂ ಕಾಣುವ ಸ್ಥಳದಲ್ಲಿ ಇಡಬೇಕು. **ಮಂದ ದೃಷ್ಟಿಯುಳ್ಳ ಬಾಲಕರನ್ನು ಮುಂದೆ ಕೂಡಿಸಬೇಕು.** ಶಿಕ್ಷಕರು ಕರಿಹಲಿಗೆಯ ಮೇಲೆ ಬರೆದುದೆಲ್ಲ ಸುವಾಚ್ಯವಾಗಿರಬೇಕು. ಅಸ್ತವ್ಯಸ್ತವಾಗಿರದೆ, ಅದರಲ್ಲಿ ಒಂದು ಕ್ರಮವು ಕಂಡುಬರಬೇಕು.

ಕರಿಹಲಿಗೆಗಾಗಿ ಉಪಯೋಗಿಸುವ **ಖಡುವು** ಸರಿಯಾದದ್ದಿರಬೇಕು. ಇನ್ನೂ ಹಳ್ಳಿಗಳ ಶಾಲೆಯಲ್ಲಿ ವಿಭೂತಿಯ ಉಂಡೆಗಳನ್ನೇ ಉಪಯೋಗಿಸುವದುಂಟು. ಶಕ್ಯವಾದಲ್ಲಿ ಕರಿಹಲಿಗೆಗಾಗಿ ಸಿದ್ಧಪಡಿಸಿದ ಖಡುವನ್ನೇ ಉಪಯೋಗಿಸಬೇಕು. ಈ ಖಡುವು ಸಾಕಷ್ಟು ಮಿದುವಾಗಿರುವದು. ಬರೆಯುವಾಗ್ಗೆ ಖಡುವನ್ನು ಶಿಕ್ಷಕನು ಕೈಯಲ್ಲಿ ಸ್ಥಿರವಾಗಿ ಹಿಡಿದು, ಅದು ಜಾರದಂತೆ ಹಾಗೂ ಚೀರದಂತೆ ಬರೆಯಬೇಕು. ಪಾಠದ ಪ್ರಾರಂಭದಲ್ಲಿ ಕರಿಹಲಿಗೆಯನ್ನು ಸ್ವಚ್ಛವಾಗಿಡುವದು ಮೊದಲನೆಯ ಕೆಲಸ. ಉಚಿತವಾದ ಸಂದರ್ಭಗಳಲ್ಲಿ ಬಣ್ಣದ ಖಡುವುಗಳನ್ನು ಉಪಯೋಗಿಸಬಹುದು. ಆದರೆ ಅನಾವಶ್ಯಕವಾಗಿ ಬಣ್ಣದ ಖಡುವಿನ ಆಡಂಬರವಾಗದಂತೆ ನೋಡಿಕೊಳ್ಳಬೇಕು. ಖಡುವಿನ ಬಗ್ಗೆ ಇನ್ನೊಂದು ಸಂಗತಿಯು ಮಹತ್ವದ್ದಾಗಿದೆ. **ಖಡುವಿನ ಕಣಗಳು ವಿಷಮಯವಾಗಿವೆ.** ಇವುಗಳಿಂದ ಕೂಡಿದ ಹವೆಯನ್ನು ಚಿಕ್ಕಮಕ್ಕಳು ಉಸುರಾಡಿಸುವದು ಆರೋಗ್ಯಕ್ಕೆ ಅಪಾಯಕರವಾಗಿದೆ. ಇದನ್ನು ತಪ್ಪಿಸಲು ಬರೆದುದನ್ನು ಅಳಿಸಲಿಕ್ಕೆ ಒದ್ದೆ ಬಟ್ಟೆಯನ್ನು ಉಪಯೋಗಿಸುವದು ಒಳಿತು. ಅಳಿಸುವಾಗಲೂ ಮೇಲಿನಿಂದ ಕೆಳಗೆ ಅಳಿಸಬೇಕು. ಶಿಕ್ಷಕರು ತಮ್ಮ ಅತ್ಯಂತ 'ಆಪ್ತ ಸ್ನೇಹಿತ' ನಂತಿರುವ ಕರಿಹಲಿಗೆಯ ಬಗ್ಗೆ ದಕ್ಷತೆಯನ್ನು ವಹಿಸಿ ತಮಗೂ ವಿದ್ಯಾರ್ಥಿಗಳಿಗೂ ಅದರಿಂದ ಎಲ್ಲ ಬಗೆಯ ಪ್ರಯೋಜನವಾಗುವಂತೆ ಯತ್ನಿಸಬೇಕು.

## (೭) ಪಠ್ಯಪುಸ್ತಕಗಳು

ಶಿಕ್ಷಣದಲ್ಲಿ ಪಠ್ಯಪುಸ್ತಕಗಳ ಉಪಯೋಗವು ಮೊದಲಿನಿಂದಲೂ ಕಂಡು ಬರುವದು. ಸರಿಯಾದ ಪಠ್ಯಪುಸ್ತಕಗಳಿದ್ದರೆ, ಹಾಗೂ ಸರಿಯಾಗಿ ಅವುಗಳನ್ನು ಉಪಯೋಗಿಸಿದರೆ, ಶಿಕ್ಷಣದಲ್ಲಿ ಅವುಗಳಿಂದ ಅತ್ಯಂತ ಸಹಾಯುವಾಗುವದು. ಒಂದು ವಿಷಯದಲ್ಲಿ ಸಾರವತ್ತಾದುದನ್ನೆಲ್ಲ ಸಂಗ್ರಹಿಸಿ ಹೇಳುವ ಚಿಕ್ಕದೊಡ್ಡ ಹೊತ್ತಿಗೆಗಳೇ ಪಠ್ಯಪುಸ್ತಕಗಳು. ಅನನುಭವಿಕನಾದ ಶಿಕ್ಷಕನು ಕಲಿಸುವ ವಿಷಯದ ಸಂಗ್ರಹವನ್ನು ಸರಿಯಾಗಿ ತಾನೇ ಮಾಡಲು ಅಸಮರ್ಥನಾಗಿರುವನು. ಅಂಥವನಿಗೆ ಪಠ್ಯಪುಸ್ತಕವು ಕೈಗೋಲಿನಂತಿರುವದು. ಮಾರ್ಗದರ್ಶನದೊಡನೆ, ನೂತನ ಶಿಕ್ಷಕರಲ್ಲಿ ಒಂದು ಬಗೆಯ ಆತ್ಮವಿಶ್ವಾಸವನ್ನೂ ಇವು ಹುಟ್ಟಿಸುವವು. ನಾವಿಕನೆದುರಿಗಿರುವ ನಕ್ಷೆಯಂತೆ, ಎಲ್ಲಿಂದ ಪ್ರಾರಂಭಿಸಬೇಕು? ಹೇಗೆ ಸಾಗಬೇಕು? ಎಲ್ಲಿ ಮುಗಿಸಬೇಕು?—ಎನ್ನುವ ತಿಳುವಳಿಕೆಯನ್ನು ಆತನಲ್ಲಿ ತಂದುಕೊಡುವವು. ಕಲಿಯುವ ವಿದ್ಯಾರ್ಥಿಗಳಿಗೂ ಕೂಡ ಎಲ್ಲ ಸಮಯದಲ್ಲಿಯೂ ಸನ್ನಿಧವಾಗಿರುವ ಶಿಕ್ಷಕನಂತೆ ಪಠ್ಯಪುಸ್ತಕಗಳು ಅವರಿಗೆ ಜೊತೆಗಾರರಾಗಿರುವವು.

ಆದರೆ **ಪಠ್ಯಪುಸ್ತಕಗಳು ಪರಿಪೂರ್ಣವಾಗಿರುವವೆಂದು ತಿಳಿಯುವದು ತಪ್ಪಾಗುವದು**. ಇವು ಒಂದು ವಿಷಯದ ಜ್ಞಾನಕ್ಕೆ ಪೀಠಿಕೆ ಮಾತ್ರ. ಶಿಕ್ಷಕನಾಗಲಿ, ವಿದ್ಯಾರ್ಥಿಗಳಾಗಲಿ, ಪಠ್ಯಪುಸ್ತಕಕ್ಕೆ ಯಾವಾಗಲೂ ಅಂಟಿಕೊಳ್ಳಬಾರದು. ಪಠ್ಯಪುಸ್ತಕಗಳನ್ನು ಪರೀಕ್ಷೆಗಾಗಿ ಉಪಯೋಗಿಸುವದರಿಂದ ಗಿಳಿಪಾಠಕ್ಕೆ ಉತ್ತೇಜನವು ದೊರೆತು, ವಿದ್ಯಾರ್ಥಿಗಳ ಪ್ರಗತಿಯು ಕುಂಠಿತವಾಗುವದು. **ಪಠ್ಯಪುಸ್ತಕಗಳು ಶಿಕ್ಷಣದ ಸಾಧನಗಳೆಂದು ಮಾತ್ರ ತಿಳಿಯಬೇಕು.** ಕಮ್ಮಾರನ ಕೈಯಲ್ಲಿ ಸುತ್ತಿಗೆ ಇರುವಂತೆ, ಶಿಕ್ಷಕನಿಗೆ ಪಠ್ಯಪುಸ್ತಕವು ವಶವಾಗಿರಬೇಕು. ವಿಷಯಪ್ರತಿಪಾದನೆಯಲ್ಲಿ ಪಠ್ಯಪುಸ್ತಕಕ್ಕೆ ಅಂಟಿಕೊಳ್ಳದೆ, ಅವಶ್ಯವಾದ ಹೆಚ್ಚುಕಡಿಮೆಗಳನ್ನು ಆತನು ಮಾಡಿಕೊಳ್ಳಬೇಕು; ಉಚಿತವಾದ ಸನ್ನಿವೇಶಗಳನ್ನೂ ಸಂದರ್ಭಗಳನ್ನೂ ರಚಿಸಬೇಕು.

ಶಿಕ್ಷಕ ಹಾಗೂ ಪಠ್ಯಪುಸ್ತಕಗಳು ಒಂದು ರೀತಿಯಿಂದ ಪರಸ್ಪರ ಪೂರಕವಾಗುವಂತಿರಬೇಕು.

ಸರಿಯಾದ ಪಠ್ಯಪುಸ್ತಕಗಳು ವಿದ್ಯಾರ್ಥಿಗಳ ವಯೋಮಾನಕ್ಕೆ ಒಲವು ಶಕ್ತಿಗಳಿಗೆ ಅನುರೂಪವಾಗಿರಬೇಕು. ಇದಲ್ಲದೆ ಅವುಗಳ ಬಾಹ್ಯಾಂಗವು ಆದಷ್ಟು ಬಂಧುರವಾಗಿರಬೇಕು. ವಿಷಯವು ಮನಸ್ಸನ್ನು ಸೆಳೆವಂತಿದ್ದರೆ, ಹೊರಗಿನ ಬೆಡಗು ಆಕರ್ಷಕವಾಗಿರಬೇಕು. ಅಕ್ಷರಗಳು ಜಿನುಗಾದರೆ, ಚಿಕ್ಕ ಮಕ್ಕಳ ಕಣ್ಣಿಗೆ ತೊಂದರೆಯಾಗುವದು. ಉಪಯೋಗಿಸಿದ ಕಾಗದವು ಬಿಳುಪಾಗಿರಬೇಕು, ನುಣುಪಾಗಿರಬೇಕು. ಚಿಕ್ಕಮಕ್ಕಳಿಗಾಗಿ ರಚಿಸಿದ ಪಠ್ಯಪುಸ್ತಕಗಳು ನಯನಮನೋಹರವಾದ ಚಿತ್ರಗಳಿಂದ ತುಂಬಿರಬೇಕು. **ಪಠ್ಯಪುಸ್ತಕಗಳನ್ನು ರಚಿಸುವವರು ಚಿಕ್ಕಮಕ್ಕಳ ಮನೋವೃತ್ತಿಯನ್ನು ಬಲ್ಲವರಾಗಿರಬೇಕು.** ಶಿಕ್ಷಣಶಾಸ್ತ್ರ–ತಂತ್ರಗಳನ್ನು ತಿಳಿದವರಾಗಿರಬೇಕು. ತಾವು ಬರೆಯುವ ವಿಷಯದಲ್ಲಿ ತಕ್ಕಮಟ್ಟಿಗೆ ಪಾರಂಗತರಾಗಿರಬೇಕು. ಪರಿಚಿತವಾದ ಶಬ್ದ ಸನ್ನಿವೇಶಗಳಿಂದ ಅಪರಿಚಿತವಾದ ವಿಷಯಜ್ಞಾನದೆಡೆಗೆ ಕ್ರಮಬದ್ಧವಾದ ಮೆಟ್ಟಲುಗಳಲ್ಲಿ ಚಿಕ್ಕಮಕ್ಕಳು ಮುಂದಡಿ ಇಡುವಂತೆ ಪಠ್ಯಪುಸ್ತಕಗಳು ಪ್ರಯತ್ನಿಸಬೇಕು.

## ಮೂಲಶಿಕ್ಷಣವೂ ಪಠ್ಯಪುಸ್ತಕಗಳೂ

ಮೂಲ ಶಿಕ್ಷಣವು ಜೀವನ ಶಿಕ್ಷಣವು. ಮೂಲೋದ್ಯೋಗ, ಸಮಾಜ, ನಿಸರ್ಗಗಳ ವಿಧವಿಧದ ಸುಂದರವಾದ ಸನ್ನಿವೇಶಗಳಿಂದ ಕೂಡಿದ ಮಗುವಿನ ಜೀವನವೇ ಮೂಲಶಿಕ್ಷಣದಲ್ಲಿ ಕಲಿಸುವವರಿಗೂ ಕಲಿಯುವವರಿಗೂ ಪಠ್ಯಪುಸ್ತಕವಾಗಿದೆ. ಮೂಲಶಿಕ್ಷಣದಲ್ಲಿ ಮೊದಲಿನಿಂದ ಕೊನೆಯವರೆಗೆ ಸ್ವಾಭಾವಿಕತೆ ನೆಲೆಸಿರಬೇಕು. ಆದರೆ ಪಠ್ಯಪುಸ್ತಕಗಳಲ್ಲಿ ಕೃತ್ರಿಮತೆ ತುಂಬಿದೆ. ದೊಡ್ಡವರು ತಮ್ಮ ದೃಷ್ಟಿಯಿಂದ ಬಾಲಕರಿಗೆ ಉಚಿತವೂ ಅವಶ್ಯವೂ ಎಂದು ತೋರಿದ್ದನ್ನು ತಮ್ಮ ಮಾತಿನಲ್ಲಿ ಬಾಲಕರಿಗೆ ಪಠ್ಯಪುಸ್ತಕಗಳಲ್ಲಿ ಒದಗಿಸುವರು. ಬೆಳೆಯುವ ಮಕ್ಕಳ ಒಲವು–ಶಕ್ತಿಗಳಿಗೆ ಹೊಂದಿಕೊಳ್ಳದ ಈ ಬಗೆಯ ಪಠ್ಯಪುಸ್ತಕಗಳಿಂದಾಗುವ ಅನರ್ಥವನ್ನು ಕಂಡು ಪಠ್ಯಪುಸ್ತಕಗಳೇ ತೀರ ವಿಘಾ

ತಕಗಳೆಂದು ಹೇಳುವದುಂಟು. ಮಕ್ಕಳ ಮನೋಭೂಮಿಕೆಯನ್ನರಿಯದವ ರಿಂದ ರಚಿತವಾದ ಅಶಾಸ್ತ್ರೀಯ ಪಠ್ಯಪುಸ್ತಕಗಳೂ, ಅವುಗಳನ್ನೇ ಮಾತ್ರ ಅಂಟಿಕೊಳ್ಳುವ ಶಿಕ್ಷಕರ ಮನೋವೃತ್ತಿಯೂ ಅಷ್ಟೇ ವಿಘಾತುಕಗಳೆಂಬು ದನ್ನು ಯಾರೂ ಅಲ್ಲಗಳೆಯಲಾರರು. ಜೀವನದೊಡನೆ ಸಮರಸವಾಗಿ ನಡೆದ ಶಿಕ್ಷಣದಲ್ಲಿ ಸ್ವಯಂಪ್ರೇರಣೆಯಿಂದ ಮಗುವು ಸಂಪಾದಿಸಿದ ಜ್ಞಾನವು ಸಹಜ ವಾದುದು, ಸ್ಥಿರವಾದುದು. ಆದರೆ ವ್ಯವಹಾರದ ಒರೆಗೆ ಈ ತತ್ವವನ್ನು ಹಚ್ಚಿ ನೋಡಿದರೆ, ಮೂಲಶಿಕ್ಷಣದಲ್ಲಿಯೂ ಕೂಡ ಪಠ್ಯಪುಸ್ತಕಗಳ ಅವಶ್ಯಕತೆಯು ಅನಿಸದಿರದು. ಅನಂತಕಾಲದ ಅನುಭವವು ಹಿಂದಿನ ವಾಙ್ಮಯದಲ್ಲಿ ಹುದುಗಿ ಕೊಂಡಿದೆ. **ಮೂಲಶಿಕ್ಷಣದ ಮೂರು ಕೇಂದ್ರಗಳಿಂದ ಮಗುವಿಗೆ ದೊರೆಯುವ ಸ್ವಾನುಭವಕ್ಕೆ ಹಿರಿಯರ ಅನುಭವವನ್ನೂ ಯೋಗ್ಯ ವಾದ ಪಠ್ಯಪುಸ್ತಕಗಳು ಪೂರಕವಾಗಿ ಪೂರೈಸುವವು.** ಇದಲ್ಲದೆ ತಾಯ್ನುಡಿಯ ಕಟ್ಟುನಿಟ್ಟುಗಳೂ, ಶೈಲಿಯ ಬಗೆಬಗೆಯ ಬೆಡಗು ಬಿನ್ನಾಣ ಗಳೂ ಎಳೆಯತನದಿಂದಲೆ ಮಕ್ಕಳ ಮನಸ್ಸನ್ನು ಹಿಡಿಯುವಂತೆ ಪಠ್ಯಪುಸ್ತಕ ಗಳು ಮಾಡಬಹುದು. ಇನ್ನೊಂದು ಕಾರಣಕ್ಕಾಗಿಯೂ ಮೂಲಶಿಕ್ಷಣದಲ್ಲಿ ಪಠ್ಯಪುಸ್ತಕಗಳ ಅವಶ್ಯಕತೆಯೆನಿಸಬಹುದು. ಮೂಲಶಿಕ್ಷಣದಲ್ಲಿ ಮಗುವಿಗೆ ದೊರೆಯುವ ಜ್ಞಾನವು ತಾತ್ಕಾಲಿಕವಾದುದು, ಪ್ರಾಸಂಗಿಕವಾದುದು, ಸಮ್ಮಿ ಶ್ರಿತವಾದುದು. ಒಂದೇ ಚಟುವಟಿಕೆಯ ನಿರ್ವಹಣೆಯಲ್ಲಿ ವಿವಿಧ ವಿಷಯಗಳ ಜ್ಞಾನವು ಸಮನ್ವಿತವಾಗಿರಬಹುದು. ಈ ವಿಷಯಗಳ ವಿಭಜನೆಯಾಗಬೇಕು. **ಹೀಗೆ ದೊರೆತ ಜ್ಞಾನಕಣಗಳನ್ನು ಕೂಡಿಸಿ ಕಟ್ಟಬೇಕು.** ವಿಷಯ ಜ್ಞಾನದಲ್ಲಿ ಹೊಂದಿಕೆ, ಪೂರ್ಣತೆ ಬರುವಂತೆ ಅವುಗಳನ್ನೆಲ್ಲ ಒಂದುಗೂಡಿಸ ಬೇಕು. ಮೂಲಶಿಕ್ಷಣದ ಚಟುವಟಿಕೆಗೆ ಪೂರಕವಾಗಿ ನಿಂತು ಯೋಗ್ಯವಾದ ಪಠ್ಯಪುಸ್ತಕಗಳು ಈ ಕಾರ್ಯವನ್ನು ಸರಿಯಾಗಿ ಮಾಡಬಹುದು. ಆದರೆ ಈ **ಪಠ್ಯಪುಸ್ತಕಗಳು ಕೇವಲ ಪೂರಕ-ಸಹಾಯಕ**ಗಳೆಂಬುವದನ್ನು ನೆನಪಿ ನಲ್ಲಿಟ್ಟುಕೊಂಡು, ಮೂಲಶಿಕ್ಷಣದ ಶಿಕ್ಷಕನು ಯಾವಾಗಲೂ ಇವುಗಳ ಮೇಲೆಯೇ ಕೈಯೂರಿ ನಿಲ್ಲಬಾರದು.

## (೮) ಪರೀಕ್ಷೆಗಳು

ಪರೀಕ್ಷೆಗಳು ಅತ್ಯಂತ ಪ್ರಾಚೀನಕಾಲದಿಂದಲೂ ಇದುವರೆಗೆ ನಡೆದು ಬಂದಿರುವವು. ಇವುಗಳ ಸ್ವರೂಪದಲ್ಲಿಯೂ ಹೆಚ್ಚುಕಡಿಮೆಯಾಗಿರುವದು. ಹಿಂದಿನ ಮೌಖಿಕ ಪರೀಕ್ಷೆಗಳು ಮಾಯವಾಗಿ ಬರೆಹದ ಪರೀಕ್ಷೆಗಳೇ ಇಂದು ಹೆಚ್ಚು ಬಳಕೆಯಲ್ಲಿವೆ. ಇಂದಿನ ಶಿಕ್ಷಣದ ಲೋಪದೋಷಗಳಲ್ಲಿ ಈ ಪರೀಕ್ಷಾ ಪದ್ಧತಿಯೂ ಒಂದಾಗಿದೆ. ಇವುಗಳಿಂದ ಗಿಳಿಪಾಠವು ಹೆಚ್ಚಾಗುವದು. ಅನೇಕ ಬಗೆಯ ತಗಲುತನದಿಂದ ಪರೀಕ್ಷೆ ಪಾಸಾಗಲು ವಿದ್ಯಾರ್ಥಿಗಳು ಯತ್ನಿಸುವರು. ವಿಷಯಜ್ಞಾನವನ್ನು ಮಾಡಿಕೊಳ್ಳದೆ ಟೀಕೆ ಟಿಪ್ಪಣಿಗಳನ್ನೇ ಹೆಚ್ಚಾಗಿ ಆಶ್ರಯಿಸುವರು. ಪರೀಕ್ಷಕರೂ ತಮ್ಮ ಪೂರ್ವಗ್ರಹಿಕೆಗಳನ್ನು ಪೂರ್ಣವಾಗಿ ಬಿಟ್ಟುಕೊಡಲಾರರು. ಹೀಗಾಗಿ, **ಪರೀಕ್ಷೆಯ ಫಲಿತಾಂಶವು ಅನೇಕಸಲ ಸದೋಷವಾಗುವದು;** ನಂಬಲು ಅಯೋಗ್ಯವಾಗುವದು. ಹೀಗಿದ್ದರೂ ವಿದ್ಯಾರ್ಥಿಗಳು ಮಾಡಿದ ಪ್ರಗತಿಯನ್ನು ಅಳೆಯಲಿಕ್ಕೆ ಒಂದಿಲ್ಲೊಂದು ಬಗೆಯ ಪರೀಕ್ಷೆಯ ವಿಧಾನವನ್ನು ಕಲ್ಪಿಸಬೇಕಾಗುವದು.

ಆಧುನಿಕ ಶಿಕ್ಷಣದಲ್ಲಿ ಹೊಸದೊಂದು ಬಗೆಯ ಪರೀಕ್ಷಾವಿಧಾನವು ಕಂಡುಬರುವದು. ಪರೀಕ್ಷೆಯ ಈ ಹೊಸ ವಿಧಾನದಲ್ಲಿ ವಿದ್ಯಾರ್ಥಿಯ ವಿಷಯಜ್ಞಾನವನ್ನು ಅಳೆಯುವದೇ ಮುಖ್ಯವಾಗಿರುವದಿಲ್ಲ. ಕಲಿತುಕೊಂಡ ವಿಷಯವನ್ನು ವಿದ್ಯಾರ್ಥಿಯು ಹೇಗೆ ತನ್ನದಾಗಿ ಮಾಡಿಕೊಂಡಿರುವನು? ಎಷ್ಟರ ಮಟ್ಟಿಗೆ ಅದನ್ನು ಅರಗಿಸಿಕೊಂಡಿರುವನು? ಜೀವನದ ಹೊಸ ಸನ್ನಿವೇಶಗಳಲ್ಲಿ, ಅಪರಿಚಿತವಾದ ಸಂದರ್ಭಗಳಲ್ಲಿ ತಾನು ಗಳಿಸಿಕೊಂಡ ವಿಷಯಜ್ಞಾನವನ್ನು ಆತನು ಹೇಗೆ ಸರಿಯಾಗಿ ಉಪಯೋಗಿಸಿಕೊಳ್ಳಬಲ್ಲನು?— ಈ ಬಗೆಯ ಒರೆಗಲ್ಲಿನಿಂದ ವಿದ್ಯಾರ್ಥಿಯ ಪರಿಶ್ರಮವನ್ನೂ, ಪ್ರಗತಿಯನ್ನೂ ಇಂದಿನ ನೂತನವಾದ ಪರೀಕ್ಷಾಪದ್ಧತಿಯು ಅಳೆದು ನೋಡುವದು. **ವಿಷಯಜ್ಞಾನಕ್ಕಿಂತಲೂ, ವಿದ್ಯಾರ್ಥಿಯ ಬುದ್ಧಿಯ ಬೆಲೆಕಟ್ಟುವದೇ ನೂತನ ಪರೀಕ್ಷಾಪದ್ಧತಿಯ ಉದ್ದೇಶವಾಗಿದೆ.**

**'ಮೂಲಶಿಕ್ಷಣದಲ್ಲಿ ಪ್ರಗತಿಮಾಪನ; ಹಾಗೂ ಮೂಲಶಿಕ್ಷಣವು ಏನು ಸಾಧಿಸಬೇಕು?'**—

ಮೂಲಶಿಕ್ಷಣವು ಉದ್ಯೋಗಮೂಲವಾಗಿದೆ; ಕ್ರಿಯಾತ್ಮಕವಾಗಿದೆ; ಹಾಗೂ ಹೆಚ್ಚಾಗಿ ಸಾಂಸ್ಕೃತಿಕವಾಗಿದೆ. ಮೂಲೋದ್ಯೋಗದಲ್ಲಿ ಮಗುವು ಗಳಿಸಿದ ಪ್ರಗತಿಯನ್ನು ಸುಲಭವಾಗಿ ಅಳೆಯಬಹುದು. ಉದ್ಯೋಗವು ಆತ್ಮ ನಿಷ್ಠವಲ್ಲ; ವ್ಯಕ್ತಿಗೆ ಬಾಹಿರವಾದುದು. ಮಗುವು ನೂತ ನೂಲು, ರಚಿಸಿದ ಒಡವೆಗಳು ಬಾಹ್ಯವಾದವುಗಳು; ದೃಶ್ಯವಾದವುಗಳು. ಇವುಗಳಲ್ಲಿ ವಿದ್ಯಾರ್ಥಿಯು ಸಾಧಿಸಿದ ಪರಿಮಿತಿ ಹಾಗು ಪ್ರಾವೀಣ್ಯತೆಗಳನ್ನು ಸುಲಭವಾಗಿ ತಿಳಿಯ ಬಹುದು. ಪರಸ್ಪರ ತುಲನೆ ಮಾಡಬಹುದು. **ಈ ಪರೀಕ್ಷೆಯಲ್ಲಿ-ಪಕ್ಷ ಪಾತ, ಪೂರ್ವಗ್ರಹಿಕೆಗಳ ಬಾಧೆಯಿಲ್ಲ. ತಗಲು ಮೋಸಗಳಿಗೆ ಆಸ್ಪದವಿಲ್ಲ.** ' ಪರೀಕ್ಷಕರ ಕಣ್ಣಲ್ಲಿ ಮಣ್ಣೆರಚುವ ಸಾಹಸಕ್ಕೆ ಇಲ್ಲಿ ಸ್ಥಾನವಿಲ್ಲ. ನಿರೋಗಿಯಾದ ವಿದ್ಯಾರ್ಥಿಯು ಸರಿಯಾಗಿ ದುಡಿದರೆ ವಿವಿಧ ಮೂಲೋ ದ್ಯೋಗಗಳಲ್ಲಿ ಎನಿತು ಉತ್ಪಾದನೆ ಮಾಡಬಲ್ಲನೆಂಬುವದು ಪ್ರಯೋಗಗಳಿಂದ ಪ್ರಮಾಣಿತವಾಗಿದೆ. ಆಕಸ್ಮಿಕ ಅನಾನುಕೂಲತೆಗಳಿಗೆ ಅನುವು ಮಾಡಿ ಕೊಟ್ಟರೂ, ಪ್ರತಿಯೊಬ್ಬ ವಿದ್ಯಾರ್ಥಿಯು ಉತ್ಪಾದನೆಯಲ್ಲಿ ಪ್ರಮಾಣಿತ ವಾದ ಸರಾಸರಿ ಪರಿಮಿತಿಯನ್ನು ಮುಟ್ಟಲೇಬೇಕು.

**ಸಂಸ್ಕೃತಿಯು ಮೂಲಶಿಕ್ಷಣದ ಹೆಗ್ಗುರಿಯು.** ಸಂಸ್ಕೃತಿ ಯೆಂದರೇನೆಂಬುವದನ್ನು ಮಾತಿನಲ್ಲಿ ಹಿಡಿದು ಹೇಳುವದು ಪ್ರಯಾಸವಾಗ ಬಹುದು. ಆದರೆ ಶಿಕ್ಷಣವು ವ್ಯಕ್ತಿಗೆ ಈ ಸಂಸ್ಕೃತಿಯನ್ನು ಹೇಗೆ ತಂದು ಕೊಡಬಲ್ಲದೆಂಬುದನ್ನು ಮಹಾತ್ಮಾಜಿಯವರು ಮಾರ್ಮಿಕವಾಗಿ ಹೇಳಿರು ವರು. ಶಿಕ್ಷಣವೆಂದರೆ ವ್ಯಕ್ತಿವಿಕಾಸಕ್ಕೆ ನಾವು ಒದಗಿಸುವ ಸುವ್ಯವಸ್ಥಿತವಾದ ಸಂಸ್ಕಾರವಾಗಿದೆ. ಇದನ್ನೇ ದೇಹ–ಬುದ್ಧಿ–ಆತ್ಮಶಕ್ತಿಗಳ ಸಮವಾಯದ, ಸರ್ವತೋಮುಖವಾದ ವಿಕಾಸವೆಂದು ಗಾಂಧೀಜಿಯವರು ಹೇಳಿರುವರು. ಬೆಳೆಯುವ ಮಗುವಿಗೆ ಅಪೇಕ್ಷಿತವಾದ ಹಾಗೂ ಅಗತ್ಯವೆನಿಸಿದ ಸಂಸ್ಕೃತಿ ಯನ್ನು ಮೊದಲಿನಿಂದಲೂ ತಂದುಕೊಡಲು ಮೂಲಶಿಕ್ಷಣವು ಕೆಲವೊಂದು ಹಾದಿಗಳನ್ನು ಹಾಕಿಕೊಂಡಿದೆ. ಕೆಲವೊಂದು ಕಾರ್ಯಕ್ರಮವನ್ನಿಟ್ಟು ಕೊಂಡಿದೆ. ಇವುಗಳಲ್ಲಿ ಜೀವನೋಪಯೋಗಿಯಾದ ವಿವಿಧ ವಿಷಯಗಳ

ಜ್ಞಾನವನ್ನು, ಶಿಕ್ಷಣದ ಒಟ್ಟು ಅವಧಿಯಲ್ಲಿ, ವಿದ್ಯಾರ್ಥಿಗಳಿಗೆ ಮಾಡಿಕೊಡು ವದೂ ಒಂದಾಗಿದೆ. ಮ್ಯಾಟ್ರಿಕ್ ಇಲ್ಲವೆ ಇಂದಿನ ಎಸ್. ಎಸ್. ಸಿ. ಪರೀಕ್ಷೆ ಪಾಸಾದ ವಿದ್ಯಾರ್ಥಿಗೆ ಇಂಗ್ಲೀಷನ್ನೊಂದು ಬಿಟ್ಟು ಉಳಿದ ಎಲ್ಲ ವಿಷಯಗಳಲ್ಲಿ ಇರಬೇಕಾದ ಜ್ಞಾನವು, ಮೂಲಶಿಕ್ಷಣವನ್ನು ಮುಗಿಸಿದ ವಿದ್ಯಾರ್ಥಿಗೂ ದೊರೆಯಬೇಕೆಂದು ಯೋಜಕರ ಮನೀಷೆಯಾಗಿದೆ. ಇದು ಸಾಧ್ಯವೆಂದೂ ತೋರುವದು. ಏಕೆಂದರೆ, ಹಿಂದಿನ ಶಿಕ್ಷಣದಲ್ಲಿ ಪರಭಾಷೆಯ ಅಭ್ಯಾಸಕ್ಕಾಗಿ ಮೀಸಲಾಗುತ್ತಿದ್ದ ಸಮಯವು, ಮಾತೃಭಾಷೆಯ ಮುಖಾಂತರವಾಗಿ ಸಾಗುವ ಮೂಲಶಿಕ್ಷಣದಲ್ಲಿ ಉಳಿತಾಯವಾಗುವದು. ಆದರೆ ಇಲ್ಲಿ ಒಂದು ಮಾತನ್ನು ನೆನಪಿನಲ್ಲಿಡಬೇಕು. ಈ ವಿಷಯ ಜ್ಞಾನವನ್ನು ಪರೀಕ್ಷಿಸಲು ಹಿಂದಿನ ಪರೀಕ್ಷಾ ವಿಧಾನವನ್ನು ಮೂಲಶಿಕ್ಷಣದಲ್ಲಿ ಅನುಸರಿಸಲು ಬಾರದು. ಏಕೆಂದರೆ ಮೂಲ ಶಿಕ್ಷಣದಲ್ಲಿ ಮಗುವು ಗಳಿಸಿದ ಜ್ಞಾನವು ಗಿಳಿಪಾಠವಲ್ಲ; ಜೀವನದ ವಿವಿಧ ಸನ್ನಿವೇಶಗಳೊಡನೆ ಸಮನ್ವಿತವಾಗಿ ಬಂದ ಜ್ಞಾನವದು. ತನ್ನನ್ನು ಎದುರಿ ಸುವ ಸನ್ನಿವೇಶಗಳಲ್ಲಿ, ಮುಂದೆ ವಿದ್ಯಾರ್ಥಿಯು ಈ ಜ್ಞಾನವನ್ನು ಹೇಗೆ ವ್ಯಕ್ತ ಗೊಳಿಸುವನು ? ಹೇಗೆ ವಿನಿಯೋಗಿಸುವನು ? ಎಂಬುದರಲ್ಲಿಯೇ ಆತನ ಜ್ಞಾನದ ಪರೀಕ್ಷೆಯಾಗಬೇಕು. **ಜ್ಞಾನ–ಸಂಸ್ಕೃತಿಗಳೆರಡೂ ಇಲ್ಲಿ ಹಾಲು–ಸಕ್ಕರೆಗಳಂತೆ ಹೊಂದಿಕೊಳ್ಳುವವು. ಇದುವೇ ಸಮವಾಯ ಜ್ಞಾನ!**

ಈ ಸಾಂಸ್ಕೃತಿಕ ಶಿಕ್ಷಣಕ್ಕೆ ಮೂಲಶಿಕ್ಷಣದ ಶಾಲೆಗಳು ಅನುಸರಿಸುವ ಜೀವನಕ್ರಮವು ಇನ್ನೊಂದು ಹಿರಿದಾದ ಸಾಧನವಾಗಿದೆ. ಇದನ್ನೇ **ಸಾಮೂಹಿಕ, ಸಾಂಘಿಕ ಜೀವನವೆಂದು** ಹೇಳುವರು. ವ್ಯಕ್ತಿಯ ಉನ್ನತಿ ಯೊಡನೆ, ಸಮಾಜದ ಉತ್ಕರ್ಷವನ್ನು ಸಮರಸವಾಗಿ ಹೊಂದಿಸುವ ಯೋಜ ನೆಯು ಈ ಜೀವನ ಶಿಕ್ಷಣದಲ್ಲಿದೆ. ವ್ಯಕ್ತಿಯ ದೃಷ್ಟಿಯಿಂದ:– (೧) ಆತನು **ಸ್ವಾವಲಂಬಿಯಾಗಬೇಕು.** ತಾನು ಕಲಿತುಕೊಂಡ ಉದ್ಯೋಗವನ್ನು ಮುಂದರಿಸಿ ತನ್ನ ಚರಿತಾರ್ಥವನ್ನು ಸಾಗಿಸಿಕೊಳ್ಳುವ ಆತ್ಮವಿಶ್ವಾಸವು ಅವ ನಲ್ಲಿ ಉಂಟಾಗಬೇಕು. (೨) ಕೈಕೊಂಡ **ಉದ್ಯೋಗದಲ್ಲಿ ಒಲವು** ಉಂಟಾಗ

ಬೇಕು. ಮೇಲು ಕೀಳೆಂದೆಣಿಸದೆ ದುಡಿತದಲ್ಲಿ ಗೌರವವನ್ನು ಕಾಣಬೇಕು. ಉದ್ಯೋಗದ ಪ್ರಗತಿಯಲ್ಲಿ ಆನಂದವನ್ನು ಪಡೆಯಬೇಕು. (೩) ಉದ್ಯೋಗವನ್ನು ಕೇವಲ ತಾಂತ್ರಿಕವಾಗಿ ಮಾಡದೆ ಅದರಲ್ಲಿ **ಶೋಧಕಬುದ್ಧಿ** ಹಾಗೂ **ಪ್ರಾಯೋಗಿಕ ಪ್ರವೃತ್ತಿಯು** ಆತನಲ್ಲಿ ಉಂಟಾಗಬೇಕು. (೪) ವ್ಯವಸ್ಥೆ **ಅಚ್ಚುಕಟ್ಟುತನಗಳು** ಆತನಲ್ಲಿ ನೆಲಿಸಬೇಕು. (೫) ಮುಖಹೀನತೆ, ಹೇಡಿತನಗಳು ಹೋಗಿ **ಸ್ಪಷ್ಟೋಕ್ತಿ ನಿರ್ಭಯತೆಗಳು** ಆತನಲ್ಲಿ ಕಂಡುಬರಬೇಕು. (೬) ತನ್ನ ಜೀವನಕ್ಕೆ ಬೇಕಾಗುವ ಆಹಾರ ಅರಿವೆಗಳನ್ನು ಸಿದ್ಧಪಡಿಸಿಕೊಳ್ಳುವ ಶಕ್ತಿಯಿರಬೇಕು. (೭) ಸಮತೋಲವಾದ ಆಹಾರವುಳ್ಳ ಅಡಿಗೆಯನ್ನು ಮಾಡುವದು ಹಾಗೂ ಸಾಕಷ್ಟು ಆರೋಗ್ಯವಿಜ್ಞಾನವೂ ಬೇಕು. (೮) ಸಾಮಾನ್ಯ ರೋಗಗಳ ಪರಿಚಯ ಹಾಗೂ ಪ್ರಥಮ ಚಿಕಿತ್ಸೆ. (೯) ಮಾತೃಭಾಷೆ ಹಾಗೂ ಅದರ ಸಾಹಿತ್ಯದ ಪರಿಚಯವಿರಬೇಕು. (೧೦) ಭಾರತದ ಭೂಗೋಲ ಹಾಗೂ ಸ್ವಾತಂತ್ರ್ಯೇತಿಹಾಸದ ಜ್ಞಾನವಿರಬೇಕು. (೧೧) ರಾಷ್ಟ್ರಭಾಷೆಯಾದ ಹಿಂದುಸ್ತಾನಿಯನ್ನು ಬಲ್ಲವರಾಗಿರಬೇಕು. (೧೨) ಕುದುರೆ, ನಾಯಕಲ್ ಹತ್ತುವದು ಹಾಗೂ ಈಜುವದನ್ನು ಕಲಿತಿರಬೇಕು. (೧೩) ಭಕ್ತಿಗೀತೆಗಳನ್ನೂ ರಾಷ್ಟ್ರಗೀತೆಗಳನ್ನೂ ಎಲ್ಲರೊಡನೆ ಅನ್ನಲು ಬರಬೇಕು. (೧೪) ಭಾರತದ ಹಾಗೂ ಪರದೇಶಗಳ ರಾಜಕಾರಣದ ಸ್ಥೂಲ ಪರಿಚಯವಿರಬೇಕು.

ಸಮಾಜದ ದೃಷ್ಟಿಯಿಂದ:— (೧) ಎಲ್ಲರೊಡನೆ ಕೂಡಿ ಕೆಲಸ ಮಾಡುವದು; (೨) ಸಂಘಟನೆ– ಕೆಲಸಮಾಡಿಸಿಕೊಳ್ಳುವದು; (೩) ಸರ್ವೋದಯ ಸಮಾಜದ ಉದ್ದೇಶ, ಕಾರ್ಯಕ್ರಮ ಹಾಗೂ ಗ್ರಾಮನಿಷ್ಠವಾದ ಅರ್ಥಶಾಸ್ತ್ರ. (೪) ಸಾರ್ವಜನಿಕ ಸಭೆ–ಸಮಾರಂಭಗಳನ್ನು ಸರಿಯಾಗಿ ಏರ್ಪಡಿಸುವ ಜಾಣ್ಮೆ. (೫) **ಸಹಕಾರಬುದ್ಧಿ; ಪ್ರಾಮಾಣಿಕತನ; ಸತ್ಯನಿಷ್ಠೆ; ಸರ್ವಧರ್ಮಗಳಲ್ಲಿ ಸಮಭಾವ.** ಇವುಗಳಲ್ಲದೆ '**ಸಫಾಯಿ**'–ವೈಯಕ್ತಿಕ ಹಾಗೂ ಸಾಮೂಹಿಕ ಸ್ವಚ್ಛತೆ— ಇವೆಲ್ಲ ಸದ್ಗುಣಗಳು ಮೂಲಶಿಕ್ಷಣವನ್ನು ಪಡೆದ ಮಗುವಿನಲ್ಲಿ ಮೊದಲಿನಿಂದಲೂ ಮೂಡಬೇಕು, ಬೆಳೆಯಬೇಕು.

ಇದೇ ಭಾವಗಳ ಸಂಸ್ಕಾರ, ಆತ್ಮಸಂಸ್ಕಾರ. ಇದುವೇ ಮೂಲ ಶಿಕ್ಷಣವು ವ್ಯಕ್ತಿಯ ಸರ್ವತೋಮುಖವಾದ ಉನ್ನತಿಗಾಗಿ ನೀಡುವ ' ಸಂಸ್ಕೃತಿ 'ರೂಪವಾದ ಕಾಣಿಕೆ.

ಈ ಸಂಸ್ಕೃತಿಯನ್ನು ಅಳೆಯುವದೆಂತು? ವಾಸ್ತವ-ಜೀವನವೇ ಈ ಸಂಸ್ಕೃತಿಯ ಪರೀಕ್ಷಾಕೇಂದ್ರ. **ಕೇವಲ ಪಾಂಡಿತ್ಯವು ಜೀವನದ ಒರೆಗಲ್ಲಾಗದು. ಸಂಸ್ಕೃತಿಯು ಹೂವಿನ ಸುಗಂಧದಂತೆ.** ಬಣ್ಣದ ಬೆಡಗು ಎಷ್ಟಿದ್ದರೂ ನಿರ್ಗಂಧವಾದ ಕುಸುಮವು ದೇವರ ಪೂಜೆಗೆ ಸಲ್ಲದು. ಹಾಗೆಯೇ ಪಾಂಡಿತ್ಯದಿಂದ ಜೀವನದ ಬೆಲೆಯನ್ನು ಕಟ್ಟಲು ಬಾರದು. ಮೇಲೆ ಹೇಳಿದ ಸದ್ಗುಣಗಳನ್ನು-ಸಂಸ್ಕೃತಿಯನ್ನು- ಮೂಲ ಶಿಕ್ಷಣವು ರಾಷ್ಟ್ರದ ಮಕ್ಕಳಿಗೆ ತಂದುಕೊಟ್ಟರೆ ಅದು ಯಶಸ್ವಿಯಾದಂತಾಯಿತು. ಸ್ವಾವಲಂಬಿಯಾದ, ಶೋಷಣರಹಿತವಾದ, ಸರ್ವಧರ್ಮ ಸಮನ್ವಯವುಳ್ಳ ಸತ್ಯ, ಸಮಾನತೆ, ಪ್ರೇಮಗಳಿಂದ ಕೂಡಿದ ಸರ್ವೋದಯ ಸಮಾಜವನ್ನು ರಚಿಸುವದರಲ್ಲಿ, ಸ್ಥಿರಗೊಳಿಸುವದರಲ್ಲಿ ಮೂಲಶಿಕ್ಷಣವನ್ನು ಪಡೆದ **ಮಗವು ತನ್ನ ಪಾತ್ರವನ್ನು ಸರಿಯಾಗಿ ವಹಿಸಿದರೆ, ಆತನು ಮೂಲಶಿಕ್ಷಣದ ಪರೀಕ್ಷೆಯಲ್ಲಿ ಪಾಸು ಆದನೆಂದು ಹೇಳಬೇಕಲ್ಲವೆ?**

## (೯) ಮನೆಯಲ್ಲಿ ಮಾಡಲು ಹೇಳಿದ ಕೆಲಸ (ಗೃಹಪಾಠ).

ಕಲಿತ ವಿಷಯಗಳನ್ನು ದೃಢಗೊಳಿಸುವದಕ್ಕಾಗಿ ಮನೆಯಲ್ಲಿ ಮಾಡಿಕೊಂಡು ಬರಲು ಕೆಲವೊಂದು ಕೆಲಸವನ್ನು ವಿದ್ಯಾರ್ಥಿಗಳಿಗೆ ಒಪ್ಪಿಸುವದುಂಟು. ಶಾಲೆಯಲ್ಲಿಯೇ ಕಲಿಯುವದೆಲ್ಲ ತೀರಬೇಕು. ಮನೆಯಲ್ಲಿ ಮಕ್ಕಳು ಆಡಲು ಸಂಪೂರ್ಣ ಸ್ವತಂತ್ರರಾಗಿರಬೇಕು ಎಂಬ ವಿಚಾರದ ಕೆಲ ಜನರು ಇರುವರು. ಕೆಳಗಿನ ಇಯತ್ತೆಗಳ ಚಿಕ್ಕ ಮಕ್ಕಳಿಗೆ ಮಾತ್ರ ಈ ಮಾತು ಅನ್ವಯಿಸಬಹುದು. ಆದರೆ ಮೇಲಿನ ಇಯತ್ತೆಯ ವಿದ್ಯಾರ್ಥಿಗಳಿಗೆ ಇದು ಸರಿಯಾಗದು. ಸ್ವಪ್ರಯತ್ನದಿಂದ ಶಿಕ್ಷಕರ ಮಾರ್ಗದರ್ಶಿತ್ವದಲ್ಲಿ ಈ ವಿದ್ಯಾರ್ಥಿಗಳು ವಿವಿಧ ವಿಷಯಗಳಲ್ಲಿ ಪ್ರಗತಿಯನ್ನು ಹೊಂದಬೇಕಾಗುವದು.

' ಗೃಹಪಾಠ 'ದ ಬಗ್ಗೆ ಕೆಲವು ಸಂಗತಿಗಳನ್ನು ಲಕ್ಷದಲ್ಲಿಡಬಹುದು:—

(೧) ಗೃಹಪಾಠವು ವಿದ್ಯಾರ್ಥಿಗಳಿಗೆ ದೊರೆಯುವ **ಉಳಿತಾಯದ ವೇಳೆಗೆ ಹವಣಾಗಿರಬೇಕು.** ಮಿತಿಮೀರಿದ ಕೆಲಸವನ್ನು ಅವರು ಹೇಗಾದರೂ ಮಾಡಿ ಮುಗಿಸಬಹುದು. ಆದರೆ ಇದರಿಂದ ಶಿಕ್ಷಕರ ಉದ್ದೇಶವೂ ಸಫಲವಾಗುವದಿಲ್ಲ. ವಿದ್ಯಾರ್ಥಿಗಳ ಹಿತವೂ ಸಾಧಿಸುವದಿಲ್ಲ. (೨) ಅದು ವಿದ್ಯಾರ್ಥಿಗಳ **ಬುದ್ಧಿಶಕ್ತಿಗೆ ನಿಲುಕುವಂತಿರಬೇಕು.** ಅದು ತೀರ ಸುಲಭವಾಗಿದ್ದರೆ ಅದನ್ನು ಅವರು ಹೀಯಾಳಿಸಿಬಿಡುವರು. ಬಹಳೇ ಗಡುಚಾಗಿದ್ದರೆ ಹೆದರಿಬಿಡುವರು. (೩) ಇದಲ್ಲದೆ ವಿದ್ಯಾರ್ಥಿಗಳ **ವೈಯಕ್ತಿಕ ತೊಂದರೆಗಳನ್ನು** ಶಿಕ್ಷಕರು ಗಮನಿಸಬೇಕು. ಬಡತನದ ಬಾಳುವೆಯ ಮನೆಯಲ್ಲಿ ಬೆಳಕು ಸ್ಥಳಗಳ ಅನುಕೂಲತೆಯಿರದು. ಮೇಲಾಗಿ ತಾಯ್ತಂದೆಗಳಿಗೆ ಮಕ್ಕಳು ಮನೆಗೆಲಸಗಳಲ್ಲಿ ನೆರವಾಗಬೇಕು. ಇಂಥ ಪರಿಸ್ಥಿತಿಯಲ್ಲಿ ಮನೆಯಲ್ಲಿ ಮಾಡಲು ಹೇಳಿದ ಕೆಲಸವು ಮಿತಿಯನ್ನೂ ಬಾಲಕರ ಯೋಗ್ಯತೆಯನ್ನೂ ಮೀರಕೂಡದು. (೪) ಇದಲ್ಲದೆ ಬೆಳೆಯುವ ಮಕ್ಕಳಿಗೆ ಆಟವು ಅಗತ್ಯವಾದುದು. ತಮ್ಮ ಓರಿಗೆಯ **ಗೆಳೆಯರಕೂಡ ಆಡಲು ಗೃಹಪಾಠವು ಆತಂಕವಾಗದಂತಿರಬೇಕು.** (೫) ಮನೆಯಲ್ಲಿ ಮಾಡಲು ಹೇಳಿದ ಕೆಲಸವು ಪ್ರಮಾಣದಲ್ಲಿ ಮಿತವಾಗಿರುವಂತೆ, ವಿದ್ಯಾರ್ಥಿಗಳಿಗೆ **ಮಾಡಲು ಸುಗಮವಾಗಿರಬೇಕು.** ಅನ್ಯರ ಸಹಾಯವನ್ನು ಅಪೇಕ್ಷಿಸದೆ ತಾವಾಗಿಯೇ ಅವರು ಅದನ್ನು ಮಾಡುವಂತಿರಬೇಕು.

ತಾವು ಕೊಡುವ ಗೃಹಪಾಠದ ಬಗ್ಗೆ ಶಿಕ್ಷಕರು ಮೊದಲೇ ಯೋಚಿಸಿಕೊಂಡಿರಬೇಕು. ಉಳಿದ ಶಿಕ್ಷಕರೊಡನೆ ವಿಚಾರಿಸಿಕೊಂಡು ಬೇರೆ ಬೇರೆ ವಿಷಯಗಳಿಗೆ ವಾರದ ವೇಳಾಪತ್ರಿಕೆಯಲ್ಲಿ ಸರತಿಯನ್ನು ಗೊತ್ತುಪಡಿಸಬೇಕು. ಎಲ್ಲ ವಿಷಯಗಳ ಶಿಕ್ಷಕರು ಏಕಕಾಲಕ್ಕೆ ಗೃಹಪಾಠಗಳನ್ನು ಕೊಡುವದು ಸರಿಯಾಗದು. ಒಪ್ಪಿಸಿದ ಕೆಲಸವನ್ನು ವಿದ್ಯಾರ್ಥಿಗಳು ಸರಿಯಾಗಿ ಮಾಡುವರೆಂಬ ಬಗ್ಗೆ ಶಿಕ್ಷಕರು ದಕ್ಷತೆ ವಹಿಸಬೇಕು. ಇಲ್ಲವಾದರೆ ಇವುಗಳ ಮಹತಿಯೇ ಇಲ್ಲದಂತಾಗುವದು.

ಕೃತಿಪ್ರಧಾನವಾದ ಮೂಲಶಿಕ್ಷಣದಲ್ಲಿ ಮೂಲೋದ್ಯೋಗವು ಸಾಮೂ

ಹಿಕವಾಗಿಯೇ ಸಾಗುವದು. ಗೃಹಪಾಠಕ್ಕೆ ಇದರಲ್ಲಿ ಹೆಚ್ಚಾಗಿ ಸ್ಥಾನವಿಲ್ಲ. ಉಳಿದ ವಿಷಯಗಳಲ್ಲಿ ಗೃಹಪಾಠವು ಮೇಲಿನ ಸಂಗತಿಗಳನ್ನೇ ಅನುಸರಿಸ ಬಹುದು.

## ಪರಿಚ್ಛೇದ ೧೮

### ಶಿಸ್ತು–ಸಂಘಟನೆ

ಎಂತಹ ಅಲ್ಪಕೆಲಸವೇ ಆಗಲಿ, ಅದನ್ನು ಸುಗಮವಾಗಿ ಸಾಗಿಸಲು, ಇಲ್ಲವೆ ಸರಿಯಾಗಿ ಮುಗಿಸಲು ಕೆಲಸಮಾಡುವವರಲ್ಲಿ ಒಂದು ಬಗೆಯ ಶಿಸ್ತು ಹಾಗೂ ಸಂಘಟನೆಯು ಅವಶ್ಯವಾದುದು. **ಸರಿಯಾದ ಕೆಲಸವನ್ನು ಸರಿ ಯಾದ ರೀತಿಯಲ್ಲಿ ಸರಿಯಾದ ಸಮಯಕ್ಕೆ ಸರಿಯಾದ ಸ್ಥಳದಲ್ಲಿ ಮಾಡುವದೇ 'ಶಿಸ್ತು'.** ನಿತ್ಯವ್ಯವಸಾಯದಿಂದ ಈ 'ರೀತಿ'ಯೇ ಮುಂದೆ 'ರೂಢಿ'ಯಾಗಿ ಬಿಡುವದು. ಸ್ವಾಭಾವಿಕ ಕ್ರಿಯೆಯಂತೆ ಪ್ರಯತ್ನವಿಲ್ಲದೆ ಆ ಕೆಲಸವು ತಾನಾಗಿಯೇ ಒಂದು ರೀತಿಗೆ ಹೊಂದಿಕೊಳ್ಳುವದು. **ಕಡಿಮೆ ಪರಿಶ್ರಮದಿಂದ ಹೆಚ್ಚಿನ ಪ್ರತಿಫಲವನ್ನು ಪಡೆಯುವದೇ ಒಳ್ಳೇ 'ಪದ್ಧತಿಯು' ಉದ್ದೇಶವೆಂದು** ಹೇಳಬಹುದು. ಶಿಸ್ತು–ಸಂಘಟನೆಗಳ ಉದ್ದೇಶವೂ ಇದಕ್ಕಿಂತ ಬೇರೆಯಾಗಿಲ್ಲ.

**ಶಿಕ್ಷಣದ ಕಾರ್ಯದಲ್ಲಿ :—** ಶಾಲೆಯ ಶಿಕ್ಷಣವು ಸುಗಮವಾಗಲು ಹಾಗೂ ಸಫಲವಾಗಲು ಶಿಸ್ತು–ಸಂಘಟನೆಗಳು ಅವಶ್ಯವಾದವುಗಳು. ಶಾಲೆ ಯಲ್ಲಿ ಮಕ್ಕಳ ಜೀವನವು ಸುವ್ಯವಸ್ಥಿತವಾಗಿರಬೇಕು. ಹಿತಕರವಾದ ನಿರ್ಬಂಧ ಗಳಿಗೆ ಆಧೀನವಾಗಿರಬೇಕು. ಸಾಮಾಜಿಕ ಜೀವನದ ರೀತಿನೀತಿಗಳನ್ನು ಶಾಲೆಯ ಶಿಸ್ತಿನಿಂದಲೆ ಚಿಕ್ಕಮಕ್ಕಳು ಕಲಿತುಕೊಳ್ಳುವರು. ಸಹಕಾರ, ಸಹಾನು ಭೂತಿ, ಆತ್ಮನಿಗ್ರಹ ಮೊದಲಾದ ಸಾಂಘಿಕ ಜೀವನದ ಸದ್ಗುಣಗಳನ್ನು ಶಾಲೆಯ ಜೀವನವೇ ಚಿಕ್ಕಮಕ್ಕಳಲ್ಲಿ ಮೊದಲಿನಿಂದಲೂ ತಂದುಕೊಡಬೇಕು.

ಪಾಠದ ಯಶಸ್ಸು ವರ್ಗದಲ್ಲಿಯ ಶಿಸ್ತನ್ನು ಹೆಚ್ಚಾಗಿ ಅವಲಂಬಿಸಿರುವದು. ವರ್ಗದಲ್ಲಿ ಶಿಸ್ತು ಇಲ್ಲದಾದರೆ, ಎಷ್ಟೊಂದು ಪರಿಶ್ರಮದಿಂದ ಸಿದ್ಧಗೊಳಿಸಿದ ಪಾಠವೂ ನಿರರ್ಥಕವಾಗುವದು. ಶಿಕ್ಷಕನಿಗೆ ಇದರಿಂದ ನಿರಾಶೆ, ವಿದ್ಯಾರ್ಥಿಗಳಿಗೆ ಹಾನಿ. ಹೊಸದಾಗಿ ಶಿಕ್ಷಕವೃತ್ತಿಯನ್ನು ಕೈಕೊಂಡ ನೂತನ ಶಿಕ್ಷಕನಿಗೆ ವರ್ಗದಲ್ಲಿ ಈ ಶಿಸ್ತನ್ನು ತರುವದೂ, ಉಳಿಸಿಕೊಳ್ಳುವದೂ ಒಂದು ದೊಡ್ಡ ಸಮಸ್ಯೆಯಾಗಿ ತೋರುವದು. ಇದರಲ್ಲಿಯೇ ಆತನು ತನ್ನ ಸತ್ವ ಪರೀಕ್ಷೆಯನ್ನು ಕಾಣುವನು. ನಿಜವಾಗಿ ನೋಡಿದರೆ 'ಶಿಸ್ತು' ಶಿಕ್ಷಣ ಕಾರ್ಯವು ಸುಗಮವಾಗಿ ಸಾಗಲು ಒಂದು 'ಸಾಧನ'ವು ಮಾತ್ರ. ಆದರೆ ಈ ನೂತನ ಶಿಕ್ಷಕರಿಗೆ ವರ್ಗದಲ್ಲಿ ಶಿಸ್ತು ಕಾಯ್ದುಕೊಳ್ಳುವದೇ ಒಂದು ಧ್ಯೇಯವಾಗಿ ಬಿಡುವದು. ಮುಕ್ಕಾಲುಪಾಲು ಅವರ ಶ್ರಮವೂ ಹಾಗೂ ಸಮಯವೂ ಇದಕ್ಕಾಗಿಯೇ ವಿನಿಯೋಗವಾಗುವದು.

ಶಿಸ್ತು ಶಿಕ್ಷಕನ ವ್ಯಕ್ತಿತ್ವವನ್ನು ಅವಲಂಬಿಸಿರುವದೆಂದು ಹೇಳುವರು. ಆದರೆ ಈ ವ್ಯಕ್ತಿತ್ವವನ್ನು ಅಳೆಯುವದೂ ತಿಳಿಯುವದೂ ಸುಲಭವಲ್ಲ. **ಶಿಕ್ಷಕನ ವ್ಯಕ್ತಿತ್ವವು ಏತರಲ್ಲಿದೆ?** ಆಜಾನುಬಾಹುವಾದ ಭವ್ಯಾಕೃತಿಯೆ? ಸುಸ್ವರೂಪವೇ? ಸುಮಧುರವಾದ ಸ್ವರವೆ? ನಡೆ–ನುಡಿ–ನಟನೆಗಳೆ? ವೇಷ ಭೂಷಣವೆ? ವಿಷಯಜ್ಞಾನವೆ? ಆತ್ಮವಿಶ್ವಾಸವೆ? ಇಲ್ಲವೆ ಸದ್ಗುಣಗಳೆ? ಶಿಕ್ಷಕನ ವ್ಯಕ್ತಿತ್ವವು ಇವುಗಳನ್ನೆಲ್ಲ ಒಳಗೊಂಡಿರುವದು. ಇಲ್ಲವೆ ಇವುಗಳನ್ನು ಮೀರಿನಿಂತ ಒಂದು **ನೈತಿಕ, ಆತ್ಮಿಕ ವರ್ಚಸ್ಸವಾಗಿರಬಹುದು.** ಚಾಣಾಕ್ಷರಾದ ಬಾಲಕರು ಶಿಕ್ಷಕನ ವ್ಯಕ್ತಿತ್ವವನ್ನು ಕೂಡಲೇ ಕಂಡುಹಿಡಿಯುವರು. ಕಣ್ಣಿನ ಓಜಸ್ವಿತೆಯಲ್ಲಿಯೇ ಅದನ್ನು ಅವರು ಗುರುತಿಸುವರು. **ಬಾಲಕರ ಒಕೆಗಲ್ಲಿಗೆ ಶಿಕ್ಷಕನ ಮೊದಲುಪಾಠ, ಮೊದಲುನೋಟ ಸರಿಯಾಗಿ ಸಾಧಿಸಿದರೆ–ಆತನ ಮುಂದಿನ ಹಾದಿಯು ಸುಗಮವಾಗಿ ಸಾಗುವದು.** ಇಲ್ಲವಾದರೆ, 'ಗದ್ದಲ ಮಾಡಬೇಡಿರಿ', 'ಲಕ್ಷಕೊಡಿರಿ' ಎಂದು ಕೂಗಿಕೊಳ್ಳುವದರಲ್ಲಿ ಹಾಗೂ ಬೆತ್ತಬೆದರಿಕೆಗಳ ಆಸರದಲ್ಲಿ ಆತನು ತನ್ನ ಶಿಕ್ಷಣ ಕಾರ್ಯವನ್ನು ಸಾಗಿಸಬೇಕಾಗುವದು.

ಶಿಸ್ತು—ಸಂಘಟನೆಗಳನ್ನು ಸ್ಥಾಪಿಸಲು ಶಾಲೆಯ ಕ್ಷೇತ್ರದಲ್ಲಿ ಅನೇಕ ಶಕ್ತಿಗಳಿರುವವು. ಅವುಗಳಲ್ಲಿ ಶಿಕ್ಷಕನ ಅಧಿಕಾರವೇ ಇದುವರೆಗೆ ಹಿರಿದಾಗಿರುವದು. ಉಜ್ವಲವಾದ ನೈತಿಕ ವರ್ಚಸ್ಸು ಇದಕ್ಕಿಂತಲೂ ಹೆಚ್ಚಿನದಾಗಿದೆ. ಈ ಬಗೆಯ ವರ್ಚಸ್ಸುಳ್ಳ ಶಿಕ್ಷಕರೂ ಭಾಗ್ಯಶಾಲಿಗಳು. ಅವರಿಂದ ಶಿಕ್ಷಣವನ್ನು ಹೊಂದುವ ವಿದ್ಯಾರ್ಥಿಗಳೂ ಧನ್ಯರು. ನಿಯಮಗಳ ಪ್ರತಿಬಂಧವು ಎಷ್ಟಿದ್ದರೂ ಶಿಕ್ಷಿಸುವ ಅಧಿಕಾರವನ್ನು ಎಲ್ಲ ಶಿಕ್ಷಕರೂ ಹೆಚ್ಚುಕಡಿಮೆಯಾಗಿ ಉಪಯೋಗಿಸುವರು. ಆದರೆ **ಶಿಕ್ಷೆಯು ಯಾವಾಗಲೂ ಶಿಕ್ಷಕನ ಕೊನೆಯ ಶಸ್ತ್ರವಾಗಿರಬೇಕು.** ಶಿಸ್ತನ್ನು ಸ್ಥಾಪಿಸಲು ಇಲ್ಲವೆ ಉಳಿಸಲು ಬೇರೆ ಸೌಮ್ಯವಾದ, ಶಾಸ್ತ್ರಸಮ್ಮತವಾದ ಹಾದಿಗಳಿವೆ. ಚಿಕ್ಕಮಕ್ಕಳ ಮನೋವೃತ್ತಿಯ ಜ್ಞಾನವು ಶಿಕ್ಷಕರಿಗಿರಬೇಕು. ಅವರಲ್ಲಿ ತುಂಬಿ ತುಳುಕುವ ಚೈತನ್ಯಕ್ಕೆ ಏನಾದರೊಂದು ಹಿತಕರವಾದ ಚಟುವಟಿಕೆಯನ್ನು ಒದಗಿಸಬೇಕು. ಅವರ **ಚಂಚಲ ಮನೋವೃತ್ತಿಗೆ ಕಾರ್ಯತತ್ಪರತೆಯೆ ಸರಿಯಾದ ಉಪಾಯ.** ಉದ್ಯೋಗವಿಲ್ಲದ ಬಡಿಗನು ಏನನ್ನೊ ಮಾಡಿದನೆಂದು ಹೇಳುವಂತೆ, ಉದ್ಯಮಪ್ರಿಯರಾದ ಬಾಲಕರ ಮನಸ್ಸೂ ಕೈಗಳೂ ಏನಾದರೊಂದು ಚಟುವಟಿಕೆಗಾಗಿ ಚಡಪಡಿಸುತ್ತಿರುವವು. ಚಟುವಟಿಕೆಯಲ್ಲಿ ತೊಡಗಿದ ಬಾಲಕರಿಗೆ ಆಸ್ಥೆ, ಅವಧಾನಗಳ ಜೊತೆಗೆ ಶಿಸ್ತು—ಸಂಘಟನೆಗಳು ತಾವಾಗಿಯೇ ಸ್ವಯಂಪ್ರೇರಿತವಾಗಿ ಬರುವವು.

ಚಿಕ್ಕ ಮಕ್ಕಳಿಗೆ ವಿಧಿಸುವ ಆಜ್ಞೆಗಳು ಕಡಿಮೆಯಾಗಿರಬೇಕು. ನೆರವೇರಿಸಲು ಸುಲಭವಾಗಿರಬೇಕು. 'ವಿಧಿ'ರೂಪವಾಗಿರಬೇಕು. 'ಹೀಗೆ ಮಾಡಬೇಡ'ವೆಂದು ಹೇಳುವದಕ್ಕಿಂತಲೂ, 'ಹೀಗೆ ಮಾಡು' ಎಂದು ಹೇಳುವದು ಹೆಚ್ಚು ಹಿತಕರವು. **ತಿಳಿದು ನೋಡಿ ಕೆಲಸಮಾಡಬೇಕೆನ್ನುವ ಒಂದು ರೂಢಿಯು ಅವರಲ್ಲಿ ನೆಲಸಿದರೆ ಸಾಕು.** 'ಇದು ಮಾಡು', 'ಅದು ಬೇಡ'ವೆನ್ನುವ ನೂರೆಂಟು ನಿಯಮಗಳಿಗಿಂತಲೂ ಈ ರೂಢಿಯು ಹೆಚ್ಚು ಪ್ರಭಾವಶಾಲಿಯಾದುದು, ಶ್ರೇಯಸ್ಕರವಾದುದು. 'ತಾನು ಯಾವಾಗಲೂ ಒಳ್ಳೇದನ್ನು ಮಾಡುವವನು'— ಎನ್ನುವ ಸರಿಯಾದ ಸ್ವಾತ್ಮಭಾವನೆಯು

ಮಕ್ಕಳಲ್ಲಿ ಬೆಳೆದುಬರಬೇಕು. ಅವರ ವಿವೇಕವು ಜಾಗೃತವಾಗಿರಬೇಕು. ವಿಚಾರಪೂರ್ವಕವಾಗಿ, ವಿವೇಕದ ಒಪ್ಪಿಗೆಯುನ್ನು ಪಡೆದು ಕೆಲಸ ಮಾಡುವ ರೂಢಿಯು ಬೆಳೆಯುವ ಬಾಲಕರಲ್ಲಿ ಒಮ್ಮೆ ನೆಲೆಸಿದರೆ ತೀರಿತು, ಮುಂದೆ ನಿಯಮಗಳ ಅವಶ್ಯಕತೆಯೆ ಇಲ್ಲದಂತಾಗುವದು. ನಿರ್ಜೀವ ಪ್ರತಿಮೆಗಳಂತೆ ಬಾಲಕರು ಸದ್ದು ಮಾಡದೆ ಕೈಕಟ್ಟಿಕೊಂಡು ಕೂಡುವದಕ್ಕೆ 'ವರ್ಗದ ಶಿಸ್ತು' ಎಂದು ಕರೆಯುವದು ತಪ್ಪು ತಿಳುವಳಿಕೆ. ವಿವೇಕದ ಒಪ್ಪಿಗೆಯುಳ್ಳ ತಿಳುವಳಿಕೆಯ ಕೃತಿಯಲ್ಲಿ ಶಿಸ್ತು ತಾನಾಗಿ ತೋರಿಬರುವದು.

ಶಾಲೆಯಲ್ಲಿ ಈ ಬಗೆಯ ಶಿಸ್ತನ್ನು ಸ್ಥಾಪಿಸಲು ಸಹಾಯಕವಾದ ಕೆಲವೊಂದು ಸಂಗತಿಗಳಿವೆ. ಅವುಗಳಲ್ಲಿ:—(೧) ಶಾಲೆಯ ಬಾಹ್ಯ ಪರಿಸ್ಥಿತಿಯು ಶಿಸ್ತಿಗೆ ಅನುಕೂಲವಾಗಿರಬೇಕು. ನಾಕಷ್ಟು ಹವೆ ಬೆಳಕುಗಳ ಪುರವಠೆ ಇರಬೇಕು. ಇವಿಲ್ಲದ ಶಾಲೆಗಳಲ್ಲಿ ಚಿಕ್ಕಮಕ್ಕಳ ಉಲ್ಲಾಸಪ್ರವೃತ್ತಿಯು ಉಳಿಯಲಾರದು. (೨) ಶಾಲೆಯ ನಿಯಮ-ನಿರ್ಬಂಧಗಳು ವಿದ್ಯಾರ್ಥಿಗಳಿಗೆ ತಿಳಿಯುವಂತಿರಬೇಕು. ಅವರ ಸಲಹೆ-ಸಮ್ಮತಿಗಳಿಂದಲೆ ಈ ನಿಯಮಗಳನ್ನು ರಚಿಸಿರಬೇಕು. ಇದರಿಂದ ತಾವು ಹಾಕಿಕೊಂಡ ನಿಯಮ ನಿರ್ಬಂಧಗಳನ್ನು ಪಾಲಿಸುವದು ತಮ್ಮ ಕರ್ತವ್ಯವೆಂತಲೂ, ಅವುಗಳನ್ನು ಮೀರಿ ನಡೆಯುವದು ತಪ್ಪೆಂತಲೂ ಅವರಿಗೆ ಭಾವನೆಯುಂಟಾಗುವದು. ಹೊರಗಿನ ಭೀತಿಯಿಂದ ಇವುಗಳನ್ನು ಪಾಲಿಸದೆ, ಒಳಗಿನ ಪ್ರೀತಿ-ಭಕ್ತಿಗಳಿಂದ ಇವುಗಳನ್ನು ಮನ್ನಿಸುವರು. ಈ ಬಗೆಯ ಶಿಸ್ತಿನಲ್ಲಿ ಒತ್ತಾಯವಿಲ್ಲ, ಸ್ವಯಂಪ್ರೇರಣೆಯಿದೆ. ಆಧುನಿಕ ಶಿಕ್ಷಣವು ಈ ಬಗೆಯ ಶಿಸ್ತನ್ನೇ ಯಾವಾಗಲೂ ಅಪೇಕ್ಷಿಸುವದು. (೩) ಶಾಲೆಯ ಅವಧಿಯು ಆಟ ಅಭ್ಯಾಸಗಳಲ್ಲಿ ಸರಿಯಾಗಿ ಹಂಚಿರಬೇಕು. ಮಕ್ಕಳ ಚಂಚಲವಾದ ಮನೋವೃತ್ತಿಗೆ ಅವರು ಮಾಡುವ ಕಾರ್ಯವು ಆಗಾಗ್ಗೆ ಬದಲಿಸುವದು ಅವಶ್ಯವಾಗಿದೆ. ನಡುನಡುವೆ ಅವರಿಗೆ ವಿಶ್ರಾಂತಿಯನ್ನು ಕೊಡಬೇಕು. (೪) **ಶಿಸ್ತಿನ ಪರಿಪಾಲನೆಗೆ ವಿದ್ಯಾರ್ಥಿಗಳ ಸಹಕಾರವನ್ನು ದೊರಕಿಸಬೇಕು.** ಶಾಲೆಯ ಪ್ರಪಂಚದಲ್ಲಿ ಅವರಿಗೆ ಒಂದು ಬಗೆಯ 'ಸ್ವರಾಜ್ಯ' ವಿರಬೇಕು. ಶಿಕ್ಷಕರ ಮಾರ್ಗದರ್ಶಿತ್ವದಲ್ಲಿ ಶಿಸ್ತಿನ

ಹೊಣೆಗಾರಿಕೆಯನ್ನು ವಿದ್ಯಾರ್ಥಿಗಳ ಮೇಲೆ ಹೊರಿಸುವ ಪ್ರಯೋಗವು ಯಶಸ್ವಿಯಾಗಿದೆ. ಈ ಬಗೆಯ ಶಿಸ್ತು ಅವರಲ್ಲಿ ಆತ್ಮಗತವಾಗುವದು, ಸ್ಥಿರವಾಗಿ ನೆಲೆಸುವದು. (ಜ) ಶಾಲೆಯ ಉತ್ತಮವಾದ ಸಂಪ್ರದಾಯಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ಅಭಿಮಾನವಿರಬೇಕು. ಆ ಸಂಪ್ರದಾಯಗಳ ಸಂರಕ್ಷಣೆಯಲ್ಲಿ ತತ್ಪರರಾಗುವಂತೆ ಸದಾ ಅವರನ್ನು ಪ್ರೇರೇಪಿಸಬೇಕು. ಶಿಸ್ತು ಭಂಗದ ಸಂದರ್ಭದಲ್ಲಿ ಸರಿಯಾದ ಶಿಕ್ಷೆಯನ್ನು ಬಾಲಕರ ಸಮ್ಮತಿಯಿಂದಲೇ ಕೊಡಬೇಕು. ಇದಕ್ಕಾಗಿ **ವಿದ್ಯಾರ್ಥಿಗಳದೇ ಒಂದು ನ್ಯಾಯಸಭೆಯನ್ನು** ಸ್ಥಾಪಿಸಬೇಕು.

**ಶಿಕ್ಷೆ ಹಾಗೂ ಪಾರಿತೋಷಿಕಗಳು:—** ಹಿಂದಿನ ಶಿಕ್ಷಣದಲ್ಲಿ, ಶಿಕ್ಷಕನು ವರ್ಗದ ಅನಭಿಷಿಕ್ತ ರಾಜನು. ವಿದ್ಯಾರ್ಥಿಗಳಮೇಲೆ ಆತನದು ಸರ್ವತೋಮುಖಿಯಾದ ಪ್ರಭುತ್ವವಿತ್ತು. ಬಾಲಕರನ್ನು ದಂಡಿಸುವ ಅಧಿಕಾರವು ಸಾಂಪ್ರದಾಯಿಕವಾಗಿ ಆತನಲ್ಲಿ ಹೇಗೋ ನೆಲಿಸಿಬಿಟ್ಟಿದೆ. ಇದಕ್ಕೆ ಹಿಂದಿನ ಸದೋಷವಾದ ಮಾನಸಶಾಸ್ತ್ರವೂ ಒಂದು ಕಾರಣವೆನ್ನಬಹುದು. 'ಮಕ್ಕಳ ಮನೋವೃತ್ತಿಗಳೆಲ್ಲವೂ ಮೊದಲಿನಿಂದಲೂ ಕೀಳು; ಅವರ ಆಶೆ ಆಕಾಂಕ್ಷೆಗಳೆಲ್ಲವೂ ಅನಪೇಕ್ಷಿತವಾದವುಗಳು. ಅವುಗಳನ್ನೆಲ್ಲ ಭೀತಿ ಬಲುಮೆಗಳಿಂದ ಬಗ್ಗು ಬಡಿಯಬೇಕು'—ಎನ್ನುವದು ಹಿಂದಿನ ಹಿರಿಯರ ತಪ್ಪುತಿಳುವಳಿಕೆ. ಆದರೆ **ಮಗುವಿನ ಪ್ರವೃತ್ತಿಗಳೆಲ್ಲ ಮೂಲತಃ ಕೀಳಾಗಿಲ್ಲ.** ಈ ಸಹಜ ಪ್ರವೃತ್ತಿಗಳಲ್ಲಿ ಕೆಲವು ಸಾಮಾಜಿಕ ಜೀವನಕ್ಕೆ ವಿರೋಧಿಯಾಗಿರಬಹುದು. ಆದರೆ ಇವುಗಳಿಂದಲೇ ಬೆಳೆಯುವ ಮಗುವಿನ ಪೂರ್ಣವಿಕಾಸವಾಗುವದು. ಹೂವು ಹೀಚಾಗಿ, ಕಾಯಾಗಿ, ಹಣ್ಣಾಗಬೇಕು. **ಮಗುವು ಮಗುವಾಗಿ, ಬಾಲಕನು ಬಾಲಕನಾಗಿ, ನಡೆದು ನುಡಿದು ಬೆಳೆಯಬೇಕು.** ಈ ಸಹಜ ಪ್ರವೃತ್ತಿಗಳನ್ನು ಹಿಡಿದುಕೊಂಡೇ ಆತನ ಶಿಕ್ಷಣವು ಸಾಗಬೇಕು. ಇವೇ ಶಿಕ್ಷಣದ ಮೂಲಧನಗಳು. ಇವುಗಳನ್ನು ಹತ್ತಿಕ್ಕಬಾರದು. ಹೆದರಿಕೆಯಿಂದ ಹತ್ತಿಕ್ಕಿದಂತೆ ತೋರಿದರೂ, ಹುದುಗಿಕೊಂಡ ಈ ಪ್ರವೃತ್ತಿಗಳು ಬೇರೊಂದು ಹಾನಿಕಾರಕವಾದ ರೀತಿಯಲ್ಲಿ ಹೊರಗೆ ಬರುವವು. ಮಗುವಿನ ಬಗ್ಗೆ ಹಿಂದಿನ

ಈ ತಪ್ಪುತಿಳುವಳಿಕೆಯು ದೂರಾದಂತೆ ಶಿಕ್ಷಕನ ಕೈಯಿಂದ ಆತನ ಅಧಿಕಾರ ಚಿಹ್ನವಾದ ಬೆತ್ತವೂ ದೂರಾಗಬೇಕು. ಶಿಸ್ತು ಶಿಕ್ಷಣಗಳಬಗ್ಗೆ ಆತನ ದೃಷ್ಟಿಯು ಬದಲಿಸಬೇಕು. ಹೃದಯ ಪಲ್ಲಟವಾಗಬೇಕು. ಶಿಸ್ತುಪಾಲನೆಯಲ್ಲಿ ಹಿಂದಿನ **ಭೀತಿ ಬಲುಮೆಗಳ ಬದಲು ಪ್ರೀತಿ ಒಲುಮೆಗಳು** ಆತನಿಗೆ ಸಾಧನ ವಾಗಬೇಕು. ಮಗುವಿನ ಅನಪೇಕ್ಷಿತವಾದ ಸಹಜ ಪ್ರವೃತ್ತಿಗಳನ್ನು ತನ್ನ ಪ್ರೇಮದ ರಾಸಾಯನದಿಂದ ಪರಿಶುದ್ಧಗೊಳಿಸಬೇಕು. ವಿಹಿತವಾದ ಚಟು ವಟಿಕೆಗಳಿಂದ ಸರಿಯಾದ ಹಾದಿಗೆ ಹಚ್ಚಬೇಕು.

ಶಿಸ್ತುಪಾಲನೆಯಲ್ಲಿ ಅನಿವಾರ್ಯವಾದ ಶಿಕ್ಷೆಯು ಶಿಕ್ಷಕನ ಕೊನೆಯ ಶಸ್ತ್ರವಾಗಿದೆ. ಈ ಬಗೆಯ ಶಿಕ್ಷೆಯ ಉದ್ದೇಶವು ಎರಡು ಬಗೆಯದಾಗಿದೆ. ಅಪರಾಧಿಯನ್ನು ಅಪರಾಧಮಾಡುವ ಪ್ರವೃತ್ತಿಯಿಂದ ಬಿಡಿಸುವದು, ಆತನ ಮನೋವೃತ್ತಿಯನ್ನು ತಿದ್ದುವಿಕೆಯಿಂದ ಉದಾತ್ತಗೊಳಿಸುವದು, ಇವೆರಡರಲ್ಲಿ ಮೊದಲನೆಯದಾಗಿದೆ. ಆತನಿಗೆ ವ್ಯಥೆಯನ್ನುಂಟುಮಾಡಿ, ಇಲ್ಲವೆ ಒಂದು ಬಗೆಯ ಹಾನಿಯನ್ನುಂಟುಮಾಡಿ ತಪ್ಪು ಮಾಡಲು ಆತನು ಹೆದರುವಂತೆ ಮಾಡುವದು ಎರಡನೆಯದಾಗಿದೆ. ಇವುಗಳಲ್ಲಿ ಮೊದಲನೆಯ ರೀತಿಯೇ ಹೆಚ್ಚು ಹಿತಕಾರಿಯಾಗಿರುವದು.

ಈ ಬಗೆಯ ಶಿಕ್ಷೆಯನ್ನು ವಿಧಿಸುವಾಗಲೂ ಶಿಕ್ಷಕರು ಕೆಲವು ಸಂಗತಿ ಗಳನ್ನು ನೆನಪಿನಲ್ಲಿಡಬೇಕು :— **ಕೊಡುವ ಶಿಕ್ಷೆಯನ್ನು ವಿಳಂಬವಾಗ ದಂತೆ ಕೂಡಲೆ ಕೊಡಬೇಕು.** ಅದು **ಅಪರಾಧಕ್ಕೆ ಹವಣಾಗಿರಬೇಕು.** ಸಿಟ್ಟಿನ ಉದ್ವೇಗದಲ್ಲಿ ಶಿಕ್ಷಕರು ಈ ನಿಯಮವನ್ನು ಅನೇಕಸಲ ಮೀರುವ ದುಂಟು. ಶಿಕ್ಷೆಯು ಮಾಡಿದ ಅಪರಾಧಕ್ಕಾಗಿ ಇರುವದಲ್ಲದೆ, ಅಪರಾಧಿಯ ಮೇಲಿನ ಹಗೆತನಕ್ಕಾಗಿ ಅಲ್ಲವೆಂಬುದನ್ನು ಇಂಥ ಶಿಕ್ಷಕರು ನೆನಪಿನಲ್ಲಿಡಬೇಕು. ಅನುಭವಿಸುವ ಶಿಕ್ಷೆಯಿಂದ ಅಪರಾಧಿಗೆ ತನಗೆ ಅನ್ಯಾಯವಾದಂತೆ ಭಾವನೆ ಯಾಗಬಾರದು. ಶಿಕ್ಷೆ ವಿಧಿಸುವ ಮೊದಲು, ಅಪರಾಧದ ಎಲ್ಲ ವಿವರಗಳನ್ನು ಸೂಕ್ಷ್ಮವಾಗಿ ಶಿಕ್ಷಕನು ತಿಳಿದುಕೊಳ್ಳಬೇಕು. ಅಪರಾಧವು ಬುದ್ಧಿಪೂರ್ವಕ ವಾಗಿ ಆಗಿರುವದೇ ? ಕೈ ತಪ್ಪಿ ನಡೆದ ಪ್ರಮಾದವೆ ? ಎರಡನೆಯವರ ಪ್ರೇರಣೆ

ಯಿಂದ ಸಂಭವಿಸಿರುವದೆ? ನಡೆದ ಅಪರಾಧದಲ್ಲಿ ಅಪರಾಧಿಯ ಸ್ವಂತ ತಪ್ಪು ಯಾವದು? ಎಷ್ಟು? ಎಂಬುವ ಸಂಗತಿಗಳನ್ನು ಶಿಕ್ಷಕನು ಮೊದಲು ಸೂಕ್ಷ್ಮವಾಗಿ ತಿಳಿದುಕೊಳ್ಳಬೇಕು. ಕೈತಪ್ಪಿ ನಡೆದ ಪ್ರಮಾದಗಳಲ್ಲಿ ಸಹಾನುಭೂತಿಯ ಒಂದೆರಡು ಉಪದೇಶದ ಮಾತುಗಳು ಶಿಕ್ಷೆಗಿಂತಲೂ ಹೆಚ್ಚು ಶ್ರೇಯಸ್ಕರವಾದವುಗಳು. ಮನೆಯಲ್ಲಿಯ ಅನನುಕೂಲತೆಗಾಗಿ **ತಡಮಾಡುವ ವಿದ್ಯಾರ್ಥಿಯನ್ನು** ಶಿಕ್ಷಿಸುವದಕ್ಕಿಂತಲೂ ಆತನ ತಾಯಿತಂದೆಗಳನ್ನು ಕಂಡು ಆತನಿಗೆ ಅನುಕೂಲಮಾಡಲು ತಿಳಿಸಿ ಹೇಳಬೇಕು. ಅಕಲ್ಪಿತವಾಗಿ **ಎದುರುತ್ತರ ಕೊಟ್ಟ ವಿದ್ಯಾರ್ಥಿ**ಯನ್ನು ಏಕಾಂತದಲ್ಲಿ ಕಂಡು, ಅಂದು ಆತನ ಮನಸ್ಸನ್ನು ಕೊರೆಯುತ್ತಿರುವ ಉದ್ವೇಗದ ಕಾರಣಗಳನ್ನು ಶೋಧಿಸಬೇಕು. ಹೀಗೆ ಪ್ರತಿಯೊಂದು **ಅಪರಾಧದ ಮೂಲವನ್ನು ಶೋಧಿಸಿ** ಅಪರಾಧದ ಕಾರಣಗಳನ್ನು ತೆಗೆದು ಹಾಕಲು ಶಿಕ್ಷಕರು ಯತ್ನಿಸಬೇಕು.

ಈ ವ್ಯಕ್ತಿಗತವಾದ ಅಪರಾಧಗಳಲ್ಲದೆ, ವರ್ಗದಲ್ಲಿ **ಗೊಂದಲವನ್ನು ಹೂಡುವ ಪ್ರವೃತ್ತಿಯು** ವಿದ್ಯಾರ್ಥಿಗಳಲ್ಲಿ ಸಾಮಾನ್ಯವಾಗಿರುವದು. ಶಿಕ್ಷಕನು ತನ್ನ ವರ್ಚಸ್ಸಿನಿಂದ, ಸ್ವಕೀಯವಾದ ಗುಣಗಳಿಂದ ಇದನ್ನು ತಪ್ಪಿಸಬಹುದು. ಈ ಗೊಂದಲದ ಪ್ರವೃತ್ತಿಗೆ ಹಲವು ಕಾರಣಗಳಿರುವವು. ಶಿಕ್ಷಕನ ಕಲಿಸುವಿಕೆಯು ನೀರಸವಾಗಿರಬಹುದು. ವಿಷಯವು ಬೇಡಾದದ್ದಿರಬಹುದು. ಮಿತಿಮೀರಿ ಅದು ಬೆಳೆದಿರಬಹುದು. ವರ್ಗದಲ್ಲಿ ಸಾಕಷ್ಟು ಗಾಳಿಯಾಡದೆ ಬಾಲಕರಿಗೆ ತಳಮಳವೆನಿಸುತ್ತಿರಬಹುದು. ಸುಜ್ಞನಾದ ಶಿಕ್ಷಕನು ಇವೇ ಮೊದಲಾದ ಸಂಗತಿಗಳನ್ನು ತಿಳಿದುಕೊಳ್ಳಬೇಕು. ತನಗೆ ಅನುಕೂಲವಾಗುವಂತೆ ತಿದ್ದಿಕೊಳ್ಳಬೇಕು. ತನ್ನ ಆಸ್ಥೆ ಹಾಗೂ ಆನಂದ ವೃತ್ತಿಗಳಿಂದ ಕಲಿಯುವವರಲ್ಲಿಯೂ ಅವೇ ಭಾವನೆಗಳನ್ನು ಹುಟ್ಟಿಸಬೇಕು. ವರ್ಗದ ಬಾಲಕರೆಲ್ಲರೂ ಶಿಕ್ಷಕನ ಕಣ್ಣಿನ ಅಳವಿನಲ್ಲಿರಬೇಕು. **ಶಿಸ್ತು ಕಾಯುವದರಲ್ಲಿ ಕಣ್ಣು ಒಳ್ಳೇ ಪ್ರಭಾವಿಯಾದ ಸಾಧನವಾಗಿದೆ.** ತನ್ನ ಕಣ್ಣಿನ ನಿಯಂತ್ರಣದಿಂದ, ತಿಳಿಯದೆ ನಡೆಯುವ ಚಿಕ್ಕಪುಟ್ಟ ಕಾರ್ಯಗಳಿಗೆ ಆಸ್ಪದವು ದೊರೆಯದಂತೆ ಶಿಕ್ಷಕನು ಯತ್ನಿಸಬೇಕು.

ಕೆಲವು ಮಾನಸಿಕ ದೋಷ ದುರ್ಬಲತೆಗಳಿಂದಲೂ ಬಾಲಕರಿಂದ ತಪ್ಪು ತಡೆಗಳಾಗುವವು. ಇಂಥವುಗಳಿಂದಲೂ ಶಿಕ್ಷಕನಿಗೆ ತೊಂದರೆಯಾಗುವದುಂಟು. ೧) 'ಚಂಚಲತೆ'ಯು ಇವುಗಳಲ್ಲಿ ಒಂದಾಗಿರುವದು. ಆದರೆ **ಚಂಚಲತೆ ಚಟುವಟಿಕೆಯುಲ್ಲವೆಂಬುದನ್ನು ಮರೆಯ್ಕೂಡದು.** ಚಟುವಟಿಕೆ ಇದು ಸ್ವಭಾವಗುಣ; ಚಂಚಲತೆ ಇದು ಸ್ವಭಾವ-ದೋಷ. ಇಂಥ ಬಾಲಕರು ಯಾವದೊಂದು ಕೆಲಸವನ್ನು ಪುರ್ಣವಾಗಿ ಮಾಡುವದಿಲ್ಲ. ಒಂದರಿಂದ ಮತ್ತೊಂದಕ್ಕೆ ಅವರ ಮನಸ್ಸು ಹರಿಯುವದು. ಕೈಯಲ್ಲಿ ಹಿಡಿದದ್ದನ್ನು ಅರ್ಧಕ್ಕೆ ಬಿಟ್ಟುಕೊಟ್ಟು ಮತ್ತೊಂದನ್ನು-ಇಲ್ಲವೆ-ಮುಂದಿನದನ್ನು ಕೈಕೊಳ್ಳುವರು. ಹೊಸದು ಅವರಿಗೆ ಹೆಚ್ಚು ಆಕರ್ಷಕವೆನಿಸುತ್ತಿರಬಹುದು. ಆದರೆ ಯಾವ ಕೆಲಸವಾದರೂ ಪ್ರಾರಂಭದಲ್ಲಿ ಆಕರ್ಷಕವಾಗಿರುವಂತೆ, ಕೊನೆಯು ವರೆಗೂ ಆಕರ್ಷಕವಾಗಿ ಉಳಿಯಲಾರದು. ಚಂಚಲವೃತ್ತಿಯ ಬಾಲಕರು ಇದರಿಂದ ಬೇಸರಗೊಳ್ಳುವರು. ಒಂದನ್ನು ಬಿಟ್ಟು ಮತ್ತೊಂದಕ್ಕಾಗಿ ಹಾತೊರೆಯುವರು. ಇಂಥ ಸಂದರ್ಭದಲ್ಲಿ ಶಿಕ್ಷಕನು ಶಕ್ಯವಿದ್ದಷ್ಟು ಆಕರ್ಷಕವಾದ, ನೂತನವಾದ, ಸಂಗತಿಗಳನ್ನು ಆಗಾಗ್ಗೆ ಪಾಠದಲ್ಲಿ ತರಲು ಯತ್ನಿಸಬೇಕು. ಹಾಗೂ ಚಟುವಟಿಕೆಯ ಪಾಠಗಳಲ್ಲಿರುವಂತೆ ಇಂಥದೊಂದು ಕೆಲಸವನ್ನು ಇದೇ ರೀತಿಯಾಗಿ ಮಾಡಬೇಕೆಂದು ಬಾಲಕರಿಗೆ **ನಿಶ್ಚಿತವಾದ ಕಾರ್ಯಕ್ರಮವನ್ನು ಹಾಕಿಕೊಡಬೇಕು.**

೨) ಇದೇ ಮೇರೆಗೆ **ಚಿಕ್ಕಪುಟ್ಟ ಕಳವುಗಳನ್ನು** ಬಾಲಕರು ಮಾಡುವದುಂಟು. **ಸಹವಾಸ ದೋಷವು** ಇದಕ್ಕೊಂದು ಕಾರಣವಿರಬಹುದು. ಆದರೆ ಸಹಜಪ್ರವೃತ್ತಿಗಳಲ್ಲಿ ಒಂದಾದ **ಸಂಚಯು ಪ್ರವೃತ್ತಿಯೂ** ಇದಕ್ಕೆ ಕಾರಣವಿರಬಹುದು. ಕೆಲವು ಬಾಲಕರಲ್ಲಿ ಈ ಪ್ರವೃತ್ತಿಯು ಪ್ರಬಲವಾಗಿರುವದು. ಕೈಗೆ ಸಿಕ್ಕಿದ್ದನ್ನು ಅವರು ಕೂಡಿಹಾಕುವರು. ಈ ಪ್ರವೃತ್ತಿಗೆ ತಡೆಯಾದರೆ ಇನ್ನೂ ಸ್ವಪರ ಭೇದವಿಲ್ಲದ ಬಾಲಕರಲ್ಲಿ ಅದು ತಪ್ಪುದಾರಿಯನ್ನು ಹಿಡಿದು ಕಳ್ಳತನಕ್ಕೆ ಎಡೆಗೊಡಬಹುದು. ಈ ಪ್ರವೃತ್ತಿಯನ್ನು ಉಜ್ವಲಗೊಳಿಸಲು ಶಾಲೆಯಲ್ಲಿ **ವಸ್ತುಸಂಗ್ರಹಾಲಯುದ ಏರ್ಪಾಡನ್ನು**

ಮಾಡುವದು ಒಂದು ಉಪಾಯವಾಗಿದೆ. ಪೂರನೆಯ ಮಾನಸಿಕ ಕಾರಣವೂ ತುಡುಗಿಗಾಗಿ ಇರಬಹುದು. ನಿಷ್ಠುರರಾದ ತಾಯಿತಂದೆಗಳು ಮಕ್ಕಳ ಸ್ವಾಭಾವಿಕವಾದ ಹಾಗೂ ಅಗತ್ಯವಾದ ಬೇಡಿಕೆಗಳನ್ನು ಪೂರೈಸುವದಿಲ್ಲ. ಇದರಿಂದ ಅತೃಪ್ತವಾದ, ಇಲ್ಲವೇ ಕುತೂಹಲಜನಿತವಾದ ಅವರ ಆಕಾಂಕ್ಷೆಗಳಿಗೆ ತಡೆಯಾಗಿ ಅವುಗಳೆಲ್ಲ ತುಡುಗಿನ ತಪ್ಪು ದಾರಿಯನ್ನು ಹಿಡಿಯಬಹುದು. ತುಡುಗು ಮಾಡುವ ಬಾಲಕರನ್ನು ಶಿಕ್ಷಕನು ಸಹಾನುಭೂತಿಯಿಂದ ನಿರೀಕ್ಷಿಸಿ ಅದರ ಮೂಲ ಕಾರಣವನ್ನು ಶೋಧಿಸಿ ಸರಿಯಾದ ರೀತಿಯಲ್ಲಿ ಅದನ್ನು ತಿದ್ದಬೇಕು.

೩) ಬಾಲಕರು ಆಗಾಗ್ಗೆ **ಸುಳ್ಳು ಹೇಳುವದುಂಟು.** ಶಿಕ್ಷಕರು ಇದರಿಂದ ಕೆರಳಬಾರದು. ಚಿಕ್ಕ ಬಾಲಕರಿಗೆ ಇನ್ನೂ ಸುಳ್ಳು—ಸತ್ಯಗಳ ನಡುವಿನ ಗೆರೆಯು ಮಸಕಾಗಿಯೇ ಇರುವದು. ಬುದ್ಧಿಪೂರ್ವಕವಾಗಿ ಹೇಳುವ ಸುಳ್ಳಿನಲ್ಲಿ ಭಯವೇ ಹೆಚ್ಚಾಗಿ ಹುದುಗಿಕೊಂಡಿರುವದು. ಶಿಕ್ಷೆಯಿಂದ ಪಾರಾಗಲು ಸುಳ್ಳು ಹೇಳುವದು ಅವರಲ್ಲಿ ಒಂದು ರೂಢಿಯಾಗಿರುವದು. ಸುಳ್ಳು ಸತ್ಯಗಳ ನಡುವಿನ ಅಂತರವು ಬಾಲಕರಿಗೆ ಹೊಳೆಯುವಂತೆ ಶಿಕ್ಷಕನು ಯತ್ನಿಸಬೇಕು. ಭಯದ ಕಾರಣವನ್ನು ಹೋಗಲಾಡಿಸಬೇಕು. ಸತ್ಯ ಮಾತಾಡುವದಕ್ಕೆ ಉತ್ತೇಜನ ಪುರಸ್ಕಾರಗಳನ್ನು ಕೊಡಬೇಕು.

೪) ತನಗಿಂತಲೂ ಚಿಕ್ಕವರಾದ ಇಲ್ಲವೆ **ದುರ್ಬಲರಾದ ಸಹಪಾಠಿಗಳನ್ನು ಪೀಡಿಸುವ, ಹಿಂಸಿಸುವ ಪ್ರವೃತ್ತಿಯು** ಕೆಲವು ಬಾಲಕರಲ್ಲಿ ಕಂಡುಬರುವದು. ಇದಕ್ಕೆ ಅವರು ಬೆಳೆದು ಬಂದ ವಾತಾವರಣಜನಿತವಾದ ಹುಂಬತನವೂ ಒಂದು ಕಾರಣವಿರಬಹುದು. ಆದರೆ ಇಂಥ ಬಾಲಕರು ನಿಜವಾಗಿ ಕ್ರೂರರಾಗಿರುವದಿಲ್ಲ. ಅವರಲ್ಲಿ '**ಮುಂದಾಳುವಿನ ಪ್ರವೃತ್ತಿ**'ಯು ಪ್ರಬಲವಾಗಿರುವದು. ತಮ್ಮ ಶಕ್ತಿಯನ್ನು ಪ್ರಕಟಿಸುವ, ಇಲ್ಲವೆ ಅಧಿಕಾರ ನಡೆಸುವ ಒಲವು ಅವರಲ್ಲಿ ಅಧಿಕವಾಗಿರುವದು. ಈ ಒಲವಿಗೆ ಆಸ್ಪದ ವೀಯಬೇಕು. ಆಟಗಳಲ್ಲಿ ಅವರು ಹಿರಿಯುದ್ದರಿಗಳು; ವರ್ಗದಲ್ಲಿ ಹಿರಿ

ವಾಣಿಗಳು. ಹೀಗೆ ಅದಕ್ಕೆ ಹಂ ಕಡಿದುಕೊಟ್ಟರೆ ಪರಪೀಡೆಯಲ್ಲಿ ಸಂತೋಷ ಪಡುವ ಈ ಪ್ರವೃತ್ತಿಯು ಅಳಿದುಹೋಗುವದು.

೫) ಕೆಲವು ಮಕ್ಕಳಲ್ಲಿ ಒಂದು ಬಗೆಯ **ಮುಖಹೀನತೆ,** ಹುದುಗಿ ಕೊಳ್ಳುವ **ಸಂಕೋಚಪ್ರವೃತ್ತಿಯು** ಕಂಡುಬರುವದು. ನಿಜವಾಗಿ ಇದೊಂದು ದೋಷವಲ್ಲ, ಮನೋದೌರ್ಬಲ್ಯವಾಗಿದೆ. ಆದರೆ ಇಂಥ ಪ್ರವೃತ್ತಿ ಯಿಂದ ಆ ಬಾಲಕರ ಶಿಕ್ಷಣಕ್ಕೆ ತಡೆಯುಂಟಾಗುವದು. ಈ ಮುಖಹೀನ ತೆಯು ಹೇಡಿತನವಲ್ಲ; ಬುದ್ಧಿಯ ಕೊರತೆಯಲ್ಲ. ಇದರಲ್ಲಿ ಉಳಿದವರಿ ಗಿಂತ **ತಾನು ಕಡಿಮೆಯೆಂಬ ಹೀನಗಂಡದ ಭಾವನೆ**ಯೊಡನೆ, ಉಳಿದ ವರು ಏನೆನ್ನುವರೋ ಎಂಬ ಭೀತಿಯು ಬೆರೆತುಕೊಂಡಿರುವದು. ಇವೆರಡು ಭಾವನೆಗಳನ್ನೂ ತೆಗೆದು ಹಾಕಬೇಕು. ಮನಸ್ಸನ್ನು ಒಲಿಸಿ ಆತನನ್ನು ಕಾರ್ಯದಲ್ಲಿ ತೊಡಗಿಸಬೇಕು. ಒಮ್ಮೆ ಪಡೆದ ಯಶಸ್ಸಿನಿಂದ ಆತನಲ್ಲಿ ಆತ್ಮ ವಿಶ್ವಾಸವು ಅಂಕುರಿಸುವದು. ಉತ್ತೇಜನ, ಪ್ರಶಂಸೆಗಳಿಂದ ಭೀತಿಯೂ ತೊಲಗುವದು.

**ಮೂಲಶಿಕ್ಷಣದಲ್ಲಿ ಶಿಸ್ತು ಸಂಘಟನೆಗಳು:—** ಸಾಮಾನ್ಯವಾಗಿ ಶಿಕ್ಷಣದಲ್ಲಿ ಶಿಸ್ತಿಗೆ ಪ್ರತಿಕೂಲವಾದ ಪ್ರವೃತ್ತಿಗಳನ್ನೂ ಅವುಗಳಿಗೆ ಪರಿಹಾರೋ ಪಾಯಗಳನ್ನೂ ಮೇಲೆ ಹೇಳಿದುದಾಯಿತು. ಆದರೆ ವಿಷಯ ಪ್ರಧಾನವಾದ ಶಿಕ್ಷಣಕ್ಕಿಂತಲೂ ಕೃತಿಪ್ರಧಾನವಾದ ಮೂಲಶಿಕ್ಷಣದಲ್ಲಿ ಶಿಸ್ತಿಗೆ ಆತಂಕಗಳು ತೀರ ಕಡಿಮೆಯಾಗಿರುವವು. ಚಟುವಟಿಕೆಯು ಮಕ್ಕಳಲ್ಲಿ ಸಹಜವಾದ ರಚನಾಪ್ರವೃತ್ತಿಗೆ ಸುಲಭವಾಗಿ ಹೊಂದಿಕೊಳ್ಳುವದು. ಅದರಿಂದ ಮಕ್ಕಳ ಆಸ್ಥೆ ಅವಧಾನಗಳು ಕೆಲಸದಲ್ಲಿ ತಾನಾಗಿಯೇ ನೆಲಿಸುವವು. ಸಮನ್ವಿತ ವಿಷಯಜ್ಞಾನವು ಅವರಿಗೆ ಬೇಕಾದುದು, ಅಗತ್ಯವೆನಿಸಿದುದು. ಮಾಂಟೀ ಸೋರಿ ಶಾಲೆಗಳಲ್ಲಿರುವಂತೆ, **ಮೂಲಶಿಕ್ಷಣದ ಪಾಠಗಳಲ್ಲಿಯೂ ನಿಶ್ಶಬ್ದತೆ ಬೇಕಿಲ್ಲ, ತನ್ಮಯತೆ ಬೇಕು.** ಮೂಲಶಿಕ್ಷಣದಲ್ಲಿ ಶಿಸ್ತು ಹೆಚ್ಚಾಗಿ ಸಂಘಟನೆಯನ್ನು ಅವಲಂಬಿಸಿರುವದು. ಚಟುವಟಿಕೆಯು ಅವರ ಮನಸ್ಸನ್ನು ಹಿಡಿಯುವಂತಿರಬೇಕು. ಅದರ ವಿಧಾನಗಳು ಅವರಿಗೆ ಸರಿಯಾಗಿ ತಿಳಿಯ

ಬೇಕು. ಸಾಧನ ಸಾಮಗ್ರಿಯು ಸಾಕಷ್ಟಿರಬೇಕು. ಶಿಕ್ಷಕನು ಇಂತಿಷ್ಟು ಕೆಲಸಮಾಡಲು ಅವರಿಗೆ ಒಪ್ಪಿಸಿ ನಿರ್ದೇಶಕನಾಗಿ ಹಿಂದೆ ನಿಲ್ಲಬೇಕು. **ಇಲ್ಲಿ ಕಂಡುಬರುವ ಶಿಸ್ತು ಆಂತರಿಕವಾದುದು.** ಅಂತೆಯೇ **ಸ್ವಯಂಪ್ರೇರಿತ ವಾದುದು**.

**ಪಾರಿತೋಷಿಕಗಳು:—** ಶಿಸ್ತುಪಾಲನೆಯಲ್ಲಿ ಶಿಕ್ಷೆಯು ಒಂದು ಸಾಧನವಾಗಿರುವಂತೆ, ಪಾರಿತೋಷಿಕವೂ ಒಂದು ಪ್ರಚಲಿತವಾದ ಸಾಧನ ವಾಗಿದೆ. ಶಿಕ್ಷೆಯ ಪರಿಣಾಮವು ನಿಷೇಧಾತ್ಮಕವಾಗಿದೆ. ಶಿಕ್ಷೆಯಿಂದ ಕಳವು ಮಾಡುವದನ್ನು ಬಿಡಿಸಬಹುದು; ಆದರೆ ಪ್ರಾಮಾಣಿಕತನವನ್ನು ಅದು ಹುಟ್ಟಿ ಸಲಾರದು. ಸುಳ್ಳು ಹೇಳುವದನ್ನು ಬಿಡಿಸಬಹುದು; ಆದರೆ ಸತ್ಯಪ್ರೇಮ ವನ್ನು ಶಿಕ್ಷೆಯು ತಂದು ಕೊಡಲಾರದು. ಆದರೆ **ಪಾರಿತೋಷಿಕದಲ್ಲಿ ವಿಧಾಯಕವಾದ ಒಂದು ಪ್ರೇರಕಶಕ್ತಿಯಿದೆ. ಅದು ಪ್ರಶಂಸೆಯ ಸಾಕಾರ ಸ್ವರೂಪ.** ಒಳ್ಳೆಯದೆಲ್ಲವನ್ನೂ ನಾವು ಪ್ರೀತಿಸುವೆವೆನ್ನುವ ದ್ಯೋತಕವಾಗಿದೆ. ಆದರೆ ಪಾರಿತೋಷಿಕವಿದ್ದರೆ ಮಾತ್ರ ಚನ್ನಾಗಿ ಕೆಲಸ ಮಾಡುವ ಭಾವನೆಯನ್ನೂ ಪ್ರವೃತ್ತಿಯನ್ನೂ ಬೆಳೆಯಗೊಡಬಾರದು. ಪಾರಿ ತೋಷಿಕಕ್ಕೆ ಮಿತಿ ಮೀರಿದ ಮಹತ್ವವನ್ನು ಕೊಡಬಾರದು. ಇಲ್ಲವಾದರೆ, ಪಾರಿತೋಷಿಕ ದೊರೆಯದ ಬಾಲಕರು ನಿರುತ್ಸಾಹಿಗಳಾಗಿ ಆಲಸಿಗಳಾಗು ವರು. ಪಾರಿತೋಷಿಕವು ಕೊನೆಯ ಯಶಸ್ಸಿಗಿಂತಲೂ ಸತತೋದ್ಯೋಗ, ಸದ್ಗುಣಗಳಿಗೆ ದೊರೆಯಬೇಕು. **ಪಾರಿತೋಷಿಕವು ಪರಿಶ್ರಮಕ್ಕೆ, ಫಲಿ ತಾಂಶಕ್ಕಲ್ಲವೆಂಬ** ಮಾತು ಬಾಲಕರಿಗೆ ಮನವರಿಕೆಯಾಗಬೇಕು. ಪಾರಿ ತೋಷಿಕದ ಬಗ್ಗೆ ಉಚ್ಚತಮವಾದ ಭಾವನೆಯನ್ನುಂಟುಮಾಡಬೇಕು. ಅದರ ಬೆಲೆಯು ಕಡಿಮೆಯಾಗಿರಬಹುದು. ಆದರೆ ಪಾರಿತೋಷಿಕದ ಬಗ್ಗೆ ಬಾಲಕರ ಭಾವನೆಯು ಮಾತ್ರ ಉದಾತ್ತವಾಗಿರಬೇಕು.

# ಪರಿಚ್ಛೇದ ೧೯

## ವಿದ್ಯಾರ್ಥಿಗಳ ಪಠ್ಯೇತರ ಚಟುವಟಿಕೆಗಳು

ಕೇವಲ ಸಾಕ್ಷರತೆಯನ್ನು ತಂದುಕೊಟ್ಟರೆ ಇಲ್ಲವೆ ವಿವಿಧ ವಿಷಯಗಳ ಹೆಚ್ಚುಕಡಿಮೆ ಜ್ಞಾನವನ್ನು ವಿದ್ಯಾರ್ಥಿಗಳಿಗೆ ಮಾಡಿಕೊಟ್ಟರೆ ಶಿಕ್ಷಣದ ಕಾರ್ಯವು ಮುಗಿದಂತಾಗದು. ಸಾಕ್ಷರತೆಯು ವಿಷಯಜ್ಞಾನದ ಸಂಪಾದನೆಗೆ ಒಂದು ಸಾಧನವು ಮಾತ್ರ. ವಿಷಯಜ್ಞಾನವು ಜೀವನದ ಉನ್ನತಿಗೆ ಸಾಧನ ವಾಗಬೇಕು. **ವಿಷಯಗಳನ್ನು ಕಲಿಯುವದರ ಜೊತೆಗೆ, ಜೀವನದ ಕಲೆಯನ್ನು ವಿದ್ಯಾರ್ಥಿಗಳು ಶಾಲೆಯಲ್ಲಿ ಕಲಿಯಬೇಕು.** ಶಾಲೆಯಲ್ಲಿ ಕೊಡುವ ವಿಷಯಜ್ಞಾನವು ಜೀವನಕ್ಕೆ ಸಾಲದು. ಶಾಲೆಯ ಸಂಕುಚಿತ ವಾದ, ಒಂದೇ ವಿಧವಾದ ಸನ್ನಿವೇಶಕ್ಕಿಂತಲೂ ಜೀವನದ ಸನ್ನಿವೇಶಗಳು ವಿವಿಧವಾಗಿರುವವು. ಅಪರಿಚಿತವಾದ ಸನ್ನಿವೇಶಗಳಲ್ಲಿ ಹೇಗೆ ವರ್ತಿಸಬೇಕೆನ್ನು ವದನ್ನು ಹಿತಕರವಾದ ಪಠ್ಯೇತರ ಚಟುವಟಿಕೆಗಳಿಂದ ವಿದ್ಯಾರ್ಥಿಗಳು ತಿಳಿದು ಕೊಳ್ಳುವರು. ಸ್ವಾನುಭವದಿಂದ ಕಲಿತುಕೊಳ್ಳುವಂತೆ ಮಾಡಲು ಯೋಗ್ಯವಾದ ಚಟುವಟಿಕೆಗಳಿಗೆ ಶಿಕ್ಷಣಸಂಸ್ಥೆಗಳಲ್ಲಿ ಉತ್ತೇಜನವು ದೊರೆಯಲೇಬೇಕು.

ಶಾಲೆಯ ನಿತ್ಯದ ಅಭ್ಯಾಸವಲ್ಲದೆ, ವಿದ್ಯಾರ್ಥಿಗಳು ಕೈಕೊಳ್ಳಬಹುದಾದ ಚಟುವಟಿಕೆಗಳು ಅನೇಕವಾಗಿವೆ. ಅವುಗಳಲ್ಲಿ ಮುಖ್ಯವಾದವುಗಳ ಬಗ್ಗೆ ನಾಲ್ಕು ಮಾತುಗಳನ್ನು ಇಲ್ಲಿ ಹೇಳಬಹುದು.

### (೧) ಶಾಲೆಯ ವಾಚನಾಲಯವೂ ಕೈಬರಹದ ಪತ್ರಿಕೆಯೂ:—

ವಿದ್ಯಾರ್ಥಿಗಳ ಮನೋವಿಕಾಸಕ್ಕೆ ವಾಚನಾಲಯಗಳು ಅತ್ಯವಶ್ಯವಾದ ವುಗಳು. ಪರೀಕ್ಷೆಗಳೇ ಪ್ರಧಾನವಾದ ಇಂದಿನ ಶಿಕ್ಷಣದಲ್ಲಿ, ಪಠ್ಯಪುಸ್ತಕಗಳಿಗೆ ಸಲ್ಲದ ಪ್ರಾಶಸ್ತ್ಯವು ಬಂದಿದೆ. ಶಿಕ್ಷಕರು ವಿದ್ಯಾರ್ಥಿಗಳು ಕೂಡಿಯೇ ಪಠ್ಯ ಪುಸ್ತಕಗಳ ಚರ್ವಿತಚರ್ವಣೆಯಲ್ಲಿ ತಮ್ಮ ಶಕ್ತಿ, ವೇಳೆ, ಉತ್ಸಾಹಗಳನ್ನೆಲ್ಲ ವೆಚ್ಚಮಾಡುವದುಂಟು. ಇದರಿಂದ ವಿದ್ಯಾರ್ಥಿಗಳ ಜ್ಞಾನದ ಆಳವು ಹೆಚ್ಚುವ ದಿಲ್ಲ. ತಿಳುವಳಿಕೆಯು ಬೆಳೆಯುವದಿಲ್ಲ. ಜಗತ್ತಿನಲ್ಲಿ ನಡೆದುದನ್ನು ತಿಳಿದು ಕೊಳ್ಳಲು ವೃತ್ತಪತ್ರಿಕೆಗಳನ್ನೂ, ಕಲಿಯುವ ವಿಷಯಗಳ ಜ್ಞಾನವನ್ನು ವಿಶದ

ಗೊಳಿಸಲು ಯೋಗ್ಯವಾದ ಪುಸ್ತಕಗಳನ್ನೂ, ಶಾಲೆಯ ವಾಚನಾಲಯವು ವಿದ್ಯಾರ್ಥಿಗಳಿಗೆ ಪೂರಕವಾಗಿ ಒದಗಿಸಬೇಕು. ಪ್ರಾಥಮಿಕ ಶಿಕ್ಷಕರು ಸ್ವಪ್ರಯತ್ನ ದಿಂದ ಶಾಲೆಗಳಲ್ಲಿ ವಾಚನಾಲಯಗಳನ್ನು ಸ್ಥಾಪಿಸಲು ಯತ್ನಿಸಬೇಕು. ವಿದ್ಯಾರ್ಥಿಗಳಲ್ಲಿ ಒಮ್ಮೆ ಈ ಬಗೆಯ ಉತ್ಸಾಹವನ್ನು ಹುಟ್ಟಿಸಿದರೆ ಪ್ರತಿ ಯೊಬ್ಬ ವಿದ್ಯಾರ್ಥಿಯು ಶಾಲೆಯ ವಾಚನಾಲಯಕ್ಕೆ ಒಂದು ಪುಸ್ತಕವನ್ನು ಕಾಣಿಕೆಯಾಗಿ ಕೊಡಬಹುದು. ಇಲ್ಲವೆ ಮನೆಮನೆಗೆ ಹೋಗಿ ಅವರು ಪುಸ್ತಕಗಳನ್ನು ಸಂಗ್ರಹಿಸಬಹುದು. ಸಾರ್ವಜನಿಕ ವಾಚನಾಲಯಗಳಿದ್ದಲ್ಲಿ ಅಯೋಗ್ಯವಾದ ಪುಸ್ತಕಗಳನ್ನು ತಮಗೆ ತಿಳಿಯದಂತೆ ಓದುವದಕ್ಕಿಂತಲೂ ಶಿಕ್ಷಕರು ವಿಚಾರ ಪೂರ್ವಕವಾಗಿ ಸಂಗ್ರಹಿಸಿದ ಪುಸ್ತಕಗಳನ್ನು ವಿದ್ಯಾರ್ಥಿ ಗಳು ಓದುವದು ಸರಿಯಾದುದು. ವಾಚನಾಭಿರುಚಿಯು ಜೀವನವನ್ನು ಉದಾತ್ತಗೊಳಿಸುವ, ಹಾಗೂ ಸುಖಿಯಾಗಿ ಮಾಡುವ, ಶ್ರೇಷ್ಠವಾದ ಸಾಧನ ವಾಗಿದೆ. ಸುಲಭವಾದ ಶೈಲಿಯಲ್ಲಿ ಬರೆದ ಬಾಲಕರ ವಯೋಮಾನಕ್ಕೆ ಅನು ಗುಣವಾದ ಹಾಗೂ ಮನರಂಜಕವಾದ ಪುಸ್ತಕಗಳು ವಾಚನಾಭಿರುಚಿಯನ್ನು ಸಹಜವಾಗಿ ಹುಟ್ಟಿಸಬಲ್ಲವು. ಇದೇಮೇರೆಗೆ ಕೈಬರಹದ ಪತ್ರಿಕೆಗಳ ನ್ನಾದರೂ ವಿದ್ಯಾರ್ಥಿಗಳ ಸಹಾಯದಿಂದಲೇ ನಡೆಯಿಸಬೇಕು. ಲೇಖನ ಕಲೆಯೂ, ಚಿತ್ರಕಲೆಯೂ, ಕೆಲವರಲ್ಲಿ ಹುಟ್ಟುಗುಣವಾಗಿವೆ. ಈ ಸ್ವಾಭಾ ವಿಕ ಒಲವುಗಳಿಗೆ ಸಮಯಕ್ಕೆ ಸರಿಯಾಗಿ ಉತ್ತೇಜನವು ದೊರೆಯದಿದ್ದರೆ, ಆ ಶಕ್ತಿಗಳು ಅಳಿದುಹೋಗುವವು. ಇವೆರಡೂ ಚಟುವಟಿಕೆಗಳ ಆಡಳಿತ ವನ್ನು ವಿದ್ಯಾರ್ಥಿಗಳಿಗೆ ಬಿಟ್ಟುಕೊಡಬೇಕು. ಆಗಾಗ್ಗೆ ಸಲಹೆ ಸೂಚನೆಗಳನ್ನು ಶಿಕ್ಷರು ಅವರಿಗೆ ಕೊಟ್ಟು ನೆರವಾಗಬೇಕು.

ಬಾಲಕರಿಗಾಗಿ ವಾಚನಾಲಯಗಳಿರುವಂತೆ ಶಿಕ್ಷಕರಿಗಾಗಿಯೂ ಶಾಲೆ ಗಳಲ್ಲಿ ಪ್ರತ್ಯೇಕವಾದ ವಾಚನಾಲಯಗಳಿರುವದು ಅಗತ್ಯವಾಗಿದೆ. ಹತ್ತು ಸಂಗತಿಗಳು ಗೊತ್ತಿದ್ದರೆ ಒಂದನ್ನು ಕಲಿಸಬಹುದೆಂದು ಶಿಕ್ಷಣದಲ್ಲಿ ಒಂದು ನಾಣ್ಣುಡಿ ಇದೆ. ಇದರಿಂದ ಶಿಕ್ಷಕರು ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳ ಬೇಕೆಂದು ಸ್ಪಷ್ಟವಾಗುವದು. ಹಿಂದೆ ಎಂದೋ ಓದಿ ಗಳಿಸಿದ ಜ್ಞಾನವೇ

ಕೊನೆಯವರೆಗೂ ಸಹಾಯವಾಗುವದೆಂದು ತಿಳಿದುಕೊಳ್ಳುವದು ತಪ್ಪಾಗಿದೆ. ಈ ಬಗೆಯ ಶಿಕ್ಷಕರು ನಿಂತ ನೀರಿನಂತೆ ಪ್ರಗತಿಗೆ ಎರವಾಗುವರು. ಶಿಕ್ಷಕನಿಗೆ ಪ್ರಪಂಚ ಪರಿಚಯವು ಬೇಕು; ಪ್ರಚಲಿತ ವಿಷಯಗಳನ್ನೆಲ್ಲ ಆತನು ಅರಿತು ಕೊಂಡಿರಬೇಕು. ಮಕ್ಕಳ ಕುತೂಹಲದ ಎಲ್ಲ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವನ್ನೀಯಲು ಆತನು ಸಮರ್ಥನಾಗಿರಬೇಕು. ಕಡಿದಷ್ಟು ತುರಿಸಿ ಕೊಳ್ಳುವ ಶಿಕ್ಷಕರ ಸಿದ್ಧತೆಯು ನಿಜವಾಗಿ ಶೋಚನೀಯವಾದುದು. ಶಿಕ್ಷಕರ ವಾಚನಾಲಯಗಳಲ್ಲಿ ಕಥೆ ಕಾದಂಬರಿಗಳ ಮನರಂಜಕ ಸಾಹಿತ್ಯವಲ್ಲದೆ, ವಿವಿಧ ವಿಷಯಜ್ಞಾನವನ್ನು ಮಾಡಿಕೊಡುವ ಹಾಗೂ ವಿಚಾರಪ್ರವರ್ತಕ ವಾದ ಪ್ರಚಾರಮಾಲೆ, ಮಿಂಚಿನ ಬಳ್ಳಿಯಂತಹ ವಾಙ್ಮಯವು ವಿಪುಲವಾಗಿರ ಬೇಕು.

## (೨) ವಕ್ತೃತ್ವ ಸಂಘ :—

'ಮಾತು' ಒಂದು ಪ್ರಬಲವಾದ ಶಕ್ತಿಯಾಗಿದೆ. ಮಾತುಗಾರಿಕೆಯು ಇಂದಿನ ಜೀವನದಲ್ಲಿ ಅತ್ಯಂತ ಉಪಯುಕ್ತವಾದ ಕಲೆಯಾಗಿದೆ. ನಾಲ್ಕು ಜನ ರೆದುರು ತಮ್ಮ ವಿಚಾರಗಳನ್ನು ತರ್ಕಶುದ್ಧವಾಗಿ, ಸುಸಂಗತವಾಗಿ ಪರಿಣಾಮ ಕಾರಕವಾಗಿ ಹೇಳುವ ಪ್ರಾವೀಣ್ಯವು ವಕ್ತೃತ್ವ ಸಂಘಗಳು ತಂದುಕೊಡುವ ಗುಣವಾಗಿದೆ. ಇವುಗಳಲ್ಲಿ ಭಾಗವಹಿಸುವದರಿಂದ ವಿದ್ಯಾರ್ಥಿಗಳ 'ಸಭಾಕಂಪವು, ಕಡಿಮೆಯಾಗುವದು. ವಿಚಾರಗಳನ್ನು ತಾತ್ಕಾಲಿಕವಾಗಿ ಹೊಂದಿಸಿಕೊಳ್ಳುವ ಸಮಯಸೂಚಕತೆಯು ಸಾಧಿಸುವದು. ಹಾಯಸ್ಕೂಲ, ಕಾಲೇಜುಗಳಲ್ಲಿ ವಕ್ತೃತ್ವ ಸಂಘಗಳು ಹಿಂದಿನ ಪರಂಪರೆಯ ಪ್ರಭಾವದಿಂದ ಉಳಿದುಕೊಂಡಿವೆ. ಪ್ರಾಥಮಿಕ ಶಾಲೆಗಳ ಶಿಕ್ಷಕರೂ, ಇಂಥ ಸಂಘಗಳನ್ನೂ ತಮ್ಮ ಶಾಲೆಗಳಲ್ಲಿ ಸ್ಥಾಪಿಸಬೇಕು. ಎಳೆಯತನದಲ್ಲಿಯೇ ಮಾತುಗಾರಿಕೆಯ ಕಲೆಯು ಚಿಕ್ಕ ಮಕ್ಕಳಲ್ಲಿ ಮೊಳೆಯುವಂತೆ ಅವರು ಮಾಡಬಹುದು.

## (೩) ನಾಟ್ಯಸಮಿತಿ:—

ಆಧುನಿಕ ಶಿಕ್ಷಣದಲ್ಲಿ ಕ್ರೀಡಾ ಪದ್ಧತಿಯ ಅಂಗವಾದ ಅಭಿನಯವೂ ಶಿಕ್ಷಣದ ಒಂದು ಸಾಧನವಾಗಿದೆ. ನೈಸರ್ಗಿಕವಾದ ಒಲವುಗಳಲ್ಲಿ, ನಾಟ್ಯ

ಪ್ರೇಮವೂ ಒಂದಾಗಿದೆ. ಇನ್ನೂ ಕೃತ್ರಿಮ ಜೀವನವನ್ನು ಅರಿಯದ ಚಿಕ್ಕಮಕ್ಕಳಿಗೆ **ನಾಟ್ಯವು ಅಚ್ಚುಮೆಚ್ಚಿನ ವಿಷಯ. ಚಿಕ್ಕಮಕ್ಕಳಲ್ಲಿ ಕಂಡು ಬರುವ ಸ್ವಾಭಾವಿಕವಾದ ನಾಟ್ಯಪ್ರೇಮವನ್ನು ಶಿಕ್ಷಣದ ಕಾರ್ಯದಲ್ಲಿ ಹೆಚ್ಚಾಗಿ ಉಪಯೋಗಿಸಿಕೊಳ್ಳಲು ಬರುವಂತಿದೆ.** ಇತಿಹಾಸದಿಂದ ಕಲಿತುಕೊಂಡ ಒಂದು ಚಮತ್ಕೃತಿಯುತವಾದ ಘಟನೆಯನ್ನಾಗಲೀ' ಓದಿಕೊಂಡ ಒಂದು ಕಥೆಯನ್ನಾಗಲಿ, ಅವರು ಒಳ್ಳೇ ಯಶಸ್ವಿಯಾಗಿ ಅಭಿನಯಿಸಬಲ್ಲರು. ಹಿರಿಯರಲ್ಲಿ ಕಂಡುಬರುವ ಸಂಕೋಚವೃತ್ತಿಯು ಚಿಕ್ಕಮಕ್ಕಳಲ್ಲಿರುವದಿಲ್ಲ. ಮೇಲಾಗಿ ವಹಿಸಿಕೊಂಡ ಪಾತ್ರದೊಡನೆ ಸಮರಸವಾಗಿ ಬೆರೆತುಕೊಳ್ಳುವ ತಾತ್ಕಾಲಿಕವಾದ ಆತ್ಮವಿಸ್ಮರಣೆಯೂ, ಒಂದು ಬಗೆಯ ತಾದಾತ್ಮ್ಯವೂ ಅವರಲ್ಲಿ ತಾವಾಗಿಯೇ ಸಾಧಿಸುವವು. ಶಾಲೆಯ ನಾಟ್ಯಸಮಿತಿಗಳು ಆಡುವ ನಾಟಕಗಳು ವಿದ್ಯಾರ್ಥಿಗಳಗಾಗಿ ಬರೆದವುಗಳಾಗಿರಬೇಕು. ಇಲ್ಲವೇ ಶಿಕ್ಷಕರು ವಿಚಾರಪೂರ್ವಕವಾಗಿ ಆರಿಸಿ ಕೊಟ್ಟವುಗಳಾಗಿರಬೇಕು. ಸನ್ನಾಹದ ವಿಶೇಷ ಆಡಂಬರವಿಲ್ಲದೆ ಇಂಥ ನಾಟಕಗಳನ್ನು ಸುಲಭವಾಗಿ ಆಡುವಂತಿರಬೇಕು. ತಮ್ಮ ಅಭ್ಯಾಸದಲ್ಲಿ ಮಂದಗಾಮಿಗಳಾದ ಕೆಲವು ಬಾಲಕರು ನಾಟ್ಯಸಮಿತಿಯಲ್ಲಿ ಒಳ್ಳೇ ಮುಂದುವರಿಯುವಂತೆ ಒಮ್ಮೊಮ್ಮೆ ತೋರಿಬರುವದು. **ನಾಟ್ಯವು ಎಲ್ಲಿಯೋ ತಡೆಹಿಡಿದ ಅವರ ನೈಸರ್ಗಿಕ ಶಕ್ತಿಗಳನ್ನು ಬೆಳಕಿಗೆ ತರುವದು.**

(೪) **ಸಹಕಾರಿ ಸಂಘ:—**

'ಸಹಕಾರವು' ಜೀವನ ಕಲೆಗೆ ಆಧಾರವಾದ ತತ್ವವಾಗಿದೆ. ಹೇಗೆ ಜೀವಿಸಬೇಕೆಂಬುವದನ್ನು ಕಲಿಸುವದಲ್ಲದೆ, ಎಲ್ಲರೊಡನೆ ಕೂಡಿಕೊಂಡು ಹೇಗೆ ಜೀವಿಸಬೇಕೆಂಬುವದನ್ನು ಕಲಿಸುವದು ಶಿಕ್ಷಣದ ಮೂಲೋದ್ದೇಶಗಳಲ್ಲಿ ಒಂದಾಗಿದೆ. 'ತಾನು ಎಲ್ಲರಿಗಾಗಿ, ಎಲ್ಲರೂ ತನಗಾಗಿ' ಎನ್ನುವದನ್ನು ನಂಬಿ **ಎಲ್ಲರ ಹಿತದಲ್ಲಿ ತನ್ನ ಹಿತವನ್ನು ಕಾಣುವದೇ ಸಹಕಾರವು.** ಗಣರಾಜ್ಯದ ಮೂಲತತ್ವವೂ ಸಹಕಾರವೇ ಆಗಿದೆ. ಶಾಲೆಯ ಸಾಮುದಾಯಿಕ ಜೀವನಕ್ಕೆ ಸಹಕಾರವೇ ತಳಹದಿಯು. ಶಾಲೆಯ ಸಾಂಘಿಕ ಜೀವನವು

ಸಹಕಾರ ತತ್ವದ ಸಜೀವವಾದ ಮಾದರಿಯಾಗಿರಬೇಕು. ಸ್ವಾರ್ಥತ್ಯಾಗವು ಸಹಕಾರದ ಮುಂದಿನ ಹೆಜ್ಜೆ. ಎಳೆತನದಲ್ಲಿಯೇ ಈ ಸದ್ಗುಣಗಳ ಬೀಜವನ್ನು ಎಳೆಯಮಕ್ಕಳ ಹಸನವಾದ ಹೃದಯದಲ್ಲಿ ಬಿತ್ತಲು, ಶಾಲೆಯಲ್ಲಿ ವಿದ್ಯಾರ್ಥಿಗಳ ಸಹಕಾರ ಸಂಘಗಳು ಉತ್ತಮವಾದ ಸಾಧನಗಳಾಗಿವೆ. ತಮ್ಮ ದಿನದ ಕಾರ್ಯದಲ್ಲಿ ವಿದ್ಯಾರ್ಥಿಗಳಿಗೆ ಅನೇಕ ಸಣ್ಣಪುಟ್ಟ ವಸ್ತುಗಳು ಬೇಕಾಗುವವು. ಪಾಟಿ ಪೆನ್ಸಿಲುಗಳು, ಕಾಗದ ನೋಟುಬುಕ್ಕುಗಳು ಮೊದಲಾದ ಅನೇಕ ವಸ್ತುಗಳನ್ನು ಹಳ್ಳಿಗಳಲ್ಲಿ ಕೆಲವು ಶಿಕ್ಷಕರು ವಿದ್ಯಾರ್ಥಿಗಳಿಗೆ ನೆರೆಯೂರಿನಿಂದ ತಂದು ಕೊಡುವರು. ಈ ಕೆಲಸವನ್ನು ಶಾಲೆಯ ಸಹಕಾರಿ ಸಂಘಗಳಿಂದ ನೆರವೇರಿಸುವದು ವಿಹಿತವೂ ಅವಶ್ಯವೂ ಆಗಿದೆ. ಮೂಲೋದ್ಯೋಗ ಶಾಲೆಗಳಲ್ಲಿ ಹತ್ತಿ, ರಟ್ಟು ಮೊದಲಾದ ಮೂಲದ್ರವ್ಯಗಳೂ ಬಗೆಬಗೆಯ ಉಪಕರಣಗಳೂ ಬೇಕಾಗುವವು. ಇವುಗಳನ್ನೆಲ್ಲ ಶಾಲೆಯ ಸಹಕಾರಿ ಸಂಘದ ಮುಖಾಂತರ ಕೊಂಡುಕೊಳ್ಳಬಹುದು. ಸಿದ್ಧಗೊಳಿಸಿದ ವಸ್ತುಗಳನ್ನು, ಕೈತೋಟದ ಕಾಯಿಪಲ್ಯೆ, ಖಾದಿ ಮೊದಲಾದವುಗಳನ್ನು ಶಾಲೆಯ ಸಹಕಾರಿ ಸಂಘಗಳ ಮುಖಾಂತರವೇ ಪೇಟೆಯಲ್ಲಿ ಮಾರಬಹುದು. ಅಲ್ಪ ಪ್ರಮಾಣದ ಪಾಲುಗಾರಿಕೆಯ ಭಾಂಡವಲು ವಿದ್ಯಾರ್ಥಿಗಳಿಂದಲೇ ಬಂದುದು. ಬರುವ ಪ್ರಾಪ್ತಿಯೂ ವಿದ್ಯಾರ್ಥಿಗಳಲ್ಲಿಯೇ ಹಂಚಿ ಹೋಗುವದು. ಸಂಘವು ತಮ್ಮದೆಂಬ ಸ್ವಾಭಿಮಾನವೂ ಇದರಲ್ಲಿ ಒಂದುಗೂಡುವದು. ಆದರೆ ಶಿಕ್ಷಕರು ಇಂಥ ಸಂಘಗಳ ಮೇಲ್ವಿಚಾರಣೆಯನ್ನು ಮಾತ್ರ ಒಳ್ಳೇ ದಕ್ಷತೆಯಿಂದ ಮಾಡಬೇಕು. ತಗಲು ಪಕ್ಷಪಾತಗಳಿಗೆ ಎಡೆಯಾಗದಂತೆ ಅವುಗಳ ಆಡಳಿತವನ್ನು ಸಾಗಿಸಬೇಕು. ಒಟ್ಟಿನಲ್ಲಿ **'ಸಹಕಾರ' ದ ಸದ್ಗುಣವು ತಿಳಿದು-ತಿಳಿಯದೆ ಚಿಕ್ಕಮಕ್ಕಳಲ್ಲಿ ಬೇರೂರುವಂತೆ ಮಾಡಬೇಕು.**

(೪) **ನ್ಯಾಯಸಭೆ:—**

ಶಾಲೆಯಲ್ಲಿ ಶಿಸ್ತನ್ನು ಕಾಯುವ ಭಾರವನ್ನು ಆದಷ್ಟು ವಿದ್ಯಾರ್ಥಿಗಳಿಗೆ ಬಿಟ್ಟು ಕೊಡಬೇಕೆಂಬ ವಿಷಯವನ್ನು ಹಿಂದೆ ಹೇಳಿದೆ. ಶಿಸ್ತಿನ ನಿಯಮ ನಿರ್ಬಂಧಗಳನ್ನು ಗೊತ್ತುಪಡಿಸುವಾಗಲೂ ವಿದ್ಯಾರ್ಥಿಗಳ ಅನುಮತಿಯನ್ನು

ಪಡೆದುಕೊಳ್ಳಬೇಕು. ಶಿಸ್ತುಭಂಗದ ಅಪರಾಧಕ್ಕಾಗಿ ಉಚಿತವಾದ ಶಿಕ್ಷೆಯನ್ನು ವಿಧಿಸುವ ಕಾರ್ಯವನ್ನಾದರೂ ವಿದ್ಯಾರ್ಥಿಗಳಿಗೆಯೆ ಬಿಟ್ಟು ಕೊಡಬೇಕು. ವಿದ್ಯಾರ್ಥಿಗಳ 'ನ್ಯಾಯಸಭೆ' ಯೊಂದನ್ನು ಶಿಕ್ಷಕರು ನಿರ್ಮಿಸಬೇಕು. ಈ ಸಮಿತಿಯ ಸದಸ್ಯರನ್ನು ವಿದ್ಯಾರ್ಥಿಗಳ ಮತಗಣನೆಯಿಂದಲೇ ಆರಿಸಬೇಕು. ಹೀಗಾದರೆ ಅದಕ್ಕೊಂದು ಬಗೆಯ ಪ್ರಾತಿನಿಧಿಕ ಸ್ವರೂಪವು ಬರುವದು. ಗಾಂಭೀರ್ಯವೂ ಉಂಟಾಗುವದು. ಈ ಸಮಿತಿಯು ತನ್ನ ನಿರ್ಣಯವನ್ನು ಮುಖ್ಯಾಧ್ಯಾಪಕರಿಗೆ ಒಪ್ಪಿಸಬೇಕು. ಪಕ್ಷಪಾತವಾಗದಂತೆ, ಸೇಡು ಕುನುಸುಗಳಿಗೆ ಆಸ್ಪದವಾಗದಂತೆ ನೋಡಿಕೊಳ್ಳುವದು ಆತನ ಕಾರ್ಯ. ಈ ಬಗೆಯ ನ್ಯಾಯ ಸಮಿತಿಗಳ ಸಹಾಯದಿಂದ, ನ್ಯಾಯಬುದ್ಧಿ, ಹೊಣೆಗಾರಿಕೆ ಮೊದಲಾದ ಸದ್ಗುಣಗಳನ್ನು ಬಾಲಕರು ಕಲಿಯುವರು. ಶಾಲೆಯಲ್ಲಿ ಶಿಸ್ತುಭಂಗದ ಅಪರಾಧಗಳು ಇದರಿಂದ ಕಡಿಮೆಯಾಗುವವು.

ಇದುವರೆಗೆ ಮೇಲೆ ವಿವೇಚಿಸಿದ ಚಟುವಟಿಕೆಗಳೆಲ್ಲವೂ ಶಾಲೆಗೆ ಸಂಬಂಧಿಸಿದವುಗಳು. ಶಾಲೆಯ ಆವಾರದಲ್ಲಿಯೆ ನಡೆಯತಕ್ಕವುಗಳು. ಇವುಗಳಲ್ಲದೆ ಶಾಲೆಯ ಹೊರಗೆ ನಡೆಯುವ ಉಪಯುಕ್ತವಾದ ಬೇರೆ ಚಟುವಟಿಕೆಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ವಿವೇಚಿಸಬಹುದು.

(ಙ) **ಆಟಗಳೂ, ಸ್ಪರ್ಧೆಗಳೂ :—**

ಆಟಗಳ ಮಹತಿಯ ಬಗ್ಗೆ ಹಿಂದೆ ಸಾಕಷ್ಟು ಹೇಳಿದೆ. ಸೋಲು ಗೆಲುವುಗಳನ್ನು ಗಣಿಸದ ಒಂದು ಬಗೆಯ ಉಲ್ಹಾಸವೃತ್ತಿಯು ಆಟಗಳಿಂದಲೇ ವಿದ್ಯಾರ್ಥಿಗಳಲ್ಲಿ ಬರುವದು. **ಪ್ರತಿಸ್ಪರ್ಧಿಗಳ ಚಾತುರ್ಯಕ್ಕೊ ಮೆಚ್ಚುವ ಗುಣಗ್ರಾಹಕತೆಯು ಆಟಗಾರಿಕೆಯಲ್ಲಿರುವದು.** ಪ್ರಾಥಮಿಕ ಶಾಲೆಗಳಲ್ಲಿ ಸಾಮಾನ್ಯವಾಗಿ ದೇಶೀಯ ಆಟಗಳೇ ಹೆಚ್ಚು. ಹಳೆಯ ಆಟಗಳನ್ನು ಅಳಿದು ಹೋಗದಂತೆ ರಕ್ಷಿಸಿದ ಶ್ರೇಯಸ್ಸು ಪ್ರಾಥಮಿಕ ಶಾಲೆಗಳಿಗೆ ಸಲ್ಲುವದು. ತಿಳ್ಳಿ, ಹುಡುತುತು, ಮೊದಲಾದ ಹಿಂದಿನ ಆಟಗಳನ್ನು ಮತ್ತೆ ಪ್ರಚಾರದಲ್ಲಿ ತರಲು ಇಂದು ಪ್ರಯತ್ನವು ನಡೆದಿದೆ. '**ಗಂಗಾಳೆ ಮುರಿಗೆ**', '**ಆನೆಕಿರ್ರನ್ನುವದು**', '**ಕಾನಕಾನ ಉತ್ತತ್ತಿ**'........ ಇವೆ

**ಮೊದಲಾದ ಹಳೆಯ ಆಟಗಳು ಇಂದು ಮಾಯವಾಗಹತ್ತಿವೆ.** ಇವುಗಳ ಪುನರುದ್ಧಾರವನ್ನು ಮಾಡಲು ಪ್ರಾಥಮಿಕ ಶಾಲೆಗಳ ಶಿಕ್ಷಕರಿಗೆ ಹೆಚ್ಚು ಸಾಧ್ಯವಿದೆ. ವಿದ್ಯಾರ್ಥಿಗಳ ಆರೋಗ್ಯ-ಶಕ್ತಿಗಳನ್ನು ಸರಿಯಾಗಿ ತಿಳಿದುಕೊಂಡು, ಅವರಿಗೆ ಅನುರೂಪವಾದ ಆಟಗಳನ್ನಾಡಲು ಹೇಳಬೇಕು. **ಆಟದ ಸೌಕರ್ಯವು ಕೆಲವು ವಿದ್ಯಾರ್ಥಿಗಳಿಗೆ ಮಾತ್ರ 'ಗುತ್ತಿಗೆ' ಯಾಗಿರದೆ, ಪ್ರತಿಯೊಬ್ಬ ವಿದ್ಯಾರ್ಥಿಯೂ ಒಂದಿಲ್ಲೊಂದು ಆಟದಲ್ಲಿ ಭಾಗ ವಹಿಸುವಂತೆ ಶಿಕ್ಷಕರು ಯತ್ನಿಸಬೇಕು.** ಶಾಲೆಯು ವಿಶೇಷೋತ್ಸವಗಳಲ್ಲಿ 'ಆಟದ ದಿನ' ವನ್ನಾಗಲಿ, ಇಲ್ಲವೆ 'ಮಕ್ಕಳ ಹಬ್ಬ' ವನ್ನಾಗಲಿ ಜರುಗಿಸಿ, ವಿದ್ಯಾರ್ಥಿಗಳು ಆಡುವ ವಿವಿಧ ಆಟಗಳನ್ನು ಪಾಲಕರು ಕಂಡು ಸಂತೋಷಪಡುವಂತೆ ಮಾಡಬೇಕು. ಆಟದ ಸ್ಪರ್ಧೆಗಳಲ್ಲಿ ವಿದ್ಯಾರ್ಥಿಗಳು ವಿಶೇಷವಾದ ಆಸಕ್ತಿಯನ್ನು ತೋರಿಸುವರು. ಸ್ಪರ್ಧೆಗಳಲ್ಲಿ ಅವರ ಉತ್ಸಾಹಕ್ಕೆ ಮೇರೆಯಿಲ್ಲ. ದಣಿವಿನ ಪರಿವೆಯಿಲ್ಲ. ಆದರೆ ಸ್ಪರ್ಧೆಯ ಸಮಯಗಳಲ್ಲಿ ಮಾತ್ರ ಶಿಕ್ಷಕರು ಒಳ್ಳೇ ಜಾಗರೂಕರಾಗಿರಬೇಕು. **ಸ್ಪರ್ಧೆಯ ಆವೇಶದಲ್ಲಿ ಒಮ್ಮೊಮ್ಮೆ ನಗೆ ಹೋಗಿ ಹೊಗೆಯಾಗುವದುಂಟು.** ಸಾಂಘಿಕ ಸ್ಪರ್ಧೆಗಳಲ್ಲಿ ಒಂದು ವಿಶೇಷವಾದ ಗುಣವಿದೆ. ವೈಯಕ್ತಿಕ ಸ್ಪರ್ಧೆಗಳಲ್ಲಿ ತೋರುವ ವೈರಭಾವವು ಸಾಂಘಿಕ ಸ್ಪರ್ಧೆಗಳಲ್ಲಿ ಉದಯಿಸುವದಿಲ್ಲ. ಮೇಲಾಟದ ಸಾತ್ವಿಕ ಭಾವನೆಯನ್ನು ಇವುಗಳಲ್ಲಿ ಹುಟ್ಟಿಸಬೇಕು. ಇದೇ ಭಾವನೆಯು ಮಕ್ಕಳ ಉಳಿದ ಪರಿಶ್ರಮಗಳಿಗೂ ಪಸರಿಸಬೇಕು. ಅವರ ಏಳ್ಗೆಗೆ ಸಹಾಯಕವಾಗಿರಬೇಕು.

### (೬) ಶೈಕ್ಷಣಿಕ ಪ್ರವಾಸಗಳು:—

ಶಾಲೆಯ ಹೊರಗಿನ ಉಪಯುಕ್ತವಾದ ಚಟುವಟಿಕೆಗಳಲ್ಲಿ **ಶೈಕ್ಷಣಿಕ ಪ್ರವಾಸಗಳೂ** ಮಹತ್ವದವಾಗಿವೆ. ಈ ಪ್ರವಾಸಗಳು ನಿಜವಾಗಿ 'ಶೈಕ್ಷಣಿಕ' ಗಳಾಗಿರಬೇಕು. ಶಾಲೆಯು ಒಂದೇ ವಿಧವಾದ ಕಾರ್ಯಕ್ರಮದಿಂದ ಕೆಲಕಾಲವಾದರೂ ವಿದ್ಯಾರ್ಥಿಗಳಿಗೂ, ಶಿಕ್ಷಕರಿಗೂ ವಿರಾಮವೂ ವಿವಿಧತೆಯೂ ದೊರೆಯಬೇಕು. ನಿಸರ್ಗದ ರಮಣೀಯವಾದ ಸ್ಥಾನಗಳಲ್ಲಿ ಅವರು ನಕ್ಕು

ನಲಿದಾಡುವಂತೆ ಮಾಡಬೇಕು. ಶೈಕ್ಷಣಿಕ ಪ್ರವಾಸಗಳಲ್ಲಿ ಈ ಬಗೆಯು ಸ್ವಚ್ಛಂದ ಪ್ರವೃತ್ತಿಯ ನಲಿದಾಟಕ್ಕೆ ಸಾಕಷ್ಟು ಆಸ್ಪದವಿರಬೇಕು. ಇದರ ಜೊತೆಗೆ ಪ್ರವಾಸದ ಮುಖ್ಯ ಉದ್ದೇಶವಾದ ಲೋಕಾನುಭವವನ್ನು ಸಾಧಿಸ ಬಹುದು. ಔದ್ಯೋಗಿಕ ಕಾರಖಾನೆಗಳಿಗೆ ಹೋಗಬಹುದು. ಗ್ರಾಮೋ ದ್ಯೋಗ ಸಂಸ್ಥೆಗಳನ್ನು ನೋಡಿ ಬರಬೇಕು. ಸರ್ವೋದಯ ಕೇಂದ್ರಗಳನ್ನು ಸಂದರ್ಶಿಸಬಹುದು. ಆದರೆ ತಜ್ಞರಾದ ಶಿಕ್ಷಕರ ಜೊತೆಯಿಲ್ಲದೆ ಇಂಥ ಪ್ರವಾಸಗಳನ್ನು ವಿದ್ಯಾರ್ಥಿಗಳಿಗೆಯೆ ಬಿಟ್ಟು ಕೊಡುವದು ತಪ್ಪಾಗುವದು. ಬಡವಿದ್ಯಾರ್ಥಿಗಳೇ ಹೆಚ್ಚಾಗಿರುವ ಪ್ರಾಥಮಿಕ ಶಾಲೆಗಳಲ್ಲಿ ಈ ಬಗೆಯು ದೂರದ ಹಾಗೂ ವೆಚ್ಚದ ಪ್ರವಾಸಗಳನ್ನು ಕೈಕೊಳ್ಳುವದು ಶಕ್ಯವಾಗದು. ಆದರೆ ನೆರೆಹೊರೆಯ ಹೊಳೆಹಳ್ಳಗಳಿಗೂ, ದಿನ್ನೆ ಗುಡ್ಡಗಳಿಗೂ, ಹೊಲ ಗದ್ದೆ ಗಳಿಗೂ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಬಹುದು. ಸ್ಥಳಿಕ ಹಾಗೂ ನೆರೆಹೊರೆಯ ಉದ್ಯೋಗಗಳ ನಿರೀಕ್ಷಣೆಯನ್ನು ಮಾಡಬಹುದು. ಸಾಮಾಜಿಕ ಜೀವನದ ವಿವಿಧ ಸ್ವರೂಪಗಳನ್ನು ನೋಡಿ ತಿಳಿದುಕೊಳ್ಳುವಂತೆ ಮಾಡಬಹುದು.

ಶೈಕ್ಷಣಿಕ ಪ್ರವಾಸಗಳನ್ನು ಕೈಕೊಳ್ಳುವ ಮೊದಲು ಪ್ರವಾಸದ ಎಲ್ಲ ವಿವರಗಳನ್ನೂ ಸಿದ್ಧತೆಯನ್ನೂ ಮೊದಲೇ ಯೋಚಿಸಬೇಕು. ವಿದ್ಯಾರ್ಥಿ ಗಳನ್ನು ಸುರಕ್ಷಿತವಾಗಿ ತಿರುಗಿ ಕರೆದುಕೊಂಡು ಬರುವ ಹೊಣೆಯು ಶಿಕ್ಷಕನ ದಾದರೂ, ಬಾಲಕರಿಂದ ಹೆಚ್ಚಾಗಿ ಸಹಕಾರ ಸಹಾಯಗಳನ್ನು ತೆಗೆದುಕೊಳ್ಳ ಬೇಕು. ಇದಲ್ಲದೆ ಅವರು ಕಲಿಯುವ ವಿಷಯಗಳಿಗೆ ಆ ಪ್ರವಾಸವು ಹೇಗೆ ಉಪಯುಕ್ತವಾಗಬಹುದೆಂಬದನ್ನೂ ಆತನು ಯೋಚಿಸಬೇಕು. ಹೊಳೆ ಹಳ್ಳಗಳಿಗೆ ಹೋದಾಗ್ಗೆ ಹರಿಯುವ ನೀರಿನ ಎರಡು ಬಗೆಯ ಕಾರ್ಯವನ್ನೂ ನೆಲವು ಹೇಗೆ ಸವೆಯುತ್ತದೆಂಬುದನ್ನೂ ವಿದ್ಯಾರ್ಥಿಗಳು ಪ್ರತ್ಯಕ್ಷವಾಗಿ ನೋಡಿ ತಿಳಿದುಕೊಳ್ಳುವಂತೆ ಮಾಡಬೇಕು. ಪ್ರಾಚೀನ ಕಟ್ಟಡಗಳಿಗೆ, ಪುರಾತನ ವಸ್ತುಸಂಗ್ರಹಾಲಯಗಳಿಗೆ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋದರೆ, ಹತ್ತೆಂಟು ಪುಸ್ತಕಗಳನ್ನೋದಿ ಗಳಿಸುವಷ್ಟು ವಿಷಯಜ್ಞಾನವನ್ನು ಒಂದು ಗಂಟೆಯಲ್ಲಿಯೆ ಅವರು ಸಂಪಾದಿಸಬಲ್ಲರು.

## (೭) ಸ್ಕೌಟ ಸಮಿತಿಗಳೂ ಸೇವಾಸಂಘಗಳೂ:—

ವಿದ್ಯಾರ್ಥಿಗಳಿಗೆ ಸಮಾಜಸೇವೆಯ ದೀಕ್ಷೆಯನ್ನು ಕೊಡಲು ಇವುಗಳಿಂದ ಒಳ್ಳೇ ಸಹಾಯವು ದೊರೆಯುವದು. ಸ್ಕೌಟ ಸಮಿತಿಗಳಲ್ಲಿ ಉಂಟಾಗಿದ್ದ ಇಬ್ಬಣವು ಇಂದು ಇಲ್ಲದಂತಾಗಿದೆ. ಸ್ಕೌಟ ಸಮಿತಿಗಳೆಲ್ಲ ಒಂದೇ ಒಂದಾದ '**ಭಾರತ ಸ್ಕೌಟ ಹಾಗೂ ಗಾಯಿಡ್ಸ**' ಎಂಬ ಒಂದೇ ಸಂಸ್ಥೆಗೆ ಇಂದು ಆಧೀನವಾಗಿವೆ. ಬಾಲವೀರರ ತರಬೇತಿನಲ್ಲಿ ಚಿಕ್ಕಮಕ್ಕಳ ಚಟುವಟಿಕೆಗೆ ತುಂಬಾ ಆಸ್ಪದವಿದೆ. ಅವರಲ್ಲಿಯ ಕೃತಿಪ್ರೇಮಕ್ಕೆ ಉತ್ತೇಜನವಿದೆ. ಚಪಲತೆ, ಸಹಕಾರ, ಸಾಹಸಪ್ರೇಮ, ಸ್ವಾವಲಂಬನ, ಸೇವಾಬುದ್ಧಿ ಮೊದಲಾದ ಸದ್ಗುಣಗಳನ್ನು ಬಾಲವೀರರು ಸಂಪಾದಿಸುವರು. ಪ್ರತಿದಿನವೂ ಒಂದಾದರೂ ಸತ್ಕಾರ್ಯವನ್ನು ಬಾಲವೀರರು ಮಾಡಬೇಕೆಂಬ ಪ್ರತಿಜ್ಞೆಯು ಕೇವಲ ಯಾಂತ್ರಿಕವಾಗಿ ನೆರವೇರಕೂಡದು. ಸೇವಾಬುದ್ಧಿಯೊಂದು ಇದ್ದರೆ, ಸಮಾಜಸೇವೆಗೆ ಸಾವಿರಾರು ಹಾದಿಗಳಿರುವವು. ಸಾಮಾಜಿಕ ಉತ್ಸವಗಳಲ್ಲಿ ಹಾಗೂ ವಿಪತ್ತುಗಳಲ್ಲಿ ವಿದ್ಯಾರ್ಥಿಗಳು ಸ್ವಯಂಸೇವಕರಾಗಿ ಕೆಲಸಮಾಡಬಹುದು. ಪಿಡುಗು ಬರಗಾಲಗಳಂಥ ದೈವಿಕ ಆಪತ್ತಿಗೆ ಗುರಿಯಾಗಿ ಬಳಲುವ ಜನರಿಗೆ ಅವರು ಕೈಲಾದಷ್ಟು ನೆರವಾಗಬಹುದು. ಗ್ರಾಮೋದ್ಧಾರದ ವಿವಿಧ ಕಾರ್ಯಕ್ರಮದಲ್ಲಿ ಶಕ್ಯವಿದ್ದಷ್ಟು ಭಾಗವಹಿಸಬಹುದು. **ಸಾಕ್ಷರತೆಯ ಪ್ರಸಾರವನ್ನಾದರೂ ಕೈಕೊಳ್ಳಬಹುದು**. ಬಾಲವೀರನ ಪ್ರತಿಜ್ಞೆಯಲ್ಲಿ ಇಂದು ರಾಜನಿಷ್ಠೆಗೆ ಪ್ರತಿಯಾಗಿ ದೇಶನಿಷ್ಠೆಯು ಬಂದಿದೆ. '**ದೇಶಸೇವೆಯೆ ಈಶಸೇವೆ**'ಯೆಂಬುದು ಬಾಲಕರ ಬಿರುದಾಗಿರಬೇಕು. ಸಮಾಜಸೇವೆಯ ಮೇಲ್ಪಂಕ್ತಿಯನ್ನು ಶಿಕ್ಷಕರು ಮೊದಲು ತಾವು ಹಾಕಿಕೊಟ್ಟು, ವಿದ್ಯಾರ್ಥಿಗಳಿಗೆ ದೇಶಸೇವೆಯ ದೀಕ್ಷೆಯನ್ನು ಕೊಡಬೇಕು.

## (೮) ಆಹಾರವನ್ನು ಸಿದ್ಧಗೊಳಿಸುವದು:—

ಆಹಾರವನ್ನು ಸಿದ್ಧಗೊಳಿಸುವದು, '**ಅಡುಗೆ ಮನೆಯ ಸಾಮ್ರಾಜ್ಞಿ**'ಯಾದ ಕೇವಲ ಸ್ತ್ರೀಯ ಕಾರ್ಯವೆಂಬ ಕಲ್ಪನೆಯು ಬೇರೂರಿದೆ. ಸ್ವಾವ

ಲಂಬನದ ಮೂಲಶಿಕ್ಷಣದಲ್ಲಿ ಬಾಲಕ ಬಾಲಕಿಯರಿಬ್ಬರಿಗೂ ಈ ಉಪಯುಕ್ತ ವಾದ ಕಲೆಯ ಪರಿಚಯವನ್ನು ಮಾಡಿಕೊಡಬೇಕೆಂದಿದೆ. ವಸತಿಗೃಹವುಳ್ಳ, ಆಶ್ರಮದಂತಿರುವ ಶಾಲೆಗಳಲ್ಲಿ ಮಾತ್ರ ಇದು ಸುಲಭಸಾಧ್ಯವಿದೆ. ಹೆಣ್ಣು ಮಕ್ಕಳು ಅಡುಗೆ ಮಾಡುವದನ್ನು ಮನೆಯಲ್ಲಿ ನಿರೀಕ್ಷಣ–ಅನುಕರಣಗಳಿಂದ ಹೇಗೋ ಕಲಿಯುವರು. ಏಕೆ ? ಎಂತು ? ಎನ್ನುವ ಪರಿಜ್ಞಾನವು ಅವರಿ ಗಿರುವದಿಲ್ಲ. ಅಡುಗೆಯ ಚಟುವಟಿಕೆಯಲ್ಲಿ ವಿವಿಧ ವಿಷಯಗಳ ಜ್ಞಾನವನ್ನು ಸಮನ್ವಿತವಾಗಿ ಮಾಡಬಹುದು. ಅಸುವು–ಆಪತ್ತುಗಳಲ್ಲಿ, ಪ್ರವಾಸ–ಪರಸ್ಥಳ ಗಳಲ್ಲಿ ಗಂಡುಮಕ್ಕಳಿಗೂ ಕೂಡ ಅಡುಗೆಯ ಕಲೆಯು ಉಪಯುಕ್ತವೂ ಅವಶ್ಯಕವೂ ಆಗಿರುವದು. ಪರಾವಲಂಬನ ಹಾಗೂ ಖಾನಾವಳಿಯ ಅನಾ ರೋಗ್ಯಕರವಾದ ಊಟಗಳನ್ನು ತಪ್ಪಿಸುವದು.

ಆಹಾರವು ಜೀವನದ ಪ್ರಾಥಮಿಕ ಬೇಡಿಕೆಗಳಲ್ಲಿ ಒಂದಾಗಿದೆ. ಅದ ಕ್ಕಾಗಿ ಆಹಾರದ ಸಿದ್ಧತೆಯನ್ನು ಜೀವನ ಶಿಕ್ಷಣವು ಕಡೆಗಣಿಸಲಾರದು. **ಸಾತ್ವಿಕವಾದ, ಸಮತೋಲವಾದ ಆಹಾರವನ್ನು ಹೇಗೆ ಸಿದ್ಧಗೊಳಿಸ ಬೇಕು ?** 'ರುಚಿ'ಗಿಂತಲೂ 'ಶುಚಿ'ಗೆ ಏಕೆ ಮತ್ತು ಹೇಗೆ ಮಹತ್ವ ಕೊಡಬೇಕು ? ಜೀವನಸತ್ವಗಳೆಂದರೇನು ? ನಮ್ಮ ಆಹಾರದಲ್ಲಿ ಅವುಗಳನ್ನು ಹೇಗೆ ರಕ್ಷಿಸಬೇಕು ? ಆಹಾರದ ತುಟಾಗ್ರತೆಯಲ್ಲಿ ಆಹಾರ ಪದಾರ್ಥಗಳ ಉಳಿತಾಯವು ಹೇಗಾದೀತು ? ಜತನವು ಹೇಗಾದೀತು ? ಹೆಚ್ಚಾಗಿ ಬೆಯು ಸಿದ ಪದಾರ್ಥಗಳಿಗಿಂತಲೂ ಹಸಿರುಕಾಯಿಪಲ್ಲೆ, ನೆನಿಸಿದ ಉಸಳಿ–ಗುಗ್ಗರಿ ಗಳನ್ನೇಕೆ ಹೆಚ್ಚಾಗಿ ಉಪಯೋಗಿಸಬೇಕು ? ಇರುವೆ–ನೊಣಗಳಿಂದ, ಧೂಳಿ ಬೂದಿಗಳಿಂದ ಆಹಾರವು ಕೆಡದಂತೆ, ಮಲಿನವಾಗದಂತೆ ಹೇಗೆ ನೋಡಿಕೊಳ್ಳ ಬೇಕು ? ಗ್ರಾಮೋದ್ಧಾರದಲ್ಲಿ ಕೈಯಿಂದ ಕುಟ್ಟಿದ, ಬೀಸಿದ ಪದಾರ್ಥಗಳಿಗೆ ಇಷ್ಟೇಕೆ ಮಹತ್ವವಿದೆ? ಅವುಗಳನ್ನೇ ನಾವು ಏಕೆ ಉಪಯೋಗಿಸಬೇಕು ? ತೂಕ ಅಳತೆಗಳಿಂದ, ಮಿತವ್ಯಯದಿಂದ, ಲೆಕ್ಕಪತ್ರಗಳನ್ನಿಟ್ಟುಕೊಳ್ಳುವದ ರಿಂದ, ತಿಂಗಳಿನ ಆದಾಯ ವೆಚ್ಚಗಳಲ್ಲಿ ಹೇಗೆ ತಾಳಮೇಳವನ್ನು ಸಾಧಿಸ ಬೇಕು ? ಇವೆ ಮೊದಲಾದ ಸಂಗತಿಗಳಿಂದ ಜೀವನೋಪಯೋಗಿಯಾದ

ವಿವಿಧ ವಿಷಯಜ್ಞಾನವನ್ನು ಅಡುಗೆಯಲ್ಲಿ ಬಾಲಕ ಬಾಲಕಿಯರಿಗೆ ಮಾಡಿ ಕೊಡಬಹುದು. ಅಡುಗೆಮನೆಯಲ್ಲಿ ದೊರೆಯುವ ಈ ಸನ್ನಿವೇಶಗಳು ಕುತೂಹಲಜನಕವಾಗುವವು. ನೈಸರ್ಗಿಕವಾದವುಗಳು ಹಿಡಿದು ತಂದ ಪಾಠದ ಕೃತ್ರಿಮವಾದ ಸನ್ನಿವೇಶಗಳಿಗಿಂತಲೂ ಸಾವಿರ ಪಟ್ಟು ಮೇಲಾದ ವುಗಳು.

**(೯) ಅಭ್ಯಾಸ ಮಂಡಳಿ; ಹಾಗೂ ಸಂದರ್ಭ ಗ್ರಂಥಗಳು:—**

ಪಠ್ಯಪುಸ್ತಕಗಳ ಮುಖಾಂತರವಾಗಿ ಇಲ್ಲವೆ ಚಟುವಟಿಕೆಗಳೊಡನೆ ಸಮನ್ವಿತವಾಗಿ ವಿದ್ಯಾರ್ಥಿಗಳು ದೊರಕಿಸುವ ಜ್ಞಾನವು ಅಲ್ಪವೂ ಅಪೂ ರ್ಣವೂ ಆಗಿರುವದು. ಜ್ಞಾನದ ಈ ಕೊರತೆಯನ್ನು ಹೋಗಲಾಡಿಸಲು ಅಭ್ಯಾಸಮಂಡಳಗಳ ಅವಶ್ಯಕತೆಯಿರುವದು. ವಾದಭೂಮಿಯನ್ನು ಪ್ರವೇಶಿ ಸದೆ, ಇಂದಿನ ಹಾಗೂ ಮುಂದಿನ ಜೀವನಕ್ಕೆ ಸಂಬಂಧಿಸಿದ ಅನೇಕ ವಿಷಯ ಗಳ ಜ್ಞಾನವನ್ನು ವಿದ್ಯಾರ್ಥಿಗಳು ಅವಶ್ಯವಾಗಿ ಮಾಡಿಕೊಳ್ಳಬೇಕು. ಶಾಲೆಯ ಅಭ್ಯಾಸಮಂಡಳಗಳು ಅವರಿಗೆ ಇದರಲ್ಲಿ ಸಹಾಯಕವಾಗುವವು. ಅಭ್ಯಾಸಮಂಡಳದ ಕಾರ್ಯವು ಎರಡು ಬಗೆಯಾಗಿ ನಡೆಯಬಹುದು. ಉಪ ಯುಕ್ತ ವಿಷಯಗಳ ಬಗ್ಗೆ ತಜ್ಞರ ಉಪನ್ಯಾಸಗಳನ್ನು ಏರ್ಪಡಿಸುವದು ಇವು ಗಳಲ್ಲಿ ಒಂದಾಗಿದೆ. ಆದರೆ ಇದರಲ್ಲಿ ವಿದ್ಯಾರ್ಥಿಗಳ ಸ್ವಂತ ಪರಿಶ್ರಮಕ್ಕೆ ವಿಶೇಷ ಅನುವು ದೊರೆಯದು. ವಿಷಯಗಳನ್ನು ಗೊತ್ತುಪಡಿಸಿ ವಿದ್ಯಾರ್ಥಿಗಳು ಸ್ವಂತ ಪರಿಶ್ರಮದಿಂದಲೇ ಅವುಗಳ ಬಗ್ಗೆ ಜ್ಞಾನವನ್ನು ಸಂಗ್ರಹಿಸುವದು ಎರಡನೆಯ ರೀತಿಯಾಗಿದೆ. ಶಿಕ್ಷಕನ ಸಹಾಯ ಸಲಹೆಗಳು ಇದಕ್ಕೆ ಅಗತ್ಯ ವಾದವುಗಳು. ಶಾಲೆಯ ವಾಚನಾಲಯವು ಅಭ್ಯಾಸಮಂಡಳದ ಕೆಲಸದಲ್ಲಿ ಸಹಾಯಕವಾಗುವದು. ಆಯ್ದುಕೊಂಡ ವಿಷಯದ ರೂಪರೇಷೆಯನ್ನು ಶಿಕ್ಷ ಕನು ಮೊದಲು ತಿಳಿಸಿಕೊಡಬೇಕು. ಸಂದರ್ಭಗ್ರಂಥಗಳ ನಿರ್ದೇಶವನ್ನು ಮಾಡಬೇಕು. ಕನ್ನಡದಲ್ಲಿ ಇದುವರೆಗೆ ಉಪಲಬ್ಧವಿರುವ ಶ್ರೀ. ಕಾರಂತರ ಜ್ಞಾನಕೋಶವಿದೆ; ಪ್ರಚಾರಮಾಲೆಯ ಚಿಕ್ಕ ಪುಸ್ತಕಗಳಿವೆ; ಮೈಸೂರು ವಯ ಸ್ಕರ ಶಿಕ್ಷಣ ಸಮಿತಿಯವರು ಪ್ರಕಟಿಸುತ್ತಿರುವ ಸುಲಭವಾದ ವಾಙ್ಮಯವಿದೆ;

ರಾಜಕೀಯ, ಆಧ್ಯಾತ್ಮಿಕ ವಿಷಯಗಳ ಬಗ್ಗೆ ಹುಬ್ಬಳ್ಳಿಯ ಅಧ್ಯಾತ್ಮ ಮಂದಿರದ ಪ್ರಕಟನೆಗಳಿವೆ, ಬೇರೆ ಬೇರೆ ಸಾಪ್ತಾಹಿಕ, ಮಾಸಿಕಗಳ ವಿಶೇಷಾಂಕಗಳಿವೆ. ಇವುಗಳ ಜೊತೆಗೆ ಶಬ್ದಕೋಶಗಳೂ ನಿಘಂಟುಗಳೂ ಬೇಕು. ಇವುಗಳ ಉಪಯೋಗವನ್ನು ಸರಿಯಾಗಿ ಹೇಗೆ ಮಾಡಿಕೊಳ್ಳಬೇಕೆಂಬುವದನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಹೇಳಬೇಕು; ತೋರಿಸಿಕೊಡಬೇಕು. ಅಭ್ಯಾಸಮಂಡಳವು ತಿಂಗಳಿಗೆ ಒಂದೆರಡು ಸಲ ಕೂಡಬಹುದು. ವಿದ್ಯಾರ್ಥಿಗಳು ತಾವು ಸಂಗ್ರಹಿಸಿ ಬರೆದು ತಂದುದನ್ನು ಓದಿ ತೋರಿಸುವರು, ವಿವೇಚಿಸುವರು. ಇದರಿಂದ **ಒಬ್ಬರ ಜ್ಞಾನವು ಎಲ್ಲರ ಜ್ಞಾನವಾಗುವದು.** ಉತ್ತಮವಾದ ವಿವೇಚನವನ್ನು ಶಾಲೆಯ ಕೈಬರಹದ ಪತ್ರಿಕೆಯಲ್ಲಿ ಪ್ರಕಟಿಸಬಹುದು.

ಇಂದು **ರಾಜಕೀಯ ಕ್ಷೇತ್ರದಲ್ಲಿ ಅನೇಕ 'ವಾದ'** ಗಳಿವೆ. ಸಾಮ್ಯವಾದ, ಪ್ರಜಾಪ್ರಭುತ್ವ ಮೊದಲಾದವುಗಳ ಮೂಲತತ್ವಗಳನ್ನು ಪ್ರೌಢ ಬಾಲಕರು ತಿಳಿದುಕೊಳ್ಳಬೇಕು. ಇವುಗಳಂತೆಯೆ, ಮೂಲಶಿಕ್ಷಣಕ್ಕೆ ತಳಹದಿಯಾದ 'ಗಾಂಧೀವಾದ'ವೊಂದಿದೆ. ಪೂರ್ಣ ಜೀವನದ ಬಗ್ಗೆ **ಗಾಂಧೀಜಿಯವರ ಆದರ್ಶ-ಆಕಾಂಕ್ಷೆಗಳೇ**ನೆಂಬುವದನ್ನು ಶಿಕ್ಷಕನು ತಾನು ಮೊದಲು ತಿಳಿದುಕೊಂಡು ಸುಲಭವಾದ ರೀತಿಯಲ್ಲಿ ಅಭ್ಯಾಸಮಂಡಳದ ಮುಖಾಂತರವಾಗಿ ಬಾಲಕರಿಗೆ ತಿಳಿಸಿಕೊಡಬಹುದು. ಮೂಲ ಶಿಕ್ಷಣ ಶಾಲೆಗಳಲ್ಲಿ ಗಾಂಧೀ ಸಾಹಿತ್ಯದ ಸಾಕಷ್ಟು ಸಂಗ್ರಹವೂ ಅವಶ್ಯವಾಗಿದೆ.

(೧೨) **ಪ್ರದರ್ಶನಗಳು:—**

ಪ್ರಕಟನೆ-ಪ್ರಶಂಸೆಗಳ ಪ್ರೇಮವು ಮಕ್ಕಳ ಸ್ವಾಭಾವಿಕ ಒಲವುಗಳಲ್ಲಿ ಒಂದಾಗಿದೆ. ಅಂತೆಯೆ ಶಿಕ್ಷಣದಲ್ಲಿ ಪ್ರದರ್ಶನಗಳಿಗೆ ಒಂದು ಸ್ಥಾನವಿದೆ. ತಾನು ಮಾಡಿದುದನ್ನು ಉಳಿದವರು ನೋಡುವರು, ಮೆಚ್ಚುವರು, ಎಂಬ ಭಾವನೆಯಿಂದ ಮಕ್ಕಳು ಇಮ್ಮಡಿ ಹುರುಪಿನಿಂದ ಪ್ರದರ್ಶನಕ್ಕಾಗಿ ದುಡಿಯುವರು. ಆದರೆ ತಾತ್ಕಾಲಿಕ, ತಾತ್ಪೂರ್ತಿಕವಾದ ಕೃತಿಗಳಿಂದ ಕೂಡಿದ ಇಂಥ ಪ್ರದರ್ಶನಗಳು ನಿಜವಾಗಿ 'ಶೈಕ್ಷಣಿಕ'ವೆಂದು ಹೇಳಲುಬಾರದು. ಚಟುವಟಿಕೆಗೆ ಇಲ್ಲವೆ ಅಭ್ಯಾಸಕ್ಕೆ ಅನುರೋಧವಾಗಿ ತಮ್ಮ ದಿನಚರಿಯಲ್ಲಿ ಮಕ್ಕಳು

ರಚಿಸಿದ, ಉತ್ಪಾದಿಸಿದ ವಸ್ತುಗಳಿಗೆ ಮಾತ್ರ ಶಿಕ್ಷಣವು ಬೆಲೆಕೊಡುವದು. ಪ್ರಾರಂಭದಿಂದ ಅಂದಿನವರೆಗೆ ತಾವು ತೆಗೆದ ನೂಲಿನ ಮಾದರಿಗಳು, ನೇಯ್ಗೆಯ ಬಟ್ಟೆ-ಟೇಪುಗಳು, ರಟ್ಟಿನಲ್ಲಿ, ಕಟ್ಟಿಗೆಯಲ್ಲಿ ಹಾಗೂ ಮಣ್ಣಿನಲ್ಲಿ ಮಾಡಿದ ವಿವಿಧಕೃತಿಗಳು ನಿಜವಾಗಿ ಶೈಕ್ಷಣಿಕವಾಗಿವೆ. ಇವುಗಳಲ್ಲಿ ಮಕ್ಕಳ ಪ್ರಗತಿ ವಿಕಾಸಗಳನ್ನು ನಾವು ಕಾಣುವೆವು. ಪಾಲಕರಿಗೆ, ಪ್ರೇಕ್ಷಕರಿಗೆ ಇವು ಕಲಾ ಕೃತಿಗಳಲ್ಲ, ಆದರೆ ತಮ್ಮ ಮಕ್ಕಳ ಕೈಗೆಲಸಗಳು.

ಇವುಗಳ ಜೊತೆಗೆ ಶಿಕ್ಷಕರು ಮಕ್ಕಳ ಉತ್ಕರ್ಷಕ್ಕಾಗಿ ತಾವು ಮಾಡಿದ ಪ್ರಯೋಗಗಳೇನು? ಪ್ರಯತ್ನಗಳೇನು? ಇವುಗಳನ್ನು ಸೂಚಿಸುವ **ಪ್ರಗತಿ ಪಟಗಳೂ ನಕ್ಷೆ-ನಕಾಶಗಳೂ** ಪ್ರದರ್ಶನಕ್ಕೆ ಯೋಗ್ಯವಾದ ಸಾಹಿತ್ಯ ವಾಗಿವೆ. ತಾವು ಸಿದ್ಧಗೊಳಿಸಿದ ಹಾಗೂ ವಿದ್ಯಾರ್ಥಿಗಳು ತಯಾರಿಸಿದ ವಿವಿಧವಾದ ಶಿಕ್ಷಣೋಪಯೋಗಿಯಾದ ಸಾಧನಗಳನ್ನೂ ಪ್ರದರ್ಶನದಲ್ಲಿ ಇಡಬೇಕು.

ಪ್ರದರ್ಶನವು ಶಾಶ್ವತಸ್ವರೂಪವುಳ್ಳದ್ದಾದರೆ ಅದೇ ಶಾಲೆಯ '**ವಸ್ತು ಸಂಗ್ರಹಾಲಯ**'ವಾಗುವದು. ಬಾಲಕರ ಸಂಗ್ರಾಹಕ ಪ್ರವೃತ್ತಿಯನ್ನು ಸಂಪೂರ್ಣವಾಗಿ ವಿನಿಯೋಗಿಸಬೇಕು. ನೆರೆಹೊರೆಯಲ್ಲಿ ದೊರೆಯುವ ವಸ್ತು ಗಳಿಂದಲೆ ಒಂದು ಚಿಕ್ಕ ಸಂಗ್ರಹಾಲಯವನ್ನು ರಚಿಸಬಹುದು. ಎಲೆ, ಹೂಗಳು, ಮಣ್ಣಿನ ಪ್ರಕಾರಗಳು, ಬಣ್ಣಬಣ್ಣದ ಕಲ್ಲುಗಳು, ಶಂಕುಸಿಂಪು ಗಳು, ಪಕ್ಷಿಗಳ ಗರಿಗಳು, ಗೂಡುಗಳು—ಇವೇ ಮೊದಲಾದ ವಿವಿಧವಸ್ತು ಗಳನ್ನು ಬಾಲಕರು ಸಲೀಲವಾಗಿ ಸಂಗ್ರಹಿಸುವರು.

**ಪ್ರದರ್ಶನದಲ್ಲಿ ಸ್ವಯಂಪ್ರೇರಿತ ಚಟುವಟಿಕೆ ಇದೆ.** ಹೆಚ್ಚು ಒಳ್ಳೆಯ ಕೆಲಸವನ್ನು ಮಾಡಹಚ್ಚುವ ಪ್ರೇರಕ ಶಕ್ತಿಯಿದೆ. ಸಾತ್ವಿಕವಾದ ಸ್ಪರ್ಧೆ ಇದೆ. ಇದಲ್ಲದೆ ಸಮಾಜದೊಡನೆ ಸಂಪರ್ಕವನ್ನು ತಂದುಕೊಳ್ಳಲು ಶಾಲೆಗಳಿಗೆ ಪ್ರದರ್ಶನವು ಸುಸಂಧಿಯನ್ನು ಒದಗಿಸುತ್ತಿದೆ.

(೧೧) **ಉತ್ಸವಗಳು ಸ್ಮೃತಿದಿನಗಳು:—**

ಉತ್ಸವ ಪ್ರಿಯತೆಯು ನಮ್ಮ ಸ್ವಭಾವದ ಸೂತ್ರಗಳಲ್ಲಿ ಒಂದಾಗಿದೆ.

ಮೇಲಾಗಿ ಜೀವನವು ಗಾಣದೆತ್ತಿನ ದುಡಿತದಂತಾದರೆ, ಜೀವನದಲ್ಲಿ ಸುಖ-ಸೊಬಗುಗಳು ಇಲ್ಲದಂತಾಗುವವು. ಅಂತೆಯೇ ಎಲ್ಲ ಜನಾಂಗಗಳಲ್ಲಿ 'ಹಬ್ಬ' ಗಳು ಎಂದಿನಿಂದಲೋ ಇಂದಿನವರೆಗೆ ಅಬಾಧಿತವಾಗಿ ಉಳಿದುಕೊಂಡಿವೆ.

ಶಾಲೆಗಳಲ್ಲಿ ಜರುಗಿಸುವ ಹಬ್ಬಗಳಿಗೆ ಉತ್ಸವಪ್ರಿಯತೆಯನ್ನು ತುಷ್ಟಿಗೊಳಿಸುವದೊಂದೇ ಉದ್ದೇಶವಿರಕೂಡದು. **ಮಗುವಿನ ಸಾಮಾಜಿಕ ಜೀವನದಲ್ಲಿ ಹಬ್ಬಗಳಿಗೂ ಉತ್ಸವಗಳಿಗೂ ಹಿರಿದಾದ ಸ್ಥಾನವಿದೆ.** ಉತ್ಸವಗಳಲ್ಲಿ ವಿದ್ಯಾರ್ಥಿಗಳು ಕೈಕೊಳ್ಳುವ ವಿವಿಧ ಚಟುವಟಿಕೆಗಳಿಂದ ಅವರ ಆತ್ಮಪ್ರಕಾಶನಕ್ಕೆ ಹೆಚ್ಚಾಗಿ ಅನುವು ದೊರೆಯುವದು. ಮೇಲಾಗಿ ಅವರ ಚಟುವಟಿಕೆಯು ಸ್ವಯಂಪ್ರೇರಿತವಾಗಿರುವದು. ಇಂಥ ಉತ್ಸವಗಳಲ್ಲಿ ಕೂಡಿ ಕೆಲಸ ಮಾಡುವದರಿಂದ ಕೂಡಿ ಬಾಳುವ ಕಲೆಯನ್ನು ವಿದ್ಯಾರ್ಥಿಗಳು ತಿಳಿಯದೆಯೆ ಅರಿತುಕೊಳ್ಳುವರು. ಅವರಲ್ಲಿ ಹುದುಗಿದ ವಿವಿಧ ಬುದ್ಧಿ–ಶಕ್ತಿಗಳು ಬೆಳಕಿಗೆ ಬರುವವು. ಶಾಲೆ–ವರ್ಗಗಳ ಅಲಂಕರಣದಲ್ಲಿ ಅಚ್ಚುಕಟ್ಟುತನವೂ, ಸೌಂದರ್ಯಪ್ರತೀತಿಯೂ ಉಂಟಾಗುವವು. ಕಾರ್ಯಕ್ರಮದ ಹೊಣೆಯನ್ನು ಅವರಿಗೆ ಒಪ್ಪಿಸುವದರಿಂದ ಹೊಣೆಗಾರಿಕೆಯ ಅರಿವು ಅವರಿಗುಂಟಾಗುವದು. ಒಂದು ಕಾರ್ಯವನ್ನು ಪೂರ್ತಿಗೊಳಿಸಲು ಹತ್ತು ಜನರು ಕೈ ಹಚ್ಚಬೇಕಾಗುವದರಿಂದ ತಾಳ್ಮೆ, ಸಹಕಾರ, ಸಹಾಯಕ ಗುಣಗಳ ಅವಶ್ಯಕತೆ ಅವರಿಗೆ ತಿಳಿದುಬರುವದು.

**ಧಾರ್ಮಿಕ ಉತ್ಸವಗಳಲ್ಲಿ** ಕೇವಲ ಪಾಂಥಿಕವಾದವುಗಳನ್ನು ಬಿಟ್ಟುಕೊಡಬೇಕು. ಜಗದೋದ್ಧಾರಕ್ಕಾಗಿ ಅವತರಿಸಿದ ಶ್ರೀರಾಮ–ಶ್ರೀಕೃಷ್ಣ–ಶ್ರೀಬುದ್ಧರಂಥವರ ಜಯಂತಿಗಳನ್ನು ಆಚರಿಸಬಹುದು. ಅವನತಿಗಿಳಿಸಿದ ಧರ್ಮವನ್ನು ಎತ್ತಿಹಿಡಿದು ಮತೋದ್ಧಾರ ಮಾಡಿದ ಮುಖ್ಯ ಮತಸ್ಥಾಪಕರ ದಿನಗಳನ್ನೂ ಆಚರಿಸಬಹುದು. ಈ ಸಂದರ್ಭಗಳಲ್ಲಿ ಅವತಾರಿಕ ಪುರುಷರು ಸಾಧಿಸಿದ ಅಲೌಕಿಕ ಕಾರ್ಯವನ್ನೂ, ಅವರು ತೋರಿದ ಸತ್ಪಥವನ್ನೂ, ಮಾಡಿದ ಉಪದೇಶವನ್ನೂ ಬಾಲಕರಿಗೆ ತಿಳಿಯುವಂತೆ ಹೇಳಿಕೊಡಬೇಕು. **ಧಾರ್ಮಿಕ ಉತ್ಸವಗಳಲ್ಲಿ ಒಂದು ದೃಷ್ಟಿ, ಒಂದು ಧ್ಯೇಯವನ್ನು**

**ಯಾವಾಗಲೂ ಶಿಕ್ಷಕರು ತಮ್ಮ ಮುಂದಿಟ್ಟುಕೊಂಡಿರಬೇಕು.** ಅದೆಂದರೆ— 'ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ' ಎನ್ನುವ ಶ್ರೀ ವಿವೇಕಾನಂದರ ಪ್ರೀತಿಯ ಉದಾಹರಣೆ. ಮುಗಿಲಿನಿಂದ ಬಿದ್ದ ನೀರೆಲ್ಲ ಒಂದು ಗೂಡಿ ಸಮುದ್ರವನ್ನೆ ಸೇರುವಂತೆ, **ಎಲ್ಲ ಧರ್ಮಗಳ ತತ್ವಗಳ ತಿರುಳೆಲ್ಲವೂ ಒಂದೇಯಾಗಿರುವದೆಂಬದು;** ಒಂದೇ ಊರಿಗೆ ಹಲವು ಹಾದಿಗಳಿದ್ದಂತೆ. ಈ ಮಾತಿನ ಮನವರಿಕೆಯನ್ನು ವಿದ್ಯಾರ್ಥಿಗಳಿಗೆ ಮಾಡಿಕೊಡಬೇಕು. ಅಂದರೆ ತಮ್ಮದಲ್ಲದ ಧರ್ಮಗಳ ಬಗ್ಗೆ ಅವರಲ್ಲಿ ಸಹಿಷ್ಣುತೆಯೂ ಗೌರವವೂ ಚಿಕ್ಕಂದಿನಿಂದಲೇ ನೆಲಿಸುವವು. ಇನ್ನೊಂದು ಸಂಗತಿಯನ್ನೂ ವಿದ್ಯಾರ್ಥಿಗಳಿಗೆ ಚನ್ನಾಗಿ ವಿಶದಗೊಳಿಸಬೇಕು. ಅಂದರೆ **ನೀತಿಯು ಧರ್ಮದ ಜೀವಾಳ,** ನೈತಿಕ ಜೀವನವೆ ಧರ್ಮದ ಬೆನ್ನೆಲುಬು. ಸಮಾಜದ ಸುಸ್ಥಿತಿಗಾಗಿಯೇ ಧರ್ಮದ ಉದ್ದೇಶ. ಸಮಾಜದ ಘಟಕಗಳಾದ ವ್ಯಕ್ತಿಗಳ ನೀತಿ–ಶೀಲಗಳಿಂದಲೇ ಸಮಾಜವು ಉಳಿಯಬಲ್ಲದು. ಧರ್ಮವು ಸಾಧಿಸಬೇಕಾದ ಧ್ಯೇಯವು ವಿದ್ಯಾರ್ಥಿಗಳಿಗೆ ಪರಿಚಿತವಾಗಬೇಕು.

'**ಜಯಂತಿ**'ಗಳನ್ನು ಆಚರಿಸುವದಾದರೂ ಸಾಮಾಜಿಕ ಜೀವನದ ಒಂದು ಅಂಗವಾಗಿರುವದು. ನಾಡಿಗಾಗಿ ದುಡಿದು ತಮ್ಮ ದೇಹವನ್ನೇ ಮುಡುಪಿಟ್ಟ ಮಹಾತ್ಮರು, ಮಹಾಪುರುಷರು ಹಾಗೂ ಮುಂದಾಳುಗಳು **ಇವರೆಲ್ಲರ ಸಂಸ್ಮರಣವು ಸ್ಫೂರ್ತಿದಾಯಕವಾಗಿದೆ; ಪಾವನವಾಗಿದೆ.** ವರುವರುಷಕ್ಕೆ ಜರುಗಿಸುವ ಈ ಜಯಂತಿಗಳು ಮಹಾಪುರುಷರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ನಮ್ಮ ಮುಂದೆ ಇಡುವವು. ಅಂದು ಬಾಲಕರಿಗೆ ಅವರ ಚರಿತ್ರೆಯನ್ನು ತಿಳಿಸಿ ಹೇಳಬೇಕು. ಅವರು ಮಾಡಿದ ಮಹತ್ಕಾರ್ಯಗಳೂ ಹೇಳಿದ ಉಪದೇಶಗಳೂ ಬಾಲಕರಿಗೆ ತಿಳಿಯುವಂತೆ ಹೇಳಿಕೊಡಬೇಕು. ಅವರ ಭಾವಚಿತ್ರವನ್ನು ಪೂಜಿಸಬೇಕು. ವಿಭೂತಿ ಪೂಜೆಯು ನಮ್ಮಲ್ಲಿ ರಕ್ತಗತವಾಗಿ ನೆಲಿಸಿದೆ. **ಅಂದು ಬಾಲಕರಿಗೆ ದೇಶಸೇವೆಯ ದೀಕ್ಷೆಯನ್ನು ಕೊಡಬಹುದು.** ಸಫಾಯಿ ಮೊದಲಾದ ಸಮಾಜ ಸೇವೆಯ ಕಾರ್ಯವನ್ನು ಅಂದು ಇಟ್ಟುಕೊಳ್ಳಬಹುದು. ಇಂಥ ಮಹಾಪುರುಷರ ಚರಿತ್ರೆಗಳಿಂದಲೆ

ನಮ್ಮ ದೇಶದ ಇತಿಹಾಸವು ಉಜ್ವಲವಾಗುವದೆಂಬುದರ ಅರಿಕೆಯು ವಿದ್ಯಾರ್ಥಿಗಳಿಗಾಗಬೇಕು. ಕೇವಲ ರಾಜಕಾರಣದಲ್ಲಿ ಮಹಾಪುರುಷರು ಆಗುವದಿಲ್ಲ. ಸಾಹಿತ್ಯದಲ್ಲಿ ಆದಿಕವಿ ಪಂಪನಿಂದ ನಮ್ಮ ಆದ್ಯಕವಿ ರವೀಂದ್ರರವರೆಗೆ, ವಿಜ್ಞಾನದಲ್ಲಿ ಶ್ರೀ ಜಗದೀಶಚಂದ್ರ ಬೋಸರಿಂದ ಶ್ರೀ ಚಂದ್ರಶೇಖರ ರಾಮನ್‌ರವರೆಗೆ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಅಲೌಕಿಕವಾದ ಪ್ರತಿಭೆಯಿಂದ ದೇಶದ ಕೀರ್ತಿಯನ್ನು ದಿಗಂತದವರೆಗೆ ಮುಟ್ಟಿಸಿದ ಮಹಾಪುರುಷರ ಪರಿಚಯುವನ್ನು ಅವರ ಜಯಂತಿಗಳನ್ನು ಹಾಗೂ ಪುಣ್ಯದಿನಗಳನ್ನು ಆಚರಿಸಿ ಬಾಲಕರಿಗೆ ಮಾಡಿಕೊಡಬೇಕು. ಇವುಗಳಲ್ಲದೆ ಶಾಲೆಯ ನಿತ್ಯ–ನೈಮಿತ್ತಿಕ ಸಮಾರಂಭಗಳು, **ವಾರ್ಷಿಕೋತ್ಸವ, ಸ್ನೇಹಸಮ್ಮೇಲನ, ಪಾಲಕರ ದಿನ, ಆಟದದಿನ** ಮೊದಲಾದವುಗಳನ್ನು ನೆರವೇರಿಸಿ ಪಾಲಕರಿಗೂ ಹಾಗೂ ಸಮಾಜಕ್ಕೂ ಶಾಲೆಯೊಡನೆ ಸಂಪರ್ಕ, ಸಹಾನುಭೂತಿ, ಸಹಕಾರಗಳು ಉಂಟಾಗುವಂತೆ ಮಾಡಬೇಕು.

ವಿದೇಶಗಳಲ್ಲಿ **ಋತುಮಾನಗಳಿಗೆ ಸಂಬಂಧಿಸಿದ ಕೆಲವು ಉತ್ಸವಗಳಿರುವವು.** ನಮ್ಮಲ್ಲಿಯೂ ಈ ಬಗೆಯ ಕೆಲವು ಉತ್ಸವಗಳಿರುವವು. **ಮಕರ ಸಂಕ್ರಾಂತಿ, ಮಣ್ಣೆತ್ತಿನ ಅಮಾವಾಸ್ಯೆ, ಚರಗ** ಮೊದಲಾದವುಗಳಿಂದ ನಿಸರ್ಗದ ಸನ್ನಿವೇಶಗಳಲ್ಲಿ ಕೆಲಕಾಲವಾದರೂ ಮಕ್ಕಳು ಕಳೆಯುವಂತೆ ಮಾಡಬೇಕು. ನಮ್ಮ ಜೀವನವು ನಿಸರ್ಗಕ್ಕೆ ಹೇಗೆ ಅಂಕಿತವಾಗಿದೆ, ನಿಕಟವಾಗಿ ಹೊಂದಿಕೊಳ್ಳುತ್ತದೆಯೆಂಬುದು ಬಾಲಕರಿಗೆ ತಿಳಿಯುವಂತಾಗಬೇಕು. ಬಹುಕಾಲದಿಂದಲೂ ನಾಗಿಬರುತ್ತಿರುವ **ನಮ್ಮ ಜಾತ್ರೆಗಳೂ ಕೂಡ ಸಾಮಾಜಿಕ ಜೀವನದ ಒಂದು ಸ್ವರೂಪವೇ ಆಗಿವೆ.** ಸ್ವಯಂ ಸೇವಕರಾಗಿ ಸ್ವಚ್ಛತೆ, ನೀರಿನ ಪೂರೈಕೆ ಮೊದಲಾದ ಕಾರ್ಯಗಳನ್ನು ಕೈಕೊಂಡು ಬಾಲಕರು ಸಮಾಜ ಸೇವೆಯನ್ನು ಮಾಡಲು ಜಾತ್ರೆಗಳು ಸಾಕಷ್ಟು ಸುಸಂಧಿಯನ್ನು ಒದಗಿಸುವವು.

**‘ಗ್ರಾಮನಿರೀಕ್ಷಣೆ’:—** ಪ್ರೌಢ ವಿದ್ಯಾರ್ಥಿಗಳಿಂದ ಪ್ರತ್ಯಕ್ಷವಾಗಿ ಗ್ರಾಮನಿರೀಕ್ಷಣೆಯನ್ನು ಮಾಡಿಸಬಹುದು. ಗ್ರಾಮನಿರೀಕ್ಷಣೆಯು ಅಭ್ಯಾ

ಸಾತ್ಮಕವಾಗಿರಬೇಕು. ಇದು ಎರಡು ಮುಖವಾಗಿದೆ. ಗ್ರಾಮದ ಘಟಕ ಗಳಾದ (೧) ಕುಟುಂಬಪರಿಚಯ ಹಾಗೂ (೨) ಒಟ್ಟು ಗ್ರಾಮದ ಪರಿಚಯ. '**ಕುಟುಂಬಪರಿಚಯ**' ದಲ್ಲಿ ೧) ಕುಟುಂಬದ ಸಂಖ್ಯೆ, ೨) ಚರಿತಾರ್ಥ ಸಾಧನ, ೩) ಸಾಕ್ಷರಿ–ನಿರಕ್ಷರಿಗಳು, ೪) ವರುಷದ ಸರಾಸರಿ ಆದಾಯ-ವೆಚ್ಚ, ೫) ನಾಲಗಾರಿಕೆ ಇವೆ ಮೊದಲಾದ ಅಂಶಗಳಿರುವವು.

'**ಒಟ್ಟು ಗ್ರಾಮದ ಪರಿಚಯ**' :— ಅನೇಕ ವಿಷಯಗಳನ್ನು ಒಳ ಗೊಳ್ಳಬಹುದು. ಆದರೆ ವಿದ್ಯಾರ್ಥಿಗಳ ಅಳವಿನಲ್ಲಿರುವ ಕೆಲವೊಂದು ವಿವರ ಗಳನ್ನು ಮಾತ್ರ ಇಲ್ಲಿ ತೆಗೆದುಕೊಳ್ಳಬಹುದು:— ೧) ಗ್ರಾಮದ ಹೆಸರು–ಹೆಸ ರಿನ ಬಗ್ಗೆ ಏನಾದರೂ ಕೇಳಿಕೆ–ದಂತಕಥೆಗಳಿದ್ದರೆ ಸಂಗ್ರಹಿಸಬೇಕು. ೨) ಭೌಗೋಲಿಕ ವಿವರಗಳು:– ಇದರಲ್ಲಿ ಎರೆ, ಮಸಾರಿ ಮೊದಲಾದ ಭೂಮಿಯ ಗುಣಗಳು,ಹವೆ, ಮಳೆ, ಬೆಳೆಗಳು; ೩) ಜನಜೀವನ:— ಇದರಲ್ಲಿ ಜನಸಂಖ್ಯೆ; ಮುಖ್ಯ ಉದ್ಯೋಗ; ಪುರವಣಿ ಉದ್ಯೋಗ; ನೀರಿನ ಪೂರೈಕೆ–ನದಿ, ಕೆರೆ, ಬಾವಿಗಳಿಂದ; ಮಾರ್ಗ ಸೌಕರ್ಯ; ಧರ್ಮ ಹಾಗೂ ಧಾರ್ಮಿಕಸಂಸ್ಥೆಗಳು– ಗುಡಿ, ಮಸೀದೆ ಮೊದಲಾದವುಗಳು; ಶಾಲೆ, ಪೋಸ್ಟು ಆಫೀಸು, ಸಂತೆ, ಇವೆ ಮೊದಲಾದ ಮಹತ್ವದ ಹಾಗೂ ಸುಲಭವಾಗಿ ಸಂಗ್ರಹಿಸಲು ಬರಬಹುದಾದ ವಿವರಗಳನ್ನು ಶಿಕ್ಷಕರ ಮಾರ್ಗದರ್ಶನದಲ್ಲಿ ಪ್ರೌಢ ಬಾಲಕರು ಸ್ವಪ್ರಯತ್ನ ದಿಂದ ಕಲೆಹಾಕುವಂತೆ ಮಾಡಬಹುದು.

ಈ ಬಗೆಯ ನಿರೀಕ್ಷಣೆಯಿಂದ ಬಾಲಕರಿಗೆ **ಹಳ್ಳಿಗಳ ಹಾಗೂ ಹಳ್ಳಿ ಗರ ಬಗ್ಗೆ ನಿಜವಾದ ತಿಳುವಳಿಕೆಯುಂಟಾಗುವದು; ಸಹಾನು ಭೂತಿಯು ಉಂಟಾಗುವದು.** ಹಳ್ಳಿಗರೊಡನೆ ಕೂಡಿ ಕೆಲಸ ಮಾಡುವ ಒಲವೂ, ಕಲೆಯೂ ಉಂಟಾಗುವವು.

ವಿದ್ಯಾರ್ಥಿಗಳು ಕೈಕೊಳ್ಳಬಹುದಾದ ವಿವಿಧ ಪಠ್ಯೇತರ ಚಟುವಟಿಕೆ ಗಳ ಮಹತಿಯನ್ನೂ ಪ್ರಕಾರಗಳನ್ನೂ ಇದುವರೆಗೆ ವಿವೇಚಿಸಿದುದಾಯಿತು. ಇವುಗಳನ್ನು ಯಶಸ್ವಿಯಾಗಿ ಮಾಡಲು ಶಿಕ್ಷಕರು ಕೆಲವು ಸಾಮಾನ್ಯ ಸಂಗತಿ ಗಳನ್ನು ಲಕ್ಷದಲ್ಲಿಡಬೇಕಾಗುವದು:— ೧) ಮಕ್ಕಳ ಸರ್ವತೋಮುಖವಾದ

ಬೆಳವಣಿಗೆಗೆ ಈ ಚಟುವಟಿಕೆಗಳು ಇಷ್ಟವಾದರೂ, ಅವುಗಳ **ಅತಿರೇಕದಿಂದ ವಿದ್ಯಾರ್ಥಿಗಳ ಅಭ್ಯಾಸಕ್ಕೆ ಆತಂಕವಾಗದಂತಿರಬೇಕು;** ಅವುಗಳಿಗಾಗಿ ಮಾಡುವ ವೇಳೆಯ ಹಾಗೂ ಹಣದ ವೆಚ್ಚವು ಮಿತಿಮೀರದಂತಿರಬೇಕು. ೨) ಇವುಗಳಿಗಾಗಿ ಅಗತ್ಯವೆನಿಸುವ ಎಲ್ಲ ವಿವರಗಳನ್ನು ಮೊದಲೇ ಪೂರ್ಣವಾಗಿ ವಿಚಾರಿಸದೆ ಇವುಗಳನ್ನು ಕೈಕೊಳ್ಳಬಾರದು. ಸರಿಯಾಗಿ ನಡೆದರೆ ಇವು ಗಳಿಂದಾಗುವ ನೈತಿಕ ಹಾಗೂ ಶೈಕ್ಷಣಿಕ ಲಾಭವು ಹೆಚ್ಚಿನದು. ೩) ಶಕ್ಯ ವಿದ್ದ ಮಟ್ಟಿಗೆ **ಎಲ್ಲ ವಿದ್ಯಾರ್ಥಿಗಳಿಗೂ ಅವುಗಳ ಲಾಭವೂ ಸುಸಂಧಿಯೂ ದೊರೆಯುವಂತೆ** ಯತ್ನಿಸಬೇಕು. ಇಲ್ಲವಾದರೆ ಮುಂದೆ ಬೀಳುವ ಕೆಲವು ವಿದ್ಯಾರ್ಥಿಗಳು ಮಾತ್ರ ಮತ್ತೆ ಮತ್ತೆ ಇವುಗಳಲ್ಲಿ ಮುನ್ನುಗ್ಗುವರು. ಹಿಂದೆ ನಿಲ್ಲುವವರು ಕೊನೆಯವರೆಗೂ ಹಿಂದೆಯೇ ಉಳಿಯುವರು. ಇದನ್ನು ತಪ್ಪಿಸಲು ವಿವಿಧವಾದ ಚಟುವಟಿಕೆಗಳಲ್ಲಿ ಭಾಗ ವಹಿಸಲು ಎಲ್ಲರಿಗೂ ಸರತಿಯು ಬರುವಂತೆ ಇವುಗಳಿಗಾಗಿಯೇ ಒಂದು ವೇಳಾಪತ್ರಿಕೆಯನ್ನು ಶಿಕ್ಷಕರು ಗೊತ್ತುಪಡಿಸಬೇಕು. ಹೀಗಾದರೆ ಮಾತ್ರ ಎಲ್ಲ ವಿದ್ಯಾರ್ಥಿಗಳಿಗೂ ತಮ್ಮಲ್ಲಿರುವ ನೈಸರ್ಗಿಕವಾದ ಶಕ್ತಿಗಳನ್ನು ವಿನಿಯೋಗಿಸಲೂ ಪ್ರದರ್ಶಿಸಲೂ ಅನುವು ದೊರೆಯುವದು.

**ಮೂಲಶಿಕ್ಷಣದಲ್ಲಿ ಈ ಚಟುವಟಿಕೆಗಳೆಲ್ಲಕ್ಕೂ ಮಹತ್ವದ ಸ್ಥಾನವಿದೆ.** ಸಾಮಾಜಿಕ ಜೀವನದ ದರ್ಶನವು ಅವರಿಗೆ ಇವುಗಳಿಂದಾಗುವದು. ಸಾಮಾಜಿಕ ಜೀವನದ ಪ್ರಥಮ ಪಾಠಗಳನ್ನು ಇವುಗಳಲ್ಲಿ ಅವರು ತಿಳಿದುಕೊಳ್ಳುವರು. ತಿಳಿಯದೆಯೆ ಅನೇಕ ಸಾಮಾಜಿಕ ಸದ್ಗುಣಗಳು ಅವರಲ್ಲಿ ನೆಲೆಸುವವು. ಈ ಚಟುವಟಿಕೆಗಳೊಡನೆ, ನಾವು ನೋಡಿದ್ದರ ಹಾಗೂ ಮಾಡಿದ್ದರ ವರದಿ–ವರ್ಣನೆಗಳನ್ನು ಬರೆಯುವದು, ಚಿತ್ರಕಲೆ, ನಕ್ಷೆ–ನಕಾಶಗಳನ್ನು ತೆಗೆಯುವದು ಮೊದಲಾದ ಬಾಲಕರ ಕೆಲಸಗಳನ್ನು ಸರಿಯಾಗಿ ಹೊಂದಿಸಿಕೊಳ್ಳುವಂತಿದೆ.

# ಪರಿಚ್ಛೇದ ೨೦

## ಶಿಕ್ಷಣದಲ್ಲಿ ಹಲವು ಹೊಸ ಪದ್ಧತಿಗಳು

'ಶಿಕ್ಷಣದಲ್ಲಿ ಹೊಸ ಹಾದಿಗಳು' ಎಂಬ ಪರಿಚ್ಛೇದದಲ್ಲಿ ಇಂದಿನ ಹೊಸ ಶಿಕ್ಷಣವು ಯಾವ ರೀತಿಯಿಂದ ಮುಂದೊರೆಯುತ್ತಿದೆಯೆಂಬುದನ್ನು ವಿವೇಚಿಸಲಾಗಿದೆ:— (೧) ಶಿಕ್ಷಣವು **ಶಕ್ಯವಿರುವಷ್ಟು ವ್ಯಕ್ತಿಗತವಾಗ ಬೇಕು.** (೨) ಬೆಳೆಯುವ ಮಗುವಿಗೆ **ಸ್ವತಂತ್ರವಾದ ಜೀವನವಿದೆ,** **ವಿಶಿಷ್ಟವಾದ ಒಲವು–ಶಕ್ತಿಗಳಿವೆ.** (೩) ಚೈತನ್ಯಸ್ವರೂಪಿಗಳಾದ ಚಿಕ್ಕ ಮಕ್ಕಳಿಗೆ **ಆನಂದದಾಯಕವಾದ ಚಟುವಟಿಕೆಯು** ಯಾವಾಗಲೂ ಬೇಕು. ಇಂದಿನ ಶಿಕ್ಷಣದಲ್ಲಿ ಈ ಮೂರು ಸೂತ್ರಗಳ ಮುಪ್ಪುರಿಯು ಕಂಡು ಬರುವದು. ಶಿಕ್ಷಣದ ಎಲ್ಲ ಹೊಸ ಪದ್ಧತಿಗಳಿಗೂ ಈ ಮೂರು ತತ್ವಗಳೇ ಆಧಾರಗಳಾಗಿವೆ. ಈ ಮೂಲಮಂತ್ರಗಳನ್ನು ಸಾರಿದವರಲ್ಲಿ **ರೂಸೋನು** ಮೊದಲಿಗನು. **ಪೆಸ್ಟೆಲೋಜಿ, ಫ್ರೋಬೆಲ್, ಮೊಂಟೀಸರಿ** ಮೊದಲಾದವರು ರೂಸೋನ ಶಿಷ್ಯಪರಂಪರೆಯಲ್ಲಿ ಹೆಸರಾದವರು. ಚಿಕ್ಕಮಕ್ಕಳ ಶಿಕ್ಷಣವನ್ನೆಲ್ಲ ನಿಸರ್ಗಕ್ಕೆ ಬಿಟ್ಟುಕೊಡಬೇಕೆಂಬ ರೂಸೋನ ಸಿದ್ಧಾಂತವನ್ನು ನಿತ್ಯ ಶಿಕ್ಷಣದಲ್ಲಿ ವ್ಯಾವಹಾರಿಕವಾಗಿ ಮಾಡಲು ಇವರೆಲ್ಲರೂ ಯತ್ನಿಸಿರುವರು. ಈ ಬಗೆಯ ಹೊಸ ಪದ್ಧತಿಗಳಲ್ಲಿ ಶಿಕ್ಷಣದ ವೇಳೆ–ವೆಚ್ಚಗಳಲ್ಲಿ ಉಳಿತಾಯವನ್ನು ಮಾಡಲು ಕೆಲವು ಹೊರಟಿರುವವು. ಶಿಕ್ಷಣದ ಆಡಳಿತದ ಅನುಕೂಲತೆಗಾಗಿ ಹೊರಟವುಗಳು ಕೆಲವು. ಮಕ್ಕಳ ಮಾನಸಶಾಸ್ತ್ರದ ಎಳೆಗಳ ಗುಂಟ ಸಾಗ ಬೇಕೆನ್ನುವವು ಮತ್ತೆ ಕೆಲವು. ಈ ಹೊಸ ಯೋಜನೆಗಳೆಲ್ಲವೂ ಕೇವಲ **'ಪದ್ಧತಿ'ಗಳು. ಮಾನಸಶಾಸ್ತ್ರದ ಮೂಲತತ್ವಗಳು ಇವೆಲ್ಲ ಹೊಸ ಪದ್ಧತಿಗಳಿಗೆ ಆಧಾರವಾಗಿರುವವು.** ಈ ಹೊಸ ಪದ್ಧತಿಗಳಲ್ಲಿ ಕೆಲವನ್ನು ಕುರಿತು ಇಲ್ಲಿ ವಿಚಾರಿಸಬಹುದು.

### (೧) **ಕಿಂಡರಗಾರ್ಟೆನ್** ಇಲ್ಲವೆ **ಬಾಲೋದ್ಯಾನ ಪದ್ಧತಿ:—**

ನೂರು ವರುಷಗಳ ಹಿಂದೆ ಜನ್ಮತಾಳಿದ ಬಾಲೋದ್ಯಾನಪದ್ಧತಿಯು ಕಾಲದಲ್ಲಿ ಹೊಸದಲ್ಲ. ಶಿಕ್ಷಣದ ರೀತಿಯಲ್ಲಿ ಹೊಸದು. ಚಿಕ್ಕಮಕ್ಕಳ ಪ್ರೇಮ

ದಿಂದ ಪ್ರೇರಿತನಾದ ಒಬ್ಬ ತತ್ವಜ್ಞಾನಿಯು ಇದನ್ನು ಕಂಡುಹಿಡಿದನು. ಈತನೇ ಫ್ರೋಬೆಲ್‌ನು. ಹದಿನೈದು ವರುಷದವನಿರುವಾಗಲೆ ಹೊಟ್ಟೆಯ ಪಾಡಿಗಾಗಿ ಕಾಡಿನಲ್ಲಿ ಈತನು ಕೆಲಸ ಮಾಡಬೇಕಾಯಿತು. ನಿಸರ್ಗದ ನಿಕಟವಾದ ಸಹವಾಸವು ಈ ಸಮಯದಲ್ಲಿ ಆತನಿಗೆ ದೊರೆಯಿತು. ಅಣು ರೇಣುತೃಣಕಾಷ್ಟಗಳಿಂದ ಮೊದಲುಗೊಂಡು— 'ಜೀವಭಾವ ಪ್ರಸರದಲಿ ಪ್ರಸರಿಸಿದ' ಪರತತ್ವವು, ಆದಿಶಕ್ತಿಯು, ಒಂದೇಯಾಗಿರುವದೆಂಬುದನ್ನು ಫ್ರೋಬೆಲ್‌ನು ಕಂಡುಹಿಡಿದನು. ಸೃಷ್ಟಿಯ ಎಲ್ಲ ಅಂಗಗಳಲ್ಲಿಯೂ ಈ ಆದಿ ಶಕ್ತಿಯ ಅಂಶವಿದೆ, ದೈವಿಕವಾದ ತೇಜಸ್ಸಿದೆ. ಚಿಕ್ಕಮಕ್ಕಳಲ್ಲಿ ಅಡಗಿದ ಆದಿ ಶಕ್ತಿಯ ಅಂಶವನ್ನು ಬೆಳಕಿಗೆ ತರುವದೂ, ಚೈತನ್ಯ ಸ್ವರೂಪಿಯಾದ ಮಗು ವಿನಲ್ಲಿ ಹುದುಗಿದ ದೈವಿಕ ತೇಜಸ್ಸಿನ ಕಿಡಿಯನ್ನು ಹೊತ್ತಿಸಿ ಉಜ್ವಲಗೊಳಿ ಸುವದೂ ಶಿಕ್ಷಣದ ಕಾರ್ಯವೆಂದು ಫ್ರೋಬೆಲ್‌ನು ಹೇಳಿರುವನು. ಅರಣ್ಯ ಖಾತೆಯ ಕೆಲಸವನ್ನು ಬಿಟ್ಟುಕೊಟ್ಟು ಈ ತತ್ವದ ಪ್ರಯೋಗಕ್ಕಾಗಿ ಶಿಕ್ಷಕ ವೃತ್ತಿಯನ್ನು ಕೈಕೊಂಡನು. ತನ್ನ ಗುರುವಾದ ಪೆಸ್ಟೆಲೋಝಿಯೊಡನೆ ಕೂಡಿ ಕೆಲಸ ಮಾಡಿದನು. ಶಿಕ್ಷಕನಾಗಿ ಕೆಲಸ ಮಾಡಿದಲ್ಲೆಲ್ಲ ತಾನು ಕಂಡು ಹಿಡಿದ ತತ್ವವನ್ನು ಬಳಕೆಯಲ್ಲಿ ತರಲು ಯತ್ನಿಸಿದನು. ಕೊನೆಗೆ ತನ್ನ ಶಿಕ್ಷಣ ತತ್ವಗಳ ಮೂರ್ತಸ್ವರೂಪದಂತಿರುವ ಕಿಂಡರಗಾರ್ಟನ್‌ಯೆಂಬ ಸಂಸ್ಥೆಯನ್ನು ಸ್ವತಂತ್ರವಾಗಿ ಸ್ಥಾಪಿಸಿದನು.

**ಫ್ರೋಬೆಲ್‌ನ ಪದ್ಧತಿಯು ಹೆಚ್ಚು ತಾತ್ವಿಕವಾಗಿದೆ.** ಶಿಕ್ಷಣದಲ್ಲಿ **ಶೈಶವದ ಮಹತಿಯನ್ನು** ಆತನು ಮೊದಲು ಜನತೆಯ ನಿದರ್ಶನಕ್ಕೆ ತಂದನು. ಶೈಶವವು ಮುಂದಿನ ಜೀವನದ ತಳಹದಿಯಾಗಿದೆ. ವ್ಯಕ್ತಿಯ 'ಸ್ವ'-ಭಾವದ ರೂಪರೇಷೆಯು ಈ ಅವಧಿಯಲ್ಲಿಯೇ ನಿರ್ಣೀತವಾಗುವದು. ಇಂದು ಬಿತ್ತಿದ ಬೀಜಗಳು,—ಗುಣಗಳೇ ಆಗಿರಲಿ, ವಿಚಾರಗಳೇ ಆಗಿರಲಿ, ಕೃತಿಗಳೇ ಆಗಿರಲಿ,—ಪ್ರಬುದ್ಧಜೀವನದಲ್ಲಿ ಫಲಿಸುವವು. ಇಂದು ಹೇಳಿ ಕೊಟ್ಟದ್ದು '**ಹಸೀಮಣ್ಣಿನಲ್ಲಿ ಹರಳಿಟ್ಟಂತೆ**' ಮಕ್ಕಳ ಮನಸ್ಸಿನಲ್ಲಿ ಚನ್ನಾಗಿ ನಾಟುವದು.

ಚಿಕ್ಕಮಕ್ಕಳ ಮೊದಲುಶಿಕ್ಷಣಕ್ಕೆ ಫ್ರೋಬೆಲ್‌ನು ಕೊಟ್ಟ ' ಬಾಲೋದ್ಯಾನ 'ವೆಂಬ ಹೆಸರು ಸಾರ್ಥಕವಾದುದು. ಬಾಲೋದ್ಯಾನವು ಒಂದು ಶಿಕ್ಷಣ ಸಂಸ್ಥೆಯೂ ಆಗಿಲ್ಲ; ಇಲ್ಲವೇ ಕಟ್ಟುಹಾಕಿದ ಒಂದು ಶಿಕ್ಷಣ ಪದ್ಧತಿಯೂ ಆಗಿರುವದಿಲ್ಲ. ಬಾಲೋದ್ಯಾನವು ಶಿಕ್ಷಣದ ಪೂರ್ವಸಿದ್ಧತೆ, ಆತ್ಮಸಂಸ್ಕಾರದ ಪೂರ್ವಪೀಠಿಕೆ ಮಾತ್ರ. ಚಿಕ್ಕಮಕ್ಕಳು ತೋಟದಲ್ಲಿ ಬೆಳೆಯುವ ಸಸಿಗಳಂತೆ. ಶಿಕ್ಷಕನು ತೋಟಿಗನು. ಬೆಳೆಯುವ ಸಸಿಗೆ ನೀರು–ನೆಲ–ಬೆಳಕುಗಳ ಅನುಕೂಲತೆಯೂ ಬೇಕು. ಕಸ–ಕೀಟಕಗಳಿಂದಾಗುವ ಕಂಟಕವೂ ದೂರವಾಗಬೇಕು. ಇವೆರಡನ್ನೂ ನೋಡಿಕೊಳ್ಳುವದು ತೋಟಿಗನ ಕೆಲಸ. ಶಿಕ್ಷಕನಾದದರೂ ಚಿಕ್ಕಮಕ್ಕಳ ಸುಪ್ತ–ಶಕ್ತಿಗಳು ಬೆಳೆಯುವಂತೆ ಸರಿಯಾದ ಸನ್ನಿವೇಶಗಳನ್ನು ಒದಗಿಸಬೇಕು. ಆತ್ಮವಿಕಾಸಕ್ಕೆ ಬಾಧೆತರುವ ವಿರೋಧಕ ಶಕ್ತಿಗಳನ್ನು ತೆಗೆದುಹಾಕಬೇಕು. ಮಕ್ಕಳ ನೈಸರ್ಗಿಕ ಶಕ್ತಿಗಳ ಸಹಜವಾದ ಸಮರಸವಾದ ಬೆಳವಣಿಗೆಯೇ ಶಿಕ್ಷಣ. ಇದಕ್ಕೆ ಅನುವುಮಾಡಿಕೊಡುವದೇ ಶಿಕ್ಷಕನ ಕಾರ್ಯ. ಇದುವೇ ಬಾಲೋದ್ಯಾನದ ತತ್ವ. ಬಾಲೋದ್ಯಾನ ಶಿಕ್ಷಣ ಮಂದಿರವು ನಿಸರ್ಗದ ಸುಂದರವಾದ ಸನ್ನಿವೇಶದಲ್ಲಿರಬೇಕು. ಸುತ್ತಲೂ ಹೂ–ಹಸಿರುಗಳಿಂದ ಕೂಡಿದ ಉದ್ಯಾನವಿರಬೇಕೆಂದು ಫ್ರೋಬೆಲ್‌ನ ಅಪೇಕ್ಷೆ.

ಚಿಕ್ಕಮಕ್ಕಳಲ್ಲಿ ಸ್ವಾಭಾವಿಕವಾದ ಕೃತಿಪ್ರೇಮವಿರುವದು. ಅವರು ಆಡುವ ಆಟಗಳೇ ಇದಕ್ಕೆ ಸಾಕ್ಷಿಯಾಗಿವೆ. ಚಿಕ್ಕಮಕ್ಕಳು ಆಡುವ ಆಟಗಳನ್ನೇ ಅವರ ಆತ್ಮಸಂಸ್ಕಾರದ ಸಾಧನಗಳನ್ನಾಗಿ ಮಾಡಲು ಫ್ರೋಬೆಲ್‌ನು ಯತ್ನಿಸಿರುವನು. ಈ ಬಗೆಯ ಅನೇಕ ಆಟಗಳನ್ನು ಆತನು ಕಲ್ಪಿಸಿರುವನು. ಇವುಗಳಲ್ಲಿ ಹಲವು ಸಾಂಘಿಕ ಆಟಗಳಾಗಿರುವವು. **ಸಾಮಾಜಿಕ ಪ್ರವೃತ್ತಿಯ ಸರಿಯಾದ ಪೋಷಣೆಗೆ ಸಾಂಘಿಕ ಆಟಗಳೇ ಸಾಧನಗಳು.** ಈ ಆಟಗಳ ಸಾಮಗ್ರಿಗೆ ಫ್ರೋಬೆಲ್‌ನು ' **ಕಾಣಿಕೆ** ' ಗಳೆಂದು ಕರೆದಿರುವನು. ಈ ' ಕಾಣಿಕೆ ' ಗಳೆಲ್ಲ ಜೀವನತತ್ವದ ವಿವಿಧವಾದ ಅಂಶಗಳ ಮೂರ್ತಸ್ವರೂಪಗಳಾಗಿವೆ. ಹಾಡು, ಆಟ, ನೃತ್ಯಗಳಲ್ಲದೆ, ಮೂರ್ತಿಗಳನ್ನು

ಮಾಡುವದು, ಚಿತ್ರಗಳನ್ನು ತೆಗೆಯುವದು, ಪ್ರಾಣಿಗಳನ್ನು ಸಾಕುವದು, ತೋಟಗಳಲ್ಲಿ ಕೆಲಸ ಮಾಡುವದು, ಇವೆ ಮೊದಲಾದ ವಿವಿಧ ಚಟುವಟಿಕೆ ಗಳನ್ನು ಒಂದು ಶೈಕ್ಷಣಿಕ ಉದ್ದೇಶದಿಂದ ಇಲ್ಲಿ ಕೈಕೊಳ್ಳುವರು. ಬೆಳೆಯುವ ಇಂದ್ರಿಯಗಳ ಸರಿಯಾದ ಸಂಸ್ಕರಣ, ಆತ್ಮಶಕ್ತಿಗಳ ವಿಕಾಸ, ಹಾಗೂ ಸಾಮಾ ಜಿಕ ಜೀವನದ ಪ್ರಥಮ ಪಾಠ– ಈ ಉದ್ದೇಶಗಳಿಗಾಗಿಯೇ ಫ್ರೋಬೆಲ್‌ನ 'ಕೃತಿ'ಗಳೂ ಹಾಗೂ 'ಕಾಣಿಕೆ'ಗಳೂ ಪ್ರೇರಿತವಾಗಿರುವವು. ಆತನು ಕಂಡುಹಿಡಿದ ತತ್ವಗಳು ಇಂದಿನ ಹೊಸ ಪದ್ಧತಿಗಳಲ್ಲಿ ಒಂದಿಲ್ಲೊಂದು ಬಗೆ ಯಿಂದ ತೋರಿಬರುವವು.

## (೨) ಮಾಂಟೇಸರಿ ಪದ್ಧತಿಯು:—

ಚಿಕ್ಕಮಕ್ಕಳ ಸ್ವಾತಂತ್ರ್ಯವು ಇಂದಿನ ಶಿಕ್ಷಣದ ಒಂದು ಮೇಲ್ಮೈ ಆಗಿ ದ್ದರೆ, ಅವರಲ್ಲಿಯ ಸ್ವಾವಲಂಬನವು ಇನ್ನೊಂದು ಮೈ ಆಗಿದೆ. ಶಿಕ್ಷಣದಲ್ಲಿ ಈ ಬಗೆಯ **ಸ್ವಾವಲಂಬನದ ಪದ್ಧತಿಯನ್ನು** ಪ್ರಾರಂಭಿಸಿದವರು ಮಾತಾ ಮಾಂಟೇಸರಿಯವರು. ಮಾನಸಿಕ ದೌರ್ಬಲ್ಯಗಳಿಂದ ಅನೇಕ ರೋಗಗಳಿಗೆ ಬಲಿಯಾದ ಜನರನ್ನು ಆಸ್ಪತ್ರೆಯಲ್ಲಿ ವಾಸಿ ಮಾಡುವ ಕಾರ್ಯವು ಇವರ ದಾಗಿತ್ತು. ನಿಸರ್ಗ ನಿರೀಕ್ಷಣೆಯಲ್ಲಿ ಫ್ರೋಬೆಲ್‌ನಿಗೆ ಶಿಕ್ಷಣ ತತ್ವಗಳು ಹೊಳೆ ದವು; ದುರ್ಬಲವಾದ ಮಿದುಳಿನ ಪರೀಕ್ಷೆಯಲ್ಲಿ ಮಾಂಟೇಸರಿಯವರಿಗೆ ಮಕ್ಕಳ ಮೊದಲುಶಿಕ್ಷಣದ ಸರಿಯಾದ ರೀತಿಯು ಕಂಡುಬಂದಿತು. ವೈದ್ಯ ಕೀಯ ವ್ಯವಸಾಯವನ್ನು ಬಿಟ್ಟುಕೊಟ್ಟು ಇವರು ಶಿಕ್ಷಣದಲ್ಲಿ ಹೊಸ ಪ್ರಯೋಗ ವನ್ನು ಕೈಕೊಂಡರು. ಚಿಕ್ಕಮಕ್ಕಳ ಮನೋವೃತ್ತಿಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರು. ಮಕ್ಕಳ ಶಾರೀರಿಕ ಅವಯವಗಳ ರಚನೆಯನ್ನು ಅವುಗಳ ನಿಯತಕಾಲಿಕ ವಿಕಾಸವನ್ನು ಆಗಾಗ್ಗೆ ಪರೀಕ್ಷಿಸಬೇಕು. ಸ್ವತಂತ್ರವಾತಾವ ರಣದಲ್ಲಿ, ಅವರ ಸ್ವಚ್ಛಂದವಿಹಾರಗಳಲ್ಲಿ **ಪ್ರತಿಯೊಂದು ಮಗುವಿನ ವಿಶಿಷ್ಟ ವಾದ 'ವ್ಯಕ್ತಿತ್ವವನ್ನು ಗುರುತಿಸಬೇಕು.** ಅವರ ಒಲವು–ಶಕ್ತಿಗಳಲ್ಲಿ ರುವ ವಿವಿಧತೆಯನ್ನು, ಹೆಚ್ಚುಕಡಿಮೆಗಳನ್ನು ತಿಳಿದುಕೊಳ್ಳಬೇಕು. ಪರೀಕ್ಷೆ ಗಾಗಿ ಪಠ್ಯ ಪುಸ್ತಕಗಳ ಅಧ್ಯಾಪನದ ಒಂದೇ ವಿಧವಾದ ಪಡಿಯಚ್ಚುಗಳಲ್ಲಿ–

ಒಲವು ಶಕ್ತಿಗಳ ವಿವಿಧತೆಗೆ ಎಡೆಗೊಡದೆ,—ಎಲ್ಲ ಮಕ್ಕಳನ್ನು ಒತ್ತಿ ತೆಗೆಯು ವದು ಅವರಿಗೆ ಅಸಹ್ಯವೆನಿಸಿತು. ಬುದ್ಧಿ ಶಕ್ತಿಗಳ ಹೆಚ್ಚುಕಡಿಮೆಯನ್ನು ಲಕ್ಷಿಸದೆ ವೇಳಾಪತ್ರಿಕೆಯು ಎಲ್ಲರನ್ನೂ ಒಂದೇ ವೇಗದಿಂದ ಮುಂದೆ ನೂಕಿ ಕೊಂಡು ಹೋಗುವದು ಅವರಿಗೆ ಅನ್ಯಾಯವೆನಿಸಿತು. ಅಂತೆಯೇ ಮಾಂಟೇ ಸರಿಯವರು ಮಕ್ಕಳ ಶಿಕ್ಷಣ ಪ್ರಪಂಚದಿಂದ ವೇಳಾಪತ್ರಿಕೆಯನ್ನೂ ಪರೀಕ್ಷೆ ಗಳನ್ನೂ ಹೊರಗೆ ತಳ್ಳಿರುವರು.

ಮಾಂಟೇಸರಿ ಸಂಸ್ಥೆಗಳಲ್ಲಿ ಶಿಕ್ಷಣವಾದರೂ ಕೃತ್ರಿಮವಾದ ' ಕಲಿಸು ವಿಕೆ ' ಯಾಗಿರುವದಿಲ್ಲ. ಒತ್ತಾಯದ ' ಕಲಿಯುವಿಕೆ ' ಯೂ ಇರುವದಿಲ್ಲ. ಮಕ್ಕಳ ಆತ್ಮಶಕ್ತಿಗಳ ಪೂರ್ಣವಾದ ವಿಕಾಸವೇ ಶಿಕ್ಷಣವು. ಅವರಲ್ಲಿರುವ ನೈಸರ್ಗಿಕವಾದ ಕೃತಿಪ್ರೇಮವೇ ಅವರನ್ನು ಕಲಿಯಹಚ್ಚುವ ಪ್ರೇರಕ ಶಕ್ತಿ ಯಾಗಿರುವದು. ಸ್ವಯಂಪ್ರೇರಣೆಯಿಂದ ಅವರು ಮಾಡುವ ವಿವಿಧ ಕೃತಿ ಗಳೇ ಅವರ ಆತ್ಮಶಕ್ತಿಗಳನ್ನು ಅರಳಿಸುವವು. ಈ ಕೃತಿಗಳು ಸ್ವಯಂ ಪ್ರೇರಿತ ವಾಗುವಂತೆ ಸರಿಯಾದ ಸನ್ನಿವೇಶಗಳನ್ನು ಒದಗಿಸುವದೂ ಹಿಂದೆ ನಿಂತು ಕೊಂಡು ಅವುಗಳನ್ನು ಸರಿಯಾಗಿ ನಿಯಂತ್ರಿಸುವದೂ ಶಿಕ್ಷಕನ ಕಾರ್ಯ ವಾಗಿದೆ. **ಶಿಕ್ಷಕನು ಕೇವಲ ಮಾರ್ಗದರ್ಶಕನು ಮಾತ್ರ.**

' **ಗತಿ ಶಿಕ್ಷಣ** ' ಹಾಗೂ ' **ಇಂದ್ರಿಯಗಳ ಸಂಸ್ಕರಣ** ' ಗಳು ಈ ಪದ್ಧತಿಯಲ್ಲಿಯ ಎರಡು ಮುಖ್ಯ ಅಂಗಗಳಾಗಿರುವವು. ಬೆಳೆಯುವ ಮಕ್ಕಳ ಸ್ನಾಯುಗಳಿಗೆ ಸಾಕಷ್ಟು ಸರಿಯಾದ ಚಲನವಲನವು ದೊರೆತು ಅವುಗಳನ್ನು ಬಲಿಯುವಂತೆ ಮಾಡುವದು ಗತಿಶಿಕ್ಷಣದ ಒಂದು ಉದ್ದೇಶ, ಅವಯವಗಳ ಚಲನವಲನದಲ್ಲಿ ಸರಿಯಾದ ' **ತಾಲ-ಲಯ** 'ಗಳನ್ನು ತಂದು ಕೊಡುವದು ಎರಡನೇ ಉದ್ದೇಶವಾಗಿದೆ. ಮಕ್ಕಳು ಯಾವಾಗಲೂ ನಿರೋಗಿಗಳಾಗಿರು ವಂತೆ ನೋಡಿಕೊಳ್ಳಬೇಕೆಂದು ಮಾಂಟೇಸರಿಯವರು ಹೇಳುವದುಂಟು. **ಸ್ವಚ್ಛತೆ—ಅಚ್ಚುಕಟ್ಟುತನಗಳ** ಬಗ್ಗೆ ಮೊದಲಿನಿಂದಲೇ ಚಿಕ್ಕಮಕ್ಕಳಲ್ಲಿ ಪ್ರೀತಿಯನ್ನು ಅವರು ಹುಟ್ಟಿಸುವರು. ಹಲ್ಲು ಉಜ್ಜಿಕೊಳ್ಳುವದು, ಮುಖ ತೊಳೆದುಕೊಳ್ಳುವದು, ಜಳಕ ಮಾಡುವದು, ತಮ್ಮ ಆಟದ ಒಡವೆಗಳನ್ನು

ಓರಣದಿಂದ ಅವುಗಳ ಸ್ಥಾನದಲ್ಲಿಯೇ ಇಡುವದು—ಇವೇ ಮೊದಲಾದ ಕೆಲಸ ಗಳನ್ನು ಚಿಕ್ಕಮಕ್ಕಳ ಕೈಯಿಂದಲೇ ಅವರು ಮಾಡಿಸುವರು. ಇದರಿಂದ ಓರಣದ ಜೊತೆಗೆ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವ ಸ್ವಾವಲಂಬ ನವೂ ಅವರಲ್ಲಿ ಬೆಳೆದುಬರುವದು. ಮಕ್ಕಳು ಉಪಯೋಗಿಸುವ ವಸ್ತು ಗಳೆಲ್ಲವೂ ಅವರ ಶಕ್ತಿಗೆ, ಅವರ ಎತ್ತರಕ್ಕೆ ಹಾಳತಾಗಿರಬೇಕು. ಗೂಟಗಳು ಅವರಿಗೆ ನಿಲುಕುವಂತಿರಬೇಕು. ಮೇಜು ಖುರ್ಚಿಗಳು ಅತ್ತಿತ್ತ ಸರಿಸಲು ಬರುವಂತೆ ಹಗುರಾಗಿರಬೇಕೆಂದು ಇವರು ಹೇಳುವರು.

**ಇಂದ್ರಿಯಗಳ ಸಂಸ್ಕರಣವು** ಇದಕ್ಕಿಂತಲೂ ಹೆಚ್ಚಿನದಾಗಿದೆ. ಮಾಂಟೀ ಸರಿಯವರು ಕಲ್ಪಿಸಿದ ಇಂದ್ರಿಯ ಸಂಸ್ಕರಣದ ಯೋಜನೆಯು ಜಗತ್ತಿನಲ್ಲಿ ಶಿಕ್ಷಣ ತಜ್ಞರ ಲಕ್ಷವನ್ನು ಸೆಳೆದಿದೆ. ಅವರ ಮೆಚ್ಚುಗೆಗೆ ಪಾತ್ರವಾಗಿದೆ. **ಇಂದ್ರಿಯಗಳು ಜ್ಞಾನದ ಮೂಲ ಸಾಧನಗಳು.** ಇವುಗಳ ಸರಿಯಾದ ಸಂಸ್ಕರಣವೇ ಜ್ಞಾನದ ವಿಕಾಸವು. ಇಂದ್ರಿಯಗಳ ಸರ್ವತೋಮುಖವಾದ ಸಂಸ್ಕರಣಕ್ಕಾಗಿ ಮಾಂಟೀಸರಿಯವರು ಒಳ್ಳೇ **ಮಾರ್ಮಿಕವಾದ ಸಲಕರಣೆ** ಗಳನ್ನು ಕಲ್ಪಿಸಿರುವರು. ಬಣ್ಣಗಳ ಭೇದ-ಪ್ರಭೇದಗಳನ್ನೂ, ಆಕಾರ ಆಕೃತಿ ಗಳ ಹೆಚ್ಚುಕಡಿಮೆಗಳನ್ನೂ, ಒಡವೆಗಳ ಒರಟು-ನುಣುಪುಗಳನ್ನೂ, ಸ್ವರಗಳ ಆಳ-ವೇಗಗಳನ್ನೂ ಚಿಕ್ಕಮಕ್ಕಳು ತಾವಾಗಿಯೇ ಒಂದು ಆಟದ ರೀತಿಯಲ್ಲಿ ತಿಳಿದುಕೊಳ್ಳಲು ಬರುವಂತೆ ಇವರು ವಿವಿಧವಾದ ಸಾಧನ ಸಾಮುಗ್ರಿಗಳನ್ನು ರಚಿಸಿರುವರು. ನಿರುದ್ಯೋಗಿಯಾದ ಮಗುವು ಹಟ ಮಾಡುವದು, 'ಹುಡದಿ' ಹಾಕುವದು. ಆದರೆ ಸ್ವಯಂಪ್ರೇರಣೆಯಿಂದ ತನಗೆ ಅನುರೂಪವಾದ ಆನಂದ ದಾಯಕವಾದ ವಿವಿಧ ಕಾರ್ಯಗಳಲ್ಲಿ ತೊಡಗಿದ ಮಗುವು ಅವುಗಳಲ್ಲಿಯೇ ನಿರತವಾಗಿಬಿಡುವದು. ಇದರಿಂದ ವರ್ಗದಲ್ಲಿ 'ಶಿಸ್ತು' ತರುವ, ಕಾಯುವ ಸಮಸ್ಯೆಯೇ ಇಲ್ಲದಂತಾಗುವದು. ಹೊರಗಿನಿಂದ ನೋಡುವವರಿಗೆ ಮಾಂಟೀ ಸರಿ ವರ್ಗದಲ್ಲಿ-'ಇದೇನು ಗೊಂದಲ?' ವೆಂದು ಎನಿಸಬಹುದಾದರೂ, **ಅಲ್ಲಿ ನಡೆಯುವ ಕಾರ್ಯಗಳಲ್ಲಿ ಸಹಜವಾದ ಒಂದು ಕ್ರಮವಿರುವದು.** ಶಿಕ್ಷಕನ ಸಹಾಯವಿಲ್ಲದೆ ಮಕ್ಕಳು ತಮ್ಮ ತಪ್ಪುಗಳನ್ನು ತಾವೇ ಕಂಡುಹಿಡಿ

ಯುವರು. ಇದಕ್ಕೆ '**ಸ್ವಯಂಶಿಕ್ಷಣ**' ವೆಂದು ಕರೆದಿರುವರು. ಕೂಡಿ ಕೆಲಸ ಮಾಡುವಾಗ್ಗೆ ತಾಳ್ಮೆ, ಸಹಕಾರ, ಸಹಾನುಭೂತಿ ಮೊದಲಾದ ಸಾಂಘಿಕ ಜೀವನೋಪಯೋಗಿಯಾದ ಸದ್ಗುಣಗಳು ತಾವಾಗಿಯೇ ಅವರಲ್ಲಿ ಅಂಕುರಿಸು ವವು. ಮಾಂಟೇಸರಿ ವರ್ಗಗಳಲ್ಲಿ ಪರೀಕ್ಷೆಗಳನ್ನು ತೆಗೆದುಹಾಕಿರುವಂತೆ, ಪಾರಿತೋಷಿಕಗಳಿಗೂ ಎಡೆಯಿಲ್ಲ. ತಮ್ಮ ಪರಿಶ್ರಮದ ಯಶಸ್ವಿತೆಯೆ ಬಾಲ ಕರಿಗೆ ಹೆಚ್ಚಿನ ಪಾರಿತೋಷಿಕವೆನಿಸುವದು. ತಾವು ಮಾಡಿದ ಪ್ರಗತಿಯಿಂದಲೆ ಅವರಿಗೆ ಪರಮ ಸಂತೋಷ. ಇಂದ್ರಿಯ ಸಂಸ್ಕರಣದ ವಿವಿಧ ಸಾಧನಗಳಿಂದ ವಿವಿಧ ವಿಷಯಗಳ ಜ್ಞಾನವನ್ನು ಮಾಂಟೇಸರಿಯವರು ಚಿಕ್ಕಮಕ್ಕಳಿಗೆ ಮಾಡಿ ಕೊಡುವರು. ಗಣಿತದ ಮೇಲ್ಮೆಯಲ್ಲಿ ಅವರಿಗೆ ವಿಶೇಷವಾದ ಶ್ರದ್ಧೆ. ಮಾಂಟೇ ಸರಿ ವರ್ಗದಲ್ಲಿ ತರಬೇತು ಹೊಂದಿದ ಐದು ವರುಷದ ಚಿಕ್ಕ ಮಗುವು ೮–೧೦ ಸಂಖ್ಯೆಗಳ ವರೆಗೆ ಕೂಡಿಸಬಲ್ಲದು, ಕಳೆಯಬಲ್ಲದು, ಗುಣಿಸಬಲ್ಲದು. ಜಗ ತ್ತಿನ ರಾಷ್ಟ್ರಗಳ ಧ್ವಜಗಳನ್ನೆಲ್ಲ ಗುರುತಿಸಬಲ್ಲದು. ರಾಜಧಾನಿಗಳ ಹೆಸರನ್ನು ಹೇಳಬಲ್ಲದು. ಈ ಪದ್ಧತಿಯಲ್ಲಿ ಓದು ಹಿಂದುಗಡೆ, ಬರೆಹ ಮೊದಲು. ಚಿತ್ರ ತೆಗೆಯುವದರಿಂದಲೇ ಬರೆಹದ ಪ್ರಾರಂಭ. ಇಂದು ನಮಗೆ ತಿಳಿದು ಬಂದಿ ರುವ **ಮಾತೃಭಾಷೆಯ ಮಹತ್ವವನ್ನು** ಮಾಂಟೇಸರಿಯವರು ಮೊದಲೇ ಕಂಡುಹಿಡಿದಿರುವರು. ಮಾಂಟೇಸರಿಯವರ ತತ್ವಗಳ ತಿರುಳನ್ನು ತಾಯಿ ತಂದೆಗಳು ತಿಳಿದುಕೊಂಡು ವರ್ತಿಸಿದರೆ ನಮ್ಮ ದೇಶದಲ್ಲಿಯೂ ಚಿಕ್ಕಮಕ್ಕಳ ಕಲ್ಯಾಣವು ಎಷ್ಟೋ ಮುಂದೊರೆಯಬಹುದು.

### (೩) ಡಾಲ್ಟನ್ ಪದ್ಧತಿ:—

ಸಾಂಪ್ರದಾಯಿಕವಾದ ಸಾಂಘಿಕ ಶಿಕ್ಷಣದಿಂದ ದೂರ ಸಿಡಿದು ಹೋದ ಶಿಕ್ಷಣ ಪದ್ಧತಿಗಳಲ್ಲಿ ಡಾಲ್ಟನ್ ಪದ್ಧತಿಯು ಪ್ರಸಿದ್ಧವಾಗಿದೆ. **ಕುಮಾರಿ ಹೆಲೆನ್ ಪಾರ್ಕಹರ್ಸ್ಟಳೆಂಬವಳು** ಈ ಪದ್ಧತಿಯ ಯೋಜಕಳು. ಶಿಕ್ಷಣ ದಲ್ಲಿ ಚಿಕ್ಕಮಕ್ಕಳಿಗಿರಬೇಕಾದ ಸ್ವಾತಂತ್ರ್ಯವನ್ನೂ ಸ್ವಾವಲಂಬನವನ್ನೂ ಮಾತಾ ಮಾಂಟೇಸರಿಯವರು ಮೊದಲು ಕಂಡುಹಿಡಿದವರು. ಕುಮಾರಿ ಪಾರ್ಕಹರ್ಸ್ಟಳು ಇದೇ ತತ್ವವನ್ನೇ ತನ್ನ ಪದ್ಧತಿಗೆ ತಳಹದಿಯಾಗಿ ಇಟ್ಟು

ಕೊಂಡಿರುವಳು. ಸ್ವಂತ ಪರಿಶ್ರಮದಿಂದ ಸಂಪಾದಿಸಿದ ಜ್ಞಾನವೇ ನಿಜವಾದ ಜ್ಞಾನವೆಂದು ಇವಳ ಮತ. ವರ್ಗಗಳಲ್ಲಿ ಕೊಡುವ ಸಾಂಘಿಕ ಶಿಕ್ಷಣದಲ್ಲಿ ವಿದ್ಯಾರ್ಥಿಗಳ ಸ್ವಾನುಭವ—ಸ್ವಂತ ಪರಿಶ್ರಮಗಳಿಗೆ ಆಸ್ಪದವೇ ಇಲ್ಲ. ಶಿಕ್ಷಕ ನಿಂದಲೇ ಎಲ್ಲವನ್ನೂ ತಿಳಿದುಕೊಳ್ಳಬೇಕು. ಆತನು ಹೇಳಿದುದೇ ಪ್ರಮಾಣ. ಈ ಬಗೆಯ ವರ್ಗದ ಶಿಕ್ಷಣವು ಪರಾವಲಂಬನವನ್ನು ಹೆಚ್ಚಿಸುವದು. ಸ್ವತಂತ್ರ ವಿಚಾರಶಕ್ತಿಯನ್ನು ಅಳಿದುಬಿಡುವದು. ಒಂದು ಬಗೆಯ ಅಧೈರ್ಯ—ಅಸಹಾಯತೆಗಳು ಇಂದಿನ ಜನಾಂಗದಲ್ಲಿ ಬರುವದಕ್ಕೆ ವರ್ಗದ ಸಾಮುದಾಯಿಕವಾದ ಶಿಕ್ಷಣವೇ ಕಾರಣವೆಂದು ಇವಳ ಮತವಾಗಿದೆ. ಮೇಲಾಗಿ ಚಿಕ್ಕಮಕ್ಕಳ ಒಲವು—ಶಕ್ತಿಗಳು ಭಿನ್ನವಾಗಿರುವವು. ಎಲ್ಲರನ್ನೂ ಒಂದೇ ವೇಗ ದಿಂದ ಎಳೆದುಕೊಂಡು ಹೋಗುವ **ವೇಳಾಪತ್ರಿಕೆಗೆ ವಿರೋಧಿಸುವ 'ಬಂಡುಗಾರ' ರಲ್ಲಿ ಡಾಲ್ಟನ್ ಪದ್ಧತಿಯು ಒಂದಾಗಿದೆ.**

ಈ ಪದ್ಧತಿಯಲ್ಲಿ ವೇಳಾಪತ್ರಿಕೆಯಿಲ್ಲ. ವರ್ಗದೆದುರು ನಿಂತು ಶಿಕ್ಷಕರು ಕೂಗಿಕೊಳ್ಳಬೇಕಿಲ್ಲ. ವರುಷದಲ್ಲಿ ಮುಗಿಸಬೇಕಾದ ವಿಷಯಗಳನ್ನು ಮಾಸಿಕ, ಸಾಪ್ತಾಹಿಕ ಹಾಗೂ ದೈನಿಕ ವಿಭಾಗಗಳಾಗಿ ಹಂಚುವರು. ವಿಭಾಗಿಸಿ ಕೊಟ್ಟ ವಿಷಯಗಳನ್ನು ಹಾಕಿಕೊಟ್ಟ ಅವಧಿಯಲ್ಲಿ ವಿದ್ಯಾರ್ಥಿಯು ಮುಗಿಸಿ ಪರೀಕ್ಷೆಯಲ್ಲಿ ಒಪ್ಪಿಸಲೇಬೇಕು. ಈ ವಿಭಾಗಗಳನ್ನು ಬುದ್ಧಿಶಕ್ತಿಯ ಹೆಚ್ಚು ಕಡಿಮೆಗಳಿಗನುಸಾರವಾಗಿ ಮೂರು ಪ್ರಕಾರದವುಗಳನ್ನಾಗಿ ಮಾಡುವರು. ಒಪ್ಪಿಸಿಕೊಂಡ ವಿಷಯವನ್ನು ಪ್ರತಿಯೊಬ್ಬ ವಿದ್ಯಾರ್ಥಿಯು ತನ್ನ ಇಚ್ಛೆಯ ಮೇರೆಗೆ, ಓದುವ 'ಸ್ಫೂರ್ತಿ'ಯುಂಟಾದಾಗ್ಗೆ, ತನಗೆ ಸಾಧ್ಯವಿರುವ ವೇಗ ದಿಂದ ಓದಿ ಮುಗಿಸಬಹುದು. **ಪ್ರತಿಯೊಂದು ವಿಷಯಕ್ಕೆ ಪ್ರತ್ಯೇಕ ವಾದ ಒಂದು ಕೋಣೆಯನ್ನು** ಗೊತ್ತುಪಡಿಸುವರು. ಈ ಕೋಣೆಗೆ ಆ ವಿಷಯದ '**ಪ್ರಯೋಗಾಲಯ**'ವೆಂದು ಕರೆಯುವದುಂಟು. ಆ ವಿಷಯ ಗಳಲ್ಲಿ 'ನಿಷ್ಣಾತ'ರಾದ ಶಿಕ್ಷಕರು ಆ ಕೋಣೆಯಲ್ಲಿರುವರು. ಆ ವಿಷಯಕ್ಕೆ ಸಂಬಂಧಿಸಿದ ನಕ್ಷೆ—ನಕಾಶಗಳನ್ನೂ ಪುಸ್ತಕಗಳನ್ನೂ ಅಲ್ಲಿ ವ್ಯವಸ್ಥಿತವಾಗಿ ಇಟ್ಟಿರುವರು. ತನಗೆ ಬೇಸರಬರುವವರೆಗೆ ಬೇಕಾದ ವಿಷಯವನ್ನು ಓದಿ

ಮುಗಿಸಿ ಮತ್ತೊಂದು ವಿಷಯದ ಕೋಣೆಗೆ ವಿದ್ಯಾರ್ಥಿಯು ಹೋಗಬಹುದು. ಮುಗಿಸಬೇಕಾದ ವಿಷಯಭಾಗಕ್ಕೆ ಶಿಕ್ಷಕನೊಡನೆ ಕರಾರು ಮಾಡಿಕೊಂಡ '**ಗುತ್ತಿಗೆ**'ಯೆಂದು ಹೇಳುವರು. ಈ ಗುತ್ತಿಗೆಯ ಎಷ್ಟು ಭಾಗವನ್ನು ಅಂದು ಮುಗಿಸಿದನೆಂಬುದನ್ನು ಆತನು ತನ್ನ ಪತ್ರಿಕೆಯಲ್ಲಿ ತೋರಿಸಿ ಮುಂದೆ ಸಾಗ ಬೇಕು. ಗುತ್ತಿಗೆಯ ಪತ್ರಿಕೆಯಲ್ಲಿ ಅವಶ್ಯವಾದ ವಿಷಯಗಳನ್ನು ಯಾವ ಪುಸ್ತಕಗಳಿಂದ ಸಂಗ್ರಹಿಸಬೇಕೆಂಬುವದನ್ನೂ, ಎಲ್ಲವನ್ನೂ ಓದಿ ಮುಗಿಸಿದ ಮೇಲೆ ಉತ್ತರವನ್ನು ಬರೆಯಲು ಕೆಲವು ಪ್ರಶ್ನೆಗಳನ್ನೂ ಕೊಟ್ಟಿರುವರು. ಒಂದು ಗುತ್ತಿಗೆಯ ಕೆಲಸವು ತೃಪ್ತಿಕರವಾಗಿ ತೀರುವವರೆಗೆ ಮುಂದಿನ ಬೇರೊಂದು ಗುತ್ತಿಗೆಗೆ ಆತನು ಅರ್ಹನಾಗಲಾರನು. ಪ್ರತಿಯೊಬ್ಬ ವಿದ್ಯಾ ರ್ಥಿಯ ಹಾಗೂ ವರ್ಗದ ಪ್ರಗತಿಯನ್ನು ತೋರಿಸುವ ಪತ್ರಿಕೆಗಳನ್ನೂ ಈ ಪದ್ಧತಿಯಲ್ಲಿ ಯೋಜಿಸಲಾಗಿದೆ. ಈ ಪದ್ಧತಿಯಲ್ಲಿ ಶಿಕ್ಷಕರ ಕೆಲಸವೆಂದರೆ– ತಮ್ಮ ವಿಷಯಗಳ ಪ್ರಯೋಗ ಶಾಲೆಯಲ್ಲಿ ವಿದ್ಯಾರ್ಥಿಗಳು ತಾವಾಗಿಯೇ ತಮ್ಮ ವಿಷಯಗಳನ್ನು ಓದಲು ಅನುಕೂಲವಾದ ಹಾಗೂ ಅವಶ್ಯವಾದ ವಸ್ತು ಸಂಗ್ರಹವನ್ನೂ ಶಿಸ್ತನ್ನೂ ಒದಗಿಸುವದು. ಕೇಳಿದಾಗ್ಗೆ ಅವರಿಗೆ ಸಲಹೆ– ಸೂಚನೆಗಳನ್ನು ಕೊಡುವದು. ಇದಕ್ಕೂ ಹೆಚ್ಚಿನ ಕೆಲಸವೆಂದರೆ ಅವಧಿ ಗಳ ಮೇರೆಗೆ ವಿಷಯಗಳ ವಿಭಾಗಗಳನ್ನು ಗೊತ್ತುಪಡಿಸುವದು. ಸಾಂಪ್ರ ದಾಯಿಕ ಶಿಕ್ಷಕರು ಡಾಲ್ಟನ್ ಪದ್ಧತಿಯಲ್ಲಿ ಕೆಲವು ದೋಷಗಳನ್ನೆತ್ತಿ ತೋರಿ ಸುವಂತಿದ್ದರೂ, ಶಿಕ್ಷಣದಲ್ಲಿ ಸ್ವಾವಲಂಬನವನ್ನು ತರಲು ಮಾಡಿದ ಈ ಸಾಹಸವು ಸ್ತುತ್ಯವಾಗಿದೆಯೆಂದು ಹೇಳಬಹುದು.

## (೪) 'ಗ್ಯಾರಿ' ಪದ್ಧತಿಯು:—

ಮಕ್ಕಳ ಸ್ವಾತಂತ್ರ್ಯ – ಸ್ವಾವಲಂಬನಗಳನ್ನೇ ಮುಂದಿಟ್ಟುಕೊಂಡ ಶಿಕ್ಷಣ ಪದ್ಧತಿಗಳಲ್ಲಿ ಇದೂ ಒಂದು. 'ಗ್ಯಾರಿ'ಯೆನ್ನುವದು ಅಮೇರಿಕೆಯ ಇಂಡಿಯಾನಾ ಸಂಸ್ಥಾನದಲ್ಲಿಯ ಒಂದು ಊರು. '**ವರ್ಟ**'ಯೆಂಬ ಹೆಸರಿನ ಶಾಲಾಧಿಕಾರಿಯೊಬ್ಬನು ಈ ಪದ್ಧತಿಯನ್ನು ಕಲ್ಪಿಸಿರುವನು. ಈ ಊರಿನಲ್ಲಿ ಶಾಲೆಗೆ ಹೋಗುವ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿತ್ತು. ಆದರೆ ಶಾಲೆಯಲ್ಲಿ

ಅವರಿಗಾಗಿ ಸ್ಥಳವಿರಲಿಲ್ಲ. ಸಾರ್ವಜನಿಕ ಹಣದಿಂದ ಕಟ್ಟಿಸಿದ ಶಾಲೆಯ ಕಟ್ಟಡಗಳನ್ನು ಶಾಲೆಯ ಅವಧಿಯ ಅಲ್ಪಕಾಲದಲ್ಲಿ ಮಾತ್ರ ಉಪಯೋಗಿಸಿ ಉಳಿದ ವೇಳೆಯಲ್ಲಿ ಅವುಗಳನ್ನು ಖಾಲಿಯಾಗಿ ಬಿಟ್ಟುಬಿಡುವದು ಈ ಅಧಿಕಾರಿಗೆ ಸರಿದೋರಲಿಲ್ಲ. ಶಾಲೆಯ ಕಟ್ಟಡದ ಉಪಯೋಗವನ್ನು ಶಕ್ಯವಿದ್ದಷ್ಟು ಹೆಚ್ಚುಕಾಲದವರೆಗೆ ತೆಗೆದುಕೊಂಡು, ಸರತಿಯಂತೆ ಅಲ್ಲಿರುವ ಎಲ್ಲ ಮಕ್ಕಳಿಗೂ ಶಿಕ್ಷಣದ ಸೌಕರ್ಯವನ್ನು ಒದಗಿಸುವ ಯೋಜನೆಯನ್ನು ಈತನು ರಚಿಸಿದನು. ಇದೇ ಗ್ಯಾರೀ ಪದ್ಧತಿಯ ವೈಶಿಷ್ಟ್ಯವಾಗಿದೆ. ಈ ಯೋಜನೆಯಿಂದ ಮೊದಲಿಗಿಂತಲೂ ಎರಡುಮೂರುಪಟ್ಟು ಹೆಚ್ಚು ಸಂಖ್ಯೆಯ ವಿದ್ಯಾರ್ಥಿಗಳು ಒಂದೇ ಕಟ್ಟಡದಲ್ಲಿ ಶಿಕ್ಷಣ ಹೊಂದಲು ಅನುವಾಯಿತು. 'ಗ್ಯಾರೀ' ಶಾಲೆಗಳಲ್ಲಿ ವಿದ್ಯಾರ್ಥಿಗಳನ್ನು ಎರಡು ಗುಂಪುಗಳನ್ನಾಗಿ ಮಾಡುವರು. ತಮ್ಮ ಐಚ್ಛಿಕ ವಿಷಯಗಳನ್ನು ಆ ವಿಷಯಗಳಿಗಾಗಿಯೇ ಕಾದಿಟ್ಟ 'ಕೋಣೆ'ಗಳಲ್ಲಿ ಓದಿಕೊಳ್ಳುವವರದು ಒಂದು ಗುಂಪು. ಎಲ್ಲ ವರ್ಗಗಳಲ್ಲಿ ಶಿಕ್ಷಣ ಹೊಂದುವವರದು ಮತ್ತೊಂದು ಗುಂಪು. ಮಧ್ಯಾಹ್ನ ಮೂರುವರೆಯಾದನಂತರ ಎಲ್ಲ ವಿದ್ಯಾರ್ಥಿಗಳಿಗೂ ವಿವಿಧವಾದ ಆಟಗಳನ್ನು ಒದಗಿಸುವರು. ರಾತ್ರಿಯಲ್ಲಿ ಅದೇ ಶಾಲೆಯ ಕಟ್ಟಡವನ್ನೇ ಪ್ರೌಢವರ್ಗಗಳಿಗಾಗಿ ಉಪಯೋಗಿಸುವರು. ವಿದ್ಯಾರ್ಥಿಗಳು ತಾವಾಗಿಯೇ ಮಾಡುವ (೧) ಪರಿಶ್ರಮವೂ, ವರ್ಗಗಳಲ್ಲಿ ನಡೆಯುವ (೨) ಅಧ್ಯಯನವೂ, ಶಿಕ್ಷಕರ ನೇತೃತ್ವದಲ್ಲಿ ನಡೆಯುವ ವಿವಿಧವಾದ (೩) ಆಟಗಳೂ ಇವುಗಳ ಸಮಯೋಚಿತವಾದ ಸಮ್ಮಿಶ್ರಣವೇ ಗ್ಯಾರಿ ಪದ್ಧತಿಯ ವೈಶಿಷ್ಟ್ಯವಾಗಿದೆ.

### (೫) 'ಶಿಫ್ಟ' ವರ್ಗಗಳು:—

ನಮ್ಮ ದೇಶದಲ್ಲಿ ಸದ್ಯಕ್ಕೆ ಎಲ್ಲೆಡೆಗೆ ಪ್ರಚಲಿತವಾಗಿರುವ 'ಶಿಫ್ಟ' ವರ್ಗಗಳು ಈ ಗ್ಯಾರೀ ಪದ್ಧತಿಯಿಂದ ಕೆಲವು ಸಂಗತಿಗಳನ್ನು ಕಲಿಯುವಂತಿದೆ. ಸ್ಥಳದ ಕೊರತೆಗಾಗಿ, ಇಲ್ಲವೇ ಯೋಗ್ಯ ಶಿಕ್ಷಕರ ಅಭಾವಕ್ಕಾಗಿ ಇಂಥ ಶಿಫ್ಟ ವರ್ಗಗಳನ್ನು ಜಾರಿಯಲ್ಲಿ ತರುವದುಂಟು. ಮುಂಜಾನೆ ಮೊದಲಿನ ಇಯತ್ತೆಗಳನ್ನೂ ಮಧ್ಯಾಹ್ನದಲ್ಲಿ ಮೇಲಿನ ಇಯತ್ತೆಗಳನ್ನೂ 'ಪಾಳಿ'

ಯಂತೆ ತೆಗೆದುಕೊಳ್ಳುವದು ಪರಿಪಾಠವಾಗಿದೆ. ಇಂತ್ತೆಗಳನ್ನು ವಿಭಾಗಿಸಿ ಹೀಗೆ 'ಪಾಳಿ'ಯಂತೆ ತೆಗೆದುಕೊಳ್ಳದೆ, ಕಲಿಯುವ ವಿಷಯಗಳನ್ನೇ ಗ್ಯಾರೀ ಪದ್ಧತಿಯ ಮೇರೆಗೆ ಎರಡು ಗುಂಪುಗಳನ್ನಾಗಿ ಮಾಡಿ, 'ಕಲಿಸಬೇಕಾಗುವ' ವರ್ಗದ ವಿಷಯಗಳು ಮುಂಜಾವಿನ ಗುಂಪುಗಳಾಗಿರಬಹುದು. ಶಿಕ್ಷಕನ ಮೇಲ್ವಿಚಾರಣೆಯಲ್ಲಿ ಆತನ ಸಲಹೆಸಹಾಯಗಳಿಂದ, ವಿದ್ಯಾರ್ಥಿಗಳು ತಾವೇ ಓದಿ ತಿಳಿದುಕೊಳ್ಳಬಹುದಾದ ಇತಿಹಾಸ, ಹೆಚ್ಚಿನ ಓದು, ಮೊದಲಾದವು ಗಳು ಮಧ್ಯಾಹ್ನದ ವಿಷಯಗಳಾಗಬಹುದು. ಶಾಲೆಯಲ್ಲಿ ಕಲಿಸುವ ಅವಧಿಯು ಕಡಿಮೆಯಾಗಿರುವದೆಂದು ಈಗಾಗಲೇ ಹಲವು ಪಾಲಕರು 'ಶಿಫ್ಟ' ಪದ್ಧತಿಯ ಬಗ್ಗೆ ದೂರಿಟ್ಟುಕೊಳ್ಳುವದುಂಟು. ಆದರೆ ಚಿಕ್ಕಮಕ್ಕಳಿಗೆ ಎರಡು ಮೂರು ತಾಸುಗಳಿಗಿಂತಲೂ ಹೆಚ್ಚು ಕಲಿಯಬೇಕಾದ ವಿಷಯಗಳೂ ಇರುವದಿಲ್ಲ. ಈ ಅವಧಿಗಿಂತಲೂ ಹೆಚ್ಚಿಗೆ ಶಾಲೆಯಲ್ಲಿ ಅವರನ್ನು 'ಹಿಡಿದು' ಹಾಕುವದು ಬೆಳೆಯುವ ಅವರ ಜೀವನಕ್ಕೆ ಹಿತಕಾರಕವಲ್ಲವೆಂಬುದನ್ನು ಪಾಲಕರಿಗೆ ತಿಳಿಸಿಹೇಳಬಹುದು.

### (೬) 'ಜೋಡುವರ್ಗಗಳು':—

ಶಾಲೆಯಲ್ಲಿ ಸ್ಥಲಾಭಾವಕ್ಕಾಗಿ "ಶಿಫ್ಟ" ವರ್ಗಗಳ ರಚನೆಯಾದರೆ ಒಂದು 'ವರ್ಗ'ವಾಗುವದಕ್ಕೆ ಸಾಕಷ್ಟು ವಿದ್ಯಾರ್ಥಿಗಳಿರದ್ದಕ್ಕಾಗಿ 'ಜೋಡು ವರ್ಗ'ಗಳನ್ನು ರಚಿಸಬೇಕಾಗುವದು. ನಿರಕ್ಷರತೆಯ ನೆಲೆಮನೆಗಳಾದ ನಮ್ಮ ದೇಶದ ಹಳ್ಳಿಗಳಲ್ಲಿ ಇನ್ನೂ ಶಿಕ್ಷಣದ ಬಗ್ಗೆ ಆಸ್ಥೆ ಹುಟ್ಟಬೇಕಾಗಿರುವದು. ಒತ್ತಾಯದ ಸಾರ್ವತ್ರಿಕ ಶಿಕ್ಷಣವು ಅಮಲಿನಲ್ಲಿ ಬರುವವರೆಗೆ ಹಳ್ಳಿಯ ಶಿಕ್ಷಕನು ಮನೆಮನೆಗೆ ಹೋಗಿ ವಿದ್ಯಾರ್ಥಿಗಳನ್ನು 'ಕಲೆಹಾಕ'ಬೇಕಾಗುವದು. ೫೦–೧೦೦ ವಿದ್ಯಾರ್ಥಿಗಳಿರುವಲ್ಲಿ ೩ ಅಥವಾ ೪ ವರ್ಗಗಳಿರುವವು. ಸರಕಾರವಾಗಲೀ ಸ್ಥಾನಿಕಸಂಸ್ಥೆಯಾಗಲೀ ೪೦ ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಂತೆ ಶಿಕ್ಷಕರನ್ನು ಪೂರೈಸುವದು. ಹೀಗಾಗಿ **ಒಬ್ಬ ಶಿಕ್ಷಕನೇ ಎರಡು ಇಲ್ಲವೇ ಮೂರು ವರ್ಗಗಳನ್ನು ಏಕಕಾಲಕ್ಕೆ ನೋಡಿಕೊಳ್ಳಬೇಕಾಗುವದು.** ಈ 'ಜೋಡುವರ್ಗ'ಗಳ ಶಿಕ್ಷಕನು ಟ್ರೇನಿಂಗ ಕಾಲೇಜಿನಲ್ಲಿ

ಶಿಕ್ಷಣ ಕಲೆಯನ್ನು ತಕ್ಕಮಟ್ಟಿಗೆ ಕಲಿತುಬಂದವನಾಗಿರಬೇಕು. ಮಕ್ಕಳ ಮನೋವೃತ್ತಿಯ ಅಲ್ಪಪರಿಚಯವಾದರೂ ಅವನಿಗೆ ಇರಬೇಕು. ಚಿಕ್ಕಮಕ್ಕಳಿಗೆ ವಿನೋದವೂ, ವಿಷಯದ ಜ್ಞಾನವೂ ಕೂಡಿಯೇ ಆಗುವಂತೆ ಕ್ರೀಡನ ಪದ್ಧತಿಯ ಅನೇಕ ಹಂಚಿಕೆಗಳನ್ನು ಆತನು ಮಾಡಬೇಕಾಗುವದು. ಅಕ್ಷರಗಳನ್ನು ಜೋಡಿಸಿ ಶಬ್ದಗಳನ್ನು ರಚಿಸುವದು ಇತ್ಯಾದಿ ಆದ ಅನೇಕ ವಿಧಾನಗಳಲ್ಲಿ ಚಿಕ್ಕಮಕ್ಕಳನ್ನು ತೊಡಗಿಸಬಹುದು. ಮೇಲಿನ ವರ್ಗದ ಹಿರಿಯ ವಿದ್ಯಾರ್ಥಿಗಳ ನೆರವನ್ನು ತೆಗೆದುಕೊಳ್ಳಬಹುದು.

### (೭) 'ಬಟೇವ್ಹಿಯಾ ಪದ್ಧತಿ':—

ಕೇವಲ ವ್ಯಕ್ತಿಗತವಾದ ಶಿಕ್ಷಣವನ್ನು ಯಾವ ರಾಷ್ಟ್ರವೂ ಒದಗಿಸಲಾರದು. ವ್ಯಕ್ತಿಯನ್ನು ಒಂಟಿಗನಾಗಿ ಬೆಳಿಸುವದು ಸರಿಯಾದುದಲ್ಲ. ವ್ಯಕ್ತಿ ವರ್ಗಗಳ ಈ ತೊಡಕನ್ನು ಅಮೇರಿಕೆಯ '**ಜೋಸೆಫ ಕೆನಡಿ**' ಎಂಬ ಶಿಕ್ಷಣ ತಜ್ಞರು ಯಶಸ್ವಿಯಾಗಿ ಬಿಡಿಸಲು ಯತ್ನಿಸಿರುವರು. ಬಟೇವ್ಹಿಯಾ ಎಂಬ ಒಂದು ಸಣ್ಣ ಊರಿನಲ್ಲಿ ತಮ್ಮ ಪದ್ಧತಿಯ ಪ್ರಯೋಗವನ್ನು ಅವರು ಮೊದಲು ಮಾಡಿದುದರಿಂದ ಈ ಪದ್ಧತಿಗೆ 'ಬಟೇವ್ಹಿಯಾ ಪದ್ಧತಿ' ಎಂಬ ಹೆಸರು ಬಂದಿರುವದು. ಈ ಪದ್ಧತಿಯಲ್ಲಿ ವರ್ಗದ ಶಿಕ್ಷಣವನ್ನು ಬಿಟ್ಟುಕೊಡುವದಿಲ್ಲ; ಆದರೆ ಅದರ ಜೊತೆಗೆ ವ್ಯಕ್ತಿಗತವಾದ ಶಿಕ್ಷಣವು ಸರಾಗವಾಗಿ ಸಾಗುವಂತೆ ಮಾಡಿರುವರು. **ಪ್ರತಿಯೊಂದು ವರ್ಗಕ್ಕೂ ಇಬ್ಬರು ಶಿಕ್ಷಕರು.** ಇಬ್ಬರೂ ಸಮಾನವಾದ ಬುದ್ಧಿ ಯೋಗ್ಯತೆಯುಳ್ಳವರಾಗಿರಬೇಕು. ವರ್ಗದ **ಸಾಮೂಹಿಕ ಶಿಕ್ಷಣವನ್ನು ಸಾಗಿಸುವದು ಒಬ್ಬನ ಕೆಲಸ.** ಆ ವರ್ಗದ ವಿದ್ಯಾರ್ಥಿಗಳ ವ್ಯಕ್ತಿಗತವಾದ ಕುಂದುಕೊರತೆಗಳನ್ನು ಕಂಡುಹಿಡಿದು ಯಾರೂ ಹಿಂದೆ ಬೀಳದೆ ವರ್ಗದ ಪ್ರಗತಿಯೊಡನೆ ಸಮನಾಗಿ ಹೆಜ್ಜೆಹಾಕುವಂತೆ, **ವ್ಯಕ್ತಿಗತವಾದ ಶಿಕ್ಷಣವನ್ನು ಕೊಡುವದು ಮತ್ತೊಬ್ಬನ ಕೆಲಸ.** ಇಬ್ಬರ ಕಾರ್ಯಗಳೂ ಅಷ್ಟೇ ಪ್ರಧಾನವಾಗಿರುವವು. ಶಾಲೆಯ ಶಿಕ್ಷಣದಲ್ಲಿ ಈ ಬಗೆಯ ವ್ಯವಸ್ಥೆ ಇಲ್ಲದ್ದಕ್ಕಾಗಿ ಇಂದು ನೋಡಿದಲ್ಲೆಲ್ಲ ನಿರಂಕುಶವಾದ ಖಾಸಗೀ ಶಿಕ್ಷಣದ ಹಾವಳಿಯು ಹೆಚ್ಚಾಗಿದೆ. ಬಟೇವ್ಹಿಯಾ ಪದ್ಧತಿಯಲ್ಲಿ

ಕೊಡುವ ವ್ಯಕ್ತಿಗತವಾದ ಶಿಕ್ಷಣವು ಸಶಾಸ್ತ್ರವಾಗಿರುವದು. ಎಲ್ಲವನ್ನೂ ಹೇಳಿ ಕೊಟ್ಟು ಸ್ವಂತ ಪರಿಶ್ರಮಕ್ಕೆ ಎಡೆಕೊಡದೆ ವಿದ್ಯಾರ್ಥಿಯನ್ನು ಪರಾವಲಂಬಿ ಯನ್ನಾಗಿ ಮಾಡುವದು ವ್ಯಕ್ತಿಗತವಾದ ಶಿಕ್ಷಣದ ಉದ್ದೇಶವಾಗಿಲ್ಲ. ಪ್ರತಿ ಯೊಬ್ಬ ವಿದ್ಯಾರ್ಥಿಯ ಅಡಚಣಿಯನ್ನು ಶಿಕ್ಷಕನು ಕಂಡುಹಿಡಿದು, ಆತನಿಗೆ ಸಮಯೋಚಿತವಾದ ಸಹಾಯವನ್ನು ಮಾತ್ರ ಕೊಟ್ಟು ಸ್ವಪರಿಶ್ರಮದಿಂದಲೇ ಆತನು ಮುಂದರಿಯುವಂತೆ ಮಾಡುವದೇ ಈ ಪದ್ಧತಿಯ ತತ್ವವಾಗಿದೆ. ಬಟೇವ್ಹಿಯಾ ಪದ್ಧತಿಯಿಂದ ನಡೆದ ಶಾಲೆಗಳಲ್ಲಿ ವಿಷಯಗಳಲ್ಲಿ 'ಹಿಂದೆ ಬೀಳು'ವ ವಿದ್ಯಾರ್ಥಿಗಳೇ ಕಾಣಬರುವದಿಲ್ಲ. ಆ ಶಾಲೆಗಳ ವಾರ್ಷಿಕ ಪರೀ ಕ್ಷೆಯ ಫಲಿತಾಂಶವು ಯಾವಾಗಲೂ ಒಂದೇ ರೀತಿಯಾಗಿ ಯಶಸ್ವಿಯಾಗಿ ರುವದು.

## (೮) ಪ್ರಾತ್ಯಕ್ಷಿಕ ಇಲ್ಲವೆ ಚಾಕ್ಷುಷ ಶಿಕ್ಷಣ:—

ಕಲಿಸುವ ವಿಷಯಗಳಲ್ಲಿ ವಾಸ್ತವಿಕತೆಯನ್ನು ತಂದುಕೊಟ್ಟು, ಶಿಕ್ಷಣ ವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡಿದ ಪ್ರಯತ್ನಗಳಲ್ಲಿ '**ಚಾಕ್ಷುಷ ಶಿಕ್ಷಣವು**' ಒಂದಾಗಿದೆ. ಮಾನಸಶಾಸ್ತ್ರದ ಶೋಧಗಳು ಶಿಕ್ಷಣ ಪ್ರಪಂಚದಲ್ಲಿ ಉಂಟು ಮಾಡಿದ ಕ್ರಾಂತಿಗಳಲ್ಲಿ ಇದೂ ಒಂದಾಗಿದೆ. ವಿಷಯ ಜ್ಞಾನವನ್ನು ಮಾಡಿಕೊಡುವದರಲ್ಲಿ ಎಲ್ಲ ಜ್ಞಾನೇಂದ್ರಿಯಗಳ ಶಕ್ತಿಯು ಸಮಾನವಾಗಿರುವದಿಲ್ಲ. ಏಕಕಾಲಕ್ಕೂ ಇವುಗಳ ಶಕ್ತಿಯ ಉದಯವಾಗುವ ದಿಲ್ಲ. ಕಾಲದಿಂದಲೂ, ಪ್ರಭಾವದಿಂದಲೂ **ಇಂದ್ರಿಯಗಳಲ್ಲಿ ಹಿರಿಯ ತನವು ಕಣ್ಣಿಗೆ ಸಲ್ಲುವದು**. ಮಿದುಳಿಗೂ ಚಕ್ಷುರಿಂದ್ರಿಯಕ್ಕೂ ಅತ್ಯಂತ ನಿಕಟವಾದ ಸಾಮೀಪ್ಯವಿದೆ, ಸಂಬಂಧವಿದೆ. ನೂರರಲ್ಲಿ ಅರ್ಧದಷ್ಟು ಜ್ಞಾನ ವನ್ನು ನಾವು ಕಣ್ಣಿನ ಸಹಾಯದಿಂದಲೇ ದೊರಕಿಸುವೆವು. ಕಣ್ಣಿಗೆ ಕಾಣುವ ವಸ್ತು ಮನಸ್ಸನ್ನೆಳೆಯುವದು. ಹಿಂದೆ ಹೇಳಿದಂತೆ ಮನಸ್ಸಿನ ಹರಿಯು ವಿಕೆಯೇ ಆಸ್ಥೆಯಾಗಿರುವದು. ಆಸ್ಥೆಯಿರುವಲ್ಲಿ ಲಕ್ಷ್ಯ, 'ಅವಧಾನ' ಇರು ವದು. ಆಸ್ಥೆ ಅವಧಾನಗಳು ಅವಳಿಜವಳಿಗಳಂತೆ. ಇದಕ್ಕಾಗಿಯೇ ಚಕ್ಷು ರಿಂದ್ರಿಯದಿಂದ ಸಂಪಾದಿಸಿದ ಜ್ಞಾನವು ಮನಸ್ಸಿನಲ್ಲಿ ಚನ್ನಾಗಿಮೂಡುವದು;

ಸ್ಮೃತಿಯಲ್ಲಿ ಸ್ಥಿರವಾಗಿ ಉಳಿಯುವದು. ಅಂತೆಯೇ ಜ್ಞಾನಪ್ರಾಪ್ತಿಯ ಸಾಧನಗಳಲ್ಲಿ ಚಕ್ಷುರಿಂದ್ರಿಯವೇ ಹಿರಿದಾಗಿದೆ. ಚಾಕ್ಷುಷ ಶಿಕ್ಷಣವು ಈ ಇಂದ್ರಿಯವನ್ನೇ ತನ್ನ ಮುಖ್ಯಸಾಧನವಾಗಿ ಮಾಡಿಕೊಂಡಿದೆ.

ಚಾಕ್ಷುಷ ಶಿಕ್ಷಣದ ಸಾಧನಗಳಲ್ಲಿ ಒಂದು ಪರಂಪರೆಯು ಕಂಡುಬರುವದು. ಕರಿಹಲಗೆಯಿಂದ ಮೊದಲು ಮಾಡಿಕೊಂಡು ಇಂದಿನ ಶೈಕ್ಷಣಿಕ ಚಲಚ್ಚಿತ್ರಗಳ ವರೆಗೆ ಈ ಪರಂಪರೆಯು ಹಬ್ಬಿದೆ. **ಚಿತ್ರಗಳು, ನಕ್ಷೆ–ನಕಾಶಗಳು, ಪತ್ರಿಕೆಗಳು, ವಸ್ತುಸಂಗ್ರಹಾಲಯಗಳು, ಆಕೃತಿಗಳು** ಹೀಗೆ ಒಂದು ಮತ್ತೊಂದಕ್ಕಿಂತ ಹೆಚ್ಚು ಮುಂದೊರೆದ ಸಾಧನಗಳುಂಟು. ವಿಜ್ಞಾನದ ಶೋಧಗಳು ಇವುಗಳಿಗಿಂತಲೂ ಹೆಚ್ಚು ಸೋಜಿಗವಾದ ಸಾಧನಗಳನ್ನು ಒದಗಿಸಿರುವವು. **ಸ್ಟಿರಿಯೋಗ್ರಾಫ, ಮ್ಯಾಜಿಕ್‌ಲ್ಯಾಂಟರ್ನ** (ಮಾಯಾದೀಪ) ಹಾಗೂ **ಚಲಚ್ಚಿತ್ರಗಳೂ** ಇಂದಿನ ಚಾಕ್ಷುಷ ಶಿಕ್ಷಣದಲ್ಲಿ ಬಳಿಕೆಯಲ್ಲಿರುವವು. ಸ್ಟಿರಿಯೋಗ್ರಾಫ ಹಿಂದೆ ಬಿದ್ದಿದೆ. ಚಲಚ್ಚಿತ್ರಗಳೂ ಇನ್ನೂ ಮುಂದೆ ಬರಲಿವೆ. ಸದ್ಯಕ್ಕೆ ಮಾಯಾದೀಪವೇ ಹೆಚ್ಚು ಪ್ರಚಾರದಲ್ಲಿದೆ. ಮಾಯಾದೀಪದಿಂದ ತೋರಿಸುವ ಚಿತ್ರಗಳು ಆಕೃತಿಯಲ್ಲಿ ವರ್ಗದಲ್ಲಿ ಎಲ್ಲರಿಗೂ ಕಾಣಿಸುವಂತೆ ದೊಡ್ಡವುಗಳಾಗಿರುವವು. ಅವಶ್ಯವಿದ್ದಷ್ಟು ಕಾಲ ಒಂದು ಚಿತ್ರವನ್ನು ವರ್ಗದ ಎದುರು ನಿಲ್ಲಿಸಬಹುದು. ಭೂಗೋಲ ವಿಷಯವನ್ನು ಕಲಿಸುವಾಗ್ಗೆ ಮಾಯಾದೀಪದ ಸಹಾಯವು ವಿಶೇಷ ಆಗುವದು. ಇತಿಹಾಸ-ವಿಜ್ಞಾನ–ಶರೀರಶಾಸ್ತ್ರ ಮೊದಲಾದ ಎಲ್ಲ ವಿಷಯಗಳ ಶಿಕ್ಷಣದಲ್ಲಿಯೂ ಇದನ್ನು ಉಪಯೋಗಿಸಬಹುದು. **ಚಿತ್ರಗಳನ್ನು ಸಮಯೋಚಿತವಾಗಿ ತೋರಿಸಬೇಕು.** ಚಿತ್ರದರ್ಶನದೊಡದೆ ವಿಷಯವನ್ನು ಚನ್ನಾಗಿ ಸುಸಂಗತವಾಗಿ ಹೊಂದಿಸಿಕೊಳ್ಳುವ ಮಾತಿನ ಜಾಣ್ಮೆಯೂ ಶಿಕ್ಷಕನಲ್ಲಿರಬೇಕು. ಚಿತ್ರದರ್ಶನದ ಕೊನೆಗೆ ವಿದ್ಯಾರ್ಥಿಗಳ ವಿಷಯಗ್ರಹಣವನ್ನು ಪರೀಕ್ಷಿಸುವ ಕೆಲವು ಪ್ರಶ್ನೆಗಳನ್ನು ಶಿಕ್ಷಕನು ಕೇಳಬೇಕು. ಮರುದಿವಸ ಮಾಯಾದೀಪದ ಸಹಾಯದಿಂದ ಅದೇ ಪಾಠವನ್ನೇ ಪರ್ಯಾಲೋಚಿಸಿ ವಿದ್ಯಾರ್ಥಿಗಳ ವಿಷಯಜ್ಞಾನವನ್ನು ದೃಢವಾಗಿ ಮಾಡಬೇಕು.

ಶಿಕ್ಷಕರಿಗೆ ಅವಶ್ಯಕವಾದ, ಉಪಯುಕ್ತವಾದ 'ಹವ್ಯಾಸ' ಗಳಲ್ಲಿ ಮಾಯಾದೀಪದ ಉಪಯೋಗವೂ ಒಂದಾಗಿದೆ. ಕೈಲಾದಷ್ಟು ದೇಶ ಸೇವೆಯ ವಿಧಾಯಕ ಕಾರ್ಯಕ್ರಮದಲ್ಲಿ ಭಾಗವಹಿಸಲು ಮಾಯಾದೀಪವು ಶಿಕ್ಷಕರಿಗೆ ಒಂದು ಉತ್ತಮವಾದ ಸಾಧನವಾಗಿದೆ. ಅಜ್ಞರಾದ ಹಳ್ಳಿಗರಿಗೆ ಆರೋಗ್ಯಶಾಸ್ತ್ರದ ಸಾಮಾನ್ಯ ಜ್ಞಾನವನ್ನು ಮಾಯಾದೀಪದ ಚಿತ್ರಗಳಿಂದ ಅವರು ಮಾಡಿಕೊಡಬಹುದು. ಇಲ್ಲವೆ ಮುಂದೊರೆದ ರಾಷ್ಟ್ರಗಳಲ್ಲಿ, ಉದ್ಯೋಗ–ಒಕ್ಕಲತನಗಳ ಪ್ರಗತಿಯು ಹೇಗೆ ಭರದಿಂದ ಸಾಗಿದೆಯೆಂಬು ದನ್ನು ತೋರಿಸಿ ಅವರಲ್ಲಿಯೂ ಅವಶ್ಯವಾದ ಸ್ಫೂರ್ತಿ–ಕಾರ್ಯಪ್ರವೃತ್ತಿ ಗಳನ್ನು ಉತ್ಸಾಹಿಗಳಾದ ಶಿಕ್ಷಕರು ತಂದುಕೊಡಬಲ್ಲರು. **ಜನತೆಯ ಸೇವೆಯನ್ನು ಮಾಡಿ, ಶಿಕ್ಷಣಕ್ಕೂ ಜನಜೀವನಕ್ಕೂ ಸಂಬಂಧವನ್ನು ಕಲ್ಪಿಸುವದು ಶಿಕ್ಷಕರೆಲ್ಲರ ಕರ್ತವ್ಯವಾಗಿದೆ.**

## (೯) ಕ್ರೀಡಾಂಗ ಪದ್ಧತಿ:—

ಆಟದ ಪ್ರೇಮವು ಚಿಕ್ಕಮಕ್ಕಳ ನೈಸರ್ಗಿಕವಾದ ಒಲವುಗಳಲ್ಲಿ ಒಂದಾ ಗಿದೆ. **ಆಂತರಿಕವಾದ ಆನಂದವೇ ಆಟದ ಸ್ಫೂರ್ತಿಯ ಸೆಲೆಯಾಗಿದೆ.** ಈ ಆನಂದವು ನಿರ್ಹೇತುಕವಾದರೂ, ಆಟಗಳು ನಿರ್ಹೇತುಕವಾದವುಗಳಲ್ಲ. ಮ್ಯಾಕ್ ಡೂಗಲ್‌ರು ಹೇಳುವಂತೆ— '**ಆಟವು ನಿರ್ಮಾಣ ಶಕ್ತಿಯ ಕಲಾಪೂರ್ಣವಾದ ಕೃತಿಯಾಗಿರುವದು.**' ನೈಸರ್ಗಿಕವಾದ ಈ ಆಟದ ಒಲವಿನ ಬಗ್ಗೆ ಹಿಂದೆ ಸಾಕಷ್ಟು ವಿವೇಚನೆಯನ್ನು ಮಾಡಿದೆ. ಚಿಕ್ಕಮಕ್ಕಳಿಗೆ ಆಟಗಳಲ್ಲಿ ದೊರೆಯುವ ಆನಂದವನ್ನೂ, ಆಟಗಳಲ್ಲಿ ಅವರು ತೋರಿಸುವ ಉತ್ಪಾದಕ ಕಲ್ಪನಾಶಕ್ತಿಯನ್ನೂ ಆಧಾರವಾಗಿಟ್ಟುಕೊಂಡು ರಚಿಸಿದ ಶಿಕ್ಷಣ ಪದ್ಧತಿಗೆ ಕ್ರೀಡಾಂಗ ಪದ್ಧತಿಯೆಂದು ಕರೆಯುವರು. ಶಿಕ್ಷಣದ ಪ್ರಯೋಗ ಶಾಲೆಯಂತಿರುವ ಅಮೇರಿಕೆಯಲ್ಲಿಯೇ ಈ ಹೊಸ ಯೋಜನೆಯ ಹುಟ್ಟು. **ಕಾಲ್ಡವೆಲ್. ಕುಕ್ ಎಂಬವರು** ಕ್ರೀಡಾಂಗ ಪದ್ಧತಿಯ ಉತ್ಪಾದಕರು. ಕ್ರೀಡಾಂಗಪದ್ಧತಿಯೆಂದರೆ ಕೇವಲ ಮನರಂಜನೆಯ ಕಾರ್ಯಕ್ರಮವಲ್ಲ. ಕಲಿಯುವದನ್ನೇ ಕ್ರೀಡೆಯಂತೆ, ಆಟದಂತೆ ಆನಂದದಾಯಕವಾಗಿ ಮಾಡುವ

ಇನ್ನೊಂದು ವಿಧಾನವಾಗಿದೆ. ಕಣ್ಣೀರು ಸುರಿಸದೆ ಚಿಕ್ಕಮಕ್ಕಳು ಕಲಿಯು ರೆಂಬುದು ಹಿಂದಿನ ಸಾಂಪ್ರದಾಯಿಕ ಶಿಕ್ಷಕರ ಮತವಾಗಿದೆ. ಬೆತ್ತದ ಬೆದರಿಕೆ ಇವರಿಗೆ ದಿನದ ಬಳಿಕೆಯಾಗಿದೆ. ಅನೈಚ್ಛಿಕ ಅವಧಾನದಿಂದ ಪ್ರಯತ್ನ ಪೂರ್ವಕವಾಗಿ ಹಿಡಿದು ತಂದ ಆಸ್ಥೆಯಿಂದ ಅಂದು ಚಿಕ್ಕಮಕ್ಕಳು ಕಲಿಯ ಬೇಕಾಗಿತ್ತು. ಐಚ್ಛಿಕವಾದ ಅವಧಾನವೇ ಚಿಕ್ಕಮಕ್ಕಳ ಶಿಕ್ಷಣದಲ್ಲಿ ಇಷ್ಟವಾದುದೆಂದು ಇಂದಿನ ಮಾನಸಶಾಸ್ತ್ರವು ತೋರಿಸಿಕೊಟ್ಟಿದೆ. ಇದನ್ನೇ ಅವಲಂಬಿಸಿದ ಆಧುನಿಕ ಶಿಕ್ಷಣವು ಬೆತ್ತದ ಬೆದರಿಕೆಯ ಹಾದಿಯನ್ನು ಬಿಟ್ಟುಕೊಟ್ಟಿದೆ. **ಕಲಿಯುವ ಕ್ರಿಯೆಯು ಚಿಕ್ಕಮಕ್ಕಳಿಗೆ ಆನಂದದಾಯಕವಾಗಬೇಕು.** ಅಂದರೆ ಅವರ ಮನಸ್ಸು ತಾನಾಗಿಯೇ ಅತ್ತ ಹರಿಯುವದು. ಕ್ರೀಡೆ-ಕರ್ತವ್ಯಗಳ ನಡುವಿನ ಅಂತರವು ಇನ್ನೂ ಚಿಕ್ಕಮಕ್ಕಳಿಗೆ ಹೊಳೆದಿರುವದಿಲ್ಲ. ಇಂಥ ಸಂದರ್ಭದಲ್ಲಿ ಕಲಿಯುವ ಕ್ರಿಯೆಯು ನೀರಸವಾದರೆ, ಅವರ ಕುತೂಹಲವೂ, ಕ್ರಿಯಾಶಕ್ತಿಯೂ ಕಮರಿಹೋಗುವದುಂಟು. ಆಟಗಳಲ್ಲಿಯ ಅನಿಮಿತ್ತವಾದ ಆನಂದರಸವನ್ನು ತೊಡೆದರೆ, ಕಟುವೆಂದು ತೋರುವ ಕಲಿಯುವ ಕ್ರಿಯೆಯು ಸ್ವಾದಮಯವಾಗುವದು. ಕ್ರೀಡಾಂಗ ಪದ್ಧತಿಯ ಉದ್ದೇಶವಾದರೂ ಇದೇ ಆಗಿರುವದು.

ಚಿಕ್ಕಮಕ್ಕಳ ಆಟಗಳಲ್ಲಿ ಆನಂದವಿರುವಂತೆ ಉಚ್ಚತರಗತಿಯ **ಉತ್ಪಾದಕ ಶಕ್ತಿಯೂ** ಇರುವದು. ಜೀವನದ ವಿವಿಧವಾದ ಕಾರ್ಯಗಳಲ್ಲಿ ಈ ಉತ್ಪಾದಕ ಶಕ್ತಿಯನ್ನು ವಿನಿಯೋಗಿಸಬಹುದು. ಹೀಗೆ ಮಾಡುವದರಿಂದ ಚಿಕ್ಕಮಕ್ಕಳ ಆತ್ಮ ಶಕ್ತಿಗಳೆಲ್ಲವೂ ಅರಳುವವು, ಬಲಿಯುವವು. ಇದಲ್ಲದೆ ಜೀವನಕ್ಕೂ ಶಿಕ್ಷಣಕ್ಕೂ ಒಂದುಬಗೆಯ ಸಂಬಂಧವನ್ನು ಕಲ್ಪಿಸಿದಂತಾಗುವದು. ಕಲಿಯುವದನ್ನು ಕ್ರೀಡೆಯಾಗಿ ಪರಿಣಮಿಸಲು ತಜ್ಞನಾದ ಶಿಕ್ಷಕನು ಅನೇಕ ಹಂಚಿಕೆಗಳನ್ನು ಕಲ್ಪಿಸಬಹುದು. ಆಸ್ಥೆಯಿಂದ ಸ್ವಯಂಸ್ಫೂರ್ತಿಯಿಂದ ಕೈಕೊಂಡ ಕೆಲಸವನ್ನು ಚಿಕ್ಕಮಕ್ಕಳು ತಾಪ–ತೊಂದರೆಗಳ ಪರಿವೆಯಿಲ್ಲದೇ ಮಾಡುವರು. ಇತಿಹಾಸದಲ್ಲಿ ತಿಳಿದುಕೊಂಡ ಕೆಲವು ಘಟನೆಗಳನ್ನು ಅಭಿನಯಿಸಿ ತೋರಿಸುವದು ಕ್ರೀಡೆಯೇ. ಅಂಕಿಮಗ್ಗಿ

ಗಳನ್ನು ಗಿಳಿಪಾಠ ಮಾಡಿಸದೆ ಆಟಗಳಲ್ಲಿ ವಸ್ತುಗಳ ಎಣಿಕೆಯಿಂದ ಅವುಗಳ ಪಟ್ಟುಪಾಲುಗಳನ್ನು ದೃಢಗೊಳಿಸುವದೂ ಕ್ರೀಡಾಪದ್ಧತಿಯೇ. ಅಕ್ಷರಗಳಿಂದ ಶಬ್ದಗಳನ್ನು ಜೋಡಿಸುವದೂ, ಶಬ್ದಗಳ ಗುಂಪಿನಿಂದ ಸರಿಯಾದ ಶಬ್ದಗಳನ್ನು ಆಯ್ದುಕೊಂಡು ವಾಕ್ಯಗಳನ್ನು ರಚಿಸುವದೂ, ಬಿಟ್ಟ ಶಬ್ದಗಳನ್ನು ಹಾಕಿ ವಾಕ್ಯಪೂರ್ತಿಯನ್ನು ಮಾಡುವದೂ— ಇತ್ಯಾದಿ ಅನೇಕ ಹಂಚಿಕೆಗಳಿಂದ ಕ್ರೀಡಾಪದ್ಧತಿಯನ್ನು ಶಿಕ್ಷಣಕಾರ್ಯದಲ್ಲಿ ವಿನಿಯೋಗಿಸಲು ಬರುವಂತಿದೆ. **ಆಟವನ್ನೇ ಜೀವನವನ್ನಾಗಿ ಮಾಡಿಕೊಂಡು ಕಲಿಯುವ ಇಂದಿನ ಬಾಲಕರು ಮುಂದೆ ಪ್ರಬುದ್ಧರಾದಮೇಲೆ ಜೀವನವನ್ನೇ ಆಟದಂತೆ ಆನಂದಮಯವಾಗಿ ಮಾಡಿಕೊಳ್ಳಬಲ್ಲರು.**

## (೧೦) ಯೋಜನಾ ಪದ್ಧತಿ:—

ಕಲಿಯುವದು ಆನಂದದಾಯಕವಾಗಿದ್ದರೆ, ಆಸ್ಥೆ—ಆದರಗಳು ತಾವಾಗಿಯೇ ಜನಿಸುವವು. ಕ್ರೀಡಾಂಗ ಪದ್ಧತಿಯ ಜೀವಾಳವೇ ಈ ತತ್ವವಾಗಿದೆ. ಕಲಿಯುವದರಲ್ಲಿ ಆನಂದದಷ್ಟೇ **ಪ್ರಯೋಜನವೂ ಪ್ರಧಾನವಾಗಿದೆ,** ಫಲಕಾರಿಯಾಗಿದೆ. ಶಾಲೆಯಲ್ಲಿ ಕಲಿಯುವ ಅನೇಕ ವಿಷಯಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರಯೋಜನವೇ ಕಾಣಬರುವದಿಲ್ಲ. ಯಾಕಂದರೆ ಅವರ ನಿತ್ಯಜೀವನಕ್ಕೂ ಕಲಿಯುವ ವಿಷಯಗಳಿಗೂ ಹೊಂದಿಕೆಯೇ ಇರುವದಿಲ್ಲ. ಶಾಲೆಯಲ್ಲಿ ಪ್ರಯೋಜನವು ತಿಳಿಯದೆ ಕಲಿಯುವದೆಲ್ಲವೂ ಅವರಿಗೆ ತಿರಕನ ಕನಸಿನಂತೆ. ಗಣಿತದ ಪ್ರಮೇಯಗಳಲ್ಲಿ ಅವರ ಕಲ್ಪನೆಗೆ ಮೀರಿದ ಅಂಕಿಗಳ ವ್ಯವಹಾರ. ಭೂಗೋಲ ಮೊದಲಾದ ವಿಷಯಗಳಲ್ಲಿ ಅವರಿಗೆ ತಿಳಿಯದ ವ್ಯಾಖ್ಯೆಗಳ ವಿಸ್ತಾರ. ಪ್ರಯೋಜನವಿಲ್ಲದೆ ಮಾಡುವ ಯಾವ ಕೆಲಸವೂ ಸಂಪೂರ್ಣವಾಗಿ ಯಶಸ್ವಿಯಾಗದು, ಪಲಪ್ರದವಾಗದು. **ಪರೀಕ್ಷೆಗಾಗಿ ಕಲಿಯುವದು ನಿಜವಾದ ಪ್ರಯೋಜನವಲ್ಲ, ಅದೊಂದು ಬಗೆಯ ಭಯ.**

ಪ್ರಯೋಜನದಲ್ಲಿ ಒಂದು ಪ್ರಭಾವವಿದೆ. ಪ್ರಯೋಜನವು ಪ್ರಭಾವಶಾಲಿಯಾಗಿದ್ದರೆ ವ್ಯಕ್ತಿಯ ಶಕ್ತಿಗಳನ್ನೆಲ್ಲ ಅದು ಚೇತರಿಸುವದು. ಅಕಲ್ಪಿತ

ವಾದ ಹಂಚಿಕೆಗಳು ಆತನಿಗೆ ಹೊಳೆಯುವವು. ಪ್ರಯೋಜನದ ಪೂರ್ತಿಗಾಗಿ ಯಾವ ಎಡರು–ತೊಡರುಗಳನ್ನೂ ಆತನು ಲೆಕ್ಕಿಸುವದಿಲ್ಲ. ಅದಕ್ಕೆ ಬೇಕಾದ ಎಲ್ಲ ಸಹಾಯಸಂಪತ್ತಿಯನ್ನು ಆತನು ದೊರಕಿಸುವನು. ಸಾಧನಸಾಮಗ್ರಿಯನ್ನು ಕಲೆಹಾಕುವನು. '**ಮನವಿದ್ದಲ್ಲಿ ಮಾರ್ಗವಿರುವದೆ**'ಂಬ ನಾಣ್ಣುಡಿಯು ಇದನ್ನೇ ಸೂಚಿಸುತ್ತದೆ. ಶಿಕ್ಷಣದಲ್ಲಿ ಯೋಜನಾಪದ್ಧತಿಯು ಈ ಪ್ರಯೋಜನ ಶಕ್ತಿಯನ್ನೇ ಆಧಾರವಾಗಿಟ್ಟುಕೊಂಡಿದೆ. ವಸ್ತುಸ್ಥಿತಿಗೆ ಆದಷ್ಟು ಸಮಾನವಾದ ಪರಿಸ್ಥಿತಿಯಲ್ಲಿ, ಒಂದು ತೊಡಕಿನ ಕಾರ್ಯವನ್ನು ಸರಿಯಾಗಿ ಪೂರ್ತಿಗೊಳಿಸುವದಕ್ಕೆ ಶಿಕ್ಷಣದಲ್ಲಿ ಯೋಜನೆ ( Project )ಯೆನ್ನುವರು. ವಿದ್ಯಾರ್ಥಿಗಳು ಒಂದು ಪವನಚಕ್ಕೆಯನ್ನು ಮಾಡಬೇಕಾಗಿದೆ. ಇದು ಅವರು ಕೈಕೊಳ್ಳುವ '**ಯೋಜನೆ.**' ಇದಕ್ಕಾಗಿ ಬೇಕಾಗುವ ವಸ್ತುಗಳೇನೆಂಬುವದನ್ನು ತಿಳಿದುಕೊಳ್ಳಬೇಕು. ಸಂದರ್ಭೋಚಿತವಾಗಿ 'ಈ ವಸ್ತುಗಳು ಯಾವ ದೇಶದಲ್ಲಿ ಹುಟ್ಟುತ್ತವೆ? ಹೇಗೆ ಬರುತ್ತವೆ?' ಇತ್ಯಾದಿ ಭೂಗೋಲದ ಜ್ಞಾನವನ್ನು ಶಿಕ್ಷಕನು ಅವರಿಗೆ ತಿಳಿಸಿ ಹೇಳುವನು. ವಿಜ್ಞಾನದ ಶಿಕ್ಷಕನಿಂದ ಇದೇ ಯೋಜನೆಗೆ ಸಂಬಂಧಿಸಿದ ವಿಜ್ಞಾನದ ( ಶಾಸ್ತ್ರೀಯ ವಿಷಯಗಳ) ಜ್ಞಾನವನ್ನು ಪಡೆಯಬಹುದು. ಕಟ್ಟಿಗೆಗಳಲ್ಲಿ ಬಿರುಸು ಮಿದುವು ಹಾಗೂ ಅಳತೆ ಪ್ರಮಾಣಗಳನ್ನು ಕೈಗಾರಿಕೆಯ ಶಿಕ್ಷಕನಿಂದ ಕಲಿತುಕೊಳ್ಳಬಹುದು. ಹೀಗೆ ಒಂದು ಯೋಜನೆಗೆ ಸಂಬಂಧಿಸಿದ ವಿವಿಧ ವಿಷಯಗಳ ಜ್ಞಾನವನ್ನು ಒಂದು ಪ್ರಯೋಜನದ ಪೂರ್ತಿಗಾಗಿ ವಿದ್ಯಾರ್ಥಿಗಳು ಆಸ್ಥೆಯಿಂದ ಸಂಪಾದಿಸುವರು. ಆ ಕಾರ್ಯವನ್ನು ಕೊನೆಗಾಣಿಸುವದಕ್ಕಾಗಿ ಎಂಥ ಪರಿಶ್ರಮವನ್ನೂ ಮಾಡುವರು. ತಮ್ಮ ಪ್ರಯತ್ನವು ಯಶಸ್ವಿಯಾದರೆ ಅವರಿಗೆ ಅತಿಶಯವಾದ ಆನಂದವಾಗುವದು. ಮಕ್ಕಳ ಸಹಜವಾದ ಕ್ರಿಯಾಶಕ್ತಿಗೆ ಯೋಜನೆಯು ಒಂದು ಉದ್ದೇಶವನ್ನು ತಂದು ಒದಗಿಸುವದು. ಹಾಗೂ ಕೃತಿಯ ಜೊತೆಗೆ ಆನುಷಂಗಿಕವಾಗಿ ಅನೇಕ ವಿಷಯಗಳ ಜ್ಞಾನವೂ ಅವರಿಗೆ ಲಭಿಸುವದು.

ಒಂದು ವಿಶಿಷ್ಟವಾದ ಕ್ರಮವಿಲ್ಲದೆ ಬರುವ ಈ ಜ್ಞಾನವು ಸುಸಂಬದ್ಧ

ವಾಗಿರವೆ ತುಣುಕುಗಳಲ್ಲಿ ದೊರೆಯುವದೆಂದು ಯೋಜನಾ ಪದ್ಧತಿಯ ಬಗ್ಗೆ ಹಿಂದಿನ ಹಿರಿಯರ ಆಕ್ಷೇಪವಾಗಿದೆ. ಆದರೆ ಮಾನವನ ಮನಸ್ಸಿಗೆ ಒಂದು ಅದ್ಭುತವಾದ ಶಕ್ತಿ ಇದೆ. ಇದಕ್ಕೆ ' ಸಂಸಕ್ತಿ ' ಎಂದು ಕರೆಯುವರು. ಹಳೆಯ ಹೊಸ ವಿಚಾರಗಳನ್ನು ಹೊಂದಿಸಿಕೊಳ್ಳುವದಲ್ಲದೆ, ತಾನೂ ಅವುಗಳಿಗೆ ಹೊಂದಿಕೊಂಡು ಒಂದಾಗುವದು ಮನಸ್ಸಿನ ಧರ್ಮವಾಗಿದೆ. ಪ್ರಯೋಜನೆಯಿಂದ ಪ್ರೇರಿತರಾಗಿ ಸ್ವಪ್ರಯತ್ನದಿಂದ ಸಂಪಾದಿಸಿದ ವಿಷಯಜ್ಞಾನವು ಎಷ್ಟೇ ಚೂರು ಚೂರಾಗಿದ್ದರೂ ಕಲಿಯುವವರ ಮನಸ್ಸಿನಲ್ಲಿ ಅದು ಸರಿಯಾಗಿ ಬೆರೆತುಕೊಂಡು ಏಕರೂಪವಾಗುವದು, ಏಕಜೀವವಾಗುವದು. ವಿದ್ಯಾರ್ಥಿಗಳು ಕೈಕೊಳ್ಳುವ ಯೋಜನೆಗಳು ನಿತ್ಯಜೀವನದ ಕೇವಲ ಅನುಕರಣಗಳಾಗಿರುವವು. ಮೂಲ ಶಿಕ್ಷಣದಲ್ಲಿ, ಜೀವನಕ್ಕೂ ಶಿಕ್ಷಣಕ್ಕೂ ಇರುವ ಸಾಮೀಪ್ಯವು ಸಂಪರ್ಕವು ಯೋಜನಾಪದ್ಧತಿಯಲ್ಲಿ ಕಂಡುಬರುವದಿಲ್ಲ. ಅಂತೆಯೇ ಮೂಲ ಶಿಕ್ಷಣಕ್ಕೆ ಜೀವನ ಶಿಕ್ಷಣವೆಂದು ಕರೆಯುವದುಂಟು.

## ಪರಿಚ್ಛೇದ ೨೧

### ಶೀಲಸಂವರ್ಧನೆ

### ( ನೈತಿಕ ಹಾಗೂ ಧಾರ್ಮಿಕ ಶಿಕ್ಷಣ )

ಶಿಕ್ಷಣದ ಮೂಲೋದ್ದೇಶಗಳ ಬಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ, ಶಿಕ್ಷಣದ ಅಂತಿಮವಾದ ಉದ್ದೇಶವು ಶೀಲಸಂವರ್ಧನೆಯೆಂದು ಎಲ್ಲರೂ ಏಕಕಂಠದಿಂದ ಒಪ್ಪುವರು. ಈ ' ಶೀಲ 'ವು ಯಾವದು ? ಎಂತಹದು ? ಎನ್ನುವ ಚರ್ಚೆ ತಾತ್ವಿಕವಾದುದು, ಇಲ್ಲಿ ಅಪ್ರಸ್ತುತವಾದುದು. **ನೀತಿ ಧರ್ಮಗಳು ಶೀಲದ ಎರಡು ಕಣ್ಣುಗಳಿದ್ದಂತೆ. ನಡತೆಯು ಶೀಲದ ವ್ಯಕ್ತ ಸ್ವರೂಪವಾಗಿದೆ. ಶೀಲವನ್ನು ಕಂಡು ಹಿಡಿಯಲು ನಡತೆಯೆ ಕನ್ನಡಿಯಾಗಿದೆ.** ಗ್ರಾಹ್ಯವಾದ ಕೆಲವು ನಿಯಮಗಳಿಗೆ ಹೊಂದಿಕೊಳ್ಳುವಂತೆ

ನಡತೆಯನ್ನು ತಿದ್ದುವದೇ 'ಶೀಲಸಂವರ್ಧನೆ'ಯೆಂದು ಪರ್ಯಾಯದಿಂದ ಹೇಳಬಹುದು. ಬದಲಿಸುವ ಜೀವನದೊಡನೆ ಶೀಲದ ಕಲ್ಪನೆಯೂ ಬದಲಿಸಿದೆ. ಹಿಂದೆ ಗ್ರಾಹ್ಯವೆನಿಸಿದ ಹಲವು ನಿಯಮನಿರ್ಬಂಧಗಳು ಇಂದಿನ ಜೀವನಕ್ಕೆ ಹೊಂದಿಕೊಳ್ಳಲಾರವು. ಆದರೂ ಇವುಗಳಲ್ಲಿ ದೇಶಕಾಲಗಳ ಬಾಧೆಗೆ ಸಿಲುಕದ ಕೆಲವು ಸನಾತನವಾದ ನೀತಿಯ ನಿಯಮಗಳಿವೆ. ಚಿಕ್ಕಮಕ್ಕಳ ನಡತೆಯು ಈ ನಿಯಮಗಳಿಗೆ ಹೊಂದಿಕೊಳ್ಳುವಂತೆ ಮಾಡುವದೇ ನೀತಿಶಿಕ್ಷಣದ ಕಾರ್ಯವಾಗಿದೆ. ಸನ್ನಿವೇಶಗಳ ಸಹಾಯದಿಂದಲೇ ಇದನ್ನು ಸಾಧಿಸಬೇಕೆನ್ನುವವರು ಹಲವರು. ಉಪದೇಶ ಒತ್ತಾಯಗಳಿಂದ ಸಾಧಿಸಬೇಕೆನ್ನುವವರು ಕೆಲವರು. ಎರಡೂ ರೀತಿಗಳಲ್ಲಿ, ಸಂದರ್ಭಗಳಿಗನುಸಾರವಾಗಿ, ವಿವೇಕವು ತೋರಿಸಿಕೊಟ್ಟ ಯಾವದನ್ನಾದರೂ ಶಿಕ್ಷಕರು ಅನುಸರಿಸಬಹುದು.

ಮಾನವನ ಜೀವನವು ಸಾಂಘಿಕವಾಗಿದೆ. ಸಂಘದೊಡನೆ ಹೊಂದಿಕೊಂಡು ಹೋಗುವದು ಸಾಂಘಿಕ ಜೀವನದ ಆದಿತತ್ವವಾಗಿದೆ. **ಸಮಾಜದೊಡನೆ ಸರಿಯಾದ ಸಂಬಂಧಗಳನ್ನು ಕಟ್ಟುವದೇ ನೀತಿಯಾಗಿದೆ.** ಸ್ವಾರ್ಥ–ಸ್ವೇಚ್ಛೆಗಳು ನಿರಾತಂಕವಾದರೆ ಸಾಂಘಿಕ ಜೀವನವೇ ಅಶಕ್ಯವಾಗುವದು. ಈ ನೈಸರ್ಗಿಕ ಒಲವುಗಳನ್ನು ಪೂರ್ಣವಾಗಿ ಬಿಟ್ಟುಕೊಡಲೂ ಬರುವಂತಿಲ್ಲ. ನಡತೆಯಲ್ಲಿ ಇವುಗಳನ್ನು ಸರಿಯಾಗಿ ನಿಯಂತ್ರಿಸುವದೇ ನೀತಿಶಿಕ್ಷಣದ ಕಾರ್ಯವಾಗಿದೆ. ಇಂಥ ನಡತೆಯು 'ರೂಢ'ವಾಗಬೇಕು. ತಾನಾಗಿಯೇ ವಿಶಿಷ್ಟವಾದ ರೀತಿಯಲ್ಲಿ ನಡೆಯುವಂತಾಗಬೇಕು. ಕೊರಕಲಿನಲ್ಲಿ ಹರಿಯುವ ನೀರಿನಂತೆ ನಿತ್ಯದ ನಡತೆಗೆ ಇಂಥ 'ಕೊರಕಲಗಳನ್ನು' ನೀತಿಶಿಕ್ಷಣವು ಹಾಕಿಕೊಡಬೇಕು. **ವ್ಯಕ್ತಿಯಲ್ಲಿ ರೂಢವಾದ ನಡತೆಗಳ ಸಮುಚ್ಚಯವೇ ಆತನ 'ಶೀಲ'ವೆನಿಸಿಕೊಳ್ಳುವದು.**

ಶೀಲಸಂವರ್ಧನೆಯನ್ನು ಉಪದೇಶಪ್ರವಚನಗಳಿಂದ ಮಾಡಬೇಕೆಂದು ಕೆಲವರ ಮತವಾಗಿದೆ. ಶಾಲೆಯ ವೇಳಾಪತ್ರಿಕೆಯಲ್ಲಿ ನೀತಿ ತತ್ವಗಳನ್ನು ತಿಳಿಸಿಹೇಳುವದಕ್ಕಾಗಿ ಕೆಲವು ತಾಸುಗಳನ್ನಿಡಬೇಕೆಂದು ಇವರ ಆಗ್ರಹ. ಆದರೆ ವೇಳಾಪತ್ರಿಕೆಯ ಉಳಿದ ವಿಷಯಗಳಂತೆ ಈ ನೀತಿಯ ಪಾಠಗಳು

ಕೃತ್ರಿಮವಾಗಿ, ನೀತಿ ಶಿಕ್ಷಣದ ಗಾಂಭೀರ್ಯವನ್ನೇ ಕಳೆದುಬಿಡಬಹುದು. ಇಲ್ಲವೇ ಕೆಲವು ವಿದ್ಯಾರ್ಥಿಗಳಲ್ಲಿ ಇವುಗಳಿಗೆ ವಿರೋಧವಾಗುವಂತೆ, ವಿಪರೀತ ವಿಚಾರಸರಣಿಯನ್ನೇ ಉಂಟುಮಾಡಬಹುದು. ನೈತಿಕ ವಿಚಾರಗಳ ಪರಿ ಚಯವನ್ನು ವಿದ್ಯಾರ್ಥಿಗಳಿಗೆ ಮೊದಲಿನಿಂದಲೂ ಮಾಡಿಕೊಡುವದು ಇಷ್ಟ ವಾಗಿದೆ. ಆದರೆ **ನೀತಿಯು 'ವಿಚಾರ'ವಾಗಿಲ್ಲ, 'ಆಚಾರ' ವಾಗಿದೆ** ಯೆಂಬುದನ್ನೂ ವಿದ್ಯಾರ್ಥಿಗಳ ಗಮನಕ್ಕೆ ಚನ್ನಾಗಿ ತಂದುಕೊಡಬೇಕು. ಮಕ್ಕಳಿಗೆ ಏನಾದರೊಂದು ಆಶೆ–ಆಮಿಷಗಳನ್ನು ತೋರಿಸಿ ಅವರ ನಡತೆ ಯನ್ನು ತಿದ್ದಬೇಕೆನ್ನುವವರೂ ಇದ್ದಾರೆ. 'ಖರೇ ಹೇಳಿದರೆ ನಿನಗೆ ತಿನ್ನ ಲಿಕ್ಕೆ ಕೊಡುತ್ತೇನೆ'–ಇತ್ಯಾದಿ ಆಶೆಗಳಿಂದ ನೈತಿಕಕಾರ್ಯದಲ್ಲಿ ಅವರ ಮನ ವೊಲಿಸಲು ಇವರ ಹವಣಿಕೆ, ಏನಾದರೂ ತಿನ್ನಲಿಕ್ಕೆ ಕೊಟ್ಟು ಶಾಲೆಗೆ ಹೋಗಲು ಮಕ್ಕಳ ಮನವೊಲಿಸುವಂತೆ. ತಿನ್ನುವ ವಸ್ತು ತೀರಿದ ಕೂಡಲೆ ಅವರು ನೇರವಾಗಿ ಮನೆಗೆ ಬಂದುಬಿಡುವರು. ಹೀಗೆಯೇ ನೀತಿಯ ವಿಷಯ ದಲ್ಲಿಯೂ ಅವರು ನಡೆಯಬಹುದು. ಆಶೆಯ ಆಮಿಷವು ಇರುವವರೆಗೆ ಅವರಲ್ಲಿ ನೈತಿಕ ಪ್ರವೃತ್ತಿಯು ಉದಯಿಸಬಹುದು. ಇಲ್ಲವಾದರೆ ಅದೂ ಮಾಯವಾಗುವದು. ಒತ್ತಾಯದ ನೀತಿ ಶಿಕ್ಷಣವಂತೂ ಮಾನಸಶಾಸ್ತ್ರದ ತತ್ವಗಳನ್ನೇ ಮೀರಿ ನಡೆದಂತಾಗುವದು. ಒತ್ತಾಯದ ನಿರ್ಬಂಧವಿರುವ ವರೆಗೆ ಮಕ್ಕಳ ಸಹಜವಾದ ಒಲವುಗಳು ಒಳಗೆ ಹುದುಗಿಕೊಳ್ಳುವವು. ಆ ನಿರ್ಬಂಧವು ಹೋದ ಕೂಡಲೆ ಹತ್ತುಪಟ್ಟು ಆವೇಶದಿಂದ ಹೊರನುಗ್ಗುವವು. ಇದಲ್ಲದೇ ಮನೋವಿಭಜನೆಯಲ್ಲಿ ಹಿಂದೆ ಹೇಳಿದಂತೆ, ಒತ್ತಾಯದಿಂದ ಕೆಳಗೆ ನೂಕಿದ ಈ ಒಲವುಗಳು ಮನಸ್ಸಿನ ಅಂತರಾಳದಲ್ಲಿ ಅನೇಕ ತೊಡಕು ಗಳನ್ನು ಕಟ್ಟಿಕೊಂಡು ಆ ಮಗುವಿನ ಮನೋವ್ಯಾಪಾರಗಳನ್ನೇ ವಿಕೃತ ಗೊಳಿಸಬಹುದು.

ಈ ದೃಷ್ಟಿಯಿಂದ ನೋಡಿದರೆ, ಶೀಲಸಂವರ್ಧನವು ಶಾಲೆಯಲ್ಲಿ ಕಲಿ ಸುವ ವಿಷಯಗಳಲ್ಲಿ ಒಂದಾಗಿಲ್ಲವೆಂಬುದು ಸ್ಪಷ್ಟವಾಗುವದು. ಶೀಲಸಂವ ರ್ಧನವು ಆತ್ಮವಿಕಾಸದ ಒಂದು ವಿಧಾನವಾಗಿರುವದು. ಈ ವಿಧಾನವು ಒಳಗಿ

ನಿಂದಲೇ ಸಾವಧಾನವಾಗಿ, ಸೂಕ್ಷ್ಮವಾಗಿ ನಡೆಯಬೇಕು. ಹಿಂದೆ ಹೇಳಿದಂತೆ ಭಾವಗಳ ಸಂಸ್ಕರಣವೇ ಶೀಲಸಂವರ್ಧನೆಗೆ ಉತ್ತಮವಾದ ಸಾಧನವಾಗಿದೆ. ಭಾವಗಳ ಸಂಸ್ಕರಣಕ್ಕೆ ಎಡೆಕೊಡದ ಶಿಕ್ಷಣವು ಶೀಲಸಂವರ್ಧನಕ್ಕೆ ಎಂದೂ ಪೋಷಕವಾಗಲಾರದು. ಮಕ್ಕಳು ಕಲಿಯುವ **ವಿವಿಧ ವಿಷಯಗಳ ಜ್ಞಾನವು ತಲೆಯಲ್ಲಿ ಮಾತ್ರ ತಂಗದೆ, ಅವರ ಮನಸ್ಸಿನಲ್ಲಿ ಇಂಗಿ ಹೃದಯದವರೆಗೆ ಇಳಿಯಬೇಕು.** ಅಂದರೆ ಭಾವಗಳ ಬೆಂಬಲದಿಂದ ಜ್ಞಾನವು ಕೃತಿರೂಪವಾಗಿ ಹೊರಬೀಳುವದು. ಸರಿಯಾದ ಭಾವಗಳನ್ನು ಹೊತ್ತಿಸಿದರೆ ಸರಿಯಾದ ನಡತೆಯು ತಾನಾಗಿಯೇ ಸಾಧಿಸುವದು. ಸ್ವಂತದ ಬಗ್ಗೆ ಕಟ್ಟಿಕೊಂಡ ಕೆಲವು ಸ್ಥಿರವಾದ ಭಾವಗಳ ಸಮುಚ್ಚಯಕ್ಕೆ 'ಸ್ವಾತ್ಮಭಾವನೆ' ಯೆಂದು ಹಿಂದೆ ಹೇಳಿದೆ. ಶೀಲಸಂವರ್ಧನೆಯಲ್ಲಿ ಈ ಸ್ವಾತ್ಮಭಾವನೆಯ ಕಾರ್ಯವು ವಿಶೇಷವಾಗಿದೆ. 'ನಾನು ಪ್ರಾಮಾಣಿಕನು' 'ನಾನು ಸತ್ಯನಿಷ್ಠನು'—ಹೀಗೆ ಸ್ವಾತ್ಮಭಾವನೆಯನ್ನು ಕಟ್ಟಿಕೊಂಡ ವಿದ್ಯಾರ್ಥಿಗಳು ಈ ಭಾವನೆಗಳಿಗೆ ವಿಪರೀತವಾದ ಅಕಾರ್ಯಗಳನ್ನು ಸಹಸಾ ಕೈಕೊಳ್ಳುವದಿಲ್ಲ. ವಿವಿಧ ವಿಷಯಗಳನ್ನು ಕಲಿಸುವಾಗ್ಗೆ ಈ ಬಗೆಯ **ಸದ್ಗುಣಗಳಿಗೆ ಆದರವು ಅವರಲ್ಲಿ ಜನಿಸುವಂತೆ** ಮಾಡಬೇಕು. ಇದಲ್ಲದೆ ಅಕಾರ್ಯಗಳ ಬಗ್ಗೆ 'ಜಿಗುಪ್ಸೆ'ಯೂ ಬೇಡವೆನ್ನುವ ಹೇಯ ಬುದ್ಧಿಯೂ, ಅವರಲ್ಲಿ ಹುಟ್ಟುವಂತೆ ಮಾಡಬೇಕು. ಪ್ರತ್ಯೇಕವಾಗಿ 'ಇದು ಒಳಿತು ಇದು ಕೆಡಕು'— ಎಂದು ಹೇಳುವದಕ್ಕಿಂತಲೂ ವಿಷಯಗಳ ಓಘದಲ್ಲಿ ಸಮಯಾನುಸಾರವಾಗಿ ಅವುಗಳನ್ನು ಸೂಚಿಸುವದು ಹೆಚ್ಚು ವಿಹಿತವಾದುದು. ಕ್ರಮಿಕ ಪುಸ್ತಕಗಳಲ್ಲಿ ಮಹಾಪುರುಷರ ಚರಿತ್ರೆಗಳಿರುವವು. ಸಾಧು ಸಂತರ ಸೂಕ್ತಿಗಳಿರುವವು. ಹೆಸರಾದ ಸಾಹಿತಿಗಳು ಬರೆದ ಗದ್ಯಪದ್ಯಗಳ ಅವತರಣಿಕೆಗಳಿರುವವು. ಇವುಗಳನ್ನು ತಿಳಿಸಿ ಹೇಳುವಾಗ್ಗೆ ಅನೇಕ ಉದಾತ್ತವಾದ ವಿಚಾರಗಳನ್ನೂ, ಶ್ರೇಷ್ಠಭಾವಗಳನ್ನೂ, ಅನುಕರಣೀಯವಾದ ಕೃತಿಗಳನ್ನೂ ಕಲಿಯುವವರ ಮನಸ್ಸಿನಲ್ಲಿ ಮೂಡುವಂತೆ ಮಾಡಬಹುದು. ಹೃದಯ ಸ್ಪರ್ಶಿಯಾಗುವಂತೆ ಹೇಳುವ ಕಥನ ಕೌಶಲ್ಯವೂ, ಮಾತಿನ ಮಾರ್ಮಿಕತೆಯೂ ಶಿಕ್ಷಕನಲ್ಲಿರ

ಬೇಕಾಗುವದು. ಇತಿಹಾಸ ಶಿಕ್ಷಣದಲ್ಲಿ ನಾಡಿನ ಪೂರ್ವದ ವೈಭವವನ್ನೂ ಅದನ್ನು ಕಟ್ಟಲು ಪೂರ್ವಜರು ಮಾಡಿದ ಮಹತ್ಕಾರ್ಯಗಳನ್ನೂ ಆಸ್ಥೆಯಿಂದ ಶಿಕ್ಷಕನು ವಿದ್ಯಾರ್ಥಿಗಳಿಗೆ ಕಣ್ಮುಂದೆ ಕಟ್ಟುವಂತೆ ಮಾಡಿದರೆ, ಸ್ವದೇಶ ಪ್ರೀತಿಯೂ, ಸ್ವಜನಾಭಿಮಾನವೂ ಅವರಲ್ಲಿ ತಾವಾಗಿಯೇ ಜನಿಸುವವು. ವ್ಯಕ್ತಿಯ ಕೂಪಮಂಡೂಕ ವೃತ್ತಿಯನ್ನು ಕಳೆಯಲು, ಭೂಗೋಲದ ಸರಿಯಾದ ಜ್ಞಾನವು ಸುಲಭವಾದ ಸಾಧನವಾಗಿದೆ. ಒಂದು ಜನಾಂಗದ ಒಣ ಹೆಮ್ಮೆಯ ತಪ್ಪು ತಿಳುವಳಿಕೆಯನ್ನು ತೆಗೆದುಹಾಕಲು ವಿಶಾಲ ಜಗತ್ತಿನ, ವಿವಿಧ ಜನಾಂಗಗಳ ಜೀವನ ಪರಿಚಯವನ್ನು ಮಾಡಿಕೊಡುವದು ಉತ್ತಮವಾದ ಉಪಾಯವಾಗಿದೆ. ವಿಜ್ಞಾನವು ವಿಶ್ವದ ಅದ್ಭುತ ರಮ್ಯ ನೋಟಗಳನ್ನು ವಿದ್ಯಾರ್ಥಿಗಳಿಗೆ ತೋರಿಸಿಕೊಡುವದು; ವಿಶ್ವಕರ್ತನಬಗ್ಗೆ ಪ್ರೇಮಾದರಗಳನ್ನು ಹುಟ್ಟಿಸುವದು.

ಇವುಗಳಲ್ಲದೆ ಶಾಲೆಯ ಜೀವನವನ್ನೆಲ್ಲ ವ್ಯಾಪಿಸಿರುವ ಒಂದು 'ರೀತಿ'ಯು ವಿದ್ಯಾರ್ಥಿಗಳ ನಡತೆಯನ್ನು ರೂಪುಗೊಳಿಸುವದು. ವರ್ಗದಲ್ಲಿ ಸ್ವಚ್ಛತೆಯೂ, ಅಚ್ಚುಕಟ್ಟುತನವೂ, ಹವೆ ಬೆಳಕುಗಳ ವಿಪುಲತೆಯೂ, ವಿದ್ಯಾರ್ಥಿಗಳಿಗೆ ಮನಸ್ಸಿನ ಪ್ರಸನ್ನತೆಯನ್ನು ತಂದುಕೊಡುವವು. **ಶೀಲಸಂವರ್ಧನೆಯಲ್ಲಿ ಶಿಕ್ಷಕನ ಸದ್ಗುಣಗಳೂ, ಸರಳತೆಯೂ, ಸದಾಚಾರವೂ, ಸಾವಿರ ನೀತಿಯ ಪಾಠಗಳಿಗಿಂತಲೂ ಹೆಚ್ಚು ಪರಿಣಾಮಕಾರಿಗಳಾಗಿರುವವು.** ಶಿಕ್ಷಕನು ಸದ್ಗುಣಗಳ ಮೂರ್ತಿಯಾಗದಿದ್ದರೂ, ತನ್ನ ದೋಷ ದೌರ್ಬಲ್ಯಗಳನ್ನು ಪ್ರಾಂಜಲವಾಗಿ ಒಪ್ಪಿಕೊಂಡು, ವಿದ್ಯಾರ್ಥಿಗಳು ಅವುಗಳಿಂದ ದೂರವಾಗಿರುವಂತೆ ಯತ್ನಿಸುವ ಪ್ರಾಮಾಣಿಕತನವಾದರೂ ಆತನಲ್ಲಿರಬೇಕು. ತನ್ನ ವರ್ಗದ ವಿದ್ಯಾರ್ಥಿಗಳ ಶಾಲೆಯ ಹೊರಗಿನ ಜೀವನವನ್ನಾದರೂ ಆತನು ನಿರೀಕ್ಷಿಸುತ್ತಿರಬೇಕು. ಅವರ ಜೊತೆಯು ಹೇಗಿದೆ? ಉಳಿತಾಯದ ವೇಳೆಯನ್ನು ಅವರು ಹೇಗೆ ಕಳೆಯುವರು? ಇವೆಲ್ಲವುಗಳನ್ನು ಶಕ್ಯವಿದ್ದಮಟ್ಟಿಗೆ ಶಿಕ್ಷಕನು ನಿರೀಕ್ಷಿಸುತ್ತಿರಬೇಕು. ಈ ವಿಷಯದಲ್ಲಿ ಅವರ ತಾಯಿತಂದೆಗಳ ಸಹಾಯ ಸಹಕಾರಗಳನ್ನು ಆತನು ಸಂಪಾದಿಸಬೇಕು.

ಶೀಲಸಂವರ್ಧನೆಯಲ್ಲಿ ಆಟಗಳ ಮಹತಿಯನ್ನು ಹಿಂದೆ ಸಾಕಷ್ಟು ವಿವೇಚಿಸಿದೆ. ಸಹಾನುಭೂತಿ, ಸಹಕಾರ, ಸಹಿಷ್ಣುತೆ ಮೊದಲಾದ ಸದ್ಗುಣಗಳನ್ನು ಆಟಗಳು ತಿಳಿಯದಲೇ ವಿದ್ಯಾರ್ಥಿಗಳಿಗೆ ತಂದುಕೊಡುವವು. ಇದಲ್ಲದೆ, **ಆಟಗಾರಿಕೆಯಲ್ಲಿ ಆನಂದವಿರುವಂತೆ ಸೋಲು ಗೆಲವುಗಳನ್ನು ಸಮನಾಗಿ ಭಾವಿಸುವ ಭಾವೋನ್ನತಿಯೂ ಇರುವದು.**

ಇಂದಿನ ಪರಿಸ್ಥಿತಿಯಲ್ಲಿ ಪ್ರತ್ಯಕ್ಷವಾದ ಧಾರ್ಮಿಕ ಶಿಕ್ಷಣವು ಶಾಲೆಗಳಲ್ಲಿ ಸಾಧ್ಯವಿಲ್ಲವಾಗಿದೆ. ಜಾತಿ–ಪಂಥಗಳಲ್ಲಿ ಧರ್ಮದ ವಿಧಾನಗಳು ವಿವಿಧವಾಗಿವೆ. ವಿಧಾನಗಳು ಧರ್ಮದ ಹೊರಗಿನ ವೇಷಮಾತ್ರ. ಈ ವಿಧಾನಗಳ ಆಚರಣೆಯಲ್ಲಿ ವ್ಯಕ್ತಿಯು ಸ್ವತಂತ್ರವಾಗಿರಬೇಕು. ಏಕಾಂತವಾಗಿ ತನ್ನ ಮನೆಯಲ್ಲಿ ತಾನು ಅವುಗಳನ್ನು ನಿರ್ಬಾಧವಾಗಿ ನಡೆಯಿಸಬಹುದು. ಆದರೆ ಸಾಮಾಜಿಕ ಜೀವನದಲ್ಲಿ ಧರ್ಮಸಹಿಷ್ಣುತೆಯು ಅತ್ಯವಶ್ಯವಾಗಿದೆ. ಶಾಲೆಯ ಜೀವನವು ಈ ಗುಣವನ್ನು ಸುಲಭವಾಗಿ ಅವನಲ್ಲಿ ತಂದು ಕೊಡುವಂತಿದೆ. ಎಲ್ಲ ಜಾತಿ ಪಂಥಗಳ ವಿದ್ಯಾರ್ಥಿಗಳು ಶಾಲೆಯಲ್ಲಿ ಸಮಾನತೆಯಿಂದ ಕೂಡಿ ಕಲಿಯುವರು, ಆಟವಾಡುವರು, ಸ್ನೇಹ ಬೆಳೆಸುವರು. ಶಾಲೆಯ ಈ ವೃತ್ತಿಯೇ ಕೊನೆಯವರೆಗೆ ಅವರಲ್ಲಿ ಸ್ಥಿರವಾಗಿ ಉಳಿಯುವಂತೆ ಶಿಕ್ಷಕನು ಯತ್ನಿಸಬೇಕು. ಜಗತ್ತಿನ ಪ್ರಮುಖ ಧರ್ಮಗಳ ತಿರುಳನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಹೇಳಬೇಕು. ಎಲ್ಲ ಧರ್ಮಗಳೂ ಆರಂಭದಲ್ಲಿ ಉತ್ತಮವಾದ ಉದ್ದೇಶದಿಂದಲೇ ಪ್ರೇರಿತವಾಗಿವೆ. ಅಂತಿಮ ಸತ್ಯದ ವಿವಿಧ ಸ್ವರೂಪಗಳಾಗಿವೆ. ಪ್ರೇಮ–ದಯಾ–ಶಾಂತಿಗಳೇ ಎಲ್ಲ ಧರ್ಮಗಳಿಗೆ ತಳಹದಿಯಾಗಿವೆಯೆಂಬುದನ್ನು ಸಮಯೋಚಿತವಾಗಿ ಶಿಕ್ಷಕನು ವಿದ್ಯಾರ್ಥಿಗಳ ನಿದರ್ಶನಕ್ಕೆ ತಂದುಕೊಡಬೇಕು. **ಧಾರ್ಮಿಕತೆ ಯಾವಾಗಲೂ ಇಷ್ಟವಾದುದು; ಆದರೆ ಧರ್ಮಾಂಧತೆ ಅನರ್ಥಕ್ಕೆ ಕಾರಣವಾದುದು.**

**ಸೃಷ್ಟಿಕರ್ತನಲ್ಲಿ ಕೃತಜ್ಞತೆಯಿಂದ ಕೂಡಿದ ಭಕ್ತಿಯು** ಧಾರ್ಮಿಕ ಶಿಕ್ಷಣದ ಇನ್ನೊಂದು ಮುಖವಾಗಿದೆ. ಸುದೈವದಿಂದ ನಮ್ಮ ಹಿರಿಯರು ಧರ್ಮ ನೀತಿಗಳನ್ನು ಜೀವನದೊಂದಿಗೆ ಹೆಣೆದುಬಿಟ್ಟಿದ್ದಾರೆ.

ಎಂಥ ವಿಪ್ಲವಗಳೊದಗಿದರೂ ಧರ್ಮ ಬುದ್ಧಿಯು ಇನ್ನೂ ನಮ್ಮ ಜನರಲ್ಲಿ ಸ್ಥಿರವಾಗಿ ಉಳಿದಿದೆ. ಕಲ್ಯಾಣಕಾರಿಗಳಾದ ಈ ಸಂಪ್ರದಾಯಗಳು ಬೆಳೆಯುವ ಮಕ್ಕಳ ಜೀವನದಿಂದ ಕಳಚಿಹೋಗದಂತೆ ಶಿಕ್ಷಕನು ಯತ್ನಿಸಬೇಕು. **ಸರ್ವಧರ್ಮಗಳ ಸಮನ್ವಯರೂಪವಾದ ಶಾಲೆಯ ಪ್ರಾರ್ಥನೆಯು ಇದಕ್ಕೆ ಉತ್ಕೃಷ್ಟವಾದ ಸಾಧನೆಯಾಗಿದೆ.**

## ಪರಿಚ್ಛೇದ ೨೨

### ಶಾರೀರಿಕ ಹಾಗೂ ಆರೋಗ್ಯ ಶಿಕ್ಷಣ

ಜೀವನವು ಒಂದು ಸಾಹಸವಾಗಿದೆ, ಸಂಗ್ರಾಮದಂತಿದೆ. ಜೀವನದಲ್ಲಿ ವ್ಯಕ್ತಿಯು ಅನೇಕ ಪ್ರತಿಕೂಲವಾದ ಪರಿಸ್ಥಿತಿಗಳನ್ನು ಎದುರಿಸಬೇಕಾಗುವದು. ಹೆಜ್ಜೆಹೆಜ್ಜೆಗೂ ಅಕಲ್ಪಿತವಾದ ಎಡರುತೊಡರುಗಳನ್ನು ದಾಟಿ ಮುಂದೆ ಸಾಗಬೇಕಾಗುವದು. ಜೀವನವು ಯಶಸ್ವಿಯಾಗಲು ಪ್ರತಿಯೊಬ್ಬನು ಎರಡು ಬಗೆಯ ಸಿದ್ಧತೆಯನ್ನು ಮಾಡಿಕೊಳ್ಳಬೇಕಾಗುವದು. **ಆಪತ್ತುಗಳಿಗೆ ಅಳುಕದ ಅಚಲವಾದ ಮನೋವೃತ್ತಿಯು ಮೊದಲನೆಯದು. ಕಾರ್ಯಗಳ ಭಾರಕ್ಕೆ ಕುಸಿಬೀಳದ, ಸದೃಢವಾದ, ನಿರೋಗಿಯಾದ ಶರೀರವು ಎರಡನೆಯದು.** ಕಥೆಯಲ್ಲಿ ಹೇಳಿರುವ ಕುಂಟನ ಹಾಗೂ ಕುರುಡನ ಸಹಕಾರವು ನದಿಯನ್ನು ದಾಟಲು ಅವಶ್ಯವಾದಂತೆ, ಶರೀರ ಹಾಗೂ ಮನಸ್ಸುಗಳ ಪರಸ್ಪರ ಅವಲಂಬನವಿರುವದು. ಮನಸ್ಸು ಹೀಗೆ ಮಾಡೆಂದು ದಾರಿ ತೋರಿಸಬೇಕು. ಶರೀರವು ಆ ಕೆಲಸವನ್ನು ನಿರ್ವಹಿಸಬೇಕು. ಇವುಗಳಲ್ಲಿ ಒಂದು ದುರ್ಬಲವಾದರೆ ಮತ್ತೊಂದರ ಶಕ್ತಿಯೆಲ್ಲವೂ ನಿಷ್ಫಲವಾಗುವದು. ಎರಡೂ ಸಬಲವಾಗಿರಬೇಕು. ಎರಡೂ ಸರಿಯಾದ ಸುಸ್ಥಿತಿಯಲ್ಲಿರಬೇಕು. ಇಲ್ಲವಾದರೆ ಒಂದರ ದೋಷದೌರ್ಬಲ್ಯಗಳು ಮತ್ತೊಂದಕ್ಕೆ ಅನೇಕ ರೀತಿಗಳಲ್ಲಿ ಅಂಟಿಕೊಳ್ಳುವವು. **ನಿರೋಗಿಯಾದ ಶರೀರದಲ್ಲಿ ನಿರ್ದೋಷ**

**ವಾಸ ಮನಸ್ಸಿರುವದೆಂದು** ಆಂಗ್ಲಭಾಷೆಯಲ್ಲಿ ಒಂದು ನಾಣ್ಣುಡಿಯಿದೆ. ‘ಶರೀರಮಾದ್ಯಂ ಖಲು, ಧರ್ಮಸಾಧನಂ’ ಎಂತಲೂ, ‘ನಾಯಮಾತ್ಮಾ ಬಲಹೀನೇನ ಲಭ್ಯಃ’ ಎಂತಲೂ ಹೇಳಿದ ನಮ್ಮ ಪೂರ್ವಜರು ಮನಸ್ಸು ಶರೀರಗಳೆರಡರ ಸುಸ್ಥಿತಿಯ ಮಹತಿಯನ್ನು ಪೂರ್ಣವಾಗಿ ತಿಳಿದುಕೊಂಡಿದ್ದರು. ಇಂದಿನ ಶಿಕ್ಷಣವಾದರೂ ಇದೇ ಮಾತನ್ನೇ ಒತ್ತಿ ಹೇಳುತ್ತದೆ. ದೇಹ-ಮನಸ್ಸು-ಆತ್ಮಗಳಲ್ಲಿರುವ ಶಕ್ತಿಗಳನ್ನೆಲ್ಲ ಪೂರ್ಣವಾಗಿ ವಿಕಸನ ಹೊಂದುವಂತೆ ಮಾಡುವದೇ ಇಂದಿನ ಶಿಕ್ಷಣದ ಗುರಿಯಾಗಿದೆ. ಸರಿಯಾದ ನಾಕರಿಕರನ್ನು ಸಿದ್ಧಗೊಳಿಸುವ **ಇಂದಿನ ಶಿಕ್ಷಣವು ಶಾರೀರಿಕ ಶಿಕ್ಷಣವನ್ನು ಮಉಲಕ್ಷಿಸಲಾರದು.**

ಯುರೋಪದಲ್ಲಿ ಇಂದು ನಾವು ಕಾಣುವ ಶಾರೀರಿಕ ಶಿಕ್ಷಣದ ಪ್ರಗತಿಗೆ **ಜಾನ್ ಹಾಗೂ ಲಿಂಗ್** ಎನ್ನುವ ತಜ್ಞರು ಕಾರಣವಾಗಿರುವರು. ಜಾನ್ ಎಂಬವರು ಜರ್ಮನಿಯಲ್ಲಿ ಶಾರೀರಿಕ ಶಿಕ್ಷಣದ ಪ್ರಚಂಡವಾದ ರಾಷ್ಟ್ರೀಯ ಚಳವಳಿಯನ್ನೇ ಹೂಡಿದರು. ಇಂದು ನಮ್ಮ ವ್ಯಾಯಾಮ ಮಂದಿರಗಳಲ್ಲಿ ಉಪಯೋಗಿಸುತ್ತಿರುವ ಡಬಲ್‌ಬಾರ್-ಸಿಂಗಲ್‌ಬಾರ್‌ಗಳ ಕಲ್ಪನೆಯನ್ನೂ ಕಸರತ್ತುಗಳನ್ನೂ ಇವರೇ ಮೊದಲು ಕಂಡುಹಿಡಿದರು. ಲಿಂಗ್ ಎಂಬುವರು ಡೆನ್ಮಾರ್ಕದವರು. ಬಗೆಬಗೆಯ ಆಟಗಳಿಂದ ಶಾರೀರಿಕ ಶಿಕ್ಷಣವನ್ನು ಕೊಡುವ ಯೋಜನೆಯನ್ನು ಯುರೋಪದಲ್ಲಿ ಇವರು ಮೊದಲಿಗೆ ಬಳಿಕೆಯಲ್ಲಿ ತಂದರು. ದುರ್ಬಲರಾದ ಪ್ರಜೆಗಳಿಂದ ಕೂಡಿದ ಯಾವದೇ ರಾಷ್ಟ್ರವು ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಬೇಕಾದರೆ ಹಾಗೂ ಗಳಿಸಿದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕಾದರೆ, ಮೊದಲು ಶಾರೀರಿಕ ಬಲವನ್ನು ಗಳಿಸಲೇಬೇಕೆಂದು ಇವರೀರ್ವರ ನಿಶ್ಚಿತವಾದ ಸಿದ್ಧಾಂತವಾಗಿತ್ತು. ನಮ್ಮ ದೇಶದ ಪರಿಸ್ಥಿಗೆ ಈ ಮಾತು ಎಷ್ಟೊಂದು ಹೊಂದಿಕೊಳ್ಳುವದೆಂಬದನ್ನು ನಾವೆಲ್ಲರೂ ತಿಳಿದುಕೊಳ್ಳಬೇಕಾಗಿದೆ, ನೆನಪಿನಲ್ಲಿಡಬೇಕಾಗಿದೆ. ಇವರ ಪ್ರಯತ್ನಗಳ ಫಲವಾಗಿ ಯುರೋಪದ ಎಲ್ಲ ರಾಷ್ಟ್ರಗಳಲ್ಲಿಯೂ **ಒತ್ತಾಯದ ಶಾರೀರಿಕ ಶಿಕ್ಷಣವು** ಪ್ರಾರಂಭವಾಯಿತು. ಯುರೋಪದ ಇಂದಿನ

ಜನಾಂಗಗಳಲ್ಲಿ ಕಂಡುಬರುವ **ದೃಢಕಾಯ-ದೀರ್ಘಾಯುಷ್ಯಗಳು ಶಾರೀರಿಕ ಶಿಕ್ಷಣದ ಸತ್ಫಲಗಳಾಗಿವೆ.** ಇಪ್ಪತ್ತೈದು ವರುಷಗಳ ಪೂರ್ವದಲ್ಲಿ ೧೯೨೭ನೇ ಇಸ್ವಿಯಲ್ಲಿಯೇ ನಮ್ಮ ಪ್ರಾಂತಿಕ ಸರಕಾರವಾದರೂ ಶಾರೀರಿಕ ಶಿಕ್ಷಣದ ವಿಚಾರಣೆಯ ಬಗ್ಗೆ ಒಂದು ಸಮಿತಿಯನ್ನು ನೇಮಿಸಿದ್ದಿತು. ಆ ಸಮಿತಿಯ ಸೂಚನೆಗಳೆಲ್ಲವನ್ನೂ ಜಾರಿಯಲ್ಲಿ ತರುವದಾಗಿರಲಿಲ್ಲ. ಕಾಂಗ್ರೆಸ್ ಮಂತ್ರಿಮಂಡಳದವರು ಶಾರೀರಿಕ ಶಿಕ್ಷಣದ ಪ್ರಸಾರವನ್ನು ಅತ್ಯಂತ ಆಸ್ಥೆಯಿಂದ ಕೈಕೊಂಡರು. ಶಾರೀರಿಕ ಶಿಕ್ಷಣದ ಆಡಳಿತಕ್ಕಾಗಿ ಸರಕಾರದಲ್ಲಿ ಪ್ರತ್ಯೇಕವಾದ ಒಂದು ವಿಭಾಗವೇ ಉಂಟಾಗಿದೆ. ಶಾಲೆಗಳಲ್ಲಿ ಒತ್ತಾಯದ ಶಾರೀರಿಕ ಶಿಕ್ಷಣವು ಪ್ರಾರಂಭವಾಗಿದೆ. ಶಾರೀರಿಕ ಶಿಕ್ಷಣವನ್ನು ಕೊಡುವ ಸ್ವತಂತ್ರ ಸಂಸ್ಥೆಗಳಿಗೂ ಸಹಾಯಕ ದ್ರವ್ಯವೂ, ಸವಲತ್ತುಗಳೂ ಸರಕಾರದಿಂದ ದೊರೆಯುತ್ತಿವೆ.

ಶಾರೀರಿಕ ಶಿಕ್ಷಣದ ಸಾಧನ-ಸಾಮಗ್ರಿಗಳಲ್ಲಿ (೧) **ಆಟದ ಬೈಲು** ಮಹತ್ವದ್ದಾಗಿದೆ. ಸಾಮಾನ್ಯವಾಗಿ ಶಾಲೆಗೊಂದು ಕ್ರೀಡಾಂಗಣವಿರುವದು ಅವಶ್ಯವಾದುದು. ಇಲ್ಲವಾದರೆ ಶಾಲೆಯ ಆವಾರದಲ್ಲಿ ಸಾಕಷ್ಟು ಬೈಲು ಪ್ರದೇಶವಿರಬಹುದು. ಗುಡಿಗುಂಡಾರಗಳಲ್ಲಿ ಹಾಕುವ ಹಳ್ಳಿಯ ಶಾಲೆಗಳಿಗೆ ಇದೇನು ದೊಡ್ಡ ಕೊರತೆಯಾಗಿರದು. ಹೊರಗೆ ಬೇಕಾದಷ್ಟು ಬಯಲು ಪ್ರದೇಶವು ಆಟಕ್ಕಾಗಿ ಅವರಿಗೆ ದೊರೆಯಬಹುದು. (೨) ಶಾರೀರಿಕ ಶಿಕ್ಷಣವನ್ನು ಕೊಡಲು **ತಜ್ಞರಾದ ಶಿಕ್ಷಕರು** ಬೇಕಾಗುವರು. ಸುದೈವದಿಂದ ಇಂದು ಆ ಕೊರತೆಯೂ ಇಲ್ಲದಂತಾಗಿದೆ. ದೀರ್ಘಾವಧಿಯ ಹಾಗೂ ಅಲ್ಪಾವಧಿಯ ಶಾರೀರಿಕ ಶಿಕ್ಷಣ ವರ್ಗಗಳನ್ನು ಸರಕಾರದವರು ಆಗಾಗ್ಗೆ ಅನುಕೂಲ ಸ್ಥಳಗಳಲ್ಲಿ ತೆಗೆದು ಈ ಕೊರತೆಯಾಗದಂತೆ ನೋಡಿಕೊಳ್ಳುತ್ತಿರುವರು. (೩) ಶಾರೀರಿಕ ಶಿಕ್ಷಣಕ್ಕೆ **ಉಪಕರಣಗಳು** ವಿಪುಲವಾಗಿರಬೇಕೆಂದು ಅನೇಕರ ತಿಳುವಳಿಕೆ. ಏತದ್ದೇಶೀಯ ಆಟಗಳಿಗೆ ಹೆಚ್ಚಿನ ಉಪಕರಣಗಳು ಬೇಕಿಲ್ಲ. ಸಾಷ್ಟಾಂಗನಮಸ್ಕಾರವು ಎಲ್ಲ ಅವಯವಗಳಿಗೂ ಅವಶ್ಯವಾದ ವ್ಯಾಯಾಮವನ್ನು ಒದಗಿಸುವದು. ಬೈಲಿನಲ್ಲಿ ಆಡುವ **ಖೋಖೋ, ತಿಳ್ಳಿ** ಮೊದಲಾದ

ಆಟಗಳಿಗೂ ಯಾವ ಉಪಕರಣಗಳೂ ಬೇಕಿಲ್ಲ. **ಹಿಂದಕ್ಕೆ ನಮ್ಮ ನಾಡಿನಲ್ಲಿ ಓಣಿಗೊಂದು ಗರಡಿಮನೆ ಇದ್ದಂತೆ, ಇಂದು ಮನೆಮನೆಗೊಂದು ಗರಡಿಮನೆಯಾಗುವದು ಅಗತ್ಯವಿದೆ.** (೪) ಇಂದು ವ್ಯಾಯಾಮದ ಶಾಸ್ತ್ರ ಹಾಗೂ ವಿಧಾನಗಳನ್ನು ಕುರಿತು **ಉಪಯುಕ್ತವಾದ ವಾಙ್ಮಯವು** ದೊರೆಯುತ್ತಿದೆ. ಧಾರವಾಡದ ಮಲ್ಲಸಜ್ಜನ ವ್ಯಾಯಾಮಶಾಲೆ, ಬೆಂಗಳೂರಿನ ಶ್ರೀ. ಅಯ್ಯರರ ಶಾರೀರಿಕ ಶಿಕ್ಷಣ ಸಂಸ್ಥೆಯಂತಹ ಆದರ್ಶ ಸಂಸ್ಥೆಗಳೂ ಕಾರ್ಯಮಾಡುತ್ತಿವೆ. (೫) ಶಾರೀರಿಕ ಶಿಕ್ಷಣವನ್ನು ಪ್ರಾರಂಭಿಸಿದರೆ, ಮಕ್ಕಳಿಗೆ **ಪುಷ್ಟಿಕರವಾದ ಆಹಾರವನ್ನೊದಗಿಸುವದು** ಅವಶ್ಯವೆಂದು ಸಾಮಾನ್ಯವಾದ ಅಭಿಪ್ರಾಯವಾಗಿದೆ. ಈ ಮಾತಿನಲ್ಲಿ ತಥ್ಯಾಂಶವಿದೆ. ಆದರೆ ಈ ನೆಪದಿಂದ ಶಾರೀರಿಕ ಶಿಕ್ಷಣವನ್ನು ಬಿಟ್ಟುಕೊಡುವದು ಸರಿಯಾಗದು. ನಮ್ಮ ದೇಶದಲ್ಲಿ ಉಂಡದ್ದನ್ನು ಅರಗಿಸಲು ಕಷ್ಟಪಡುವವರು ಕೆಲವರು. ಏನು ಕಷ್ಟಪಟ್ಟರೂ ಉಣ್ಣಲಿಕ್ಕೂ ಕೂಡ ದೊರೆಯದಿದ್ದವರೇ ಬಹುಸಂಖ್ಯಾಕರು. **ಇಂಥ ಪರಿಸ್ಥಿತಿಯಲ್ಲಿ ವ್ಯಾಯಾಮಕ್ಕೂ ಪೌಷ್ಟಿಕ ಆಹಾರಕ್ಕೂ ಹೀಗೆ ತಳಕು ಹಾಕುವದು ತಪ್ಪಾಗುವದು.**

ಶಾರೀರಿಕ ಶಿಕ್ಷಣದ ಬಗ್ಗೆ ಶಿಕ್ಷಕರು ಕೆಲವು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು:—(೧) ಶಾರೀರಿಕ ಶಿಕ್ಷಣವು ವಿದ್ಯಾರ್ಥಿಗಳ ವಯೋಮಾನಕ್ಕೆ ಉಚಿತವಾಗಿರಬೇಕು. ಚಿಕ್ಕಮಕ್ಕಳಿಗಾಗಿ ವ್ಯಾಯಾಮವು ವಿಶೇಷವಾಗಿ ಆಟಗಳ ರೂಪದಲ್ಲಿಯೇ ಇರಬೇಕು. ವಿನೋದ, ಚಮತ್ಕೃತಿಗಳಿಲ್ಲದ ವ್ಯಾಯಾಮವು ಅವರ ಮನಸ್ಸಿಗೆ ಹಿಡಿಯಲಾರದು. (೨) ಆರೋಗ್ಯವಿಜ್ಞಾನ, ಶರೀರರಚನೆ, ಹಾಗೂ ಪ್ರಥಮಚಿಕಿತ್ಸೆ ಇವುಗಳ ಅಲ್ಪಪರಿಚಯವಾದರೂ ವ್ಯಾಯಾಮ ಶಿಕ್ಷಕನಿಗೆ ಇರಬೇಕು. (೩) ವ್ಯಾಯಾಮವನ್ನು ಪ್ರಾರಂಭಿಸುವ ಮೊದಲು, ತಜ್ಞರಿಂದ **ವಿದ್ಯಾರ್ಥಿಗಳ ಆರೋಗ್ಯ ಪರೀಕ್ಷೆ**ಯಾಗುವದು ಅವಶ್ಯವು. ಅವರ ಆರೋಗ್ಯದಲ್ಲಿ ಏನಾದರೂ ಲೋಪದೋಷಗಳು ಕಂಡುಬಂದರೆ, ತಾಯಿ-ತಂದೆಗಳ ಲಕ್ಷ್ಯಕ್ಕೆ ತಂದುಕೊಡಬೇಕು. (೪) ವ್ಯಾಯಾಮದ ಫಲವು ಎಲ್ಲ ವಿದ್ಯಾರ್ಥಿಗಳಿಗೂ ದೊರೆಯುವಂತೆ ಮಾಡಬೇಕು. (೫) ವ್ಯಾಯಾ

ಮದ ಉದ್ದೇಶವು ಕೇವಲ ಪುಷ್ಟರಾದ 'ಹುಂಬ'ರನ್ನು–'ಜಟ್ಟಿ'ಗಳನ್ನು ಸಿದ್ಧಗೊಳಿಸುವದಾಗಿಲ್ಲ; ಶಕ್ತಿಯ ದುರುಪಯೋಗವಾಗಕೂಡದು. **ತನ್ನ ಸ್ವಂತದ ಕಲ್ಯಾಣಕ್ಕಾಗಿ** ಹಾಗೂ **ಸಮಾಜದ ಸೇವೆಗಾಗಿ ವ್ಯಾಯಾಮದ ವಿನಿಯೋಗವಾಗಬೇಕೆಂಬ ವಿಚಾರವನ್ನು ವಿದ್ಯಾರ್ಥಿಗಳ ಮನಸ್ಸಿನಲ್ಲಿ ದೃಢವಾಗಿ ಮೂಡಿಸಬೇಕು.** (೬) ಶಕ್ತಿಮೀರಿ–ಮಿತಿಮೀರಿ ಮಾಡುವ ವ್ಯಾಯಾಮವನ್ನು ತಪ್ಪಿಸಿ, ಅಲ್ಪ ಪ್ರಮಾಣದ ನಿಯಮಿತವಾದ ವ್ಯಾಯಾಮವೇ ಕೊನೆಯವರೆಗೂ ಹಿತಕರವಾಗುವದೆಂಬುದನ್ನು ವಿದ್ಯಾರ್ಥಿಗಳಿಗೆ ಮನವರಿಕೆಮಾಡಿಕೊಡಬೇಕು. (೭) ಶಿಕ್ಷಕರೂ ವ್ಯಾಯಾಮದಲ್ಲಿ ಆಸ್ಥೆಯನ್ನು ವಹಿಸಿದರೆ, ಅನುಕರಣಶೀಲರಾದ ವಿದ್ಯಾರ್ಥಿಗಳೂ ಅವರನ್ನು ಹುರುಪಿನಿಂದ ಹಿಂಬಾಲಿಸುವರು. ಆಟದ ಬೈಲುಗಳಲ್ಲಿ ವರ್ಗದ ಸಂಕೋಚ ವೃತ್ತಿಯಿಲ್ಲ. ಗುರು–ಶಿಷ್ಯರು ಒಬ್ಬರನ್ನೊಬ್ಬರು ಹೆಚ್ಚಾಗಿ ಅರಿತುಕೊಳ್ಳಲೂ ಆದರಿಸಲೂ ಇಲ್ಲಿ ಹೆಚ್ಚಾಗಿ ಆಸ್ಪದವುಂಟಾಗುವದು.

**ಆರೋಗ್ಯಶಿಕ್ಷಣವು** ಶಾರೀರಿಕ ಶಿಕ್ಷಣಕ್ಕೆ ನಿಕಟವಾಗಿ ಹೊಂದಿಕೊಂಡಿರುವದು. ಸಾಂಘಿಕ ಆರೋಗ್ಯವನ್ನು ಮೂಲಶಿಕ್ಷಣದ ವಿಶೇಷಾಂಗವಾದ 'ಸಫಾಯಿ'ಯನ್ನು ಕುರಿತು ಹೇಳುವಾಗ್ಗೆ ವಿವೇಚಿಸಬಹುದು. ಆದರೆ ರೋಗಪ್ರತಿಬಂಧಕವಾದ ಹಾಗೂ ರೋಗಗಳ ಪ್ರಸಾರಕ್ಕೆ ತಡೆಹಾಕಬಹುದಾದ ಆರೋಗ್ಯ ಶಿಕ್ಷಣವು ಚಿಕ್ಕಮಕ್ಕಳಿಗೆ ಮೊದಲಿನಿಂದಲೂ ದೊರೆಯಲೇಬೇಕು. ಶಾರೀರಿಕ ಶಿಕ್ಷಣದಂತೆ ಆರೋಗ್ಯ ಶಿಕ್ಷಣವು ವರ್ಗದಲ್ಲಿ ಕಲಿಯುವ ಒಂದು ವಿಷಯವಲ್ಲ. ಅದು ಕೃತಿರೂಪವಾದುದು. ಕೆಲವೊಂದು **ಆರೋಗ್ಯದ ನಿಯಮಗಳನ್ನು ವಿದ್ಯಾರ್ಥಿಗಳು ತಿಳಿದುಕೊಂಡು ತಪ್ಪದೆ ಆಚರಿಸುವಂತೆ ಮಾಡುವದೇ ಆರೋಗ್ಯ ಶಿಕ್ಷಣವಾಗಿದೆ.** ಇವುಗಳಲ್ಲಿ ಶಾರೀರಿಕ ಸ್ವಚ್ಛತೆಯು ಮೊದಲಿನದು. ಹಲ್ಲು ಉಜ್ಜಿ ಕೊಳ್ಳುವದು, ಜಳಕಮಾಡುವದು, ಉಗುರು ಬೆಳೆಯದಂತೆ ಆಗಾಗ್ಗೆ ಕತ್ತರಿಸಿಕೊಳ್ಳುವದು, ಹುಡಿಗೆಯರು ತಲೆಬಾಚಿಕೊಳ್ಳುವದು ಇವೇ ಮೊದಲಾದವುಗಳನ್ನು 'ಯಾಕೆ? ಹೇಗೆ?' ಎಂಬ ಪರಿಜ್ಞಾನದೊಡನೆ ತಪ್ಪದೆ ನಿತ್ಯವೂ ಮಾಡಿಸಿ

ಕೊಳ್ಳಬೇಕು. **ಶಿಕ್ಷಕ-ಶಿಕ್ಷಕಿಯರಲ್ಲಿರುವ 'ತಾಯಿ-ತಂದೆತನ'ವು ಈ ಕಾರ್ಯದಲ್ಲಿ ವಾತ್ಸಲ್ಯರೂಪವಾಗಿ ಹರಿದುಬರಬೇಕು.** ಬಡತನ, ಅಜ್ಞಾನಗಳಿಂದ ಕೂಡಿದ ಮನೆತನಗಳಿಂದ ಬಂದ ಬಾಲಕರಿಗೆ ಹೊಲಸಿನ ಬಗ್ಗೆ ಅಷ್ಟೊಂದು ಹೇಸಿಕೆಯೆನಿಸುವದಿಲ್ಲ. ಅವ್ಯವಸ್ಥೆ ಅವರಿಗೆ ನಿತ್ಯಜೀವನದಲ್ಲಿ ನೆಲಿಸಿಬಿಟ್ಟಿರುವದು. ಬಡತನದ ಪರಿಸ್ಥಿತಿಯ ಪ್ರಭಾವದಿಂದ ಅವರಲ್ಲಿ ಬೆಳೆದುಬಂದಿರುವ ಅನಿಷ್ಟವಾದ ಈ ರೂಢಿಗಳನ್ನು ಚಿಕ್ಕಂದಿನಲ್ಲಿಯೇ ತೆಗೆದುಹಾಕಲು ಸಾಧ್ಯವಿದೆ. ಹಾಗೂ ಸ್ವಚ್ಛತೆ, ಅಚ್ಚುಕಟ್ಟುತನಗಳ ನಿಷ್ಠುರವಾದ ಆಚರಣೆಯಿಂದ ಎಳೆಯತನದಿಂದಲೆ ಆ ಗುಣಗಳು ಅವರಲ್ಲಿ ನೆಲಿಸುವಂತೆ ಮಾಡಬೇಕಾಗುವದು.

ಆರೋಗ್ಯದ ಘಟಕಗಳಲ್ಲಿ ಆಹಾರವು ಶಾಲೆಯ ಅಧಿಕಾರಕ್ಕೆ ಹೊರಗಾಗಿದೆ. ಆದರೆ **ಸಾಕಷ್ಟು ಹವೆ ಬೆಳಕುಗಳು ವರ್ಗದಲ್ಲಿ ಬಾಲಕರಿಗೆ ದೊರೆಯುವಂತೆ ಶಿಕ್ಷಕನು ಯತ್ನಿಸಬೇಕು. ನಿರ್ಮಲವಾದ ನೀರಿನ ಪೂರೈಕೆಯಾಗುವಂತೆ** ನೋಡಿಕೊಳ್ಳಬೇಕು. ಸಾಂಸರ್ಗಿಕ ಹಾಗೂ ಚರ್ಮರೋಗಗಳು ಬಾಲಕರಲ್ಲಿ ಹರಡದಂತೆ ಎಲ್ಲ ಬಗೆಯ ದಕ್ಷತೆ ವಹಿಸಬೇಕು. ಮೂಲಶಿಕ್ಷಣದಲ್ಲಿ ಶಾರೀರಿಕ ಹಾಗೂ ಆರೋಗ್ಯ ಶಿಕ್ಷಣಗಳಿಗೆ ಸಾಕಷ್ಟು ಸ್ಥಾನವಿದೆ, ಮನ್ನಣೆಯಿದೆ. **ಶಾರೀರಿಕ ಶಿಕ್ಷಣವೆಂದರೆ ಕೇವಲ ಕವಾಯಿತು-ಕಸರತ್ತುಗಳಲ್ಲ.** ಶರೀರವನ್ನು ಬಲಪಡಿಸುವದಕ್ಕಾಗಿ ಇವುಗಳ ಉಪಯುಕ್ತತೆಯನ್ನು ಅಲ್ಲಗಳೆಯುವಂತಿಲ್ಲ. ಆದರೆ ಶಾರೀರಿಕ ಶಿಕ್ಷಣದ ಅಂತಿಮ ಧ್ಯೇಯವು **ಶರೀರವನ್ನು ಕಾರ್ಯಕ್ಷಮವಾಗಿ ಮಾಡುವದಾಗಿದೆ.** ಶ್ರಮಸಹಿಷ್ಣುತೆಯೊಡನೆ, ಕೃತಿಕೌಶಲ್ಯವೂ, ಚಪಲತೆಯೂ ಅವರಲ್ಲಿ ಬೆಳೆದುಬರಬೇಕು. ಮೂಲಶಿಕ್ಷಣದಲ್ಲಿ ಕ್ರಮಬದ್ಧವಾದ ವ್ಯಾಯಾಮವು ಶರೀರವನ್ನು ಬಲಪಡಿಸುವದು. ಮೂಲೋದ್ಯೋಗದ ವಿವಿಧ ಚಟುವಟಿಕೆಗಳು ಶಾರೀರಿಕ ಶ್ರಮವನ್ನು ಒದಗಿಸುವದಲ್ಲದೆ ಬುದ್ಧಿವಿಕಾಸವನ್ನು ಸಾಧಿಸುವವು. ಶರೀರ ಹಾಗೂ ಬುದ್ಧಿಗಳು ಹೊಂದಿಕೊಂಡು ಸಮರಸವಾಗಿ ಬೆಳೆಯುವದೇ ಇಂದಿನ ಅಖಂಡ ಶಿಕ್ಷಣ. **ಮೂಲಶಿಕ್ಷಣದಲ್ಲಿ ಮಗುವಿನ**

**ಸ್ವಚ್ಛತೆಯ ಹೊಣೆಯು ಶಿಕ್ಷಕನದಾಗಿದೆ.** ಪ್ರಾರ್ಥನೆಯ ಪೂರ್ವದಲ್ಲಿ ಪ್ರತಿಯೊಬ್ಬ ಮಗುವು ಹಲ್ಲನ್ನು ಉಜ್ಜಿಕೊಂಡಿರುವದನ್ನು, ಕಣ್ಣು—ಮೂಗು—ಬಾಯಿಗಳನ್ನು ತೊಳೆದುಕೊಂಡಿರುವದನ್ನು, ವರ್ಗದ ಆರೋಗ್ಯಮಂತ್ರಿಯು ನೋಡಿಕೊಳ್ಳಬೇಕಾಗುವದು. ಶಿಕ್ಷಕನು ಈ ಕಾರ್ಯದಲ್ಲಿ ಆತನಿಗೆ ಮಾರ್ಗದರ್ಶಿಯಾಗಬೇಕು. ಅವಶ್ಯವಿದ್ದಲ್ಲಿ ತಾನೇ ಮುಂದೆ ಬಂದು ಮಕ್ಕಳ ಹಲ್ಲನ್ನು ಉಜ್ಜಬೇಕು; ಮುಖ ತೊಳೆಯಬೇಕು; ಉಗುರುಗಳನ್ನು ತೆಗೆಯಬೇಕು. ಇದನ್ನು ಮಾಡುವಾಗ್ಗೆ ಹೀಗೆ ಮಾಡುವ ಅವಶ್ಯಕತೆಯನ್ನು ಅವರಿಗೆ ತಿಳಿಯುವಂತೆ ಮನಗಾಣಿಸಿ ಕೊಡಬೇಕು. ಆರೋಗ್ಯರಕ್ಷಣೆಯಲ್ಲಿ **ವಿಶ್ರಾಂತಿ ಹಾಗೂ ಉಲ್ಹಾಸವೃತ್ತಿಗಳೂ** ಅಗತ್ಯವಾದ ಸಂಗತಿಗಳಾಗಿವೆ. ಮೂಲಶಿಕ್ಷಣದಲ್ಲಿ ಆಟನೋಟಗಳಿಗೆ, ಜಾನಪದ ಗೀತಗಳಿಗೆ, ಹಳ್ಳಿಯ ನೃತ್ಯಗಳಿಗೆ ತುಂಬಾ ಮನ್ನಣೆಯಿದೆ.

## ಪರಿಚ್ಛೇದ ೨೩

### ವಿವಿಧ ವಿಷಯಗಳನ್ನು ಕಲಿಸುವ ಪದ್ಧತಿಗಳು

ಇಂದು ಸಾರ್ವತ್ರಿಕವಾಗುವ ಮೂಲಶಿಕ್ಷಣದಲ್ಲಿ ಅಭ್ಯಾಸಪತ್ರಿಕೆಯ ಎಲ್ಲ ವಿಷಯಗಳನ್ನು ಮೂಲೋದ್ಯೋಗ, ನಿಸರ್ಗ ಹಾಗೂ ಸಮಾಜ ಈ ಮೂರು ಕೇಂದ್ರಗಳಿಗೆ ಪ್ರಾಸಂಗಿಕವಾಗಿ 'ಅನುಬಂಧಿಸಿ' ಸಮವಾಯ ಪದ್ಧತಿಯಿಂದ ಬಾಲಕರಿಗೆ ಕಲಿಸಬೇಕಾಗುವದು. ಯಾವ ತತ್ವವನ್ನೇ ಅನುಸರಿಸಿದರೂ **ವಿಷಯಕ್ಕೊಂದು ವಿಶಿಷ್ಟವಾದ** 'ರೀತಿ' ಯಿದೆ; '**ಪದ್ಧತಿ**' ಯಿದೆ. ಈ 'ಪದ್ಧತಿ' ಗಳಿಗೆ ದೀರ್ಘಕಾಲದ **ಅನುಭವದ ಅನುಮತಿಯಿದೆ; ಮಾನಸಶಾಸ್ತ್ರದ ಬೆಂಬಲವಿದೆ.** ಅನುಭವವಿಲ್ಲದ ನೂತನ ಶಿಕ್ಷಕರನ್ನು ಈ ಪದ್ಧತಿಗಳು ಬೋಧನಕ್ರಮದಲ್ಲಿ ಸರಿಯಾದ ದಾರಿಗುಂಟ ತೆಗೆದುಕೊಂಡು ಹೋಗುವವು.

(೧) **ಮಾತೃಭಾಷೆ:—**

ಭಾಷೆ ನಮ್ಮ ಜೀವನದಲ್ಲಿ ಎಲ್ಲ ವ್ಯವಹಾರಗಳಿಗೂ ಮೂಲವಾದುದು. **ಕೃತಿ, ವಸ್ತು, ಭಾವ** ಹಾಗೂ **ವಿಚಾರ** ಇವು ನಮ್ಮ ಜೀವನದ ನಾಲ್ಕು ಮುಖಗಳು. ಅನುಭವದಿಂದ ಮಗುವು ಇವೆಲ್ಲವುಗಳ ಪರಿಚಯ ಪರಿಣತಿ ಗಳನ್ನು ಸಾಧಿಸಿಕೊಳ್ಳುವದು. ಇದುವೆ ಮಗುವಿನ 'ಬೌದ್ಧಿಕ ದಿಗ್ವಿಜಯ', ಜ್ಞಾನ ಸಂಪಾದನೆ. ಕಾಣುವ ಕೃತಿ ಮತ್ತು ವಸ್ತುಗಳಿಗೆ, ಹಾಗೂ ಕಾಣದ ಭಾವವಿಚಾರಗಳಿಗೆ ಪ್ರತಿಯೊಂದಕ್ಕೂ ಒಂದು ಸ್ವರ, ಒಂದು ಸಂಕೇತ ವಿರಬೇಕು. ಈ ಸ್ವರಸಂಕೇತಗಳಿಂದಲೇ ಸಂವೇದನೆಗಳು ಸ್ಥಿರವಾಗುವವು; ಜ್ಞಾನವು ದೃಢವಾಗುವದು; ಭಾವ—ವಿಚಾರಗಳ ವಿನಿಮಯವು ಸಾಧ್ಯ ವಾಗುವದು. ಇದುವೇ ಭಾಷೆಯ ಕಾರ್ಯ. ಜೀವನ ಹಾಗೂ ಭಾಷೆಯ ಸಂಪರ್ಕ—ಸಹಕಾರಗಳು ಇವುಗಳಲ್ಲಿಯೇ ತೋರಿಬರುವದು. ಮಗುವಿನ ಜೀವನವು ವಿಶಾಲವಾದಂತೆ, ವಿವಿಧವಾಗುವಂತೆ, ಆತನ ಭಾಷೆಯು ವಿಕಾಸ ಹೊಂದುವದು. ಕೃತಿಪೂರ್ಣವಾದ ಜೀವನದಲ್ಲಿ ವಿವಿಧ ವಸ್ತುಗಳು ಬೇಕಾಗು ವಂತೆ, ಹೊಳವು ಹಂಚಿಕೆಗಳೂ ಬೇಕು. ಸೋಲು ಗೆಲವು, ಕೋಪ, ತಾಪ ಮೊದಲಾದ ಭಾವನೆಗಳಿಗೂ ಎಡೆಯುಂಟು. ಇವುಗಳಿಗೆಲ್ಲ **ಭಾಷೆಯೆ ಬಾಹ್ಯಸಂಕೇತ**ವಾಗಿರುವವು. ಈ ಸ್ವರ—ಸಂಕೇತರೂಪವಾದ ಭಾಷೆ ಬೆಳೆಯ ಬಹುದು. ಹೀಗೆ ಬೆಳೆಯುವದರಲ್ಲಿ ಭಾಷೆಯ 'ಸಜೀವತೆ' ತೋರಿಬರು ವದು. ಆದರೆ ಯಾವುದೇ ಭಾಷೆಯಾಗಲಿ, 'ದಿನಕ್ಕೊಂದು ಪರಿಯಾಗಿ' ಬದಲಿಸಲಾರದು. ಹೀಗೆ ಸ್ಥಿರಗೊಳಿಸಿದ ತನ್ನ ಭಾಷೆಯನ್ನು ಮಗುವು ತನ್ನ ತಾಯಿಯಿಂದಲೇ ಕಲಿಯುವದು. **ಭಾಷಾಶಿಕ್ಷಣದಲ್ಲಿ ಮಗುವಿಗೆ ತಾಯಿಯೇ ಆದಿಗುರು.** ಅಂತೆಯೇ 'ಮಾತೃಭಾಷೆ' 'ತಾಯಿನುಡಿ'— ಯೆಂಬ ಪದಗಳು ಯಥಾರ್ಥವಾಗಿರುವವು. ತಂದೆತಾಯಿಗಳ ಮಾತೃ ಭಾಷೆಯು ಭಿನ್ನವಾಗಿದ್ದರೆ, ಇಲ್ಲವೆ ತಾಯಿನಾಡಿನಿಂದ ದೂರವಾದ ಬೇರೊಂದು ಪ್ರದೇಶದಲ್ಲಿ ಮಗುವು ಬೆಳೆಯುತ್ತಿದ್ದರೆ, ಅಲ್ಲಿಯ ಪ್ರಾಂತಿಕ— ಪ್ರಾದೇಶಿಕ ಭಾಷೆಯೇ, ಮಾತೃಭಾಷೆಯ ಸ್ಥಾನವನ್ನು ಅತಿಕ್ರಮಿಸುವ ಉದಾಹರಣೆಗಳನ್ನೂ ನಾವು ಕಾಣಬಹುದು.

ಮಗುವು ಅನುಕರಣದಿಂದಲೇ ಆಡುವ ಭಾಷೆಯನ್ನು ಕಲಿತುಕೊಳ್ಳುವದು. ಬಳಿಕ—ಪ್ರಯೋಗಗಳಿಂದ ಅದನ್ನು ಬೆಳೆಸಿಕೊಳ್ಳುವದು. ಶಾಲೆಯಲ್ಲಿಯ ಮಗುವಿನ ಭಾಷಾಶಿಕ್ಷಣವು ಇದೇ ರೀತಿಯಿಂದಲೆ ಸಾಗಬೇಕು. **ಅನುಕರಣ, ಪ್ರಯೋಗ ಹಾಗೂ ಪುನರುಕ್ತಿ ಇವು ಭಾಷಾಶಿಕ್ಷಣದ ಮೂರು ಮುಖ್ಯ ಸೂತ್ರಗಳು.** ಓದು ಬರೆಹಗಳು ಅದರ ಎರಡು ಸ್ವರೂಪಗಳು. ಗದ್ಯ—ಪದ್ಯ—ಪ್ರಬಂಧಗಳೆಂದು ಭಾಷಾವಿಷಯದಲ್ಲಿ ಮೂರು ವಿಭಾಗಗಳನ್ನು ಮಾಡುವದುಂಟು. ವ್ಯಾಕರಣವು ಪ್ರಬಂಧದ ಒಂದು ಅಂಗವಾಗುವದು.

ಸಾಂಪ್ರದಾಯಿಕ ಶಿಕ್ಷಣದಲ್ಲಿ 'ಬರೆಹ' ದಿಂದಲೆ ಮಕ್ಕಳ ಮಾತೃಭಾಷೆಯ ಶಿಕ್ಷಣವು ಮೊದಲಾಗುವದು. ಅರ್ಥ ತಿಳಿಯಲಾರದ 'ಶ್ರೀಗಣೇಶಾಯ ನಮಃ' ದಿಂದಾಗಲೀ ಅಥವಾ ಅರ್ಥವಿಹೀನವಾದ 'ಓ-ನಾ-ಮಾ-ಸಿ' ಯಿಂದಾಗಲಿ ಮಕ್ಕಳ ಒಟ್ಟು ವಿದ್ಯಾಭ್ಯಾಸದ ಪ್ರಾರಂಭ. ಬೆತ್ತದ ಬೆದರಿಕೆಯಿಂದ ಅವರು ಹಾಕಿಕೊಟ್ಟದ್ದನ್ನು 'ತೀಡ'ಬೇಕು. ಇದಾದಮೇಲೆ '**ಅಕ್ಷರ ಪದ್ಧತಿ**' ಯು ಪ್ರಚಾರದಲ್ಲಿ ಬಂದಿತು. 'ರs ರs,—ರಥ; ಐs ಐs, —ಐರಾವತ' ವೆಂದು. ಆದರೆ ಕೇವಲ ಆದಿ ಅಕ್ಷರಕ್ಕಾಗಿ ಹೀಗೆ ಹಿಡಿದು ತಂದ ಶಬ್ದಗಳು ಕೇವಲ ಕೃತ್ರಿಮವಾಗುವವು. ಇಂದಿನ ಜೀವನದಲ್ಲಿ ಮೋಟಾರ, ವಿಮಾನಗಳ ಕಲ್ಪನೆಯನ್ನು ಮಗುವು ಶೀಘ್ರವಾಗಿ, ಸುಲಭವಾಗಿ ಮಾಡಿಕೊಳ್ಳಬಲ್ಲದು. ಆದರೆ ಪುರಾಣಕಾಲದ ರಥದ ಚಿತ್ರವನ್ನು ತೋರಿಸಿದರೆ ಆ ಮಗುವಿಗೆ ಏನು ಅರ್ಥಬೋಧೆಯಾಗಬೇಕು? ಐರಾವತವನ್ನು ಯಾವ ಪ್ರಾಣಿಸಂಗ್ರಹಾಲಯದಲ್ಲಿ ಅದು ಕಾಣಬಹುದು? ಇದಾದಮೇಲೆ ಇನ್ನೂ ಬಳಕೆಯಲ್ಲಿದ್ದ '**ಸಾವಯವ ಪದ್ಧತಿ**'ಯೊಂದಿದೆ. 'ರ, ಠ, ಈ, ಕ' ಮೊದಲಾಗಿ ರೂಪ ಸಾದೃಶ್ಯದಿಂದ ಅಕ್ಷರಗಳ ಗುಂಪುಗಳನ್ನು ಮಾಡುವದು ಹಾಗೂ ಅವುಗಳನ್ನೇ ಹಿಂದು ಮುಂದಾಗಿ ಜೋಡಿಸಿ, 'ಕರ' 'ಈರ' ಮೊದಲಾದ ಶಬ್ದಗಳನ್ನು ರಚಿಸುವದು. ಇದರಲ್ಲಿಯ ಕೃತ್ರಿಮತೆಯೂ ಒಡೆದುಕಾಣುವಂತಿದೆ.

ಮೂಲಶಿಕ್ಷಣವು ಇವೆಲ್ಲ ಕುಂದುಕೊರತೆಗಳಿಂದ ದೂರವಾಗಿದೆ. ಮೂಲ ಶಿಕ್ಷಣ ಶಾಲೆಗಳಲ್ಲಿ ಅಕ್ಷರಗಳನ್ನು ತೀಡುವವರಿಂದಲೆ ಭಾಷಾಶಿಕ್ಷಣವು ಪ್ರಾರಂಭಿಸುವದಿಲ್ಲ. ಈ ಶಾಲೆಗಳಲ್ಲಿ **ಓದು ಮೊದಲು ಬರೆಹ ಅನಂತರದಲ್ಲಿ.** ವಿವಿಧ ಚಟುವಟಿಕೆಗಳಲ್ಲಿ ವಿವಿಧ ವಸ್ತುಗಳನ್ನು ಮಗುವು ಉಪಯೋಗಿಸುವದು. ಇವುಗಳ ಚಿತ್ರಗಳನ್ನು ತೆಗೆಯಲು ಮಗುವು ತೊಡಗುವದು. ಈ ಚಿತ್ರಗಳಿಂದಲೆ ವರ್ಣಮಾಲೆಯನ್ನು ರಚಿಸಬಹುದು. ತಕಲಿ ಹಾಗೂ ಲಪೇಟಾಗಳಿಂದ ಕನ್ನಡದ ಎಲ್ಲ ಅಕ್ಷರಗಳನ್ನು ಸುಲಭವಾಗಿ, ಸ್ವಾಭಾವಿಕವಾಗಿ ರಚಿಸಲು ಬರುವಂತಿದೆ.

ಭಾಷಾಶಿಕ್ಷಣದಲ್ಲಿ ಕೃತ್ರಿಮತೆಯನ್ನು ತಪ್ಪಿಸಿ ಚಿಕ್ಕಮಕ್ಕಳ ಜೀವನಕ್ಕೆ ಹೊಂದಿಕೊಳ್ಳಲು ಹವಣಿಸುವ ಒಂದು ಪದ್ಧತಿಯುಂಟು. ಇದಕ್ಕೆ '**ಪ್ರಸಂಗ ಪದ್ಧತಿ**'ಯೆನ್ನುವರು. ಮೂಲಶಿಕ್ಷಣ ಶಾಲೆಗಳಲ್ಲಿ ಮಕ್ಕಳ ಶಿಕ್ಷಣವು ಅವರ ನಿತ್ಯ ಜೀವನದ ಪಡಿನೆಳಲಿನಂತಿರುವದು. ಜೀವನಸ್ಪರ್ಶಿಯಾದ ವಿವಿಧ ಚಟುವಟಿಕೆಗಳು, ಮಕ್ಕಳ ಆಟಗಳು, ಊಟ ಉಡಿಗೆಗಳು, ಹಬ್ಬಹುಣ್ಣಿವೆಗಳು ಭಾಷಾಶಿಕ್ಷಣಕ್ಕೆ ಸಾಕಷ್ಟು '**ಪ್ರಸಂಗ**'(topics) ಗಳನ್ನು ಪೂರೈಸುವವು. ಇಂಥ ಪ್ರಸಂಗಗಳಿಗೆ ಹೊಂದಿಕೆಯಾಗುವಂತೆ ಅವಶ್ಯವಿರುವ ಶಬ್ದಸಂಪತ್ತಿಯನ್ನು ಚಿಕ್ಕಮಕ್ಕಳಿಗೆ ತಂದುಕೊಡಲು ಬರುವಂತಿದೆ.

ಈ ಪ್ರಸಂಗ ಪದ್ಧತಿಯಲ್ಲಿಯೂ ಒಂದು ಕ್ರಮವಿದೆ. ತೋಟದಲ್ಲಿ ಮಡಿ ಮಾಡುವದು ಅಂದಿನ ಚಟುವಟಿಕೆಯಾಗಿರಬಹುದು. ಚಟುವಟಿಕೆಯು ಮುಗಿದ ಮೇಲೆ ಅವರು ಮಾಡಿದ ಕೆಲಸದಬಗ್ಗೆ ಮಕ್ಕಳೊಡನೆ ಮಾತನಾಡಬೇಕು. ಅದಕ್ಕೆ ಅನುರೂಪವಾದ ಕೆಲವು ಮಾದರಿಯ ವಾಕ್ಯಗಳನ್ನು ಕರಿಹಲಿಗೆಯಮೇಲೆ ಸುವಾಚ್ಯವಾಗಿ ಬರೆಯಬೇಕು. ಶಿಕ್ಷಕನು ಎಲ್ಲರಿಗೂ ಕೇಳಬರುವಂತೆ ಸರಿಯಾಗಿ ಅವುಗಳನ್ನು ಓದಿ ತೋರಿಸಬೇಕು. ಆ ಮೇಲೆ ವಿದ್ಯಾರ್ಥಿಗಳು ಮೊದಲು ಸಾಮೂಹಿಕವಾಗಿ,– ಆ ಮೇಲೆ ಕೆಲವು ವಿದ್ಯಾರ್ಥಿಗಳು ವ್ಯಕ್ತಿಶಃ ಆ ವಾಕ್ಯಗಳನ್ನು ಒಂದೊಂದಾಗಿ ಓದುವಂತೆ ಮಾಡಬೇಕು. ಈ ವಾಕ್ಯಗಳನ್ನು ಸರಿಯಾಗಿ ಓದುವರೆಂಬ ಭರವಸೆಯಾದ ಬಳಿಕ ಅದನ್ನು

ಸ್ಥಿರಗೊಳಿಸಲು ಕ್ರೀಡನ ಪದ್ಧತಿಯ ಅನೇಕ ಹಂಚಿಕೆಗಳನ್ನು ಉಪಯೋಗಿಸ ಬಹುದು. ಕ್ರಮದಲ್ಲಿ ವ್ಯತ್ಯಾಸಗೊಳಿಸಿ ಗುರುತಿಸಲು ಹೇಳಬಹುದು. ಶಿಕ್ಷಕನು ತಾನು ತಪ್ಪು ಓದಿ, ವಿದ್ಯಾರ್ಥಿಗಳು ಅದನ್ನು ಸರಿಗೊಳಿಸುವಂತೆ ಮಾಡಬೇಕು. ಜಾಣಾಕ್ಷನಾದ ಶಿಕ್ಷಕನು ಹತ್ತೆಂಟು ರೀತಿಗಳಿಂದ ಇದನ್ನು ಸಾಧಿಸ ಬಲ್ಲನು. ಮುಂದೆ ಈ ವಾಕ್ಯಗಳನ್ನು ಶಬ್ದಗಳಾಗಿ ವಿಭಾಗಿಸಬೇಕು. ಶಬ್ದ ಗಳನ್ನು ಅಕ್ಷರಗಳಾಗಿ ವಿಂಗಡಿಸಬೇಕು. ಮೇಲೆ ಹೇಳಿದ ರೀತಿಯಲ್ಲಿಯೆ ಅಕ್ಷರಗಳ ರೂಪು-ಸ್ವರಗಳು ಚಿಕ್ಕಮಕ್ಕಳ ನೆನಪಿನಲ್ಲಿ ನಡುವಂತೆ ಮಾಡ ಬೇಕು. ಇಸ್ಪೇಟಿನ ಎಲೆಗಳಂತೆ, ತೆಳುವಾದ ರಟ್ಟಿನ ತುಣುಕುಗಳಿಂದ ಅಕ್ಷರ ಗಳ 'ಎಲೆ'ಗಳನ್ನು ಮಾಡಬೇಕು. ಈ ಅಕ್ಷರಗಳನ್ನು ಜೋಡಿಸಿ ಶಬ್ದ ಗಳನ್ನು ರಚಿಸುವದು. ಇವೇ ಮೊದಲಾದ ವಿನೋದದ ಆಟಗಳಿಂದ **ಚಿಕ್ಕ ಮಕ್ಕಳ ಭಾಷಾವಿಷಯದ ಪ್ರಥಮ ಪಾಠಗಳು ಆನಂದಮಯ ವಾಗುವಂತೆ** ಮಾಡಬಹುದಾಗಿದೆ. ಈ ಪದ್ಧತಿಯಲ್ಲಿ ವಾಕ್ಯದಿಂದ ಮೊದಲು ಮಾಡಿ ಅಕ್ಷರಗಳನ್ನು ಕೊನೆಗೆ ತೆಗೆದುಕೊಳ್ಳುವರು. ಹಿಂದಿನ ಪದ್ಧತಿಯಲ್ಲಿ ಅಕ್ಷರಗಳಿಂದಲೆ ಮೊದಲು ಮಾಡಿ ವಾಕ್ಯರಚನೆಯು ಕೊನೆಯ ಮೆಟ್ಟಿ ಲಾಗುತ್ತಿತ್ತು. **ವಾಕ್ಯವೇ ವಿಚಾರದ ಮೂರ್ತಿಸ್ವರೂಪ**ವಾದುದರಿಂದ ವಾಕ್ಯದಿಂದಲೆ ಭಾಷಾಶಿಕ್ಷಣವನ್ನು ಪ್ರಾರಂಭಿಸುವದು ನಿಸರ್ಗದ ನಿಯಮಕ್ಕೆ ಮಾನಸಶಾಸ್ತ್ರಕ್ಕೆ ಹೆಚ್ಚಾಗಿ ಹೊಂದಿಕೊಳ್ಳುವದು.

ಪಾಠಗಳನ್ನು ಪುಸ್ತಕದಲ್ಲಿ ಕೊಟ್ಟ ಕ್ರಮದಿಂದಲೇ ತೆಗೆದುಕೊಳ್ಳುವದು ಸರಿಯಾಗದು. **ಋತುಮಾನಕ್ಕೆ ಹೊಂದಿಕೊಳ್ಳುವಂತೆ ಪಾಠಗಳ ಕ್ರಮ ವನ್ನು ಗೊತ್ತುಪಡಿಸಬಹುದು.** 'ಪಂಕ್ತಿ'ಯೆಂಬ ಪಾಠವನ್ನು ಬೆಳು ದಿಂಗಳಿನ ದಿನಗಳಲ್ಲಿಯೂ, 'ರಾಶಿ'ಯ ಪಾಠವನ್ನು ಸುಗ್ಗಿಯ ಕಾಲಕ್ಕೂ ಹೀಗೆಯೇ ಉಳಿದ ಪಾಠಗಳನ್ನು ಸಂದರ್ಭೋಚಿತವಾಗಿ ಸನ್ನಿವೇಶಗಳಿಗೆ ಇಲ್ಲವೆ ನಿಸರ್ಗದ ಪರಿಸ್ಥಿತಿಗಳೊಡನೆ ಹೊಂದಿಸಿಕೊಳ್ಳುವದು ಪರಿಣಾಮಕಾರಿ ಯಾಗುವದು. ಓದುವ ಅಭಿರುಚಿಯನ್ನು ಹುಟ್ಟಿಸುವದಕ್ಕಾಗಿ ಪ್ರಾರಂಭದ ಒಂದೆರಡು ತಿಂಗಳುಗಳಲ್ಲಿ ಕಥೆಗಳನ್ನು ಹೆಚ್ಚಾಗಿ ಕಲಿಸಬಹುದು. ಪಠ್ಯ

ಪುಸ್ತಕಗಳಲ್ಲಿ ಕೊಟ್ಟ ಚಿತ್ರವು 'ಉಪಕ್ರಮ'ಕ್ಕೆ ಸಹಾಯಕವಾಗಬಹುದು. ಆದರೆ ಎಲ್ಲ ಬಗೆಯ ಪಾಠಗಳಿಗೂ ಚಿತ್ರವಿದ್ದೇತೀರಬೇಕೆಂಬ ಚಿತ್ರದ 'ಹುಚ್ಚು' ತಲೆಯಲ್ಲಿ ಸೇರದಂತೆ ಮಾತ್ರ ಶಿಕ್ಷಕರು ದಕ್ಷತೆವಹಿಸಬೇಕು.

ಗದ್ಯಪಾಠಗಳನ್ನು ಕಲಿಸುವಾಗ್ಗೆ ಉಪಯುಕ್ತವಾದ ಕೆಲವು ಸಾಮಾನ್ಯ ಸೂಚನೆಗಳನ್ನು ಮಾತ್ರ ಇಲ್ಲಿ ಕೊಡಬಹುದು.

(೧) **ಮೌನವಾಚನ:**— ಪಾಠವು ಚಿಕ್ಕದಾಗಿದ್ದರೆ ಸಮಗ್ರವಾಗಿಯೂ, ದೊಡ್ಡದಾಗಿದ್ದರೆ ಅವಧಿಗೆ ಹವಣಾಗುವಂತೆ ಅಂದಿನ ಪಾಠದ ವಿಷಯದಷ್ಟು ಭಾಗವನ್ನು ಮಾತ್ರ ಮನಸ್ಸಿನಲ್ಲಿ ಓದಲು ವಿದ್ಯಾರ್ಥಿಗಳಿಗೆ ಹೇಳಬೇಕು. ಮೌನವಾಚನವು ಯಾವಾಗಲೂ ಉದ್ದೇಶಪೂರ್ವಕವಾಗಿರಬೇಕು. ಸುಲಭವಾಗಿ ಅವರು ಉತ್ತರಕೊಡಬಲ್ಲ ಒಂದೆರಡು **ಕೇಂದ್ರ ಪ್ರಶ್ನೆಗಳನ್ನು** ಅವರ ಮುಂದಿಡಬೇಕು. ಮೌನದಿಂದ ಓದುವಾಗ್ಗೆ ಈ ಪ್ರಶ್ನೆಗಳಿಗೆ ಉತ್ತರಕೊಡಬೇಕಾಗುವದೆಂಬ ಅರಿವು ಅವರಿಗಿರಬೇಕು. ಈ ಸಮಯದಲ್ಲಿ ಕೆಲವು ಕಠಿಣ ಶಬ್ದಗಳ ಅರ್ಥವನ್ನು ಶಿಕ್ಷಕನು ಮೊದಲೇ ಹಲಿಗೆಯ ಮೇಲೆ ಬರೆದಿಡಬಹುದು. ಇಲ್ಲವೇ ವರ್ಗದಲ್ಲಿ ಸುಳಿದಾಡಿ, ಸಹಾಯವನ್ನು ಅಪೇಕ್ಷಿಸುವ ವಿದ್ಯಾರ್ಥಿಗಳಿಗೆ ಹೇಳಿಕೊಡಬಹುದು.

(೨) **ಪ್ರತಿಪಾದನೆ—ಅರ್ಥವಿವರಣೆ:**— ಶಬ್ದಕ್ಕೆ ಪ್ರತಿಶಬ್ದವನ್ನು ಹೇಳಿ ಬರೆಯಿಸುವ ರೀತಿಯನ್ನು ಬಿಟ್ಟುಕೊಡಬೇಕು. ವಿವಿಧ ಸಂದರ್ಭಗಳಲ್ಲಿ ಬೇರೆ ಬೇರೆ ವಾಕ್ಯಗಳಲ್ಲಿ ಆ ಶಬ್ದಗಳನ್ನು ಉಪಯೋಗಿಸುವದರಿಂದ **ಶಬ್ದಶಕ್ತಿಯಾದ ಅರ್ಥವೂ ಅವರಿಗೆ ತಾನಾಗಿಯೇ ಹೊಳೆಯುವದು.** ಆ ಶಬ್ದದ ಉಪಯೋಗವೂ ಅವರಿಗೆ ತಿಳಿಯುವದು. ಕನ್ನಡದಲ್ಲಿ ಹೇರಳವಾದ ಶಬ್ದಸಮುಚ್ಚಯಗಳ, ವಾಕ್ಪ್ರಚಾರಗಳ ಸರಿಯಾದ ಉಪಯೋಗದಿಂದ ಮಾತಿನಲ್ಲಿಯೂ ಬರವಣಿಗೆಯಲ್ಲಿಯೂ ಒಂದು ಓಜಸ್ಸೂ ಜೀವಕಳೆಯೂ ಹೇಗೆ ತುಂಬಿಕೊಳ್ಳುವದೆಂಬುದನ್ನು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಡಬೇಕು.

(೩) **ಓದುವದು:—** ಭಾಷಾವಿಷಯದ ಶಿಕ್ಷಣದಲ್ಲಿ 'ಓದುವದು' ಒಳ್ಳೇ ಮಹತ್ವದ ಭಾಗವಾಗಿದೆ. ಉಚ್ಚಾರದಲ್ಲಿ ವಿಶುದ್ಧಿಯನ್ನು ಸಾಧಿಸಿದರೆ ಬರೆಹದಲ್ಲಿ ಕೂಡ ವಿಶುದ್ಧಿಯು ತಾನಾಗಿಯೇ ಬರುವದು. ಶಿಕ್ಷಕನು ಮೊದಲು 'ಮಾದರಿ'ಯಾಗಿ ಓದಿ ತೋರಿಸಬೇಕು. ಓದುವದು 'ಒದರುವದು' ಆಗಬಾರದು. ಸಹಜವಾದ ರೀತಿಯಲ್ಲಿ ಅದು ಸಾಗಬೇಕು. ಅರ್ಥಕ್ಕೆ ಹೊಂದುವಂತೆ ಸ್ವರದಲ್ಲಿ ಏರಿಳಿತಗಳೂ, ಶಕ್ಯವಿದ್ದಲ್ಲಿ ಅನುರೂಪವಾದ ಮಿತಿ ಮೀರದ ಅಭಿನಯವೂ ಓದುವದರಲ್ಲಿ ಉತ್ತಮವಾದ ಗುಣಗಳು.

(೪) **ಉಪಸಂಹಾರ:—** ಇದು ಕೊನೆಯ ಭಾಗವು. ಶಬ್ದಾರ್ಥವನ್ನು ಇಲ್ಲವೆ ಕೆಲವು ಪ್ರಶ್ನೆಗಳನ್ನು ಹೇಗೋ ಕೇಳುವದು ಉಪಸಂಹಾರವೆನಿಸದು. ಶಬ್ದಸಂಪತ್ತಿಯನ್ನು ಹೆಚ್ಚಿಸುವದಕ್ಕಾಗಿ, **ಭಾಷೆಯ ಮೇಲೆ ಶಕ್ಯವಿರುವ ಪ್ರಭುತ್ವವನ್ನು** ತಂದುಕೊಡುವದೇ ಅದರ ಉದ್ದೇಶವಾಗಿರಬೇಕು. ಹಾಗೂ ಪಠ್ಯಪುಸ್ತಕವನ್ನು ಪ್ರಬಂಧಕ್ಕೆ ಹೊಂದಿಸಲು ಅದು ಸಾಧನವಾಗಬೇಕು.

**ಪ್ರಬಂಧ ಶಿಕ್ಷಣವು:—**

ಪ್ರಬಂಧವು ಒಂದು '**ಬಂಧ**', '**ರಚನೆ**'; **ಮನೋಗತವಾದುದನ್ನು ಮಾತಿನಲ್ಲಿ ಕಟ್ಟುವದೇ ಪ್ರಬಂಧವಾಗಿದೆ.** ಹೂಗಾರನು ಹೂಗಳನ್ನು ಹೆಣೆಯುವಂತೆ, ಶಿಲ್ಪಿಯು ಮನೆಯನ್ನು ಕಟ್ಟುವಂತೆ, ವಿದ್ಯಾರ್ಥಿಯು **ಶಬ್ದಶಿಲ್ಪಿ**ಯಾಗಬೇಕು; ಮಾತಿನ ಕಟ್ಟಡವನ್ನು ನಿರ್ಮಿಸಬೇಕು. ಈ ಕಾರ್ಯದಲ್ಲಿ ತನ್ನ ಪ್ರಯತ್ನಪ್ರಯೋಗಗಳಿಂದಲೇ ಆತನು ಪ್ರವೀಣತೆಯನ್ನು ಪಡೆಯಬೇಕು. ಶಿಕ್ಷಕನು ಅನುಭವಿಕ ಶಿಲ್ಪಿಯಂತೆ ಮಾರ್ಗದರ್ಶಕನು ಮಾತ್ರ. ಪ್ರಬಂಧದ ವಿವಿಧಪ್ರಕಾರಗಳಲ್ಲಿ 'ನಿಬಂಧ ಲೇಖನ'ವು ಮುಖ್ಯವಾಗಿದೆ. ನಿಬಂಧವು ಒಂದೇ ಪಡಿಯಚ್ಚಿನ ಲಾಭಹಾನಿಯ ಲೆಖ್ಖದಂತಾಗಬಾರದು. **ಸ್ವಾನುಭವವನ್ನು ಸರಿಯಾದ ಶಬ್ದಗಳಲ್ಲಿ ಹೇಳುವದೇ ನಿಬಂಧವೆನಿಸುವದು.** ವಿದ್ಯಾರ್ಥಿಗಳ ಅನುಭವವನ್ನೂ ವಿಷಯಜ್ಞಾನವನ್ನೂ ಯೋಗ್ಯವಾದ ಉಪಾಯಗಳಿಂದ ಶಿಕ್ಷಕರು ಹೆಚ್ಚಿಸಬೇಕು.

ಪ್ರತಿಪಾದನೆಯು ಸುಸಂಗತವಾಗುವಂತೆ, ವಿಚಾರಗಳ ಜೋಡಣೆಯಲ್ಲಿ ಹಾಗೂ ಪ್ಯಾರಾಗ್ರಾಫಗಳ ಕ್ರಮ–ರಚನೆಗಳಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಸರಿಯಾದ ಸಲಹೆಸೂಚನೆಗಳನ್ನು ಕೊಡಬೇಕು.

'**ಸಾರಾಂಶ**'ವನ್ನು ಕೊಡುವದು ಇನ್ನೊಂದು ಪ್ರಕಾರ. ಕೆಲವು ವಾಕ್ಯಗಳನ್ನು ಹೇಗೋ ಆರಿಸಿ, ಕೂಡಿಸಿ ಬರೆಯುವದು ಸಾರಾಂಶವಲ್ಲ. ಸಂಕ್ಷೇಪಿಸುವದೆಂದರೆ ಹಾಲುಕಡೆದು ಬೆಣ್ಣೆತೆಗೆದಂತೆ, ವನಸ್ಪತಿಗಳನ್ನು ಕುದಿಸಿ ಅವುಗಳ 'ಕಷಾಯ'ವನ್ನು ಉಳಿಸಿದಂತೆ. ಮೂಲದ ಲೇಖಕರು ತಮ್ಮ ವಿಚಾರಗಳಿಗೆ ತೊಡಿಸಿದ ಅಲಂಕಾರದ ತೊಡವುಗಳನ್ನೂ, ಪುನರುಕ್ತಿಯ ತೊಡಕುಗಳನ್ನೂ ತೆಗೆದುಹಾಕಿ, ಮೂಲ ವಿಚಾರವನ್ನೇ ಸರಳವಾತಿನಲ್ಲಿ, ಸ್ವಲ್ಪ ಶಬ್ದಗಳಲ್ಲಿ ಹೇಳುವ ಕಲೆಯು ವಿದ್ಯಾರ್ಥಿಗಳಿಗೆ ರೂಢಿಯಿಂದ ಬರುವದು. ಸಂಕ್ಷೇಪಕ್ಕಾಗಿ ಕೊಟ್ಟ ಅವತರಣಿಕೆಯನ್ನು ಎರಡು ಮೂರು ಸಲ ಓದಿಕೊಳ್ಳಬೇಕು; ಮನನಮಾಡಬೇಕು. ಲೇಖಕರ **ಆಶಯುವನ್ನು, ಇಂಗಿತವನ್ನು ಸೋಸಿ ಸೋಸಿ ತೆಗೆದು** ಸರಳ ಶಬ್ದಗಳಲ್ಲಿ ಬರೆಯಬೇಕು. ಇಲ್ಲವೇ ಕೇಳಿದ ಪ್ರಶ್ನೆಗಳಿಗೆ ಸಮರ್ಪಕವಾಗಿ, ಸಂಕ್ಷೇಪವಾಗಿ ಉತ್ತರ ಬರೆಯಬೇಕು.

**ಪತ್ರ ಹಾಗೂ ವರದಿಗಳನ್ನು ಬರೆಯುವದು:**— ನಿತ್ಯ ಜೀವನದಲ್ಲಿ ಪತ್ರಲೇಖನವು ಅಗತ್ಯವಾದುದು. ಪತ್ರ ಹಾಗೂ ವರದಿಗಳಲ್ಲಿ 'ವಿಷಯ'ದಷ್ಟೇ '**ರೀತಿ**'**ಯೂ** ಪ್ರಧಾನವಾಗಿರುವದು. ಈ ರೀತಿಯನ್ನೆ ಹಿರಿಯರು '**ಒಕ್ಕಣಿಕೆ**'ಯೆಂದು ಹೇಳುವರು. ಸ್ವಕೀಯರಿಗೆ, ಸ್ನೇಹಿತರಿಗೆ, ಬರೆದ ಪತ್ರಗಳ ಸರಣಿಯಲ್ಲಿ **ಸಹಜತೆ, ಸರಳತೆ**ಗಳು ಅವಶ್ಯವಾದವುಗಳು. ಹಿರಿಯರಿಗೆ, 'ವರಿಷ್ಠ'ರಿಗೆ ಬರೆದ ಪತ್ರ ಹಾಗೂ ವರದಿಗಳ ಸರಣಿಯಲ್ಲಿ ಗೌರವದ ಮಿತಿ ಹಾಗೂ ತೂಕಗಳು ತೋರಿ ಬರಬೇಕು. ನಿತ್ಯ ಜೀವನೋಪಯೋಗಿಯಾದ ಪತ್ರಲೇಖನಕ್ಕೆ ಜೀವನ ಶಿಕ್ಷಣದ ವಿವಿಧ ಚಟುವಟಿಕೆಗಳಲ್ಲಿ ಅನೇಕ ಸುಪ್ರಸಂಗಗಳು ಸುಲಭವಾಗಿ ದೊರೆಯುವವು.

ಇದೇ ಮೇರೆಗೆ ಕ್ರಿಯಾತ್ಮಕವಾದ ಮೂಲ ಶಿಕ್ಷಣವು ವ್ಯಾಕರಣ ಪಾಠಗಳಿಗೂ ವಿಶೇಷವಾಗಿ ಹೊಂದಿಕೊಳ್ಳುವದು. ವಾಕ್ಯದಲ್ಲಿ ಕ್ರಿಯಾ

ಪದವೇ ಪ್ರಧಾನವಾದುದು. ಅದರಿಂದಲೇ **ಕ್ರಿಯೆಯ ಪೂರ್ತಿ, ವಾಕ್ಯದ ಪೂರ್ಣತೆ.** ಕ್ರಿಯಾತ್ಮಕವಾದ ಶಿಕ್ಷಣದಲ್ಲಿ ಕ್ರಿಯಾಪದಗಳ ಹಾಗೂ ಅವುಗಳ ಲಕ್ಷಣಗಳಾದ ಕಾಲ–ಅರ್ಥ–ಪ್ರಯೋಗಗಳ ಪರಿಚಯವನ್ನು ಬಾಲಕರಿಗೆ ಸಂದರ್ಭೋಚಿತವಾಗಿ ಕ್ಲಿಷ್ಟತೆ, ಕೃತ್ರಿಮತೆಗಳಿಲ್ಲದೆ ಮಾಡಿಕೊಡುವಂತಿದೆ. ವಾಕ್ಯದಲ್ಲಿ ಕರ್ತೃವು ನಾಮಪದವು. ಬಾಲಕರು ಉಪಯೋಗಿಸುವ ವಿವಿಧ ವಸ್ತುಗಳಿಂದಲೇ ವಸ್ತುವಾಚಕಗಳಾದ ನಾಮಪದಗಳ ಪ್ರತ್ಯಕ್ಷ ಪರಿಚಯವನ್ನು ಮಾಡಿಕೊಡಬಹುದು. ವಿಶೇಷಣಗಳ ಉಪಯೋಗವನ್ನಾದರೂ ಬಾಲಕರು ಇದೇ ರೀತಿಯಿಂದ ಕಲಿಯಬಹುದು. ಒಟ್ಟಿನಲ್ಲಿ ಕೃತಿಯೊಡನೆ, ಜೀವನದೊಡನೆ ಕೂಡಿಕೊಂಡು ಬಂದ ವಿಷಯಜ್ಞಾನವು ನೀರಸ ನಿರರ್ಥಕವಾಗದೆ, ಮಗುವಿನ ಮನಸ್ಸಿನೊಡನೆ ಏಕರೂಪವಾಗುವದು. ಮೂಲ ಶಿಕ್ಷಣದ ಕೊನೆಯಲ್ಲಿ ತನ್ನ ವಿಚಾರವಾಹಕವಾದ ಮಾತೃಭಾಷೆಯ ಮೇಲೆ ವಿದ್ಯಾರ್ಥಿಗೆ ಸಾಕಷ್ಟು ಪ್ರಭುತ್ವವು ಉಂಟಾಗಬೇಕು. ಸ್ಪಷ್ಟವಾಗಿ ವೇಗವಾಗಿ ಅರ್ಥಬೋಧೆಯಾಗುವಂತೆ ಓದಲು ಬರಬೇಕು. ಮೌನವಾಗಿ ಓದಿದ್ದರ ಅರ್ಥ ತಿಳಿದುಕೊಳ್ಳುವಂತಿರಬೇಕು. ಆಧಾರ ಗ್ರಂಥಗಳಿಂದ ಅವಶ್ಯವಿದ್ದ **ವಿಷಯವನ್ನು ಸಂಗ್ರಹಿಸಲು** ಹಾಗೂ **ಶಬ್ದಕೋಶ ಜ್ಞಾನಕೋಶಗಳನ್ನು ಉಪಯೋಗಿಸಲು** ಶಕ್ತನಾಗಬೇಕು. ಸ್ವಕೀಯರಿಗೆ, ಉಳಿದವರಿಗೆ ಪತ್ರಬರೆಯಲು ಹಾಗೂ ಘಟನೆಗಳ ವರದಿಯನ್ನು ತಯಾರಿಸಲು ತಕ್ಕವನಾಗಬೇಕು. ಅಮರಕೃತಿಗಳನ್ನು ರಚಿಸಿದ ಸಾಹಿತಿಗಳ ಸಂಕ್ಷೇಪವಾದ ಪರಿಚಯವಿರಬೇಕು. ಇದೇ ಮೇರೆಗೆ ಮಾತುಗಾರಿಕೆಯಲ್ಲಿಯೂ ಪ್ರಗತಿಯನ್ನು ಪಡೆಯಬೇಕು. ಪರಿಚಿತ ವಿಷಯವನ್ನು ಕುರಿತು ಸ್ವತಂತ್ರವಾಗಿ, ಸುಸಂಗತವಾಗಿ ಸಹಜಶೈಲಿಯಲ್ಲಿ ತಡೆಯಿಲ್ಲದೆ ಮಾತನಾಡುವ ಶಕ್ತಿಯುತನಾಗಿರಬೇಕು. ಭಾಷಾಶಿಕ್ಷಣದಿಂದ ಮಗುವು ಇವೆಲ್ಲವುಗಳನ್ನು ಸಾಧಿಸಬೇಕೆಂದು ಮೂಲ ಶಿಕ್ಷಣ ಯೋಜಕರ ಮನೀಷೆಯಾಗಿದೆ. ಈ ಉದಾತ್ತವಾದ ಉದ್ದೇಶವನ್ನು ಈಡೇರಿಸಲು ಉಚಿತವಾದ ಪಠ್ಯಪುಸ್ತಕಗಳು ಪ್ರಯೋಗಾನುಭವಗಳಿಂದ ರಚಿತವಾಗಬೇಕಾಗಿದೆ. ಕೃತಿಮೂಲವಾದ ಶಿಕ್ಷಣದಲ್ಲಿ ಅನು

ಬಂಧಿತವಾದ ವಿಷಯಗಳೇ ಈ ಬಗೆಯ ಪಠ್ಯಪುಸ್ತಕಗಳಿಗೆ ಮೂಲಾಧಾರ ವಾಗಬಹುದು.

**ಕವಿತಾಶಿಕ್ಷಣ:—**

ಭಾಷಾವಿಷಯದ ವಿವೇಚನೆಯಲ್ಲಿ ಕವಿತಾ ಶಿಕ್ಷಣಕ್ಕೆ ಅತ್ಯಂತ ಮಹತ್ವದ ಸ್ಥಾನವಿದೆ. ಈ ಬಗ್ಗೆ ಶ್ರೀಮಾನ್ ಪ್ರೊ. ಮುಗಳಿಯವರ ವಿಚಾರಗಳನ್ನೇ ಇಲ್ಲಿ ಸಂಗ್ರಹಿಸಿಕೊಟ್ಟಿದೆ.

ಕವಿತಾ ಶಿಕ್ಷಣದಲ್ಲಿ ಇಂದು ಮನ್ವಂತರವು ಜೇರೆಯಾಗಿದೆ. ಜೀವನದಲ್ಲಿ ಹೊಸ ದೃಷ್ಟಿ ಮೂಡಿದಂತೆ, **ಕವಿತಾ ಶಿಕ್ಷಣದಲ್ಲಿಯೂ ಹೊಸ ದೃಷ್ಟಿ ಮೂಡಿದೆ.** ಹಳೆಯ ಪದ್ಧತಿಯಲ್ಲಿ ಅರ್ಥಕ್ಕೆ ಮಹತ್ವವಿದ್ದರೆ, ಹೊಸದರಲ್ಲಿ ಅರ್ಥ ಹಾಗೂ ರಸ ಇವೆರಡಕ್ಕೂ ಮಹತ್ವವುಂಟಾಗಿದೆ. ಹಳೆಯ ಪದ್ಧತಿ ಶಬ್ದಾರ್ಥ ಪ್ರಧಾನ, ಹೊಸದು ಸ್ವಾರಸ್ಯ ಪ್ರಧಾನ. **ರಸಾನುಭವವೇ ಕವಿತೆಯ ಜೀವಾಳ.** ಕೇವಲ ಶಬ್ದಾರ್ಥವನ್ನು ಕೊಡುವದರಿಂದ ಇದು ಸಾಧಿಸದು. ಭಾವನೆ, ಕಲ್ಪನೆಗಳನ್ನು ಜಾಗೃತಗೊಳಿಸಿ ಕಾವ್ಯ ಸ್ವೀಕಾರದ ಮನೋವೃತ್ತಿಯನ್ನು ವಿದ್ಯಾರ್ಥಿಗಳಲ್ಲಿ ಉಂಟುಮಾಡಬೇಕಾಗುತ್ತದೆ. ಕವಿತಾ ಶಿಕ್ಷಣದ ಈ ಹೊಸ ದೃಷ್ಟಿ ಶಿಕ್ಷಕರಲ್ಲಿಯೂ ನೆಲೆಗೊಳ್ಳಬೇಕು. ಅನೇಕ ಶಿಕ್ಷಕರು ಪ್ರತಿಯೊಂದು ಕಾವ್ಯದಲ್ಲಿಯೂ ನೀತಿಯನ್ನು ಕಾಣಬಯಸುತ್ತಾರೆ. ಕವಿತಾ ಶಿಕ್ಷಕನಲ್ಲಿ ಈ ನೀತಿಪರತೆಯ ಅತಿರೇಕವು ಇರಕೂಡದು. **ಸೌಂದರ್ಯ ಸೃಷ್ಟಿಯಲ್ಲಿ ನೀತಿಯು ಪ್ರಕಟಪಾಠವಿರುವದಿಲ್ಲ, ನೀತಿಯು ಮೂಲ ಪ್ರೇರಣೆಯಿರುತ್ತದೆ** ಎಂದು ಅವರು ಮನಗಾಣಬೇಕು. ಸೌಂದರ್ಯದ ಆಸ್ವಾದದಿಂದ ಉತ್ತಮ ಜೀವನದ ನೀತಿಯು ತಾನಾಗಿ ತಿಳಿಯದೆ ಬಾಲಕರಲ್ಲಿ ಬೆಳೆಯುವಂತೆ ಕವಿತಾ ಶಿಕ್ಷಣವನ್ನು ಕೊಡಬೇಕು.

ಕವಿತಾ ಶಿಕ್ಷಣಕ್ಕೆ ಮಾರ್ಗದರ್ಶಿಯಾದ ಕೆಲವು ಸೂತ್ರಗಳಿವು:—

(೧) **ಪ್ರಸ್ತಾವನೆ:**— ವಿದ್ಯಾರ್ಥಿಗಳ ಅನುಭವವನ್ನು ಆಧಾರವಾಗಿಟ್ಟುಕೊಂಡು, ಇಲ್ಲವೇ ಅಂದಿನ ಚಟುವಟಿಕೆಗೆ ಅಕೃತ್ರಿಮವಾಗಿ ಹೊಂದಿಸಿಕೊಂಡು ಸಂವಾದ, ಕಥನ, ಚಿತ್ರದರ್ಶನ ಮೊದಲಾದ ರೀತಿಗಳಿಂದ ಮಕ್ಕಳಲ್ಲಿ

ಕವಿತೆಯ ಬಗ್ಗೆ ಕುತೂಹಲವನ್ನೂ ಕಾವ್ಯಮನೋಭೂಮಿಕೆಯನ್ನೂ ಹುಟ್ಟಿಸು ವದು ಪ್ರಸ್ತಾವನೆಯ ಕಾರ್ಯವಾಗಿದೆ.

(೨) **ಕವಿತಾವಾಚನ:** — ಅಭ್ಯಾಸಕ್ಕೆ ಆರಿಸಿದ ಕವಿತೆಯನ್ನು ಶಿಕ್ಷಕನು ರಸಮಯವಾಗಿ, ಅರ್ಥವ್ಯಂಜಕವಾಗಿ, ತಾಳಲಯಪರವಾಗಿ ಓದ ಬೇಕು. ರಸಮಯವಾಚನದ ಜೀವಾಳವೆಂದರೆ, ಕವಿತೆಯ ಅರ್ಥ, ಅದರ ಭಾವ ರಸ ಹೊರಪಡುವಂತೆ ಗತಿಯ ಬೆಡಗಿನಿಂದ, ಉಚಿತವಾದ ಅಭಿನಯ ದಿಂದ ಓದುವದು.

(೩) **ವಿದ್ಯಾರ್ಥಿಗಳ ಸ್ವಂತ ಕವಿತಾವಾಚನ:**—ಇದನ್ನು ಮೌನ ವಾಚನ, ಕಣ್ಣೋದು ಎಂದು ಕರೆಯುವರು. ಕವಿತೆಯ ಮುಖ್ಯಭಾವ ಅಥವಾ ಕಥಾಸಾರವನ್ನು ಕಂಡುಹಿಡಿಯುವದೇ ಇದರ ಉದ್ದೇಶ. ಮೂಕ ವಾಚನ ಕಾಲದಲ್ಲಿ ಕೆಲವೇ ಕೇಂದ್ರ ಪ್ರಶ್ನೆಗಳನ್ನು ಬಾಲಕರಿಗಾಗಿ ಕೊಡುವ ದುಂಟು. ಆದರೆ **ಕಾವ್ಯವು ಶ್ರಾವ್ಯವಾಗಿದೆ**ಯೆಂಬುದನ್ನು ಮರೆಯಕೂಡದು. ಕಾವ್ಯಸ್ವಾರಸ್ಯದ ಅರ್ಧ ಭಾಗವು ಅದರ **ನಾದಶಕ್ತಿ**ಯಲ್ಲಿದೆ.

(೪) **ಮುಖ್ಯ ಭಾವದ ನಿಷ್ಪಾದನ:**— ಪ್ರಶ್ನೋತ್ತರ ಪದ್ಧತಿ ಯಿಂದ ಮುಖ್ಯಭಾವವನ್ನು ಆದಷ್ಟುಮಟ್ಟಿಗೆ ವಿದ್ಯಾರ್ಥಿಗಳಿಂದ ಹೊರಡಿಸ ಬೇಕು. ತಿಳಿಯದ ಅಂಶಗಳನ್ನು ಯೋಗ್ಯ ಸಮಯದಲ್ಲಿ ತಿಳಿಸಿ ಅಥವಾ ಸೂಚಿಸಿ ವಿಚಾರಕ್ಕೆ ಪುಟಗೊಡಬೇಕು.

(೫) **ಪ್ರತಿಪದ್ಯದ ಸವಿವರವಾದ ಅಭ್ಯಾಸ:**— ಪ್ರತಿಪದ್ಯವನ್ನು ಒಂದೊಂದು ಅಂಶವಾಗಿ ಗಣಿಸಿ, ಅರ್ಥವ್ಯಂಜಕವಾಗಿ ಓದುತ್ತ, ಈ ಅಭ್ಯಾಸ ವನ್ನು ಸಾಗಿಸಬೇಕು. ಇದರಲ್ಲಿ ಕೊಡಕೊಳ್ಳುವ ರೀತಿಯು ಹೆಚ್ಚಾಗಿರಬೇಕು. ಹಳೆಯ ರೀತಿಯಲ್ಲಿ ಪುರಾಣಿಕನಂತೆ ಎಲ್ಲವನ್ನೂ ವಿವರಿಸುವದು ಸರಿಯಲ್ಲ. ತಿಳಿಯಲಾರದ ಮಾತುಗಳನ್ನು ಮಾತ್ರ ಶಿಕ್ಷಕನು ಸ್ಪಷ್ಟವಾಗಿ ವಿವರಿಸಬೇಕು. ನಡುನಡುವೆ **ಸ್ವಾರಸ್ಯ-ಚರ್ಚೆ**ಯನ್ನು ಹವಣಿಸಬೇಕು.

(೬) **ಕವಿತೆಯ ರಸಾಸ್ವಾದ ಅಥವಾ ವಿಮರ್ಶೆ:**— ಇದು ಕವಿತಾ ಶಿಕ್ಷಕನನ್ನು ಒರೆಗೆ ಹಚ್ಚುವ ಸೂಕ್ಷ್ಮವಾದ ಮೆಟ್ಟಿಲು. ಸಾಮಾನ್ಯವಾಗಿ

ತಿಳಿದುಕೊಂಡ ಮುಖ್ಯ ಭಾವವನ್ನು ಇಲ್ಲಿ ಇನ್ನಿಷ್ಟು ವಿಶದಗೊಳಿಸ ಬೇಕು. ಕವಿಯ ಮನೋವೃತ್ತಿಯನ್ನೂ, ಕವಿತೆಯಲ್ಲಿ ಅವನು ಹೇಳ ಬೇಕೆಂದು ಹೊರಟಿರುವ ಭಾವವಿಶೇಷವನ್ನೂ ಕವಿತಾಸಂದರ್ಭದೊಡನೆ ಹೊಂದಿಸಿಕೊಳ್ಳಬೇಕು. ಮುಂದೆ, ಕವಿಯ ಅಪೇಕ್ಷೆ ಇಡೀ ಕವಿತೆಯ ಸರ್ವಾಂಗಗಳಲ್ಲಿ ಎಷ್ಟರಮಟ್ಟಿಗೆ ಸಫಲವಾಗಿವೆಯೆಂಬುದು ರಸಾಸ್ವಾದದ ಗುರಿಯಾಗುವದು. ಗುಣದೋಷ ಪರೀಕ್ಷೆಯನ್ನೂ ಮಾಡಬೇಕು. ಕವಿಯ ವಿಶೇಷವ್ಯಕ್ತಿತ್ವ, ಶೈಲಿಯ ಗುಣಗಳು, ಇವುಗಳನ್ನಾದರೂ ರಸಾಸ್ವಾದದಲ್ಲಿ ವಿದ್ಯಾರ್ಥಿಗಳು ಅರಿತುಕೊಳ್ಳುವಂತೆ ಮಾಡಬೇಕು. ಮುಖ್ಯವಾಗಿ ವಿದ್ಯಾರ್ಥಿ ಗಳ ಮನಸ್ಸಿನಲ್ಲಿ ಕಾವ್ಯದ ಬಗ್ಗೆ ಉಂಟಾಗಬೇಕಾದ ಸಂಸ್ಕಾರವಿಶೇಷವು ಆಗುವಂತೆ ಶಿಕ್ಷಕರು ಹವಣಿಸಬೇಕು. ವಿದ್ಯಾರ್ಥಿಗಳಲ್ಲಿ **ಕಾವ್ಯದ ಬಗ್ಗೆ ನಿಜವಾದ ಅಭಿರುಚಿ**, ಹಾಗೂ **ರಸಾನುಭವದ ಶಕ್ತಿಗಳನ್ನು** ತಂದು ಕೊಟ್ಟರೆ ಕವಿತಾ ಶಿಕ್ಷಣವು ಸಾರ್ಥಕವೂ ಯಶಸ್ವಿಯೂ ಆಯಿತೆಂದು ಹೇಳ ಬಹುದು.

## (೨) ಇತಿಹಾಸ:—

ಇಂದು ನಮ್ಮ ಜೀವನವು ಹೇಗೆ ಸಾಗಿದೆ? ಇಂದಿನ ನಮ್ಮ ರಾಜ ಕೀಯ, ಸಾಮಾಜಿಕ, ಆರ್ಥಿಕ ಪರಿಸ್ಥಿತಿಯು ಯಾವ ಬಗೆಯದಾಗಿದೆ? ಮುಂದಿನ ನಾಗರಿಕರಾಗುವ ಇಂದಿನ ಮಕ್ಕಳಿಗೆ ಈ ಜ್ಞಾನವನ್ನು ಸರಿಯಾದ ರೀತಿಯಲ್ಲಿ ತಂದುಕೊಡಲು ಇತಿಹಾಸವೇ ಸಬಲವಾದ ಸಾಧನವಾಗಿದೆ. ಇಂದಿನ ಜೀವನದ ಬೇರುಗಳು ಹಿಂದಿನ ಇತಿಹಾಸದಲ್ಲಿ ಆಳವಾಗಿ ಸೇರಿರು ವವು. ಮುಂದಿನ ಜೀವನದ ಬೀಜಗಳು ಇಂದಿನ ಜೀವನದಲ್ಲಿ ಅದೃಶ್ಯವಾಗಿ ಅಡಗಿರುವವು. ಒಂದು ನಾಡಿನ, ಅದೇಕೆ? ಜಗತ್ತಿನ ಜನಜೀವನದ ನೀತಿ ರೀತಿಗಳು ಕಾಲಕಾಲಕ್ಕೆ ಬದಲಿಸುತ್ತಬಂದರೂ **ಜೀವನದ ಪ್ರವಾಹವು ಛಿನ್ನವಿಚ್ಛಿನ್ನವಾಗುವದಲ್ಲ, ಅದು ಅಖಂಡವಾಗಿ ಹರಿಯುವದು.** '**ಹಿಂದು**' ಇಂದಿನದನ್ನು ನಿರ್ಮಿಸುವದು; '**ಇಂದು**' **ಮುಂದಿನದಕ್ಕೆ** ಹಾದಿಯನ್ನು ಮಾಡಿಕೊಡುವದು. ಜೀವನದ ಈ ಅಖಂಡತೆಯನ್ನೂ,

ಏಕರೂಪತೆಯನ್ನೂ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಬಿಂಬಿಸುವದೇ ಇತಿಹಾಸ ಶಿಕ್ಷಣದ ಮಹತ್ಕಾರ್ಯವಾಗಿದೆ.

ಎಲ್ಲ ವಿಷಯುಗಳಲ್ಲಿ ಇತಿಹಾಸವು ಅತ್ಯಂತ **ಸ್ಫೂರ್ತಿಜನಕವಾದ ವಿಷಯುವಾಗಿದೆ.** ಪ್ರತಿಯೊಂದು ನಾಡಿಗೂ ಒಂದು ಇತಿಹಾಸವಿರುವದು. ಉಜ್ವಲವಾದ ಇತಿಹಾಸವಿರುವ ನಾಡಿನ ಭವಿಷ್ಯವು ಉಜ್ವಲವಾಗುವದು. ಇತಿಹಾಸವು ನಾಡಿನ ಗತವೈಭವವನ್ನು ವಿದ್ಯಾರ್ಥಿಗಳ ನಿದರ್ಶನಕ್ಕೆ ತಂದು ಕೊಡುವದು. ಹಿಂದಿನ ಸಾಮಾಜಿಕ, ರಾಜಕೀಯ ಜೀವನವನ್ನು ಅವರ ಕಣ್ಮುಂದೆ ತಂದು ನಿಲ್ಲಿಸುವದು. ಇಂದು ತಾವು ಉಪಯೋಗಿಸುವ ಅನೇಕ ಹಕ್ಕು–ಬಾಧ್ಯತೆಗಳಿಗಾಗಿ ಹಿಂದಿನ ಹಿರಿಯರು ಎನಿತು ಸಾಹಸಪಡಬೇಕಾಯಿ ತೆಂಬುದನ್ನು, ಕಲಿಯುವವರಿಗೆ ಇತಿಹಾಸವು ತೋರಿಸಿಕೊಡುವದು. ಇದ ಲ್ಲದೆ, ಹಿಂದಿನ ಹಿರಿಯರ ಲೋಪದೋಷಗಳೂ, ಪ್ರಮಾದಗಳೂ ಇಂದಿನ ದುರವಸ್ಥೆಗೆ ಹೇಗೆ ಕಾರಣಗಳಾಗಿರುವವೆಂಬುದನ್ನೂ ಸರಿಯಾದ ಇತಿಹಾಸ ಶಿಕ್ಷಣವು ತೋರಿಸಿಕೊಡುವದು. ಈ ರೀತಿಯಾಗಿ ಹಿಂದಿನ ಜೀವನವನ್ನು ಇಂದಿನ ಜೀವನಕ್ಕೆ ಹೊಂದಿಸಿಕೊಂಡು ಮುಂದಿನ ಹಾದಿಯನ್ನು ತೋರಿಸಿ ಕೊಡುವದು ಇತಿಹಾಸ ಶಿಕ್ಷಣದ ಉದ್ದೇಶವು. ಇದರ ಜೊತೆಗೆ ಹಿಂದಿನ ಮಹತ್ಕಾರ್ಯಗಳ ಬಗ್ಗೆ ಅಭಿಮಾನವೂ, ಮುಂದೆ ತಾವಾದರೂ ಹಾಗೆಯೇ ಮಾಡಬೇಕೆನ್ನುವ ಸ್ಫೂರ್ತಿಯೂ ಇತಿಹಾಸದ ಅಭ್ಯಾಸದಿಂದಲೇ ಜನಿಸು ವವು. ಅಂತೆಯೇ **ರಾಷ್ಟ್ರೀಯುತೆ, ದೇಶಪ್ರೇಮು**ಗಳನ್ನು ಹುಟ್ಟಿಸುವ ವಿಷಯ ಯೋಜನೆಯಲ್ಲಿ ಇತಿಹಾಸಕ್ಕೆ ಪ್ರಧಾನವಾದ ಸ್ಥಾನವಿದೆ. ಆದರೆ ಈ ಅಭಿಮಾನದ ಅತಿರೇಕವು ದುರಭಿಮಾನದ ರೂಪವನ್ನು ತಾಳದಂತೆ ಮಾತ್ರ ಯಾವಾಗಲೂ ದಕ್ಷತೆಯನ್ನು ವಹಿಸಬೇಕಾಗುವದು.

ಸಾಮಾನ್ಯವಾಗಿ ಇತಿಹಾಸ ಶಿಕ್ಷಣವು ನಾಡಿನ ಚರಿತ್ರೆಯಿಂದಲೇ ಪ್ರಾರಂಭಿಸುವದು. ಪ್ರಾಚೀನ ಕಾಲದಿಂದ ಪ್ರಾರಂಭಿಸಿ, ಇಂದಿನ ವರೆಗೆ ನಾಡಿನ ಚರಿತ್ರೆಯನ್ನು ತಂದು ಮುಟ್ಟಿಸುವದು, ಇತಿಹಾಸ ಶಿಕ್ಷಣದಲ್ಲಿ ಪ್ರಚ ಲಿತವಾದ ಪದ್ಧತಿಯಾಗಿದೆ. ಇದಕ್ಕೆ ಪ್ರತಿಯಾಗಿ ವಿದ್ಯಾರ್ಥಿಗಳಿಗೆ ಸಮ

ಕಾಲೀನವಾದ ಇಂದಿನ ಚರಿತ್ರೆಯಿಂದಲೇ ಪ್ರಾರಂಭಿಸಿ ಹಿಂದೆಹಿಂದೆ ಸರಿಯುತ್ತ ನಾಡಿನ ಇತಿಹಾಸದ ಮೂಲವನ್ನು ಮುಟ್ಟಬೇಕೆಂದು ಹೇಳುವವರೂ ಇದ್ದಾರೆ. ಇಲ್ಲವೆ ಶಾಲೆಯಿರುವ ಊರಿನ **ಸ್ಥಳಿಕ ಇತಿಹಾಸದಿಂದ ಮೊದಲುಮಾಡಿ ಜಿಲ್ಲೆ-ಪ್ರಾಂತ-ಹೀಗೆ ಇತಿಹಾಸದ ವಿಷಯವನ್ನು ವಿಸ್ತರಿಸುತ್ತ ಹೋಗಬೇಕೆಂದು** ಕೆಲವರ ಮತವಾಗಿದೆ. ಝುಕೀರ ಹುಸೇನ ಸಮಿತಿಯವರ ಅಭಿಪ್ರಾಯವೂ ಇದೇ ರೀತಿಯಾಗಿದೆ. ಇದಲ್ಲದೆ ನಾಡಿನ ಒಟ್ಟು ಇತಿಹಾಸದ ಸ್ಥೂಲವಾದ ರೂಪರೇಷೆಯನ್ನು ಮೊದಲುಮಾಡಿ ಅದನ್ನೇ ಮೇಲಿನ ಇಯತ್ತೆಗಳಲ್ಲಿ ಹೆಚ್ಚು ವಿವರಗಳಿಂದ ಬೆಳೆಸುತ್ತ ಹೋಗಬೇಕೆಂದು ಬೇರೆ ಕೆಲವರ ಅಭಿಪ್ರಾಯವಾಗಿದೆ. ಇದಕ್ಕೆ '**ಸಮಕೇಂದ್ರ ರೂಪ**' ಪದ್ಧತಿಯೆಂದು ಹೇಳುವದುಂಟು.

ಇತಿಹಾಸ ಕಲಿಸುವವರಲ್ಲಿ '**ಕಥನ**'ವೇ ಪ್ರಧಾನವಾದ ಸಾಧನವು. ಇತಿಹಾಸ ಶಿಕ್ಷಕನಲ್ಲಿ ಕಥನಕೌಶಲ್ಯವು ಅವಶ್ಯವಾದ ಗುಣವಾಗಿದೆ. **ಹಿಂದಿನ ಘಟನೆಗಳ ಎಲುಬಿನ ಹಂದರದಲ್ಲಿ ಇತಿಹಾಸ ಶಿಕ್ಷಕನು ತನ್ನ ಮಾತಿನ ಮೋಡಿಯಿಂದ ಜೀವಕಳೆಯನ್ನು ತುಂಬುವನು.** ವಿದ್ಯಾರ್ಥಿಗಳ ವಿಧಾಯಕವಾದ ಕಲ್ಪನಾಶಕ್ತಿಯನ್ನು ಚೇತರಿಸಿ, ಹಿಂದಿನ ಜೀವನವನ್ನು ಅವರು ಮತ್ತೆ ಕಂಡುಕೊಳ್ಳುವಂತೆ ಮಾಡುವನು. ಕೆಳಗಿನ ಇಯತ್ತೆಗಳಲ್ಲಿಯ ಚಿಕ್ಕಮಕ್ಕಳ ಇತಿಹಾಸ ಶಿಕ್ಷಣವು ಐತಿಹಾಸಿಕ ಕಥನಗಳಿಂದಲೇ ಪ್ರಾರಂಭಿಸಲ್ಪಡಬೇಕು. ಇವುಗಳಲ್ಲಿ ಮಹಾಪುರುಷರ ಚರಿತ್ರೆಗಳೂ ಹಲವಾಗಿರಬಹುದು. ಚಿಕ್ಕಮಕ್ಕಳು ಕಥೆ ಚರಿತ್ರೆಗಳನ್ನು ಒಳ್ಳೇ ಆಕ್ಕರತೆಯಿಂದ ಕೇಳುವರು. ಅವುಗಳಲ್ಲಿಯ ಅದ್ಭುತರಸವೂ, ಸಾಹಸಪ್ರಿಯತೆಯೂ, ಕ್ರಿಯಾಶಕ್ತಿಯೂ ಅವರ ಹೃದಯದ ಭಾವಗಳಿಗೆ ತೀರ ಸಮೀಪವಾಗಿರುವವು. ಕಥನದೊಡನೆ ಬೇರೆ ಸಹಾಯಕ ಸಾಮಗ್ರಿಗಳ ಸಹಕಾರವನ್ನು ಇತಿಹಾಸ ಶಿಕ್ಷಕನು ತೆಗೆದುಕೊಳ್ಳಬಹುದು. ಹಳೆಯ ಕಾಗದದ ಪತ್ರಗಳೂ, ಐತಿಹಾಸಿಕ ಕಾವ್ಯಗಳೂ, ಲಾವಣಿಗಳೂ, ಬಖರಗಳೂ, ಶಿಲಾಲಿಪಿಗಳೂ, ನಾಣ್ಯಗಳೂ, ಈ ಬಗೆಯ ಹಿಂದಿನ ಇತಿಹಾಸದ

ಕುರುಹುಗಳನ್ನೆಲ್ಲ ಇತಿಹಾಸ ಶಿಕ್ಷಣದಲ್ಲಿ ಉಪಯೋಗಿಸಲು ಬರುವಂತಿವೆ. ಚಿಕ್ಕಮಕ್ಕಳು ಇತಿಹಾಸದ ಒಂದು ಚಿಕ್ಕ ಸನ್ನಿವೇಶವನ್ನು ವರ್ಗದಲ್ಲಿಯೇ ಅಭಿನಯಿಸಿ ತೋರಿಸಬಲ್ಲರು. ಪ್ರೌಢ ವಿದ್ಯಾರ್ಥಿಗಳು ಒಂದು ಐತಿಹಾಸಿಕ ಘಟನೆಯನ್ನೇ ನಾಟಕರೂಪವಾಗಿ ರಂಗಭೂಮಿಯ ಮೇಲೆ ತರಬಹುದು. ಇದಕ್ಕಾಗಿ ಅವರು ಅನೇಕ ಸಲಕರಣೆಗಳನ್ನು ಸಿದ್ಧಗೊಳಿಸಬೇಕಾಗುವದು. ವೇಷಭೂಷಣಗಳನ್ನು ಅಳವಡಿಸಬೇಕಾಗುವದು. ಹೀಗೆ ಮಾಡುವದರಲ್ಲಿ ಅವರ **ಕಲ್ಪನಾಶಕ್ತಿಯ ಉಪಯೋಗದೊಡನೆ ಕ್ರಿಯಾಶಕ್ತಿಯ ವಿಕಾಸವೂ ಸಮನಾಗಿ ಸಾಧಿಸುವದು.**

ಒಂದು ನಾಡಿನ ಮಹಾಪುರುಷರ ಚರಿತ್ರೆಯೆ ಆ ನಾಡಿನ ಇತಿಹಾಸ ವೆಂದು ಹೇಳುವರು. ಇಂಥ ಮಹಾಪುರುಷರ ಚರಿತ್ರೆಯ ಮರ್ಮವನ್ನು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಸರಿಯಾಗಿ ಮೂಡಿಸಿ, ನಾಡಿನ ಬಗ್ಗೆ ಪ್ರೇಮ ವನ್ನು, ನಾಡಿನ ಸೇವೆಯ ಬಗ್ಗೆ ಅಭಿಲಾಷೆಯನ್ನು ಹುಟ್ಟಿಸುವದೇ ಇತಿಹಾಸ ಶಿಕ್ಷಣದ ಮುಖ್ಯ ಉದ್ದೇಶವಾಗಿದೆ. ಝುಕೀರ ಹುಸೇನ ಸಮಿತಿಯವರಾ ದರೂ ಇದೇ ಮಾತನ್ನೇ ಒತ್ತಿ ಹೇಳಿದ್ದಾರೆ. ಇಡೀ ಮಾನವ ಜನಾಂಗವೂ ಹಾಗೂ ಭಾರತೀಯ ಸಮಾಜವೂ ಹೇಗೆ ಬೆಳೆದುಬಂದಿದೆಯೆಂಬುದನ್ನು ಬಾಲಕರು ಸ್ಥೂಲವಾಗಿ ತಿಳಿದುಕೊಳ್ಳಬೇಕು. ಸ್ವದೇಶ ಪ್ರೇಮದ ಜೊತೆಗೆ, ಸತ್ಯ, ಪ್ರೇಮ, ಸಮತೆಗಳ ತಳಹದಿಯ ಮೇಲೆ ತಮ್ಮ ದೇಶವನ್ನು ತಾವಾ ದರೂ ಮುಂದೆ ಕಟ್ಟುವೆವೆಂಬ ನಂಬುಗೆಯು ಅವರಲ್ಲಿ ಉಂಟಾಗಬೇಕು. ಜಗತ್ತಿನ ಸಾಮಾಜಿಕ ಹಾಗೂ ರಾಜಕೀಯ ಘಟನೆಗಳ ಅಭ್ಯಾಸದಿಂದ **ಮಾನವ ಜನಾಂಗವೆಲ್ಲವೂ ಒಂದೆಂಬ ಭಾವನೆಯು** ಅವರಲ್ಲಿ ಒಡ ಮೂಡಬೇಕು. **ಎಲ್ಲ ಧರ್ಮಗಳ ಮೂಲತತ್ವಗಳಲ್ಲಿ ವಿರೋಧವಿರದೆ ಹೊಂದಿಕೆಯಿರುವದೆಂ**ಬುದನ್ನು ಬಾಲಕರಿಗೆ ಇತಿಹಾಸವು ಮನಗಾಣಿಸ ಬೇಕು. ಈ ಉದ್ದೇಶವು ಈಡೇರಬೇಕಾದರೆ, ಇತಿಹಾಸ ಶಿಕ್ಷಣದ ಉದ್ದೇಶ ಹಾಗೂ ವಿಧಾನಗಳೆರಡರಲ್ಲಿಯೂ ಶಿಕ್ಷಕರಲ್ಲಿ ಹೊಸದೃಷ್ಟಿ ಮೂಡಬೇಕಾಗು ವದು.

ಸುತ್ತುಮುತ್ತಲಿನ ಪರಿಸ್ಥಿತಿಯ ಪರಿಚಯವನ್ನು ಬಾಲಕರಿಗೆ ಮಾಡಿ ಕೊಡುವಾಗ್ಗೆ ಅವರು ಕುತೂಹಲದಿಂದ ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ ಇತಿಹಾಸದ ಪ್ರಾರಂಭವನ್ನು ಮಾಡಬೇಕೆಂದು ಝುಕೀರ ಸಮಿತಿಯ ಸೂಚನೆಯಿದೆ. ಜನರು ತಮ್ಮ ಜೀವನದ ಬೇಡಿಕೆಗಳನ್ನು ಬೇರೆಬೇರೆ ರೀತಿ ಗಳಿಂದ ಹೇಗೆ ಪೂರೈಸಿಕೊಳ್ಳುವರೆಂಬುದನ್ನು ಅವರು ಕಂಡುಹಿಡಿಯಬೇಕು. ಅನ್ನ ಬಟ್ಟೆಗಳಿಗಾಗಿ .ಮಾನವ ಜನಾಂಗವು ಹೇಗೆ ಸಾಹಸಪಡುತ್ತ ಬಂದಿದೆ ಎಂಬುದೇ ಇತಿಹಾಸದ ಆದಿಪಾಠ. **ಉದ್ಯೋಗಜನಿತವಾದ ಆರ್ಥಿಕ ಸಮಸ್ಯೆಗಳಿಂದಲೇ ಮಾನವ ಜನಾಂಗದ ಇತಿಹಾಸವು ಮಾರ್ಪಡು ತ್ತಲಿದೆ** ಎಂಬುದೂ ಒಂದು ವಿಚಾರಸರಣಿಯಾಗಿದೆ. ಅಂತೆಯೆ ವಸ್ತ್ರ ಪೂರೈಕೆಯ ಸಾಧನವಾದ ತಕಲಿಯು ಇತಿಹಾಸ ಶಿಕ್ಷಣಕ್ಕೆ ಅನುಕೂಲವಾದ ಅನುಬಂಧವನ್ನು ಒದಗಿಸುವದು. ಮೇಲಾಗಿ, ಮೊಹೆಂಜೊದಾರದ ಅವಶೇಷ ಗಳಲ್ಲಿ ತಕಲಿಯು ಹಾಗೂ ಹತ್ತಿಯ ಬಟ್ಟೆಯು ದೊರೆತಿವೆಯಂತೆ. ಇದರಿಂದ ತಕಲಿಯು ಇತಿಹಾಸ ಶಿಕ್ಷಣವನ್ನು ತೀರ ಪ್ರಾಚೀನಕಾಲದವರೆಗೆ ತೆಗೆದು ಕೊಂಡು ಹೋಗಬಹುದು. ಒಂದು ಕಾಲದಲ್ಲಿ ನಯವಾದ ಬಟ್ಟೆಗಳಿಗಾಗಿ ಜಗತ್ಪ್ರಸಿದ್ಧವಾದ ನಮ್ಮದೇಶವು ತನ್ನ ಬಟ್ಟೆಗಳಿಗಾಗಿ ಹೇಗೆ ಪರಾವಲಂಬಿ ಯಾಯಿತೆಂಬುದನ್ನು ತಿಳಿಸುವಾಗ್ಗೆ ಬ್ರಿಟಿಶ ಆಳಿಕೆಯ ಮುಕ್ತಾಯದವರೆಗಿನ ಭಾರತದ ಇತಿಹಾಸವನ್ನು ತಕಲಿಯ ಮುಖಾಂತರವಾಗಿಯೇ ಕಲಿಸಬಹುದು. ಮೂಲಶಿಕ್ಷಣದ ಇನ್ನೊಂದು ಕೇಂದ್ರವಾದ ಸಾಮಾಜಿಕ ಪರಿಸರಣವನ್ನು ಇತಿಹಾಸ ಶಿಕ್ಷಣಕ್ಕಾಗಿ ಉಪಯೋಗಿಸಬಹುದು. ಕನ್ನಡನಾಡಿನ ಸಂದಿಗೊಂದಿ ಗಳಲ್ಲಿ, ಪ್ರತಿಯೊಂದು ಹಳ್ಳಿಯಲ್ಲಿ ಶಿಲಾಲಿಪಿಗಳೂ, ವೀರಲ್ಲುಗಳೂ, ಗುಡಿ ಗೋಪುರಗಳೂ ಕಂಡುಬರುವವು. ಇವುಗಳಿಗೆ ಸಂದರ್ಶನವನ್ನು, ಪ್ರವಾಸ ಗಳನ್ನು ಒದಗಿಸಿ ಈ ಸಂದರ್ಭಗಳನ್ನೇ **ಇತಿಹಾಸ ಶಿಕ್ಷಣದ ಸುಪ್ರಸಂಗ ಗಳನ್ನಾಗಿ** ಮಾಡಿಕೊಳ್ಳಬಹುದು.

## (೩) ಭೂಗೋಲ:—

ಸಾಂಪ್ರದಾಯಿಕ ರೀತಿಯಲ್ಲಿ 'ಭೂಗೋಲ–ಶಿಕ್ಷಣ' ವೆಂದರೆ, ಎರಡು

ವಾತುಗಳು ನೆನಪಾಗುವವು:— (೧) ತಿಳಿಯದೆ ಪಾಠಮಾಡಿರುವ-ನದಿಗಳೂ ಪರ್ವತಗಳೂ ದೇಶಗಳೂ ಅವುಗಳ ಮೇರೆಗಳೂ-ಇತ್ಯಾದಿ; (೨) ನಕಾಶವ ಉಪಯೋಗವೆಂದರೆ--ಕಾಗದ ಸುರುಳಿಯಿಂದ ತೋರಿಸಲು ಹೇಳಿದ ಊರು-ನದಿಗಳ ಹೆಸರುಗಳ ಮೇಲೆ ಅದನ್ನು ಎತ್ತಕಡೆಗಾದರೂ ಎಳೆದು ಬಿಡುವದು. ಹೀಗಾಗಿ ಮಕ್ಕಳ ವಿಚಾರ ಶಕ್ತಿಗೆ ಅಂಶತಃ ಕೂಡ ಆಸ್ಪದ ವಿರಲಿಲ್ಲ. ಭೂಗೋಲ ವಿಷಯವನ್ನು ಕಲಿಯುವದೆಂದರೆ ‘ ಗಿಳಿಪಾಠ ’ ಮಾಡುವದು ; ಕಲಿಸುವದೆಂದರೆ ಇದನ್ನು ‘ ಒಪ್ಪಿಸಿಕೊಳ್ಳುವದು. ’

ಆಧುನಿಕ ಶಿಕ್ಷಣ ಶಾಸ್ತ್ರವು ಭೂಗೋಲವಿಷಯದ ಮಹತಿಯನ್ನು ಚನ್ನಾಗಿ ಅರಿತುಕೊಂಡಿದೆ. ಅದೊಂದು ವಿಶಾಲವ್ಯಾಪ್ತಿಯುಳ್ಳ ಹಿರಿದಾದ ಶಾಸ್ತ್ರ. **ಶಿಕ್ಷಣ ಪ್ರಪಂಚದಲ್ಲಿ ಭೂಗೋಲವಿಷಯಕ್ಕೆ ಪ್ರಧಾನಪದವಿಯು ಪ್ರಾಪ್ತವಾಗಿದೆ.** ಮಕ್ಕಳ ಒಲವು ಈ ವಿಷಯವನ್ನು ಕಲಿಯುವದಕ್ಕೂ ಕಲಿಸುವದಕ್ಕೂ ಸಹಜವಾಗಿ ಹೊಂದಿಕೊಳ್ಳುತ್ತದೆ. ರಾಷ್ಟ್ರದ ಸರ್ವತೋಮುಖವಾದ ಏಳಿಗೆಗೆ ಭೂಗೋಲ ಶಾಸ್ತ್ರದ ಸರಿಯಾದ ಅಧ್ಯಯನವು ಅವಶ್ಯವೆಂಬ ಮಾತು ಇಂದು ಎಲ್ಲರಿಗೂ ಹೊಳೆಯಹತ್ತಿದೆ. ನಮ್ಮ ದೇಶದಲ್ಲಿಯೂ ಭೂಗೋಲವಿಷಯದ ಬಗ್ಗೆ ಈ ಹೊಸದೃಷ್ಟಿಯು ಹೆಚ್ಚಾಗಿ ಬರುತ್ತಿದೆ. ಸದೋಷವಾದ ಶಿಕ್ಷಣದಿಂದ, ಬಾಲಕರ ಸುತ್ತುಮುತ್ತಲಿನ ಸಾಮಾಜಿಕ, ನೈಸರ್ಗಿಕ ಪರಿಸರಣಗಳನ್ನು ಕಡೆಗಣಿಸುವದರಿಂದ, ಭೂಗೋಲ ವಿಷಯದ ಬಗ್ಗೆ ಅವರಲ್ಲಿ ಅನಾಸ್ಥೆ-ಅನಾದರಗಳು ಉಂಟಾಗಿರುವವು. ಈ ವಿಷಯದಲ್ಲಿ ಪರೀಕ್ಷೆಯ ಪ್ರಶ್ನೆಗಳೂ ಅಷ್ಟೊಂದು ಸಹಾಯಕವಾಗಿರಲಿಲ್ಲ. ‘ ಏನಿವೆ ?, ಎಲ್ಲಿವೆ ?, ಏತಕ್ಕಾಗಿ ಪ್ರಸಿದ್ಧವಿರುವದು ?’ ಇದೊಂದು ಪ್ರತಿ ಪರೀಕ್ಷೆಯಲ್ಲಿ ನಿಶ್ಚಿತವಾದ ಪ್ರಶ್ನೆ. ಹತ್ತೆಂಟು ನದಿ-ಪರ್ವತ-ಪಟ್ಟಣಗಳ ಹೆಸರುಗಳನ್ನಷ್ಟು ಪಾಠಮಾಡಿದರಾಯಿತು. ವಿದ್ಯಾರ್ಥಿಗಳಿಗೆ ಈ ವಿಷಯದ ‘ ಭಯ ’ವೇ ಇರುತ್ತಿದ್ದಿಲ್ಲ. ಏಕೆಂದರೆ ನದಿಗಳು ಹೆಚ್ಚಾಗುವಂತಿಲ್ಲ. ಪುರಾಣಗಳಲ್ಲಿ ವರ್ಣಿಸಿದಂತೆ ಪರ್ವತಗಳು ಹಾರಿಹೋಗುವಂತಿಲ್ಲ. ವರುಷವರುಷಕ್ಕೂ ಅವೇ ಪ್ರಶ್ನೆಗಳು ಅವೇ ಉತ್ತರಗಳು. ಕನ್ನಡಶಾಲೆಯಲ್ಲಿ “ ಕೃಷ್ಣಾ ನದಿಯ

ದಂಡೆಯಮೇಲಿನ ಊರುಗಳು ..........ಗಲಗಲಿ.... " ಪಾಠಮಾಡುವದು. ಇಂಗ್ಲೀಷ ಶಾಲೆಯಲ್ಲಿ ಇಂಗ್ಲಂಡದ ನದಿಗಳ ಉದ್ದೇತೆಯನ್ನು ಇಂಚಿಗೆ ಸರಿಯಾಗಿ ನೆನಪಿನಲ್ಲಿಡುವದು. ತಮ್ಮೂರಿನ ಹಳ್ಳ ಎಲ್ಲಿಂದ ಹರಿದು ಬರುತ್ತಿದೆ? ಅಲ್ಲಿ ನಡೆಯುವ ಉದ್ಯೋಗಗಳೇನು? ತಮ್ಮೂರಿನ ವಿಷಯಕ್ಕೆ ಯಾವ ವಿವರಗಳೂ ಅವರಿಗೆ ಗೊತ್ತಿರಲಿಲ್ಲ. **ಅವರ ಜೀವನದೊಡನೆ ಈ ವಿಷಯದ ಸಂಪರ್ಕವೇ ಇರಲಿಲ್ಲ. ಮೇಲಾಗಿ, 'ಎಂತು ಯಾಕೆ?' ಎಂಬ ಕಾರ್ಯಕಾರಣ ಸಂಬಂಧವಾಗಲೀ, ಮೂಲತತ್ವಗಳ ವಿವೇಚನೆಯಾಗಲೀ, ಕಲಿಯುವವರಿಗೂ ಕಲಿಸುವವರಿಗೂ ಮಹತ್ವದ್ದಾಗಿರಲಿಲ್ಲ.**

**ಭೂಗೋಲ ವಿಷಯವು ಬಗೆಬಗೆಯ ಬಣ್ಣದ ಎಳೆಗಳನ್ನು ಹೊಂದಿಕೆಯಾಗಿ ಕೂಡಿಸಿ ಹೆಣೆದ ಕಲಾಬತ್ತಿನ ಶಾಲಿನಂತೆ.** ಎಲ್ಲ ಶಾಸ್ತ್ರಗಳ ತಿರುಳನ್ನು ಭೂಗೋಲ ವಿಷಯವು ತೆಗೆದುಕೊಂಡಿದೆ. ವಿಜ್ಞಾನವು ಅದರ ವಿಶಾಲವಾದ ಅಡಿಗಲ್ಲಾಗಿದೆ. ವಾಣಿಜ್ಯವು ಅದರ ಅತ್ಯುನ್ನತವಾದ ಕಳಸವಾಗಿದೆ. ಜೀವನದಲ್ಲಿ ಉಪಯುಕ್ತವಾದ ಜ್ಞಾನವನ್ನು ಒದಗಿಸಿ, ಸಹಾನುಭೂತಿರೂಪವಾದ ಸಂಸ್ಕಾರವನ್ನುಂಟು ಮಾಡಿ, ಪರಿಸ್ಥಿತಿಯೊಡನೆ ಹೋರಾಡುವ ಕಾರ್ಯಕ್ಷಮತೆಯನ್ನು ತಂದುಕೊಟ್ಟು, ಹೀಗೆ **ಬೌದ್ಧಿಕ, ಸಾಂಸ್ಕೃತಿಕ, ವ್ಯಾವಹಾರಿಕಗಳಾದ ತ್ರಿವಿಧಲಾಭವನ್ನು** ವಿದ್ಯಾರ್ಥಿಗಳಿಗೆ ತಂದುಕೊಡುವ ಭಾಗ್ಯವು ಭೂಗೋಲ ವಿಷಯಕ್ಕೆ ಮಾತ್ರ ಉಂಟು.

ಹಿಂದಿನ ರೀತಿಯ ಭೂಗೋಲ ಶಿಕ್ಷಣದಲ್ಲಿ—ಭೂಶಿರ ಮೊದಲಾದವುಗಳ ವ್ಯಾಖ್ಯೆಯಿಂದ ಸುರುವು ಮಾಡಿ ರಾಜಕೀಯ ವಿಭಾಗಗಳ ವಿಸ್ತೃತವಾದ ವರ್ಣನೆಗೆ ಬರುತ್ತಿದ್ದರು. ಇಂದಿನ ಭೂಗೋಲ ಶಿಕ್ಷಣದಲ್ಲಿ ಎರಡು ಹೊಸ ಪ್ರಕಾರಗಳು ತಲೆದೋರುವವು. (೧) **ಪೃಥ್ವಿಯನ್ನು ಸಮಾನವಾದ ನೈಸರ್ಗಿಕ ಪರಿಸ್ಥಿತಿಯ ಮೇರೆಗೆ ವಿಭಾಗಿಸುವದು.** ಈ ಸ್ವಾಭಾವಿಕ ವಿಭಾಗಗಳ ಸಮಾನವಾದ ನಿಸರ್ಗಪರಿಸ್ಥಿತಿಗಳಲ್ಲಿ ಮಾನವ ಜೀವನದ ರೀತಿಯೂ ಸದೃಶವಾಗಿರುವದು. ಹರಿದು ಹಂಚಿ ಹೋಗಿರುವ

ಸದೃಶವಾದ ಈ ವಿಭಾಗಗಳನ್ನು ಒಂದೇ ಗುಂಪಿನಲ್ಲಿ ಅಧ್ಯಯನಕ್ಕಾಗಿ ತೆಗೆದು ಕೊಳ್ಳುವದು. (೨) **ಪೃಥ್ವಿಯನ್ನು ಮಾನವ ಜನಾಂಗದ ಮನೆ ಯೆಂದು ಭಾವಿಸಿ** ಭೂಗೋಲ ವಿಷಯಗಳನ್ನೆಲ್ಲ ಮನುಷ್ಯನ ಹಿತಾಹಿತ ದೃಷ್ಟಿಯಿಂದಲೇ ತಿಳಿದುಕೊಳ್ಳುವದು ಮತ್ತೊಂದು ಪ್ರಕಾರವಾಗಿದೆ. • ನಿಸರ್ಗದ ಶಕ್ತಿಗಳಿಗೂ ಮನುಷ್ಯನ ಬುದ್ಧಿ ಸಹಾಸಗಳಿಗೂ ಒಂದು ಬಗೆಯ ನಿತ್ಯವಾದ ಹೋರಾಟವು ಪ್ರಪಂಚದಲ್ಲಿ ಕಂಡುಬರುವದು. ನಿಸರ್ಗಕ್ಕೆ ಮಾನವನು ತಲೆಬಾಗಿಸಬೇಕು. ಇದಕ್ಕೆ '**ಭೌಗೋಲಿಕ ಅಂಕೆ**'ಯೆಂದು ಹೇಳುವದುಂಟು. ಕ್ವಚಿತ್ ಪ್ರದೇಶಗಳಲ್ಲಿ ತನ್ನ ಬುದ್ಧಿ–ಸಾಹಸಗಳಿಂದ ಪ್ರತಿಕೂಲವಾದ ನೈಸರ್ಗಿಕ ಪರಿಸ್ಥಿತಿಯನ್ನು ತನಗೆ ಅನುಕೂಲವಾಗುವಂತೆ ಆತನು ಹೆಚ್ಚುಕಡಿಮೆ ಮಾಡಿಕೊಳ್ಳುವನು.

ಇವುಗಳಲ್ಲಿ ಯಾವ ದೃಷ್ಟಿಯಿಂದ ಭೂಗೋಲವನ್ನು ಕಲಿಸಿದರೂ ಕೆಲವು ಸಂಗತಿಗಳು ಮಹತ್ವದವಾಗಿವೆ. ಭೂಗೋಲ ಶಿಕ್ಷಣದಲ್ಲಿ ಪ್ರತಿ ಹೆಜ್ಜೆಗೂ ವಿದ್ಯಾರ್ಥಿಗಳು 'ಎನಿತು? ಹೇಗೆ?' ಎಂಬ ಪ್ರಶ್ನೆಗಳಿಂದ, ವಿಚಾರ ವಿಮರ್ಶೆಗಳಿಂದ, ವಿಷಯಜ್ಞಾನವನ್ನು ತಮ್ಮದಾಗಿ ಮಾಡಿಕೊಳ್ಳಬೇಕು. ಇದೇ ಮೇರೆಗೆ ಭೂಗೋಲದ ಅನೇಕ ವಿಷಯಗಳನ್ನು ಶಕ್ಯವಿರುವಷ್ಟು ಸ್ವಾನುಭವದಿಂದಲೇ ಅವರು ತಿಳಿದುಕೊಳ್ಳಬೇಕು. ಭೂಗೋಲ ವಿಷಯವನ್ನು ಕಲಿಯುವದರಲ್ಲಿ ವಿದ್ಯಾರ್ಥಿಗಳು ತಾವೇ ಮಾಡಬಹುದಾದ ಅನೇಕ ಕೃತಿಗಳಿವೆ, ಪ್ರಯೋಗಗಳಿವೆ. ಇಂದಿನ ಭೂಗೋಲ ಶಿಕ್ಷಣದಲ್ಲಿ: **ಪ್ರಾಯೋಗಿಕ ಕೃತಿಗಳಿಗೆ** ಪ್ರಾಧಾನ್ಯವು ಬಂದಿದೆ. ನೆರಳಿನಿಂದ ಆಕಾಶದಲ್ಲಿ ಸೂರ್ಯನ ಉನ್ನತವಾದ ಸ್ಥಾನವನ್ನು ಕಂಡುಹಿಡಿಯುವದು, ನಕ್ಷೆ, ನಕಾಶಗಳನ್ನು ತಾವೇ ರಚಿಸಿ ವಿಷಯಜ್ಞಾನವನ್ನು ಸ್ಥಿರಪಡಿಸಿಕೊಳ್ಳುವದು ಇವುಗಳಲ್ಲಿ ಕೆಲವು. **ಕೃತಿಪ್ರಧಾನವಾದ ಮೂಲಶಿಕ್ಷಣದಲ್ಲಿ ಇಂಥ ಪ್ರಯೋಗಗಳಿಗೆ ತುಂಬಾ ಎಡೆಯುಂಟು.** ಗಾಳಿ ಪಟ, ಪವನಚಕ್ಕಿಗಳನ್ನು ಮಾಡುಡುವದರಲ್ಲಿ ಇಲ್ಲವೆ ಉದ್ಯೋಗದ ಮೂಲದ್ರವ್ಯಗಳಾದ ಹತ್ತಿ, ಕಾಗದ, ಕಟ್ಟಿಗೆಗಳ ವಿವೇಚನೆಯಲ್ಲಿ, ಸಾಮಾಜಿಕ ಜೀವನದ ನಿರೀಕ್ಷಣೆಯಲ್ಲಿ, ನಿಸರ್ಗದ

ನೋಟಗಳ ಸಂದರ್ಶನದಲ್ಲಿ ಭೂಗೋಲ ವಿಷಯುವನ್ನು ಮಕ್ಕಳಿಗೆ ಜೀವನ ಸ್ಪರ್ಶಿಯಾಗಿ, ಹೃದಯಸ್ಪರ್ಶಿಯಾಗಿ ಮಾಡುವಂತಿದೆ. ಚಿಕ್ಕಮಕ್ಕಳಿಗೆ ಭೂಗೋಲದ ಮೊದಲುಶಿಕ್ಷಣವು ಇತಿಹಾಸದಂತೆ ಮನರಂಜಕವಾದ ವೃತ್ತಾಂತಗಳಿಂದಲೇ ಪ್ರಾರಂಭವಾಗಬೇಕು. ಬೇರೆಬೇರೆ ಜನಾಂಗದ ಜೀವನದ ರೀತಿಯನ್ನೂ, ಜನರ ಊಟಉಡಿಗೆಗಳಲ್ಲಿರುವ ವೈಚಿತ್ರ್ಯವನ್ನೂ ಚಿಕ್ಕಮಕ್ಕಳು ಒಳ್ಳೇ ಆಸ್ಥೆಯಿಂದ ಕೇಳಿಕೊಳ್ಳುವರು. ಹೀಗೆ ಜನಿಸಿದ ಅವರ ಕುತೂಹಲವನ್ನು ಆ ವಿಷಯುದ ಜ್ಞಾನವನ್ನು ಹೆಚ್ಚಿಸಲು ವಿನಿಯೋಗಿಸಬಹುದು.

**ಭೂಗೋಲ ಶಿಕ್ಷಣದಲ್ಲಿ ಹಲವು ಮಹತ್ವದ ಸಾಧನಗಳುಂಟು.** ಇವುಗಳಲ್ಲಿ (೧) **ನಕಾಶವು** ಅತ್ಯಂತ ಪ್ರಧಾನವಾಗಿದೆ. ನಕಾಶದ ನಿರ್ಜೀವವಾದ ಗೆರೆಗಳಲ್ಲಿ ಜೀವನದ ಕುರುಹುಗಳನ್ನು ವಿದ್ಯಾರ್ಥಿಗಳು ಕಾಣುವಂತೆ ಮಾಡಬೇಕು. **ನಕಾಶಗಳೇ ಇಂದಿನ ಭೂಗೋಲ ವಿಷಯುದ ಪ್ರಾಣದಂತಿವೆ.** ನಕಾಶದಲ್ಲಿ ಈ ಸಜೀವತೆಯನ್ನು ಕಂಡುಹಿಡಿಯುವದೇ ಅವುಗಳ ಸರಿಯಾದ ಉಪಯೋಗವಾಗಿದೆ. ನಕಾಶದ ಪ್ರತಿಯೊಂದು ಚುಕ್ಕೆಯೂ ತನ್ನದಾದ ಒಂದು ಚಾರಿತ್ರ್ಯವನ್ನು ಸೂಚಿಸುವಂತಿರಬೇಕು. (೨) **ಗ್ಲೋಬು:–** ಪೃಥ್ವಿಯ ಆಕೃತಿ ಹಾಗೂ ಅದರ ದ್ವಿವಿಧವಾದ ಗತಿಗಳನ್ನು ಗ್ಲೋಬಿನ ಸಹಾಯದಿಂದಲೆ ವಿದ್ಯಾರ್ಥಿಗಳು ಚೆನ್ನಾಗಿ ತಿಳಿದುಕೊಳ್ಳಬಲ್ಲರು. (೩) **ನಕಾಶಸಂಗ್ರಹ** (Atlas) :— ದೊಡ್ಡ ಆಕಾರದ ನಕಾಶಗಳು ಒಟ್ಟು ವರ್ಗದ ಉಪಯೋಗಕ್ಕಾಗಿ. ನಕಾಶಸಂಗ್ರಹವು ವ್ಯಕ್ತಿಗತವಾದ ಉಪಯೋಗಕ್ಕಾಗಿ. ಶಿಕ್ಷಕನು ಕಲಿಸುವಾಗ್ಗೆ, ಇವುಗಳ ಸಹಾಯದಿಂದ ವಿದ್ಯಾರ್ಥಿಗಳು ವಿಷಯವಿವರಣೆಯನ್ನು ಚನ್ನಾಗಿ ತಿಳಿದುಕೊಳ್ಳಬಲ್ಲರು. ಇವುಗಳಲ್ಲದೆ **ಮಾಯಾದೀಪ, ಚಲಚ್ಚಿತ್ರ** ಮೊದಲಾದ ಸಾಧನಗಳು ಭೂಗೋಲ ಶಿಕ್ಷಣದಲ್ಲಿ ವಾಸ್ತವತೆಯನ್ನೂ, ಮನರಂಜನೆಯನ್ನೂ ತಂದುಕೊಡುವ ಸಬಲವಾದ ಸಾಧನಗಳಾಗಿವೆ. ಅನುಕೂಲವಿದ್ದಲ್ಲಿ ಶಿಕ್ಷಕರು ಇವುಗಳ ಉಪಯೋಗವನ್ನು ಮಾಡುವದು ಅಗತ್ಯವಾದುದು. ಶಕ್ಯವಿದ್ದಲ್ಲಿ ಶಿಕ್ಷಕರು ಏರ್ಪಡಿಸುವ

**ಶೈಕ್ಷಣಿಕ ಪ್ರವಾಸಗಳು** ವಿದ್ಯಾರ್ಥಿಗಳು ಓದಿ ತಿಳಿದುಕೊಂಡದ್ದನ್ನು ಕಣ್ಮುಟ್ಟಿ ನೋಡಲು ಅನುಕೂಲವಾದ ಸುಪ್ರಸಂಗಗಳಾಗಿರುವವು.

**ಮೂಲಶಿಕ್ಷಣದಲ್ಲಿ ಭೂಗೋಲ ವಿಷಯವನ್ನು ಮೂರನೆಯ ವರ್ಗದಿಂದ ಪ್ರಾರಂಭಿಸುವರು.** ಶಾಲೆಯ ಕಟ್ಟಡದ ಆವಾರದ ಸುಲಭವಾದ ನಕ್ಷೆಯನ್ನು ಸಿದ್ಧಪಡಿಸುವದು, ಗ್ಲೋಬದ ಹಾಗೂ ಸ್ವದೇಶದ ಪರಿಚಯ, ಜಿಲ್ಹೆಯ ಮತ್ತು ಊರಿನ ಪರಿಚಯ ಮಾಡಿಕೊಡುವದಾಗಿದೆ. ಸ್ವಂತ ಊರಿನ ಎಲ್ಲ ವಿವರಗಳನ್ನು ಬಾಲಕರು ತಿಳಿದುಕೊಳ್ಳಬೇಕು. ಬೀದಿಗಳು, ಓಣಿಗಳು, ಉದ್ಯೋಗ ಇತ್ಯಾದಿ. ಇದೆಲ್ಲವನ್ನೂ ಸ್ವಂತ ನಿರೀಕ್ಷಣೆಯಿಂದ, ಸಾಮಾಜಿಕ ಸಮವಾಯ ಕೇಂದ್ರದಿಂದ ಶಿಕ್ಷಕರು ಕುಶಲತೆಯಿಂದ ಸಾಧಿಸಬಹುದಾಗಿದೆ.

### (೪) ಗಣಿತ:—

ನಿತ್ಯಜೀವನಕ್ಕೆ ಅವಶ್ಯವೆನಿಸುವ ವಿಷಯಗಳಲ್ಲಿ ಗಣಿತವು ಒಂದಾಗಿದೆ. ಎಂಥ ಹೆಬ್ಬೆಟ್ಟಿನ ' ಒಕ್ಕಲು ' ಆದರೂ ಕೂಡ ನಿತ್ಯವ್ಯವಹಾರಕ್ಕೆ ಬೇಕಾಗುವಷ್ಟು ಕೂಡಿಸುವದನ್ನೂ, ಕಳೆಯುವದನ್ನೂ ಕಲಿತುಕೊಂಡಿರುವನು. ನಿತ್ಯಜೀವನದ ಉಪಯುಕ್ತತೆಯೊಡನೆ ಅನೇಕ ಮಾನಸಿಕ ಶಕ್ತಿಗಳನ್ನು, ತರ್ಕ, ಮುನ್ನೋಟ, ಏಕಾಗ್ರತೆ ಮೊದಲಾದವುಗಳನ್ನು ಗಣಿತದ ಅಧ್ಯಯನವು ತಿದ್ದುವದೆಂದು ಕೆಲವರ ಹೇಳಿಕೆ. ಇಂದಿನ ಮಾನಸಶಾಸ್ತ್ರವು ಪ್ರತ್ಯೇಕವಾದ ಮಾನಸಿಕ ಶಕ್ತಿಗಳನ್ನು ಒಪ್ಪದಿದ್ದರೂ, **ಗಣಿತದ ಅಧ್ಯಯನವು ಮನೋವಿಕಾಸದ ಉತ್ತಮವಾದ ಸಾಧನವೆಂಬುದನ್ನು** ಅಲ್ಲಗಳೆಯುವದಿಲ್ಲ. ಗಣಿತ ವಿಷಯವು '**ಸತ್ಯನಿಷ್ಠ**'ವಾಗಿದೆ. ಇದರ ವಿಧಾನದಲ್ಲಿ ತಗಲಿಗೆ ಹಾಗೂ ನಿರಂಕುಶವಾದ ಕಲ್ಪನೆಗೆ ಆಸ್ಪದವಿಲ್ಲ. ಪ್ರತ್ಯಕ್ಷವಾಗಿ, ಸಾಧಾರವಾಗಿ ಸಿದ್ಧಮಾಡಬಹುದಾದ ಸಂಗತಿಗಳಿಗೆ ಮಾತ್ರ ಗಣಿತದಲ್ಲಿ ಸ್ಥಾನವಿದೆ. ವಿದ್ಯಾರ್ಥಿಗಳ ನಿತ್ಯಜೀವನದೊಡನೆ ಈ ವಿಷಯವನ್ನು ಪ್ರಥಮಪಾಠಗಳಲ್ಲಿಯಾದರೂ ಹೊಂದಿಸಿಕೊಂಡರೆ ಇಂದಿನ ಕೆಲವು ವಿದ್ಯಾರ್ಥಿಗಳಲ್ಲಿ ಈ ವಿಷಯದ ಬಗ್ಗೆ ಕಂಡುಬರುವ ಅನಾಸ್ಥೆಯು ದೂರವಾಗಬಹುದು.

ನೂತನ ಗಣಿತ ಶಿಕ್ಷಣದಲ್ಲಿ ಕೆಲವು ಉಪಯುಕ್ತ ಅಂಶಗಳು ಕಾಣ ಬರುವವು. ಅಂಕಿಗಳ ಕೇವಲ ಕಸರತ್ತಿನಂತಿರುವ ಪ್ರಮೇಯಗಳನ್ನು ಅದು ಬಿಟ್ಟುಕೊಟ್ಟಿದೆ. ಅನಿಯಮಿತವಾಗಿ ಬೆಳೆಯುವ ಗುಣಾಕಾರಗಳೂ, ಎಂದೂ ಬಳಕೆಗೆ ಬಾರದ ವಿದೇಶೀಯ ಕೋಷ್ಟಕಗಳೂ ಇಂಥವುಗಳಲ್ಲಿ ಕೆಲವಾಗಿವೆ. ಮನೆತನದ ಲೆಕ್ಕಪತ್ರಗಳನ್ನಿಡುವ ಜಮಾಖರ್ಚಿನ ಪದ್ಧತಿಯು ಒಳ್ಳೇ ಉಪಯುಕ್ತವಾಗುವಂತಿದೆ. ಕೆಳಗಿನ ಇಯತ್ತೆಗಳಿಂದಲೇ ಈ ವಿಷಯದ ಪ್ರಾರಂಭವಾಗುವದು. ತನ್ನ ಆದಾಯ ಹಾಗೂ ವೆಚ್ಚಗಳನ್ನು ಈ ರೀತಿ ಯಾಗಿ ಸುವ್ಯವಸ್ಥಿತವಾಗಿ ಬರೆದಿಡುವದು ಜೀವನದಲ್ಲಿ ಒಳ್ಳೇ ಹಿತಕರವಾದ ರೂಢಿಯಾಗುವದು. ಮಗ್ಗಿಗಳ 'ಗಿಳಿಪಾಠ'ವು ಕಡಿಮೆಯಾಗಹತ್ತಿದೆ. ವಸ್ತುಗಳನ್ನು ಪ್ರತ್ಯಕ್ಷವಾಗಿ ಎಣಿಸಿ, ಕೂಡಿಸಿ, ಗುಂಪುಗಳನ್ನು ಮಾಡಿ ಇಂದಿನ ಮಕ್ಕಳು ಅಂಕಿಮಗ್ಗಿಗಳನ್ನು 'ಕಣ್ಣೀರು ಸುರಿಸದೆ' ಆಟವಾಡುತ್ತ ಕಲಿಯುವರು. ಗಣಿತ ಶಿಕ್ಷಣದಲ್ಲಿ ಚಿಕ್ಕಮಕ್ಕಳ ಕೃತಿಪ್ರೇಮದ ಸಹಕಾರವು ನಮಗೆ ಹೆಚ್ಚಾಗಿ ದೊರೆಯುವಂತಿದೆ. **ಗಣಿತವನ್ನು ಹೆಚ್ಚು ವ್ಯಾವಹಾರಿಕ ವನ್ನಾಗಿ ಮಾಡುವದು, ನಿತ್ಯಜೀವನದೊಡನೆ ಈ ವಿಷಯದ ಸಂಬಂಧವನ್ನು ಹೆಚ್ಚಿಸುವದು,** ಪರಿಚಿತವಾದ ಪ್ರಮೇಯಗಳಿಂದ ನೂತನ ಪ್ರಮೇಯಗಳಿಗೆ ಸಾಗುವದು, ಸ್ಪಷ್ಟತೆಗಾಗಿ ವಿದ್ಯಾರ್ಥಿಗಳ ಸ್ವಾನುಭವವನ್ನು ಹೆಚ್ಚಾಗಿ ಉಪಯೋಗಿಸಿಕೊಳ್ಳುವದು, ಅನೇಕ ಉದಾಹರಣೆಗಳ ಸಹಾಯ ದಿಂದ ಸಾಮಾನ್ಯ ತತ್ವವನ್ನು ಬಾಲಕರು ತಾವಾಗಿಯೆ ಕಂಡುಹಿಡಿಯುವಂತೆ ಮಾಡುವದು, ವಿದ್ಯಾರ್ಥಿಗಳ ಕೃತಿಪ್ರೇಮವನ್ನು ವಿವಿಧ ರೀತಿಗಳಲ್ಲಿ ವಿನಿ ಯೋಗಿಸಿಕೊಳ್ಳುವದು, ಇವೆಲ್ಲವೂ ಇಂದಿನ ಹೊಸ ಪದ್ಧತಿಯ ಲಕ್ಷಣಗಳಾ ಗಿವೆ. ಮೂಲಶಿಕ್ಷಣ ಶಾಲೆಗಳಲ್ಲಿ ಇವೇ ತತ್ವಗಳನ್ನು ಅನುಸರಿಸಿ, ವಿವಿಧ ಚಟುವಟಿಕೆಗಳಿಗೆ ಅನುಬಂಧಿಸಿ ಗಣಿತ ವಿಷಯವನ್ನು ಕಲಿಸುವದುಂಟು. ಮೂಲೋದ್ಯೋಗದ ವಿಧಾನದಲ್ಲಿ ಕೂಡಿಸುವದು, ಕಳೆಯುವದು ಅಗತ್ಯವೆನಿ ಸುತ್ತದೆ. ಉತ್ಪಾದಕ ಉದ್ಯೋಗದಲ್ಲಿ ತೊಡಗಿದ ಮಗುವು ತನಗೆ ಅವಶ್ಯ ವೆನಿಸಿದಾಗ್ಗೆ ಪಡೆಯುವ ಜ್ಞಾನವು ಜೀವನದೊಡನೆ ಸಮರಸವಾಗುವದು.

## (ಜ) ಸಾಮಾನ್ಯ ವಿಜ್ಞಾನ

ಇಂದಿನ ಯುಗವು ವಿಜ್ಞಾನಯುಗವಾಗಿದೆ. **ಜೀವನದ ಎಲ್ಲ ಕ್ಷೇತ್ರಗಳಲ್ಲಿ ವಿಜ್ಞಾನವು ತನ್ನ ಪ್ರಭಾವವನ್ನು ಬೀರಿದೆ.** ವಿಜ್ಞಾನದ ಶೋಧಗಳು ಜೀವನದ ಸೌಕರ್ಯಗಳನ್ನು ಒಂದೆಡೆಗೆ ಹೆಚ್ಚಿಸಿದರೆ, ಮತ್ತೊಂದೆಡೆಗೆ ಮೃತ್ಯುವಿನ ಪ್ರಬಲಸಾಧನಗಳಾಗಿವೆ. ವಿಜ್ಞಾನದ ಮೂಲತತ್ವಗಳ ಬಗ್ಗೆ ಮತ್ತು ಮೂಲೋದ್ದೇಶಗಳ ಬಗ್ಗೆ ಸರಿಯಾದ ಪರಿಚಯುವನ್ನು ಹಾಗೂ ಹಿತಕರವಾದ ಭಾವನೆಯುನ್ನು ಮೊದಲಿನಿಂದಲೇ ಚಿಕ್ಕಮಕ್ಕಳಿಗೆ ಮಾಡಿಕೊಡುವದು ಅವಶ್ಯವಾಗಿದೆ.

ಮಗು ಹುಟ್ಟಿದೊಡನೆ ತನ್ನ ಸುತ್ತಮುತ್ತಲಿನ ಸೃಷ್ಟಿಯ 'ಬೌದ್ಧಿಕ ದಿಗ್ವಿಜಯ'ಕ್ಕಾಗಿ ಹೇಗೆ ಹವಣಿಸುತ್ತಿರುವದೆಂಬುದನ್ನು ಹಿಂದೆ ಹೇಳಿದೆ. ಈ ಕಾರ್ಯದಲ್ಲಿ ಇಂದ್ರಿಯುಗಳೇ ಆ ಮಗುವಿಗೆ ಸಾಧನಗಳು. ಇಂದ್ರಿಯುಗಳಿಂದ ಮಗು ವಿವಿಧ 'ಪ್ರಯೋಗ'ಗಳನ್ನು ನಡೆಸುವದು. ಮುಟ್ಟುವದು, ಮುರಿಯುವದು, ಬಾಯಲ್ಲಿ ಹಾಕಿಕೊಳ್ಳುವದು—**ಇವೆಲ್ಲ ಕೃತಿಗಳು ಮಗುವಿನ 'ಪ್ರಯೋಗ'ಬುದ್ಧಿಯ ವಿವಿಧ ವಿಧಾನಗಳು.** ವಿಜ್ಞಾನ ಶಾಸ್ತ್ರದ ಶಿಕ್ಷಣದಲ್ಲಿ ಪ್ರಯೋಗ ಪದ್ಧತಿಯೇ ಪ್ರಧಾನವಾಗಿದೆ. ಈ ಪ್ರಯೋಗಗಳೊಡನೆ ಮಗುವಿನ ಇನ್ನೊಂದು ಮಾನಸಿಕ ಶಕ್ತಿಯು ಸಹಕರಿಸುವದು—**ವಸ್ತುಗಳ ವಿವಿಧತೆಯಲ್ಲಿ ಏಕರೂಪತೆಯುನ್ನೂ,** ಸಾಮಾನ್ಯ ತತ್ವವನ್ನೂ ಮಗುವು ಕಂಡುಹಿಡಿಯುವದು. ಈ ಮನೋವ್ಯಾಪಾರಕ್ಕೆ '.ಉದ್ಗಾಮಿ ಅನುಮಾನ' ವೆನ್ನುವರು. ಈ ಬಗೆಯ ಅನುಮಾನವೇ ವಿಜ್ಞಾನ ಶಿಕ್ಷಣದ ಅಡಿಗಲ್ಲಾಗಿದೆ. ವಿಜ್ಞಾನದ ವಿಷಯುಗಳನ್ನು ಕಲಿಸುವಾಗ್ಗೆ, ವಿಜ್ಞಾನದ ಸಿದ್ಧಾಂತಗಳನ್ನು 'ಗಿಳಿಪಾಠ' ಮಾಡಿಸುವದು ಸರಿಯಾಗದು. ಸ್ವಂತ **ನಿರೀಕ್ಷಣ, ಪರೀಕ್ಷಣ, ಪ್ರಯೋಗ**ಗಳಿಂದಲೇ ಬಾಲಕರು ವಿಜ್ಞಾನ ವಿಷಯುಗಳ ಜ್ಞಾನವನ್ನು ಮಾಡಿಕೊಳ್ಳುವದೇ ವಿಹಿತವು.

**ಮೂಲಶಿಕ್ಷಣದಲ್ಲಿ ವಿಜ್ಞಾನ ವಿಷಯುಗಳ ಪ್ರಯೋಜನವನ್ನು ಝಾಕೀರ ಹುಸೇನ ಸಮಿತಿಯುವರು ಸ್ಪಷ್ಟಪಡಿಸಿರುವರು:—**

(೧) ವಿದ್ಯಾರ್ಥಿಗಳಲ್ಲಿ **ನಿಸರ್ಗಪ್ರೇಮವನ್ನೂ**, ನಿಸರ್ಗ ನಿರೀಕ್ಷಣೆಯ ಬಗ್ಗೆ ಆಸ್ಥೆಯನ್ನೂ ಹುಟ್ಟಿಸುವದು.

(೨) ನಿಸರ್ಗದ ಸೂಕ್ಷ್ಮವಾದ, ಸವಿವರವಾದ ನಿರೀಕ್ಷಣೆ ಹಾಗೂ ಅನುಭವದ ಸಂಗತಿಗಳನ್ನು **ಪ್ರಯೋಗಮಾಡಿ ಪರೀಕ್ಷಿಸುವ ರೂಢಿ** ಯನ್ನುಂಟು ಮಾಡುವದು.

(೩) ನಿಸರ್ಗದ ಸೋಜಿಗದ ಸಂಗತಿಗಳೂ, ಶಕ್ತಿಗಳೂ ಮಾನವನ ಸೇವೆಗೆ, ಕಲ್ಯಾಣಕ್ಕೆ ಹೇಗೆ ಸಾಧನಗಳಾಗಬಹುದೆಂಬ **ವಿವೇಚನಾಶಕ್ತಿಯನ್ನು** ಮಕ್ಕಳಲ್ಲಿ ತಂದು ಕೊಡುವದು.

ವಿಜ್ಞಾನ ಪ್ರಪಂಚದಲ್ಲಿ ತಮ್ಮ ಅದ್ಭುತ ಶೋಧ ಸಾಹಸಗಳಿಂದ ಕೀರ್ತಿವೆತ್ತ ವಿಜ್ಞಾನಿಗಳ ಜೀವನದಲ್ಲಿಯ ಮಹತ್ವದ ಘಟನೆಗಳನ್ನು ವಿದ್ಯಾರ್ಥಿಗಳು ತಿಳಿದುಕೊಳ್ಳಬೇಕು. **ಸತ್ಯಾನ್ವೇಷಣೆಗಾಗಿ ಅವರು ಮಾಡಿದ ತ್ಯಾಗ ಬಲಿದಾನಗಳನ್ನೂ ತಿಳಿದುಕೊಳ್ಳಬೇಕು.**

**ಸಾಮಾನ್ಯ ವಿಜ್ಞಾನವು:—** (೧) **ಸೃಷ್ಟವಸ್ತು ಪರಿಚಯ ;** (೨) **ಸಸ್ಯ ಜೀವನ ;** (೩) **ಪ್ರಾಣಿ ಜೀವನ ;** (೪) **ಶರೀರಶಾಸ್ತ್ರ ;** (೫) **ಆರೋಗ್ಯಶಾಸ್ತ್ರ ;** (೬) **ಶರೀರ ಸಂವರ್ಧನ ;** (೭) **ರಸಾಯನಶಾಸ್ತ್ರ ;** (೮) **ನಕ್ಷತ್ರವಿಜ್ಞಾನ**–ಹೀಗೆ ಅಷ್ಟಾಂಗಗಳಿಂದ ಕೂಡಿದೆ. ಇವೆಲ್ಲ ವಿಷಯಗಳ ಪಾಠಕ್ರಮದಲ್ಲಿ ನಿಸರ್ಗವೇ ಮುಖ್ಯಕೇಂದ್ರವು. ಇದಕ್ಕಾಗಿ ಮೂಲಶಿಕ್ಷಣ ಶಾಲೆಗಳ ಆವಾರದಲ್ಲಿ ಹೂ–ಕಾಯಿ–ಪಲ್ಲೆಗಳನ್ನು ಬೆಳೆಯುವ ಒಂದು ಕೈತೋಟವು ಇರಬೇಕಾಗುವದು. ಮೇಲಾಗಿ ತೋಟಗಾರಿಕೆಯೂ ಒಂದು ಶ್ರೇಷ್ಠವಾದ ಶೈಕ್ಷಣಿಕ ಚಟುವಟಿಕೆಯಾಗಿದೆ. ನೂಲುವ ಮೂಲೋದ್ಯೋಗಕ್ಕೆ ಸಾಧನವಾದ ರಾಟಿಯೂ ಒಂದು ' ಯಂತ್ರ 'ವಾಗಿದೆ. ಯಂತ್ರಶಾಸ್ತ್ರಶಿಕ್ಷಣಕ್ಕೆ ಅದು ತುಂಬಾ ಸಹಕಾರಿಯಾಗುವದು. ಹತ್ತಿಯಿಂದ ವನಸ್ಪತಿಶಾಸ್ತ್ರಕ್ಕೆ ಬರಬಹುದು.

ಶಾಸ್ತ್ರೀಯ ಶಿಕ್ಷಣದಲ್ಲಿ ' ಬೇಕು–ಬೇಡ 'ವೆಂಬ ಪ್ರತಿಯೊಂದು ವಿಧಿ–ನಿಷೇಧಗಳ ಕಾರಣವನ್ನು ವಿದ್ಯಾರ್ಥಿಗಳು ತಿಳಿದುಕೊಳ್ಳಬೇಕು. ಇದರಿಂದಲೇ

ಕಲಿಯುವದರಲ್ಲಿ ಜೀವಕಳೆ ತುಂಬುವದು. ಒಟ್ಟಿನಲ್ಲಿ ಬೆಳೆಯುವ ಬಾಲಕರಿಗೆ ಯಾಕೆ? ಹೇಗೆ? ಎಂಬ ಶೋಧಕ ಬುದ್ಧಿಯೂ, ಮಾಡಿ ನೋಡುವ ಪ್ರಯೋಗ ನಿಷ್ಠೆಯೂ, ವಿಜ್ಞಾನವು ಮಾನವನ ಕಲ್ಯಾಣಕ್ಕಾಗಿ ಎಂಬ ದೃಢ ನಂಬುಗೆಯೂ ವಿಜ್ಞಾನ ಶಿಕ್ಷಣದಿಂದ ಜನಿಸಬೇಕು.

## (೬) ಚಿತ್ರಕಲೆ:—

ಸಾಂಪ್ರದಾಯಿಕ ಶಿಕ್ಷಣದಲ್ಲಿ ಚಿತ್ರಕಲೆಗೆ ಮೊದಲಿನಿಂದಲೂ ಒಂದು ಸ್ಥಾನವು ದೊರೆತಿದೆ. ಆ ಶಿಕ್ಷಣದ ನ್ಯೂನತೆ ಚಿತ್ರಕಲೆಯ ವಿಷಯದಲ್ಲಿ ಹೆಚ್ಚಾಗಿ ಕಂಡುಬರುವದು. ರೇಖೆಗಳಿಂದ ರಚಿತವಾದ ಕೆಲವೊಂದು ಆಕೃತಿಗಳು ಇಲ್ಲವೆ ನೋಡಿ ತೆಗೆದ ಒಂದು ವಸ್ತುವಿನ ಚಿತ್ರವು—ಇಷ್ಟಕ್ಕೆ ಚಿತ್ರ ಕಲೆಯ ಶಿಕ್ಷಣವು ಮರ್ಯಾದಿತವಾಗಿತ್ತು. ಅದರಲ್ಲಿ ನೂತನ ವಸ್ತು ನಿರ್ಮಾಣಕ್ಕಾಗಲೀ, ಉಪಯುಕ್ತತೆಗಾಗಲೀ ಏನೂ ಆಸ್ಪದವಿರಲಿಲ್ಲ.

ಮೂಲಶಿಕ್ಷಣದಲ್ಲಿ ಚಿತ್ರಕಲೆಯ ಶಿಕ್ಷಣವು ಮೂಲೋದ್ಯೋಗದಿಂದಲೇ ಮುಂದೊರೆಯಬೇಕು. ಉದ್ಯೋಗದ ವಿವಿಧ ಸಾಧನಗಳ ಚಿತ್ರವನ್ನು ಬಾಲ ಕರು ತೆಗೆಯಬೇಕು. ಆಕಾರ—ವರ್ಣಗಳಲ್ಲಿಯ ವಿವಿಧತೆಗಳನ್ನು ಬಾಲಕರು ಅರಿತುಕೊಳ್ಳಬೇಕು. ಇದನ್ನು ಕಂಡುಹಿಡಿಯುವ ಶಕ್ತಿಯು ರೂಢಿಯಿಂದ ಕಣ್ಣಿಗೆ ಬರಬೇಕು. ಒಮ್ಮೆ ನೋಡಿದ ಆಕೃತಿಯನ್ನು ಮತ್ತೆ ನೆನಪಿನಿಂದ ತೆಗೆಯಲು ಬರಬೇಕು. **ನೈಸರ್ಗಿಕ ಹಾಗೂ ಕಲಾತ್ಮಕ ಸೌಂದರ್ಯ ವನ್ನು ಸರಿಯಾಗಿ ತಿಳಿದುಕೊಳ್ಳುವ** ಹಾಗೂ **ಮೆಚ್ಚುವ** ಪಾತ್ರತೆಯನ್ನು ಬಾಲಕರು ಗಳಿಸಬೇಕು. ಸುಲಭವಾದ ಸುಳುವು ಗೆರೆಗಳಿಂದ ಗೋಡೆ ಮೊದ ಲಾದವುಗಳನ್ನು ಅಲಂಕರಿಸುವಂತಾಗಬೇಕು. ಪ್ರಮಾಣಬದ್ಧ ಚಿತ್ರಗಳನ್ನೂ, ರೇಖಾ ಚಿತ್ರಗಳನ್ನೂ ತೆಗೆಯಲು ಬರಬೇಕು.

ಚಿತ್ರಕಲೆಯ ಶಿಕ್ಷಣವು ಮೂಲೋದ್ಯೋಗಕ್ಕೂ, ಮಕ್ಕಳ ಜೀವನಕ್ಕೂ ಸಹಜವಾಗಿ ಹೊಂದಿಕೊಳ್ಳಬೇಕು. ಕೇವಲ ಚಿತ್ರಗಳನ್ನಷ್ಟು ಸುಂದರವಾಗಿ ತೆಗೆಯುವಂತಾದರೆ ಕಲಾ ಶಿಕ್ಷಣದ ಉದ್ದೇಶವು ಫಲಿಸಿತೆಂದು ತಿಳಿಯ ಲಾಗದು. **ಸೌಂದರ್ಯದ ಪ್ರತೀತಿ, ಅಭಿರುಚಿ ಹಾಗೂ ನಿರ್ಮಿತಿ**

ಈ ತ್ರಿವಿಧವಾದ ಉದ್ದೇಶವನ್ನು ಕಲಾಶಿಕ್ಷಣವು ಮುಂದಿಟ್ಟುಕೊಳ್ಳಬೇಕು. ಸಮೀಪದಲ್ಲಿಯೇ ದೊರೆಯುವ ಬಣ್ಣಬಣ್ಣದ ಮಣ್ಣುಗಳಿಂದ, ಬೀಜಗಳಿಂದ, ಎಲೆಗಳಿಂದ, ಹೂಕಾಯಿಗಳಿಂದ ಸುಂದರವಸ್ತುಗಳನ್ನು ರಚಿಸುವದಕ್ಕೂ, ಸಮಾರಂಭಗಳಲ್ಲಿ ಶಾಲೆ ಮನೆಗಳನ್ನು ಶೃಂಗರಿಸುವದಕ್ಕೂ ಬಾಲಕರು ಸಮರ್ಥರಾಗಬೇಕು. ಇದಕ್ಕೂ ಹೆಚ್ಚಿನದೆಂದರೆ **ಕಲಾಶಿಕ್ಷಣದಲ್ಲಿ ಪ್ರಕಟ ವಾಗುವ ಸೌಂದರ್ಯ ಹಾಗೂ ಕೌಶಲ್ಯಗಳು, ಕೂಡುವಾಗ್ಗೆ, ನಿಲ್ಲು ವಾಗ್ಗೆ, ಬಾಲಕರ ಎಲ್ಲ ಕೃತಿಗಳಲ್ಲಿಯೂ ತೋರಿಬರಬೇಕು.** ಗಾಂಧೀಜಿಯವರು ಹೇಳುವಂತೆ, '**ನಿಜವಾದ ಕಲೆಯು ಅಂತರಂಗದ ಆವಿಷ್ಕಾರವಾಗಿದೆ.**' ನಿಜವಾದ ಕಲಾಶಿಕ್ಷಣವು ಮಕ್ಕಳ ಅಂತರಂಗದ ಎಲ್ಲ ಶಕ್ತಿಗಳನ್ನೂ ಅರಳಿಸಬೇಕು.

## (೭) ಸಂಗೀತ:—

**ಸಂಗೀತವು ಒಂದು ಸ್ವರ್ಗೀಯವಾದ ಕಲೆ.** ಪ್ರಾಚೀನ ಸಾಮ ವೇದದಿಂದ ಇತ್ತೀಚೆಗಿನ ಸಿನೆಮಾ ಗೀತದವರೆಗೆ ಅದರ ವ್ಯಾಪ್ತಿ-ಪರಂಪರೆ ಹಬ್ಬಿದೆ. **ಶ್ರುತಿ-ತಾಲ-ಲಯಗಳು ಅದರ ಜೀವಾಳ.** ಸ್ವರ ಮಾಧುರ್ಯವು ಅದರ ಸಂತೋಷವನ್ನು ಇಮ್ಮಡಿಯಾಗಿ ಮಾಡುವದು. ಮನಸ್ಸನ್ನು ಕೊರೆಯುವ ನೂರು ಚಿಂತೆಗಳನ್ನು ಕೆಲಕಾಲವಾದರೂ ಮರೆ ಯಿಸಿ **ಆತ್ಮವಿಸ್ಮರಣಮಾಡುವ ಜಾದುಗಾರಿಕೆ ಸಂಗೀತದಲ್ಲಿದೆ.** ಮನ ಸ್ಸಿನ ಏಕಾಗ್ರತೆಗಾಗಿ, ಈಶ್ವರೋಪಾಸನೆಯಲ್ಲಿ ಭಕ್ತರು ಸಂಗೀತವನ್ನೇ ಮೊರೆಹೋಗುವರು. ಶ್ರೇಷ್ಠ ಆಂಗ್ಲ ಕವಿಯೊಬ್ಬನು ಹೇಳುವಂತೆ **ಮನಸ್ಸಿ ನಲ್ಲಿಯ ಮಾಲಿನ್ಯವನ್ನು ಕಳೆಯುವ ಶಕ್ತಿಯೂ ಸಂಗೀತಕ್ಕಿದೆ.** ಪಶುಪಕ್ಷಿಗಳೂ ಅದರ ಪ್ರಭಾವಕ್ಕೆ ಒಳಗಾಗುವವು.

ಮೂಲಶಿಕ್ಷಣದಲ್ಲಿ ಸಂಗೀತಕ್ಕೆ ಹೆಚ್ಚಿನ ಸ್ಥಾನವಿದೆ. ಸಂಗೀತವು ಚಟು ವಟಿಕೆಗೆ ಚೈತನ್ಯವನ್ನು ತಂದುಕೊಡುತ್ತಿದೆ. ದಣಿವನ್ನು ಮರೆಸುತ್ತಿದೆ. ಹಳ್ಳಿಯ ಜೀವನದಲ್ಲಿ ಇಂದಿಗೂ ಇದನ್ನು ನಾವು ನೋಡಬಹುದು. ಹತ್ತಿ ಅರೆ ಯುವಾಗ್ಗೆ, ನೂಲುವಾಗ್ಗೆ, ಕುಟ್ಟುವಾಗ್ಗೆ ರಚಿತವಾದ ಜನಪದ ಸಾಹಿತ್ಯವೂ,

ಗರತಿಯ ಹಾಡುಗಳೂ ಇಷ್ಟೂ ವಿಪುಲವಾಗಿ ದೊರೆಯುತ್ತಿವೆ. ಮೂಲಶಿಕ್ಷಣ ದಲ್ಲಿ ಇವೆಲ್ಲವುಗಳ ಪುನರುಜ್ಜೀವನವಾಗಬೇಕು; ಶಾಲೆಗಳಲ್ಲಿ ಬಳಕೆಗೆ ಒರ ಬೇಕು. ಇವುಗಳ ಜೊತೆಗೆ ಜಾನಪದ ನೃತ್ಯಗಳೂ ಹಳೆಯ ಆಟಗಳೂ ಮತ್ತೆ ಪ್ರಚಾರದಲ್ಲಿ ಬರಬೇಕು. **ಗಾಂಧೀಜಿಯವರು ಹೇಳಿದಂತೆ ಸಂಗೀತ ಕಲೆಯು ಕೆಲವರಿಗೆ ಮಾತ್ರ ಮೀಸಲವಾಗಿರದೆ, ಸಾರ್ವತ್ರಿಕವಾಗ ಬೇಕು.** ಪ್ರತಿಯೊಬ್ಬ ನಾಗರಿಕನಿಗೂ ಎರಡಾದರೂ ನಾಡಗೀತೆಗಳನ್ನೂ ರಾಷ್ಟ್ರಗೀತವನ್ನೂ ತಾಲಬದ್ಧವಾಗಿ, ಎಲ್ಲರೊಡನೆ ಸಾಮೂಹಿಕವಾಗಿ ಅನ್ನುವ ರೂಢಿಯುಂಟಾಗಬೇಕೆಂದು ಮಹಾತ್ಮಾಜಿಯವರ ಹುನೀಷೆ.

## (೮) ಹಿಂದುಸ್ತಾನಿ:—

ಸ್ವತಂತ್ರ ಭಾರತದ ರಾಜ್ಯಘಟನೆಯಲ್ಲಿ ಹಿಂದುಸ್ತಾನಿಯು ರಾಷ್ಟ್ರ ಭಾಷೆಯೆಂದು ಮನ್ನಣೆ ಪಡೆದಿದೆ. ಇನ್ನು ಮುಂದೆ ಅಲ್ಪಾವಧಿಯಲ್ಲಿಯೇ ಸರಕಾರದ ಸಮಗ್ರ ವ್ಯವಹಾರವೆಲ್ಲ ಹಿಂದುಸ್ತಾನಿಯಲ್ಲಿಯೇ ನಡೆಯುವದು. ಉಚ್ಚ ಶಿಕ್ಷಣದ ಬೋಧನ ಭಾಷೆಯೂ ಅದೇ ಆಗುವದು. ಶಿಕ್ಷಣದ ಪೂರ್ವಾವಧಿಯಲ್ಲಿ ಪ್ರಾದೇಶಿಕ ಭಾಷೆಯೇ ಪ್ರಧಾನವಾದುದು. ರಾಷ್ಟ್ರ ಭಾಷೆಯು ಅಂತರ್‌ಪ್ರಾಂತೀಯ ವ್ಯವಹಾರಕ್ಕಾಗಿ ಮಾತ್ರ. ಪ್ರಾದೇಶಿಕ ಭಾಷೆ ಗಳ ಬೆಳವಣಿಗೆಗೆ ಅದು ಕಾಲ್ತೊಡಕಾಗದಂತೆ ದಕ್ಷತೆ ವಹಿಸಲಾಗಿದೆ. ವ್ಯವ ಹಾರದ ಅನುಕೂಲತೆಯೊಡನೆ **ಒಂದೇ ರಾಷ್ಟ್ರಭಾಷೆಯು ಏಕರಾಷ್ಟ್ರೀ ಯತ್ವದ ಭಾವನೆಗೆ ಪೋಷಕವಾಗುವದು.** ಮುಂದಿನ ನಾಗರಿಕರಾಗುವ ಇಂದಿನ ಮಕ್ಕಳು ಹಿಂದುಸ್ತಾನಿಯನ್ನು ಕಲಿಯುವದು ತೀರ ಅಗತ್ಯವಾಗಿದೆ. ಆದುದರಿಂದ ಮೂಲಶಿಕ್ಷಣ ಶಾಲೆಗಳಲ್ಲಿ ರಾಷ್ಟ್ರಭಾಷೆಯ ಶಿಕ್ಷಣಕ್ಕೆ ಮಹ ತ್ವದ ಸ್ವತಂತ್ರವಾದ ಸ್ಥಾನವಿದೆ.

ರಾಷ್ಟ್ರಭಾಷೆಯ ಶಿಕ್ಷಣವನ್ನು ಭಾಷಾಶಿಕ್ಷಣದ ತತ್ವಗಳಿಗನುಸಾರ ವಾಗಿಯೇ ಕಲಿಸಬೇಕು. ರಾಷ್ಟ್ರಭಾಷೆಯ ವ್ಯಾವಹಾರಿಕವಾದ ಪ್ರಯೋಜನ ವನ್ನು ಯಾವಾಗಲೂ ಮುಂದಿಟ್ಟುಕೊಳ್ಳಬೇಕು. ಪ್ರತ್ಯಕ್ಷ ಪದ್ಧತಿಯು, ಸಂಭಾಷಣಾಪದ್ಧತಿಯು ರಾಷ್ಟ್ರಭಾಷೆಯ ಶಿಕ್ಷಣದಲ್ಲಿ ಹೆಚ್ಚು ಸಹಾಯಕ ವಾಗುವದೆಂದು ಅನುಭವಿಕರು ಹೇಳುವರು.

# ಪರಿಚ್ಛೇದ ೨೪

## ಮೂಲಶಿಕ್ಷಣ

ಸ್ವತಂತ್ರ ಭಾರತದಲ್ಲಿ ಮೂಲಶಿಕ್ಷಣಕ್ಕೆ ಮನ್ನಣೆ ದೊರೆತಿದೆ. ಒತ್ತಾಯದ ಸಾರ್ವತ್ರಿಕ ಜನತಾ ಶಿಕ್ಷಣವು ಮೂಲಶಿಕ್ಷಣದ ಮುಖಾಂತರವಾಗಿಯೇ ಸಾಗುವದು. ಮೂಲಶಿಕ್ಷಣದ ಶಾಸ್ತ್ರೀಯತೆ, ಉಪಯುಕ್ತತೆ, ಸಾಧ್ಯತೆಗಳ ಬಗ್ಗೆ ಇಂದು ತಾತ್ವಿಕವಾದ ವಿವೇಚನೆಯು ಅಗತ್ಯವಾಗಿಲ್ಲ. ಅದು ವಾದಭೂಮಿಯ ಸೀಮೆಯನ್ನು ದಾಟಿ ಸ್ಥಿರವಾಗಿ ನೆಲಿಸಿದೆ. ವಾದ ವಿವೇಚನೆಗಳ ಒರೆಗೆ ತಿಕ್ಕಿನೋಡಿ, ಪ್ರಯೋಗ ಶಾಲೆಗಳಲ್ಲಿ ಸೂಕ್ಷ್ಮವಾಗಿ ಪರೀಕ್ಷಿಸಿ **ಶಿಕ್ಷಣ ಶಾಸ್ತ್ರಜ್ಞರು ಮೂಲಶಿಕ್ಷಣಕ್ಕೆ ಇಂದು 'ಪೂರ್ಣತೆಯ' ಮುದ್ರೆಯನ್ನೊತ್ತಿದ್ದಾರೆ.**

ಮೂಲಶಿಕ್ಷಣವು ಕ್ರೀಡಾಂಗ ಪದ್ಧತಿಯಂತೆ ಕೇವಲ ಒಂದು ಕಲಿಸುವ ಪದ್ಧತಿಯಾಗಿಲ್ಲ. ಅದೊಂದು, ರಾಷ್ಟ್ರದ ಮಕ್ಕಳ ಸಮಗ್ರಶಿಕ್ಷಣದ **ಪೂರ್ಣವಾದ ಯೋಜನೆಯಾಗಿದೆ.** ಬೆಳೆಯುವ ಮಕ್ಕಳು ರಾಷ್ಟ್ರದ ಬೆಲೆಯುಳ್ಳ ಸೊತ್ತು–ಸಂಪತ್ತುಗಳಾಗಿವೆ. ಶಿಕ್ಷಣವು ಈ ಮಕ್ಕಳ ಜೀವನವನ್ನು ರೂಪುಗೊಳಿಸುವದು. ಮಕ್ಕಳ ಮುಂದಿನ ಜೀವನದ ಕಟ್ಟಡವು ಸರಿಯಾದ, ಸ್ಥಿರವಾದ ತಳಹದಿಯಮೇಲೆ ನಿಲ್ಲಬೇಕು. ಮಗುವಿನ ಸರ್ವತೋಮುಖವಾದ ವಿಕಾಸವಾಗಬೇಕು. ಇದು ಶಿಕ್ಷಣದ ಕಾರ್ಯ, ಉದ್ದೇಶ. ಸರಕಾರದ ಹೊಣೆ, ಕರ್ತವ್ಯ. ಮೂಲಶಿಕ್ಷಣವು ಈ ಉದ್ದೇಶವನ್ನು ಎಂತು ಈಡೇರಿಸುವದು? ಅದರ ಹಿನ್ನೆಲೆಯೇನು? ಮುನ್ನೋಟವೇನು? ವಿಧಾನವೇನು? ಇವೇ ಮೊದಲಾದ ಮೂಲಶಿಕ್ಷಣದ ಅಂಗೋಪಾಂಗಗಳನ್ನು ಶಿಕ್ಷಕರೂ, ತಂದೆತಾಯಿಗಳೂ ತಿಳಿದುಕೊಳ್ಳುವದು ಅಗತ್ಯವಾಗಿದೆ.

ಪ್ರತಿಯೊಂದು ಶಿಕ್ಷಣ ಯೋಜನೆಗೂ ಒಂದು ತಾತ್ವಿಕವಾದ ತಳಹದಿಯಿರುವದು. ಅದಕ್ಕೆ ಶಿಕ್ಷಣದ 'ತತ್ವಜ್ಞಾನ' ವೆಂದು ಕರೆಯುವರು. ಈ ತತ್ವಜ್ಞಾನವು ಆ ಶಿಕ್ಷಣ ಯೋಜನೆಯ ಧ್ಯೇಯವನ್ನು–ಅದು ಸಾಧಿಸಬೇಕಾದುದನ್ನು–ನಿರೂಪಿಸುವದು, ನಿಶ್ಚಿತಗೊಳಿಸುವದು. ಈ ಧ್ಯೇಯವು ಶಕ್ಯವಾಗಿರು

ವದೆ? ಸಮಂಜಸವಾಗಿರುವದೆ? ಎಂಬುದನ್ನು ಸರ್ವಸಮ್ಮತವಾದ ಶಿಕ್ಷಣ ಶಾಸ್ತ್ರವು ಪರೀಕ್ಷಿಸುವದು. ಶಿಕ್ಷಣಕಲೆಯು ಈ ಧ್ಯೇಯವನ್ನು ವ್ಯಾವಹಾರಿಕವಾಗಿ ಮಾಡುವದು, ಶಿಕ್ಷಣದ ವಿಧಾನವನ್ನು ಸರಿಪಡಿಸುವದು. ಶಿಕ್ಷಣದ ಈ ಮೂರು ಅಂಗಗಳು ಮೂಲಶಿಕ್ಷಣಕ್ಕೆ ಹೇಗೆ ಅನ್ವಯಿಸುವವು? ಈ ಹೊಸ ಯೋಜನೆಯ ಗೊತ್ತುಗುರಿಗಳೇನು? ಅದರ ಹೊಸತನ, ಹಿರಿತನಗಳು ಎತ್ತರಲ್ಲಿವೆ? ಇದನ್ನು ತಿಳಿದುಕೊಳ್ಳಲು, ಭಾರತದಲ್ಲಿ ಕಾಲಾನುರೋಧವಾಗಿ ಸಾಗಿಬಂದ ಶಿಕ್ಷಣದ ಪೂರ್ವೇತಿಹಾಸವನ್ನು ಸ್ಥೂಲವಾಗಿ, ಸಂಕ್ಷೇಪವಾಗಿ ಯಾವರೂ ತಿಳಿದುಕೊಳ್ಳುವದು ಸಹಾಯಕವಾಗುವದು.

**ಪೂರ್ವೇತಿಹಾಸ:— ಆಶ್ರಮಶಿಕ್ಷಣ:** ಆರ್ಯರ ಕಾಲದಲ್ಲಿ ಶಿಕ್ಷಣವು ಆಶ್ರಮದ 'ಗುರುಕುಲ'ಗಳಲ್ಲಿ ನಡೆಯುತ್ತಿತ್ತು. ವಿವಿಧ ವಿದ್ಯೆಗಳನ್ನು ಕಲಿಯಬಯಸುವ ವಿದ್ಯಾರ್ಥಿಗಳು ತಮಗೆ ಬೇಕಾದ ಗುರುಕುಲವನ್ನು ಆರಿಸಿಕೊಂಡು ಅಲ್ಲಿ ತಮಗೆ ಬೇಕಾದ ಶಿಕ್ಷಣವನ್ನು ಪಡೆಯುತ್ತಿದ್ದರು. ಹತ್ತುಸಾವಿರ ವಿದ್ಯಾರ್ಥಿಗಳಿಗೆ 'ಅನ್ನದಾನಾದಿ ಪೋಷಣಾತ್' ಅನ್ನ ಹಾಕಿ ವಿದ್ಯೆ ಕಲಿಸುವ ಋಷಿಗೆ '**ಕುಲಪತಿ**' ಯೆಂದು ಕರೆಯುತ್ತಿದ್ದರು. ಶಕುಂತಲೆಯ ಸಾಕುತಂದೆಯಾದ ಕಣ್ವನು ಇಂಥ ಕುಲಪತಿಯಾಗಿದ್ದನು. ಈ ಬಗೆಯ ಆಶ್ರಮಗಳು ಎಲ್ಲ ಕಡೆಗೂ ಹರಡಿದ್ದವು. ನಗರಗಳ 'ಗಲಭೆ'ಯಿಂದ ದೂರವಾದ ವನಾಂತರದ ಏಕಾಂತಪ್ರದೇಶ. **ನಿಸರ್ಗದ ಸುಂದರ ಸನ್ನಿವೇಶ** ಆಶ್ರಮದ **ಪ್ರೀತಿಪೂರ್ಣವಾದ ಕೌಟುಂಬಿಕ ಜೀವನ.** ಆಶ್ರಮದ ಕೆಲಸಕ್ಕೆ ಎಲ್ಲರೂ ನೆರವಾಗಬೇಕು. ಸಮಿತ್ತುಗಳನ್ನು ತರಬೇಕು. ವಲ್ಕಲ—ನಾರುಬಟ್ಟೆಗಳನ್ನು ಸಿದ್ಧಗೊಳಿಸಬೇಕು. ಗೋಧನರಾದ ಗುರುಗಳ ಗೋಸೇವೆ ಮಾಡಬೇಕು. ಗುರುಗಳೊಡನೆ ಕೂಡಿಕೊಂಡು ಹೊಲದಲ್ಲಿ ಬಿತ್ತಿ ಬೆಳೆಯಬೇಕು. ಇದರಿಂದ ಸಹಕಾರ, ಬಂಧುಭಾವ, ಶ್ರಮಜೀವನಗಳು ತಾವಾಗಿಯೇ ವಿದ್ಯಾರ್ಥಿಗಳಲ್ಲಿ ನೆಲಿಸುತ್ತಿದ್ದವು. ಆಶ್ರಮದ ವಿದ್ಯಾರ್ಥಿಗಳಲ್ಲಿ ಬಡವ ಬಲ್ಲಿದರೆಂಬ ಭೇದಭಾವವಿಲ್ಲ. ಋಷಿಕುಮಾರನೂ, ರಾಜಕುಮಾರನೂ ಸಮನಾಗಿಯೇ ಆಶ್ರಮದ ಶಿಸ್ತಿಗೆ, ದಿನಚರ್ಯೆಗೆ ವಿಧೇಯರಾಗಿರುತಿದ್ದರು.

'ಉಪನಯನ' ವೆಂದರೆ ಗುರುವಿನ ಬಳಿಗೆ ಬಾಲಕರನ್ನು ವಿದ್ಯಾಭ್ಯಾಸಕ್ಕಾಗಿ ತೆಗೆದುಕೊಂಡು ಹೋಗುವದು. ಈ ಉದ್ದೇಶವನ್ನು ಬಿಟ್ಟುಕೊಟ್ಟ 'ಉಪ ನಯನ' ವೆಂಬ ಸಂಸ್ಕಾರವು ಇನ್ನೂ ರೂಢವಾಗಿದೆ. ಮಕ್ಕಳಿಗೆ 'ಮಧು ಕರಿ'ಯ ಪ್ರಥಮ ಪಾಠವಾಗಬೇಕಿದ್ದ 'ಮಾತೃಭಿಕ್ಷೆ' ಯೆಂಬ ನಾಟಕವೂ ಉಪನಯನ ಕಾಲದಲ್ಲಿ ಇನ್ನೂ ನಡೆಯುತ್ತಿದೆ. ಮೂಲಶಿಕ್ಷಣವು ಈ ಆಶ್ರ ಮದ ಸ್ವಾವಲಂಬನದ ಶಿಕ್ಷಣವನ್ನೂ, ಸಾಂಘಿಕಜೀವನವನ್ನೂ ತುಂಬಾ ಹೋಲುತ್ತಿದೆ.

**ವಿದ್ಯಾಪೀಠಗಳು** :— ಕಾಲವು ಗತಿಸಿದಂತೆ, ಭಾರತದ ಇತಿಹಾಸವು ಬದಲಿಸಿತು. ಅನೇಕ ಐತಿಹಾಸಿಕ ಕಾರಣಗಳ ಪರಿಣಾಮವಾಗಿ ಪ್ರಾಚೀನ ಕಾಲದ ಆಶ್ರಮಗಳು ಅಡಗಿದವು. ರಾಜಾಶ್ರಯದ ನೆರಳಿನಲ್ಲಿ ಅನೇಕ ವಿದ್ಯಾ ಪೀಠಗಳು ಅಲ್ಲಲ್ಲಿ ತಲೆಯೆತ್ತಿದವು. ಇವುಗಳಲ್ಲಿ ಕೆಲವೊಂದು ಪಾಂಥಿಕ ವಾದವುಗಳು. ವಿಶಿಷ್ಟ ಧಾರ್ಮಿಕ ಪಂಥದ ಅಧ್ಯಯನಕ್ಕಾಗಿ ಇಲ್ಲವೆ ಪ್ರಚಾರ ಕ್ಕಾಗಿ ಇವುಗಳ ಉಪಯೋಗವಾಗುತ್ತಿತ್ತು. ಉಳಿದವುಗಳು ಈಗಿನ ವಿಶ್ವ ವಿದ್ಯಾಲಯದ ಮಾದರಿಯವುಗಳು. ನಲಂದಾ ತಕ್ಷಶಿಲೆಯ ವಿದ್ಯಾಪೀಠಗಳು ಇಂಥವುಗಳಲ್ಲಿ ಕೆಲವು. ಪ್ರಾಚೀನಕಾಲದ ಈ ವಿದ್ಯಾಪೀಠಗಳ ಕೀರ್ತಿಯು ಬಹು ದೂರದ ವರೆಗೆ ಹಬ್ಬಿತ್ತು. ತಮ್ಮ ವಿದ್ಯೆಯಲ್ಲಿ ಅತ್ಯಂತ ನಿಷ್ಣಾತರಾದ ಗುರುಗಳು ಇಲ್ಲಿ ಪಾಠವನ್ನು ಹೇಳಿಕೊಡುತ್ತಿದ್ದರು. ಪರದೇಶಗಳಿಂದ ವಿದ್ವಾಂಸರು ಇವುಗಳಲ್ಲಿ ಹೆಚ್ಚಿನ ಅಭ್ಯಾಸಕ್ಕಾಗಿ ಬರುತ್ತಿದ್ದರು. ಸಾಮಾನ್ಯ ವಾಗಿ ಈ ವಿದ್ಯಾಪಿಠಗಳಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಊಟ ವಸತಿಗಳ ಸೌಕರ್ಯವಿರುತ್ತಿತ್ತು. ಇವುಗಳಲ್ಲಿ ದೊರೆಯುವ ಶಿಕ್ಷಣವು ಕೇವಲ ಬೌದ್ಧಿಕ ವಾದುದು, ತಾತ್ವಿಕವಾದುದು. ಆಶ್ರಮಶಿಕ್ಷಣದಲ್ಲಿ ಕಂಡುಬರುವ ಕೌಟುಂ ಬಿಕ ಜೀವನ, ಸ್ವಾವಲಂಬನ, ಹಾಗೂ ಜೀವನ ಮತ್ತು ಶಿಕ್ಷಣಗಳಲ್ಲಿರುವ ಸಾಮರಸ್ಯವು ಇವುಗಳಲ್ಲಿ ಇಲ್ಲದಂತಾಯಿತು. ಕರ್ನಾಟಕದಲ್ಲಿಯೂ ಇಂಥ ವಿದ್ಯಾಪೀಠಗಳಿದ್ದವೆಂದು ಇತಿಹಾಸದಿಂದ ತಿಳಿಯುವದು. ವಿಜಾಪೂರ ಜಿಲ್ಹೆಯ ಇಂಡಿ ತಾಲೂಕಿನಲ್ಲಿ ಸಾಲೋಟಗಿ ಎಂಬದೊಂದು ಈಗಿನ

ಚಿಕ್ಕಹಳ್ಳಿಯಾಗಿದೆ. ಇಲ್ಲಿ ಹಿಂದೆ ಒಂದು ದೊಡ್ಡ ವಿದ್ಯಾಪೀಠವಿತ್ತೆಂದು ಅಲ್ಲಿ ದೊರೆತ ಶಿಲಾಲಿಪಿಯೊಂದರಿಂದ ತಿಳಿಯುತ್ತಿದೆ. ಈ ವಿದ್ಯಾಪೀಠದಲ್ಲಿ ನೂರಾರು ವಿದ್ಯಾರ್ಥಿಗಳಿಗೆ ಊಟ ವಸತಿಗಳ ವ್ಯವಸ್ಥೆಯಿತ್ತು. ವಿದ್ಯಾನಿಲಯವು ಸಂಪೂರ್ಣವಾಗಿ ಸ್ವಾವಲಂಬಿಯಾಗಿತ್ತು. ಊರಿಗೆ ಬಂದ 'ಲವಣಿಗ' ನು ಅಡಕ್ಕೆ ಉಪ್ಪಿನ ಕಾಣಿಕೆ ಕೊಡುವನು. ಗಾಣಿಗನು 'ಕುಡಿತೆ' ಎಣ್ಣೆಯನ್ನೀಯುವನು. ಇವುಗಳಲ್ಲದೆ ದೊಡ್ಡ ದೇವಾಲಯಗಳ ಸುತ್ತಲಿನ **'ಅಗ್ರಹಾರ' ಗಳೆಲ್ಲವೂ ಅಧ್ಯಾಪನ ಕೇಂದ್ರಗಳಾಗಿರುತ್ತಿದ್ದವು.**

ಆರ್ಯವಂಶದ ರಾಜರ ಅಳಿಗಾಲವಾಯಿತು. ಭಾರತವು ಪರಕೀಯ ದಾಳಿಗಾರರ ಆಳಿಗೆ ಬಲಿಯಾಯಿತು. ದೇಶದ ಸ್ವಾತಂತ್ರ್ಯವು ನಷ್ಟವಾಯಿತು. ಪರಕೀಯರ ಆಳಿಕೆಗೆ ಪ್ರಾರಂಭವಾಯಿತು. ಜನತೆಯ ಶಿಕ್ಷಣವು ಸರಕಾರದ ಹೊಣೆಯೆಂಬ ಭಾವನೆಯಿರಲಿಲ್ಲ. ರಾಜಕೀಯ ಬಂಧನದಿಂದ ಪ್ರಾಚೀನ ಭಾರತೀಯ ಸಂಸ್ಕೃತಿಗೂ ಬಾಧೆತಟ್ಟಿ ನಾಶಹೊಂದಬಹುದಾಗಿತ್ತು. ಆದರೆ ಶ್ರೀ ವಿದ್ಯಾರಣ್ಯರಂತಹ ತೇಜಸ್ವಿ ವಿಭೂತಿಗಳು ಅಲ್ಲಲ್ಲಿ ಉದಯಿಸಿ ಆರ್ಯ ಸಂಸ್ಕೃತಿಯ ನಂದಾದೀಪವನ್ನು ನಂದಿಹೋಗದಂತೆ ನೋಡಿಕೊಂಡರು. ರಾಜಾಶ್ರಯವಿಲ್ಲದ್ದರಿಂದ ವಿದ್ಯಾಪೀಠಗಳೂ, ಅಗ್ರಹಾರಗಳೂ ಮೂಲೆಗುಂಪಾದವು. **ಶಿಕ್ಷಣವು ಮನೆ–ಮಠವನ್ನು ಸೇರಬೇಕಾಯಿತು.** ವರ್ಣಾಶ್ರಮಗಳ ವಿಶುದ್ಧಿಯು ಉಳಿಯದಿದ್ದರೂ, ಉದ್ಯೋಗಗಳು ಕೆಲವೊಂದು ಜಾತಿಗಳ ವೃತ್ತಿ–ಸೊತ್ತುಗಳಾದವು. ಅದರಿಂದ ಅವು ಬೆಳೆಯದೆ ಹೇಗೋ ಉಳಿದುಕೊಂಡವು.

ಬ್ರಿಟಿಶರ ಆಳಿಕೆಯ ಪ್ರಾರಂಭದಲ್ಲಿ ಶಿಕ್ಷಣದ ಸ್ಥಿತಿಗತಿಯು ಭಾರತದಲ್ಲಿ ಈರೀತಿಯಾಗಿ ಶೋಚನೀಯವಾಗಿತ್ತು. ಆದರೆ ಇಂಥ ಪರಿಸ್ಥಿತಿಯಲ್ಲಿಯೂ ಒಂದು ಸಂತೋಷದ ಸಂಗತಿಯೆಂದರೆ— ಈ ದೇಶದಲ್ಲಿ ಎಲ್ಲೆಡೆಗೆ ಸ್ಥಿರವಾಗಿ ನೆಲೆಸಿದ **ಗ್ರಾಮಪಂಚಾಯತಿಗಳು.** ಕಾಲಪುರುಷನ ಹೊಡೆತಕ್ಕೆ ರಾಜರು ಏಳಲಿ, ಬೀಳಲಿ. ರಾಜ್ಯಗಳು ಅಳಿಯಲಿ, ಉಳಿಯಲಿ. ಭಾರತೀಯ ನಾಗರಿಕತೆಯ ಸತ್ವವನ್ನೆಲ್ಲ ಒಳಕೊಂಡ ಈ ಗ್ರಾಮಪಂಚಾಯತಿ

ಗಳು ಅಬಾಧಿತವಾಗಿ, ಅಚ್ಚಳಿಯದೆ ಉಳಿದಿದ್ದವು. ಊರ ಹಿರಿಯರೇ ಪಂಚಾಯತಿಯ ಪ್ರಮುಖರು. ಊರಿನ ಜನರಿಂದ ಅವರಿಗೆ ಅತ್ಯಂತ ಆದರ ಗೌರವಗಳು ದೊರೆಯುತ್ತಿದ್ದವು. ಗ್ರಾಮ ಆಡಳಿತವನ್ನೆಲ್ಲ ಇವರೇ ನೋಡು ತ್ತಿದ್ದರು. ಹಳ್ಳಿಯ ಕೆಲಸಗಳೆಲ್ಲವೂ ಸಹಕಾರದ ರೀತಿಯಲ್ಲಿ ಸಂಘಟಿತವಾಗಿ ಸಾಗುತ್ತಿದ್ದವು. **ಗ್ರಾಮ ಪಂಚಾಯತಿಯೇ ತನ್ನ ಹಳ್ಳಿಯ ಜನತೆಯ ಶಿಕ್ಷಣವನ್ನು ವಹಿಸಿಕೊಳ್ಳುತ್ತಿತ್ತು.** ಬ್ರಿಟಿಶರ ಆಳಿಕೆಯ ದುಷ್ಪರಿಣಾಮ ವಾಗಿ ಈ ಗ್ರಾಮಪಂಚಾಯತಿಗಳ ವಿಚ್ಛೇದವಾಯಿತು. ಅವರು ನಡೆಸು ತ್ತಿದ್ದ ಶಾಲೆಗಳಿಗೂ ಅಳಿಗಾಲವು ಒದಗಿತು. ಜನತೆಯ ಶಿಕ್ಷಣಕ್ಕೆ, ಪರಂಪರಾ ಗತವಾಗಿ ಬಂದ ಸಾಂಸ್ಕೃತಿಕ ಶಿಕ್ಷಣಕ್ಕೆ ಇದರಿಂದ ತುಂಬಾ ಹಾನಿಯೊದಗಿತು. ಗ್ರಾಮಜೀವನದ ಮಹತ್ವದ ಘಟಕನಾದ ಶಿಕ್ಷಕನು ಪ್ರತಿಯೊಂದು ಹಳ್ಳಿ ಯಲ್ಲಿ ಇಲ್ಲದಂತಾಗಿ ನಿರಕ್ಷರತೆಯು ನಿರ್ಬಾಧವಾಗಿ ಬೆಳೆಯತೊಡಗಿತು. ಗ್ರಾಮಪಂಚಾಯತಿಯ ಆಡಳಿತದಲ್ಲಿ ಶಿಕ್ಷಕನಿಗೆ ಶ್ರಮದ ಪ್ರತಿಫಲವಾಗಿ ತೆರಿಗೆಯಿಲ್ಲದ ಭೂಮಿಯು ಉಂಬಳಿಯಾಗಿ ದೊರೆಯುತ್ತಿತ್ತು. ಇಲ್ಲವೆ ಸುಗ್ಗಿಯ ಸಮಯದಲ್ಲಿ ಕಾಳಿನ ರೂಪವಾಗಿ ಕಾಣಿಕೆಯು ಆತನಿಗೆ ಬರುತ್ತಿತ್ತು.

ಮುಂದೆ **ಬ್ರಿಟಿಶರ ಆಳಿಕೆಯು** ಪ್ರಾರಂಭವಾಯಿತು. ಈ ಅವಧಿ ಯಲ್ಲಿ ನಮ್ಮ ದೇಶದ ಶಿಕ್ಷಣದ ಇತಿಹಾಸದಲ್ಲಿ ಮತ್ತೊಂದು ಹಾನಿಕಾರಕ ವಾದ ಕ್ರಾಂತಿಯೊದಗಿತು. ಭಾರತದ ಸಾಹಿತ್ಯ–ಸಂಸ್ಕೃತಿಗಳ ಬಗ್ಗೆ ಎಳ್ಳ ಷ್ಟಾದರೂ ಗೌರವವಿಲ್ಲದ ಮೆಕಾಲೆ ಸಾಹೇಬರು ಇಲ್ಲಿಯ ಶಿಕ್ಷಣಕ್ಕೆ ಹೊಸ ದೊಂದು ಹಾದಿಯನ್ನು ಹಾಕಿಕೊಟ್ಟರು. ಆಡಳಿತದ ಅನುಕೂಲತೆಗಾಗಿ 'ಕಾರಕೂನ' ರನ್ನೂ, ಬ್ರಿಟಿಶರ ಆಚಾರವಿಚಾರಗಳನ್ನು ಅನುಕರಿಸುವ 'ಕಾಳಾಸಾಹೇಬ' ರನ್ನೂ ನಿರ್ಮಾಣಮಾಡುವದೆ ಮೆಕಾಲೆಯವರ ಶಿಕ್ಷಣ ಯೋಜನೆಯ ಪ್ರಯೋಜನವಾಗಿತ್ತು. ಭಾರತವು ಸ್ವತಂತ್ರವಾಗುವ ವರೆಗೆ, ಇದೇ ಧ್ಯೇಯ, ಇದೇ ಧೋರಣೆಯಿಂದಲೇ ಬ್ರಿಟಿಶರು ಇಲ್ಲಿಯ ಶಿಕ್ಷಣವನ್ನು ಸಾಗಿಸಿದ್ದರು. **ಶಾಲೆ ಕಾಲೇಜುಗಳೆಲ್ಲವೂ ಈಬಗೆಯ ಕಾರಕೂನರನ್ನು, ಏತದ್ದೇಶೀಯ 'ಸಾಹೇಬ' ರಾದ ಕೆಳದರ್ಜೆಯ ಅಧಿಕಾರೀವರ್ಗ**

**ಪವರನ್ನು ಉತ್ಪಾದಿಸುವ ಕಾರಖಾನೆಗಳಾದವು.** ಪಠ್ಯಪುಸ್ತಕಗಳ 'ಗಿಳಿ ಪಾಠ' ಮಾಡಬೇಕು. ಪರೀಕ್ಷೆಯಲ್ಲಿ ಹೇಗಾದರೂ ಪಾಸಾಗಬೇಕು. ಹೆಚ್ಚು ಕಡಿಮೆಯಾಗಿ ಒಂದು ಸರಕಾರೀ ನೌಕರೀ ದೊರಕಿಸಬೇಕು. ಇದಕ್ಕಿಂತಲೂ ಹೆಚ್ಚಿನ ಹಂಬಲವು ಕಲಿಯುವವರಿಗೂ ತಂದೆತಾಯಿಗಳಿಗೂ ಕೂಡಿಯೇ ಇರಲಿಲ್ಲ.

ಹೀನವಾದ ಉದ್ದೇಶ ಸಾಧನೆಗಾಗಿ ತಪ್ಪುದಾರಿಯಿಂದ ಸಾಗಿದ ಈ ವಿದೇಶೀ ಶಿಕ್ಷಣ ಪದ್ಧತಿಯಿಂದ ಭಾರತದ ಜನತೆಗೆ ಹೇಳಲಾರದಷ್ಟು ಹಾನಿಯೊದಗಿತು. ಕೆಲವೊಂದು ಅನರ್ಥಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದು :—

೧) **ಈ ಶಿಕ್ಷಣವು ಏಕಾಂಗಿಯಾಗಿತ್ತು.** ಬುದ್ಧಿವಿಕಾಸಕ್ಕೆ ಮಾತ್ರ ಇದರಲ್ಲಿ ಅಲ್ಪಶಃ ಎಡೆಯಿತ್ತು. ನಿಜವಾದ ಶಿಕ್ಷಣವು ಮಕ್ಕಳ ಸರ್ವತೋಮುಖವಾದ ವಿಕಾಸವನ್ನು ಸಾಧಿಸಬೇಕು. ಸಾಕ್ಷರತೆಯಾಗಲಿ, ಇಲ್ಲವೆ ಕೆಲವೊಂದು ಅನುಪಯುಕ್ತ ವಿಷಯಗಳ ಸ್ಥೂಲಪರಿಚಯವಾಗಲಿ 'ಶಿಕ್ಷಣ'ವಾಗಲಾರದು.

೨) ಇದು ಕೇವಲ **ಪರೀಕ್ಷಾ—ಪ್ರಧಾನವಾಗಿತ್ತು.** ವಿಷಯಗಳನ್ನು ಗೊತ್ತುಪಡಿಸುವಲ್ಲಿ, ಪಠ್ಯಪುಸ್ತಕಗಳನ್ನು ನಿಯಮಿಸುವದರಲ್ಲಿ, ಕಲಿಸುವ ವಿಧಾನದಲ್ಲಿ, ವಿದ್ಯಾರ್ಥಿಗಳ ಬೆಲೆಕಟ್ಟುವದರಲ್ಲಿ ಎಲ್ಲವನ್ನೂ ಪರೀಕ್ಷೆಯ ದೃಷ್ಟಿಯಿಂದಲೇ ಮಾಡುತ್ತಿದ್ದರು. ಪರೀಕ್ಷೆಯೇ ಪ್ರಧಾನ. ಅದೇ 'ಧ್ಯೇಯ', ಉಳಿದೆಲ್ಲವೂ ಅದಕ್ಕೆ ಸಾಧನ ಮಾತ್ರ.

೩) **ಒಂದು ರಾಷ್ಟ್ರದ ಶಿಕ್ಷಣಕ್ರಮವು ಅಲ್ಲಿಯ ಜನಾಂಗದ ಆಶೆ—ಆಕಾಂಕ್ಷೆಗಳನ್ನು ಎತ್ತಿ ತೋರಿಸುವ ಕೈಗನ್ನಡಿಯಂತೆ.** ಸರಿಯಾದ ರಾಷ್ಟ್ರೀಯ ಶಿಕ್ಷಣದ ಬೇರುಗಳು ಆ ರಾಷ್ಟ್ರದ ಪ್ರಾಚೀನ ಇತಿಹಾಸ, ಸಾಹಿತ್ಯ ಹಾಗೂ ಬಹುಮುಖವಾದ ಸಂಸ್ಕೃತಿಗಳಲ್ಲಿ ಒಳಸೇರಿ ತನ್ನ ಬೆಳವಣಿಗೆಗೆ ಬೇಕಾದ ಜೀವರಸವನ್ನೂ ಸತ್ವ ಶಕ್ತಿಗಳನ್ನೂ ತೆಗೆದುಕೊಳ್ಳುವದು. **ಪಾಶ್ಚಾತ್ಯ ಶಿಕ್ಷಣವು ನಮ್ಮ ದೇಶಕ್ಕೆ ಎಲ್ಲ ರೀತಿಯಿಂದಲೂ 'ಪರ**

**ಕೀಯು' ವಿದೆ.** ಅದು ಭಾರತದ ಪ್ರಾಚೀನ ನಾಗರಿಕತೆಯನ್ನು ನಿರ್ಮೂಲ ಗೊಳಿಸಲು ಹವಣಿಸಿತು. ಇಲ್ಲಿಯ ಸಾಹಿತ್ಯ ಸಂಸ್ಕೃತಿಗಳನ್ನು ಹೀಯಾಳಿಸುವ ಮನೋವೃತ್ತಿಯನ್ನು ಹುಟ್ಟಿಸಿತು. ಇದರಿಂದ ಅದು ಇಲ್ಲಿ ಫಲಿಸಲಿಲ್ಲ. ಭಾರತದ ಜನಜೀವನಕ್ಕೆ ಹೊಂದಿಕೊಳ್ಳಲಿಲ್ಲ. ಶಾಲೆ–ಮನೆಗಳಿಗೆ ಸಾಮ್ಯತೆ, ಸಮಾನತೆ, ಸಂಪರ್ಕಗಳೇ ಇರಲಿಲ್ಲ. ಮನೆಯಲ್ಲಿ ಆಡುವ ಭಾಷೆ ಬೇರೆ–ಶಾಲೆಯಲ್ಲಿ ಕಲಿಯುವ ಭಾಷೆ ಬೇರೆ, ಕಲಿಯುವ ವಿಷಯಗಳೊಂದು– ಮಾಡುವ ಕೆಲಸ ಮತ್ತೊಂದು.

೪) **ಪಾಶ್ಚಾತ್ಯ ಶಿಕ್ಷಣವು ನಮ್ಮ ಸಮಾಜದ ಒಗ್ಗಟ್ಟನ್ನು ಮುರಿದುಬಿಟ್ಟಿತು.** ಹೊಸ ಪಂಗಡಗಳನ್ನು ಹುಟ್ಟಿಸಿತು. ಕಲಿತವರು ಕಲಿಯದವರು ಎಂಬ ಎರಡು ನೂತನ 'ವರ್ಗ'ಗಳು ಸಮಾಜದಲ್ಲಿ ಉಂಟಾದವು. ಕಲಿತವರು ಕಲಿಯದವರಲ್ಲಿ ಜ್ಞಾನ ಪ್ರಸಾರವನ್ನು ಕೈಕೊಳ್ಳಲಿಲ್ಲ.– ಹೀಗೇನೋ ಉದ್ದೇಶವಿದ್ದಿತಂತೆ. ಆದರೆ ಅವರು ತಮ್ಮ ವಿದ್ಯೆಯ 'ಪ್ರಭಾವ'ದಿಂದ ಕಲಿಯದವರನ್ನು ಯಾವಾಗಲೂ ತಮ್ಮ ಕೈ-ಹಿಡಿತದಲ್ಲಿ ಇಟ್ಟುಕೊಳ್ಳಲು ಯತ್ನಿಸುವವರು, ಅವರ ಶೋಷಣವನ್ನು ಅನೇಕಮುಖವಾಗಿ ಯುಕ್ತಿ ಪ್ರಯುಕ್ತಿಗಳಿಂದ ಮಾಡುವವರು.

೫) **ಈ ಶಿಕ್ಷಣದಲ್ಲಿ ಹೃದಯ ಸಂಸ್ಕಾರಕ್ಕೆ ಸ್ಥಾನವೇ ಇರಲಿಲ್ಲ.** ಹೃದಯಧರ್ಮವಾದ ವಿವಿಧ ಭಾವಗಳೂ ಭಾವನೆಗಳೂ ಪ್ರಬಲಶಕ್ತಿಯುಳ್ಳವುಗಳು. ಶಿಕ್ಷಣವು ಅವುಗಳನ್ನು ಕಡೆಗಣಿಸಲಾಗದು. ಈ ಭಾವಗಳ ಸರಿಯಾದ ಸಂಸ್ಕರಣವು ಶಿಕ್ಷಣದ ಕಾರ್ಯವಾಗಿದೆ. ಇದನ್ನು ಸಾಧಿಸುವ ಶಿಕ್ಷಣವು ಸಾಂಸ್ಕೃತಿಕ ಶಿಕ್ಷಣವು. ಅಂತೆಯೇ ಮೂಲ ಶಿಕ್ಷಣವನ್ನು ಸಾಂಸ್ಕೃತಿಕ ಶಿಕ್ಷಣವೆಂದು ಕರೆಯುವರು. ಪಾಶ್ಚಾತ್ಯ ಶಿಕ್ಷಣದಿಂದ 'ಎಲ್ಲವೂ ತನಗಾಗಿ' ಎಂಬ ಪ್ರವೃತ್ತಿಯಿಂದ ಸ್ವಾರ್ಥ–ಸ್ಪರ್ಧೆಗಳಂತಹ ಕೀಳು ಭಾವನೆಗಳಿಗೆ ಪುಟದೊರೆಯುತ್ತಿತ್ತು. ವ್ಯಕ್ತಿಗೆ–ರಾಷ್ಟ್ರಕ್ಕೆ ಹಿತಕರವಾದ ಭಾವನೆಗಳನ್ನು ಬೆಳೆಯಿಸುವ ಹವ್ಯಾಸವು ಅದಕ್ಕಿರಲಿಲ್ಲ.

೬) **ಪಾಶ್ಚಾತ್ಯ ಶಿಕ್ಷಣವು ಇಲ್ಲಿಯ ಜನಜೀವನಕ್ಕೆ ಹೊಂದಿ**

**ಕೊಳ್ಳಲಿಲ್ಲ.** ಸಾಮಾನ್ಯಜನತೆಗೆ ಅದರಲ್ಲಿ ಆಸ್ಥೆಯುಂಟಾಗಲಿಲ್ಲ. ಹಳ್ಳಿಯ ಜನರಂತೂ ಅದರಿಂದ ಪ್ರಯೋಜನ ಪಡೆಯುದೆ ಬಹುದೂರ ಹಿಂದೆ ಉಳಿದರು. ಹಳ್ಳಿಯ ಶಾಲೆಗಳಲ್ಲಿ ಮೊದಲನೆಯ ವರ್ಗದಿಂದ ನಾಲ್ಕನೆಯ ವರ್ಗವನ್ನು ಮುಟ್ಟುವದರೊಳಗಾಗಿ ನೂರಕ್ಕೆ ನಾಲ್ಕರಷ್ಟು ಮಾತ್ರ ವಿದ್ಯಾರ್ಥಿಗಳು ಉಳಿಯುವರು. ಹೆಣ್ಣುಮಕ್ಕಳ ಶಿಕ್ಷಣವಂತೂ ಇದಕ್ಕೂ ಹೆಚ್ಚು ಶೋಚನೀಯವಾಗಿದೆ. ಅಲ್ಪಸ್ವಲ್ಪ ಕಲಿತವರು ಕೂಡ ಓದು ಬರೆಹಗಳ ಬಳಿಕೆಯಿಲ್ಲದೆ ಕಲಿತದ್ದಷ್ಟನ್ನೂ ಮರೆತುಬಿಡುವರು. **ಇದರಿಂದ ನಿರಕ್ಷರತೆಯು ದೇಶದಾದ್ಯಂತ ಭದ್ರವಾಗಿ ನೆಲಸುವಂತಾಗಿದೆ.** ಸಾರ್ವಜನಿಕ ಹಣದ ಅಪವ್ಯಯವು ಅಬಾಧಿತವಾಗಿ ಸಾಗಿದೆ. ಮೂಲಶಿಕ್ಷಣವು ಸ್ವಾವಲಂಬನ ಶಿಕ್ಷಣವು. ಶಿಕ್ಷಣದ ವೆಚ್ಚವು ಮೊದಲು ಅಂಶತಃ, ಮುಂದೆ ಹೆಚ್ಚು ಪ್ರಮಾಣದಲ್ಲಿ ಬಾಲಕರ ಗಳಿಕೆಯಿಂದಲೆ ನಿಷ್ಪನ್ನವಾಗಬೇಕೆಂದು ಯೋಜಕರ ಮನೀಷೆಯಾಗಿದೆ.

೭) **ವಿಷಯಪ್ರಧಾನವಾದ ಹಿಂದಿನ ಶಿಕ್ಷಣದಲ್ಲಿ ವಿವಿಧ ವೃತ್ತಿ ಶಿಕ್ಷಣದ ವಿಚಾರವೇ ಇರಲಿಲ್ಲ.** ಇದರಿಂದ ಬಾಲಕರಿಗೆ ಸಹಜವಾದ ಕೃತಿಪ್ರೇಮವು ಕಮರಿಹೋಗುತ್ತಿತ್ತು. ಗಿಳಿಯೋದಿನ ಪರೀಕ್ಷೆಗಳನ್ನು ಪೂರ್ತಿಗೊಳಿಸಿ, ಜೀವನದ ರಂಗವನ್ನು ಪ್ರವೇಶಿಸುವ ಯುವಕರಿಗೆ ನೌಕರಿಯೇ ಗತಿ. ಅದು ದೊರೆಯದಿದ್ದರೆ ನಿರಾಶೆ, ಅಸಹಾಯತೆ. ನೌಕರಿಗಾಗಿಯೇ ಕಲಿಯುವವರ ಸಂಖ್ಯೆ ಮಿತಿಮೀರಿ ಬೆಳೆಯತೊಡಗಿದೆ. ಇತ್ತ ಸರಕಾರದ ನೌಕರಿಗಳು ಮಾತ್ರ ಪರಿಮಿತವಾದವುಗಳು. ಎಲ್ಲರಿಗೂ ಹೇಗೆ ದೊರೆಯಬೇಕು? ಇದರಿಂದ ಕಲಿತವರಲ್ಲಿ ನಿರುದ್ಯೋಗತನವು ದಿನದಿನಕ್ಕೆ ಹೆಚ್ಚಾಗಹತ್ತಿದೆ. ಮೂಲಶಿಕ್ಷಣವನ್ನು ಮುಗಿಸಿದ ಯುವಕನು ಒಂದು ಮೂಲೋದ್ಯೋಗದಲ್ಲಿ ತಕ್ಕಮಟ್ಟಿಗೆ ತರಬೇತನ್ನು ಪಡೆದಿರುವನು. ಇದು ಅವನ ಚರಿತಾರ್ಥಕ್ಕೆ ಬೆಳೆಸಿಕೊಂಡರೆ ಒಳ್ಳೇ ಸಾಧನವಾಗಬಲ್ಲದು. ನೌಕರಿಯ ದಾಸ್ಯವೃತ್ತಿಯು ವ್ಯಕ್ತಿಯ ಎಲ್ಲ ಬಗೆಯ ಅವನತಿಗೆ ಕಾರಣವಾಗಿರುವದು. ಈ ಪರಿಸ್ಥಿತಿಯನ್ನು ಮೂಲಶಿಕ್ಷಣವು ಕ್ರಮೇಣ ಪರಿವರ್ತಿಸುವದು. ಮೂಲಶಿಕ್ಷಣವನ್ನು ಪಡೆದ ಯುವಕರು ಒಳ್ಳೇ ಸದ್ಗುಣಿಗಳಾದ, ಸ್ವಾಭಿಮಾನಿಗಳಾದ ನಾಗರಿಕರಾಗುವರು.

**ರಾಷ್ಟ್ರೀಯ ಶಿಕ್ಷಣ :—**

ಪಾಶ್ಚಾತ್ಯ ಶಿಕ್ಷಣದ, ಹಾಗೂ ನಾಗರಿಕತೆಯ 'ಹೊರಮಿಂಚಿ' ಗೆ ಹಲವರು ಮನಸೋತರು. ಮಕ್ಕಳ ಮನೋವೃತ್ತಿಯನ್ನು ರೂಪುಗೊಳಿಸುವ ಶಿಕ್ಷಣವು ತಮಗೆ ಪ್ರತಿಕೂಲವಾಗದಂತೆ ಬ್ರಿಟಿಶ ಮುತ್ಸದ್ದಿಗಳು ದಕ್ಷತೆ ವಹಿಸಿದರು. **ಭಾರತದ ಬೆಳೆಯುವ ಮಕ್ಕಳಲ್ಲಿ ಭಾರತದ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಕೀಳುಭಾವನೆಯನ್ನು ಬೆಳೆಸುವದು, ತಮ್ಮ ಆಳಿಕೆಯನ್ನು ಭದ್ರಗೊಳಿಸಲು ಮೊದಲನೆಯ ಹೆಜ್ಜೆಯೆಂದು ಅವರು ಭಾವಿಸಿದರು.** ಅವರ ಈ ಉದ್ದೇಶವು ಬಹುಮಟ್ಟಿಗೆ ಈಡೇರಿತೆಂದು ಹೇಳಬಹುದು. 'ಬ್ರಿಟಿಶ ಆಳಿಕೆಯ ಲಾಭ' ಗಳನ್ನು ಬಿನ್ ಇಯತ್ತೆಯಿಂದ ಬಿ. ಎ. ದ ವರೆಗೆ ಹೆಮ್ಮೆಯಿಂದ ಬಾಯಿಪಾಠ ಮಾಡಿ ಪರೀಕ್ಷೆಯಲ್ಲಿ ಒಪ್ಪಿಸುವ ಯುವಕರು ಬ್ರಿಟಿಶರ ಆಳಿಕೆಗೆ ಆಧಾರಸ್ತಂಭರಾದರು. ಆದರೆ ಆಂಗ್ಲ ಶಿಕ್ಷಣ ಪದ್ಧತಿಯಲ್ಲಿ ಹುದುಗಿದ ದಾಸ್ಯದ ಬೀಜಗಳನ್ನು ದೇಶಹಿತೈಷಿಗಳಾದ ಸುವಿಚಾರಿಗಳು ಮೊದಲಿನಿಂದಲೇ ಕಂಡುಹಿಡಿದರು. ಭಾರತದ ದಾಸ್ಯ ವಿಮೋಚನೆಗಾಗಿ ನಡೆದ ಪ್ರಯತ್ನಗಳೆಲ್ಲ ರಾಷ್ಟ್ರೀಯ ಶಿಕ್ಷಣಕ್ಕೆ ಪುಟ ಕೊಟ್ಟವು. ಬಂಗಾಲದ ವಿಭಾಗವು ಬಂಗಾಲಿಗಳ ಭಾವನೆಯನ್ನು ಕೆರಳಿಸಿತು. ಬಂಗಾಲದ ಆಂದೋಲನವು ತೋರಿಕೆಯಲ್ಲಿ 'ಪ್ರಾಂತೀಯ' ವೆಂದು ಹೇಳಬಹುದಾದರೂ, ನಿಜವಾಗಿ ಅದು 'ರಾಷ್ಟ್ರೀಯ' ವಾಗಿತ್ತು. ಸ್ವದೇಶಿ ಮತ್ತು ಬಹಿಷ್ಕಾರಗಳ ತತ್ವಗಳು ಶಿಕ್ಷಣಕ್ಷೇತ್ರದಲ್ಲಿ ಪ್ರವೇಶಿಸಿದವು. ದೇಶವಿಘಾತುಕವಾದ ವಿದೇಶೀಯ ಶಿಕ್ಷಣಕ್ಕೆ 'ಬಹಿಷ್ಕಾರ' ಹಾಗೂ ತನ್ನ ನಾಡು ನುಡಿಗಳ ಬಗ್ಗೆ ಅಭಿಮಾನವನ್ನೂ ಆಸಕ್ತಿಯನ್ನೂ ಹುಟ್ಟಿಸುವ 'ಸ್ವದೇಶಿ'–ರಾಷ್ಟ್ರೀಯ ಶಿಕ್ಷಣವು ಅವಶ್ಯವಾದವುಗಳೆಂದು ಆಗಿನ ಮುಂದಾಳುಗಳು ಕಂಡುಹಿಡಿದರು. ಅಲ್ಲಲ್ಲಿ ರಾಷ್ಟ್ರೀಯ ಶಾಲೆಗಳು ಪ್ರಾರಂಭವಾದವು. ಬಂಗಾಲದಲ್ಲಿ ಬ್ರಹ್ಮೋ ಸಮಾಜದವರು, ಪಂಜಾಬದಲ್ಲಿ ಆರ್ಯ ಸಮಾಜದವರು ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳನ್ನೂ ಗುರುಕುಲಗಳನ್ನೂ ಸ್ಥಾಪಿಸಿದರು. ಮದ್ರಾಸದಲ್ಲಿ ಥಿಯಾಸಫಿ ಪಂಥದವರೂ ಈ ಕಾರ್ಯವನ್ನು ಕೈಕೊಂಡರು. ಅಲ್ಲಲ್ಲಿ ನೆಟ್ಟ ರಾಷ್ಟ್ರೀಯ ಶಿಕ್ಷ

ಬಿಟ್ಟ ಈ ಸಸಿಗಳಿಗೆ ಸರಕಾರವು ನೆರವಿನ ನೀರುಣಿಸಲಿಲ್ಲ. ನೌಕರಿ–ಸವನಾಗರಿಕತೆಗಳಿಗೆ ಮರುಳಾದ ಜನತೆ ಇವುಗಳಲ್ಲಿ ಆಸ್ಥೆ ವಹಿಸಲಿಲ್ಲ. ಇದರಿಂದ ಆಗಿನ ಆಂದೋಲನದ ಅಂಗವಾಗಿ ಅಂದು ಸ್ಥಾಪಿಸಿದ ಇಂಥ ಅನೇಕ ಸಂಸ್ಥೆಗಳು ಅಲ್ಪಾಯುಷಿಗಳಾದವು. ಸನ್ ೧೯೦೬ ರಲ್ಲಿ ಕಲಕತ್ತೆಯಲ್ಲಿ ಕೂಡಿದ ರಾಷ್ಟ್ರೀಯ ಸಭೆಗೆ ದಿವಂಗತ ದಾದಾಭಾಯಿ ನೌರೋಜಿಯವರು ಅಧ್ಯಕ್ಷರು. ಅವರು 'ಸ್ವರಾಜ್ಯ' ದ ಧ್ಯೇಯವನ್ನು ಮೊದಲು ಸಾರಿದರು. ಅದೇ ಸಭೆಯಲ್ಲಿ 'ರಾಷ್ಟ್ರೀಯ ಶಿಕ್ಷಣ' ದ ಚರ್ಚೆಯಾಗಿ ಅದುವರೂ ಸ್ವರಾಜ್ಯದ ಸಾಧನವೆಂದು ನಿರ್ಣಯವಾಯಿತು. ಈ ರಾಷ್ಟ್ರೀಯ ಶಿಕ್ಷಣಕಾರ್ಯದಲ್ಲಿ ಪಂಜಾಬದಲ್ಲಿ ಶ್ರೀ. ಲಾಲಾ ಲಜಪತರಾಯರು, ಬಂಗಾಲದಲ್ಲಿ ಶ್ರೀ ಅರವಿಂದ ಘೋಷರು, ಮದ್ರಾಸದಲ್ಲಿ ಶ್ರೀಮತಿ ಆನಿಬೆಝಂಟರು ಮತ್ತು ಮುಂಬಯಿ ಪ್ರಾಂತದಲ್ಲಿ ಶ್ರೀ ಲೋಕಮಾನ್ಯ ಟಿಳಕರು ಆಸ್ಥೆವಹಿಸಿ ಅದರ ಪ್ರಚಾರ ಮಾಡಿದರು. ಎಲ್ಲ ಕಡೆಯಲ್ಲಿಯೂ ರಾಷ್ಟ್ರೀಯ ಶಾಲೆಗಳು ಪ್ರಾರಂಭವಾದವು. ಕರ್ನಾಟಕದ ಅನೇಕ ಸ್ಥಳಗಳಲ್ಲಿಯೂ ಇಂಥ ರಾಷ್ಟ್ರೀಯ ಶಾಲೆಗಳು ಸ್ಥಾಪಿತವಾದವು. ಸರಕಾರದ ವಿಘಾತುಕವಾದ ನಿಯಂತ್ರಣವನ್ನು ತೆಗೆದೊಗೆದು ಅಂದಿನ **ತರುಣರಲ್ಲಿ ರಾಷ್ಟ್ರೀಯ ಭಾವನೆಯನ್ನು ಹೊತ್ತಿಸುವದೇ ಇವುಗಳ ಉದ್ದೇಶವಾಗಿತ್ತು.** ಆಳರಸರು 'ಸರಸ್ವತಿಯನ್ನು ಸರಕಾರದ ದಾಸಿ' ಯನ್ನಾಗಿ ಮಾಡಿರುವರೆಂದು ಶ್ರೀ ಲೋಕಮಾನ್ಯರು ಅಂದು ನುಡಿದಿರುವರು. ಹೀಗೆ ಸ್ಥಾಪಿತವಾದ ಅಂದಿನ ರಾಷ್ಟ್ರೀಯ ಶಾಲೆಗಳಲ್ಲಿ ಶಿಕ್ಷಣದ ವಿಷಯ ವಿಧಾನಗಳಲ್ಲೇನೂ ವಿಶೇಷವಾದ ವ್ಯತ್ಯಾಸವಿರಲಿಲ್ಲ. ಆದರೆ **ಶಿಕ್ಷಕರು ಉಜ್ವಲವಾದ ರಾಷ್ಟ್ರೀಯ ಮನೋವೃತ್ತಿಯವರು. ಕಲಿಯುವ ಮಕ್ಕಳಲ್ಲಿಯೂ ಈ ಮನೋವೃತ್ತಿಯನ್ನೂ, ಸ್ವದೇಶಪ್ರೀತಿ, ಸ್ವಜನಾಭಿಮಾನಗಳನ್ನೂ ಹೊತ್ತಿಸಲು ಅವರು ಹೆಣಗುವವರು.** ಇಂಥ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಲ್ಲಿ ಸಂಸ್ಕಾರವನ್ನು ಪಡೆದವರೇ ಮುಂದಿನ ಸ್ವಾತಂತ್ರ್ಯ ಚಳವಳಿಯಲ್ಲಿ ಹೆಚ್ಚಾಗಿ ಧುಮುಕಿದರೆಂಬುದು ಕಂಡುಬರುವದು. ಆದರೆ ಪರಕೀಯ ಸರಕಾರದ ಪ್ರಬಲವಾದ ದಬ್ಬಾಳಿಕೆಯನ್ನು ಎದುರಿಸಲು

ಅವುಗಳು ಸಮರ್ಥವಾಗಿರಲಿಲ್ಲ. ಅಲ್ಪಾವಧಿಯಲ್ಲಿ ಒಂದೆರಡನ್ನು ಬಿಟ್ಟು ಉಳಿದವುಗಳು ಅಳಿದುಹೋದವು. ಸನ್ ೧೯೨೧ ರಲ್ಲಿ ಗಾಂಧೀಜಿಯವರು ಅಸಹಕಾರದ ಆಂದೋಲನವನ್ನು ಪ್ರಾರಂಭಿಸಿದರು. ಸರಕಾರದ ಶಿಕ್ಷಣ ಸಂಸ್ಥೆಗಳಿಗೆ ಶಾಲೆಕಾಲೇಜುಗಳಿಗೆ 'ಬಹಿಷ್ಕಾರ' ಹಾಕುವದು ಅಸಹಕಾರದ ಒಂದು ಅಂಗವಾಗಿತ್ತು. ಇದರಿಂದ ಸರಕಾರದ ಶಿಕ್ಷಣ ಸಂಸ್ಥೆಗಳಿಗೆ ಶರಣು ಹೊಡೆದು ಸಾವಿರಾರು ವಿದ್ಯಾರ್ಥಿಗಳೂ, ಎಷ್ಟೋ ಶಿಕ್ಷಕರೂ ಕೂಡ ಹೊರಬಿದ್ದರು. ರಾಷ್ಟ್ರೀಯ ಶಿಕ್ಷಣವು ಮತ್ತೆ ವಿಧಾಯಕ ಕಾರ್ಯಕ್ರಮದ ಅಂಗವಾಯಿತು. ಎಲ್ಲ ಕಡೆಯಲ್ಲಿಯೂ ರಾಷ್ಟ್ರೀಯ ಶಾಲೆಗಳು ಸ್ಥಾಪಿತವಾದವು. ಗುಜರಾಥದಲ್ಲಿ, ಮಹಾರಾಷ್ಟ್ರದಲ್ಲಿ, ಕರ್ನಾಟಕದ ಧಾರವಾಡದಲ್ಲಿ ರಾಷ್ಟ್ರೀಯ ವಿದ್ಯಾಪೀಠಗಳು ತಲೆಯೆತ್ತಿದವು. ಬೌದ್ಧಿಕ ಶಿಕ್ಷಣದ ಜೊತೆಗೆ ವ್ಯವಸಾಯ ಶಿಕ್ಷಣವು ಅಭ್ಯಾಸಕ್ರಮದಲ್ಲಿ ಸೇರ್ಪಡೆಯಾಯಿತು. ತಕಲಿ, ರಾಟೆಗಳಿಂದ ನೂಲು ತೆಗೆಯುವದು, ನೇಯುವದು ಇವುಗಳಿಗೆ ಮಹತ್ವದ ಸ್ಥಾನವಿದ್ದಿತು. ಸ್ವಾವಲಂಬನದ ಪ್ರಥಮ ಪಾಠವು ಅಂದಿನ ವಿದ್ಯಾರ್ಥಿಗಳಿಗೆ ಇಲ್ಲಿ ದೊರೆತಿತು. ಗುರು ಶಿಷ್ಯರಲ್ಲಿ ಪ್ರೇಮಾದರಗಳ ನಿಕಟಸಮಾಗಮವು ಇಲ್ಲಿ ತೋರುತ್ತಿತ್ತು. ಹಿಂದಿನ ಆಶ್ರಮ ಜೀವನಕ್ಕೆ ಮತ್ತೆ ಜೀವದಾನ ದೊರೆಯುವಂತಿತ್ತು. ಆದರೆ **ಸ್ವಾತಂತ್ರ್ಯದ ಅಂದೋಲನದ ಪ್ರಬಲವಾದ ತೆರೆಗಳೊಡನೆ ಈ ಸಂಸ್ಥೆಗಳು ಮುಳುಗಿ ಏಳುತ್ತಿದ್ದವು.** ಇಲ್ಲಿಯ ಶಿಕ್ಷಕರೂ, ವಿದ್ಯಾರ್ಥಿಗಳೂ ಅವುಗಳಲ್ಲಿ ಹೆಚ್ಚಾಗಿ ಭಾಗವಹಿಸುವವರು. ಇದರಿಂದ ಇವುಗಳಿಗೆ ಸ್ಥಿರತೆ ಭದ್ರತೆಗಳಿರಲಿಲ್ಲ. ೧೯೩೭ ರಲ್ಲಿ ಪ್ರಾಂತೀಯ ಸ್ವಾಯತ್ತತೆ ದೊರೆತಿತು. ಶಿಕ್ಷಣವು ಲೋಕನಿಯುಕ್ತ ಮಂತ್ರಿಗಳಿಗೆ ಸ್ವಾಯತ್ತವಾದ ವಿಷಯವಾಯಿತು. ಜನತೆಯ ಶಿಕ್ಷಣದ ವಿಷಯದಲ್ಲಿ ಶಿಕ್ಷಣ ಮಂತ್ರಿಗಳಿಗೆ ಮಾರ್ಗದರ್ಶನ ಮಾಡಲು ಮಹಾತ್ಮಾಜಿಯವರು ವಿಚಾರಿಸಬೇಕಾಯಿತು. ಅವರ ವಿಚಾರಗಳ ಮೂರ್ತಸ್ವರೂಪವೇ ಇಂದು ನಮ್ಮೆದುರಿಗಿರುವ ಮೂಲಶಿಕ್ಷಣ ಯೋಜನೆಯಾಗಿದೆ.

## —: ಮೂಲಶಿಕ್ಷಣ :—

**ಮೂಲಶಿಕ್ಷಣವು, ಗಾಂಧೀಜಿಯವರು ರಾಷ್ಟ್ರಕ್ಕೆ ಕೊಟ್ಟ ಕೊನೆಯ ಹಾಗೂ ಶ್ರೇಷ್ಠತಮವಾದ ಕಾಣಿಕೆ.** ತಮ್ಮ ಜೀವನವು ಸತ್ಯಸಿದ್ಧಿಗಾಗಿ ನಡೆಸಿದ ಪ್ರಯೋಗದ ಪರಂಪರೆಯೆಂದು ಅವರು ಹೇಳಿರುವರು. ಅವರ ಸತ್ಯಾನ್ವೇಷಣದ ಈ ಪ್ರಯೋಗಗಳು ಬಹುಮುಖವಾಗಿವೆ. ಸೃಷ್ಟಿಕರ್ತನಂತೆ ಗಾಂಧೀಜಿಯವರ ವ್ಯಕ್ತಿತ್ವವು ಚತುರ್ಮುಖವಾಗಿದೆ. ಸತ್ಯಾಗ್ರಹವು ಒಂದು ಮುಖ; ಹರಿಜನೋದ್ಧಾರವು ಇನ್ನೊಂದು; ವಿವಿಧ ವಿಧಾಯಕ ಕಾರ್ಯಕ್ರಮವು ಮತ್ತೊಂದು; ವೃತ್ತಿಮೂಲಶಿಕ್ಷಣವು ನಾಲ್ಕನೆಯದು. ಈ ಚತುರ್ವಿಧವಾದ ಕಾರ್ಯಕ್ರಮದಲ್ಲಿ ಅವರ ಜೀವನದ ರಹಸ್ಯವನ್ನು ತತ್ವಜ್ಞಾನವನ್ನು ಕಾಣುವಂತಿದೆ. ಇವೆಲ್ಲವುಗಳಲ್ಲಿಯೂ ಅವರು ಸತ್ಯೋಪಾಸನೆಯನ್ನು ಮಾಡುತ್ತಿದ್ದರು. ಸತ್ಯದಲ್ಲಿಯೇ ದೇವನನ್ನು ಅರಸುತ್ತಿದ್ದರು. ಅಹಿಂಸೆ ಪರೋಪಕಾರ ಮೊದಲಾದವುಗಳು ಸತ್ಯದ ವಿವಿಧ ಸ್ವರೂಪಗಳು ಮಾತ್ರ. **'ಸತ್ಯ ಅಹಿಂಸೆಗಳೆ ಮೂಲಶಿಕ್ಷಣದ ಮೊದಲು ಹಾಗೂ ಮುಕ್ತಾಯ.'** ಮೂಲಶಿಕ್ಷಣದ ಸಮಗ್ರ ಯೋಜನೆಯೆಲ್ಲವೂ ಸತ್ಯ ಅಹಿಂಸೆಗಳಿಂದಲೇ ಪ್ರೇರಿತವಾಗಿದೆ, ಪೂರ್ಣತೆಯನ್ನು ಪಡೆಯುತ್ತಿದೆ. ಪ್ರಯೋಗದ ಪರೀಕ್ಷೆಯಿಲ್ಲದೆ ಯಾವ ವಿಚಾರವನ್ನೂ ಜನತೆಯ ಎದುರು ಗಾಂಧೀಜಿಯವರು ಇಡುತ್ತಿರಲಿಲ್ಲ. ನಡೆಯಂತೆ ನುಡಿಯುವದು ಅವರ 'ಶೀಲ'ವಾಗಿತ್ತು. ಸಾಮಾನ್ಯವಾಗಿ ಮಹಾತ್ಮರ ಮಾಹಾತ್ಮ್ಯವು ಈ ಮಾತಿನಲ್ಲಿಯೇ ಇರುವದೆಂದು ಹೇಳುವದುಂಟು. ಆಫ್ರಿಕೆಯ ಆಂದೋಲನದಲ್ಲಿ ಅವರು ಟಾಲಸ್ಟಾಯರ ಹೆಸರಿಟ್ಟ ಒಂದು ಆಶ್ರಮವನ್ನು ನಡೆಸುತ್ತಿದ್ದರು. ಆಶ್ರಮದಲ್ಲಿ ನೆಲಿಸಿದ ತಮ್ಮ ಅನುಯಾಯಿಗಳ ಮಕ್ಕಳಿಗೆಲ್ಲ ಹಾಗೂ ತಮ್ಮ ಸ್ವಂತ ಮಕ್ಕಳಿಗೆಲ್ಲ ಅವರು ಮೂಲಶಿಕ್ಷಣದ ತತ್ವಗಳಿಗನುಸಾರವಾಗಿಯೇ ಶಿಕ್ಷಣ ಕೊಡುತ್ತಿದ್ದರು. ಆಶ್ರಮದ ಬಾಲಕರು ತೋಟದಲ್ಲಿ, ಹೊಲದಲ್ಲಿ ಕೆಲಸ ಮಾಡುತ್ತಿದ್ದರು. ಚರ್ಮದ ಕೆಲಸ ಮಾಡುವರು. ಈ ಕೆಲಸಗಳಲ್ಲಿ ತೊಡಗಿದಾಗ್ಗೆ, ಮಕ್ಕಳ ವಿವಿಧ ಚಟುವಟಿಕೆಗಳಿಗೆ ಅಗತ್ಯವೆನಿಸಿದ ಹಾಗೂ ಅನುಬಂಧಿತವಾದ

ವಿಷಯಜ್ಞಾನವನ್ನು ಅವರಿಗೆ ಮಾಡಿಕೊಡಲಾಗುತ್ತಿತ್ತು. ಕೈಕೆಲಸದ ಹಾಗೂ ಬುದ್ಧಿವಿಕಾಸಗಳಲ್ಲಿರುವ ಸ್ವಾಭಾವಿಕವಾದ ಸಮವಾಯ–ಸಮನ್ವಯಗಳನ್ನು ಗಾಂಧೀಜಿಯವರು ಅಂದು ಕಂಡುಹಿಡಿದರು. **ಈ ಪ್ರಯೋಗದ ಹಿನ್ನೆಲೆಯಲ್ಲಿಯೆ ಮೂಲಶಿಕ್ಷಣವು ಮೂಡಿದೆ.**

ಕೃತಿಯು ಮುಖಾಂತರವಾಗಿ ಮಕ್ಕಳ ವಿದ್ಯಾಭ್ಯಾಸವನ್ನು ಸಾಗಿಸಬೇಕೆಂಬ ವಿಚಾರವು ಶಿಕ್ಷಣ ಪ್ರಪಂಚದಲ್ಲಿ ತೀರ ಹೊಸದಲ್ಲ. ಶಿಕ್ಷಣದಲ್ಲಿ 'ಶಾಸ್ತ್ರಕಾರ' ರೆಂದು ಹೆಸರಾದ ರೂಸೊ, ಪೆಸ್ಟೆಲೋಝಿ, ಫ್ರೋಬೆಲ್ ಮೊದಲಾದವರು ಉದ್ಯೋಗದೊಡನೆ ಶಿಕ್ಷಣವನ್ನು ಹೇಗೆ ಹೊಂದಿಸಬಹುದೆಂಬ ಬಗ್ಗೆ ಈ ಮೊದಲೇ ವಿಚಾರ ಮಾಡಿರುವದೂ, ಪ್ರಯೋಗ ನಡೆಸಿರುವದೂ ಕಂಡುಬರುವದು. **'ಮಗುವಿನ ಶಿಕ್ಷಣವು ಮಾತಿನಿಂದಲ್ಲ, ಕೃತಿಯಿಂದ ಸಾಗಬೇಕು,'** ಎಂದು ರೂಸೋನು ಹೇಳಿರುವನು. ಪೆಸ್ಟೆಲೋಝಿಯು ನ್ಯೂ ಹೊಲ್ಡ ಎಂಬಲ್ಲಿ ತೆಗೆದ ಶಾಲೆಯ ಬಾಲಕರು ಬೇಸಾಯವನ್ನು, ನೂಲುವ, ನೇಯುವ ಉದ್ಯೋಗವನ್ನು ತಮ್ಮ ಅಭ್ಯಾಸದ ಜೊತೆಗೆ ಮಾಡುತ್ತಿದ್ದರು. ಮುಂದೆ ಮತ್ತೊಂದು ಊರಿನಲ್ಲಿ ಇದೇ ಪ್ರಯೋಗವನ್ನು ಆತನು ಹೆಚ್ಚು ಯಶಸ್ವಿಯಾಗಿ ಮಾಡಿದನು. ಮಗುವಿನ ಮಾನಸಿಕ ಹಾಗೂ ಸಾಂಸ್ಕೃತಿಕ ಪ್ರಗತಿಗಾಗಿ ಬೇಕಾಗುವ ಸಾಕಷ್ಟು ಅನುಭವವು–ವಿಷಯಜ್ಞಾನವು–ಕೃತಿಮೂಲ ಶಿಕ್ಷಣದಿಂದ ಸಹಜವಾಗಿ ಬರಬಲ್ಲದೆಂದು ಈ ಪ್ರಯೋಗದಿಂದ ಆತನು ಸಿದ್ಧಮಾಡಿ ತೋರಿಸಿದನು. ಗಾಂಧೀಜಿಯವರಾದರೂ ಇದೇ ತತ್ವವನ್ನೇ ಶಿಕ್ಷಣದಲ್ಲಿ ಹೆಚ್ಚು ಶಾಸ್ತ್ರೀಯವಾಗಿ, ವಿಶದವಾಗಿ ಬಳಸಿಕೊಂಡಿರುವರು– 'ಒಂದು ಉತ್ಪಾದಕ ವೃತ್ತಿ-ಶಿಕ್ಷಣದಿಂದಲೆ ಮಗುವಿನ ಶಿಕ್ಷಣವನ್ನು ನಾನು ಪ್ರಾರಂಭಿಸಬೇಕೆನ್ನುವೆನು. ಶಿಕ್ಷಣದ ಪ್ರಾರಂಭದಿಂದಲೆ ಆತನು ಗಳಿಸುವಂತಾಗಬೇಕು. **ಶಿಕ್ಷಣವೆಂದರೆ– ಮಗುವಿನ ಹಾಗೂ ವ್ಯಕ್ತಿಯ ಶರೀರ, ಮನಸ್ಸು ಹಾಗೂ ಆತ್ಮ ಈ ಮೂರರಲ್ಲಿಯೂ ಇರುವ ಉದಾತ್ತವಾದ ಅಂಶಗಳೆಲ್ಲ ಹೊರಗೆ ಬರುವಂತೆ ಮಾಡುವದು,'** ಎಂದು ಅವರು ತಮ್ಮ ಶಿಕ್ಷಣ ಯೋಜನೆಯ ಬಗ್ಗೆ ಹೇಳಿರುವರು.

ಭಾರತದ ಆಗಿನ ಪರಕೀಯ ಸರಕಾರವೂ ಕೂಡ ಶಿಕ್ಷಣದಲ್ಲಿ ಹೊಸ ಹಾದಿಯನ್ನು ಹಾಕಿಕೊಡಲು ಯತ್ನಿಸಿತು. ಕೇವಲ ಬುದ್ಧಿ ಪ್ರಧಾನವಾದ 'ನೌಕರೀ' ಶಿಕ್ಷಣದಿಂದ ನಿರುದ್ಯೋಗಿಗಳಾದ ವಿದ್ಯಾವಂತರ ಸಂಖ್ಯೆಯು ಮಿತಿಮೀರಿ ಬೆಳೆಯತೊಡಗಿತು. ಇತ್ತಕಡೆಗೆ ಔದ್ಯೋಗೀಕರಣದ ಪ್ರತಿಫಲವಾಗಿ ಅಲ್ಲಲ್ಲಿ ಸ್ಥಾಪಿತವಾದ ಉದ್ಯಮ ಸಂಸ್ಥೆಗಳಲ್ಲಿ ಕುಶಲ ಕೆಲಸಗಾರರ ಕೊರತೆ ಹೆಚ್ಚಾಯಿತು. ಶಿಕ್ಷಣಕ್ಕೆ ಈ ದೃಷ್ಟಿಯಿಂದ ಹೊಸ ಹಾದಿಯನ್ನು ಹಾಕಿಕೊಡುವದು ಅಗತ್ಯವೆನಿಸಿತು. ಈ ವಿಷಯದಲ್ಲಿ ತಮಗೆ ಮಾರ್ಗದರ್ಶನ ಮಾಡಲು ಅಂದಿನ ಸರಕಾರವು ಇಂಗ್ಲಂಡದಿಂದ ಸನ್ ೧೯೩೭ ರಲ್ಲಿ

'ಆ್ಯಬಟ ಹಾಗೂ ವುಡ್'

ಎಂಬ ಇಬ್ಬರು ನುರಿತ ಶಿಕ್ಷಣ ತಜ್ಞರನ್ನು ಕರೆಯಿಸಿತು. ಅವರು ಇಲ್ಲಿಯ ಪರಿಸ್ಥಿತಿಯನ್ನೆಲ್ಲ ಪರಿಶೀಲಿಸಿ ಸರಕಾರಕ್ಕೆ ತಮ್ಮ ಸೂಚನೆಗಳ ವರದಿಯನ್ನು ಒಪ್ಪಿಸಿದರು. ಅವುಗಳಲ್ಲಿ (೧) **ಸಾಕ್ಷರತೆಗಾಗಿ ಕೊಡುತ್ತಿರುವ ಇಂದಿನ ಶಿಕ್ಷಣವು ನಿಜವಾದ ಶಿಕ್ಷಣವಲ್ಲ;** (೨) ಔದ್ಯೋಗಿಕ ಶಿಕ್ಷಣಕ್ಕೆ ಸಾಮಾನ್ಯ ಶಿಕ್ಷಣದಲ್ಲಿ ಸ್ಥಾನವಿರಬೇಕು. ಹಾಗೂ ಕೆಲಸ ಮಾಡುತ್ತ ಕಲಿಯುವ–ಕೃತಿ **ಪ್ರಧಾನವಾದ–ಶಿಕ್ಷಣವು ಸರ್ವಸಮ್ಮತವಾದ ಶ್ರೇಷ್ಠ ಶಿಕ್ಷಣ ಪದ್ಧತಿಯಾಗಿದೆ** ಎನ್ನುವ ಎರಡು ಮುಖ್ಯ ಸೂಚನೆಗಳು. ಮೂಲಶಿಕ್ಷಣ ಯೋಜನೆಗೆ ಆಧಾರವಾದ ಗಾಂಧೀಜಿಯವರ ವಿಚಾರಗಳಿಗೂ ಈ ಸೂಚನೆಗಳಿಗೂ ಇರುವ ಸಾಮ್ಯತೆಯು ಒಡೆದು ತೋರುವಂತಿದೆ. ಗಾಂಧೀಜಿಯವರು ಹೇಳಿದುದು :— 'ಸಾಕ್ಷರತೆಯು ಶಿಕ್ಷಣದ ಧ್ಯೇಯವೂ ಅಲ್ಲ, ಪ್ರಾರಂಭವೂ ಅಲ್ಲ. ಅದೊಂದು ಸಾಧನವು. ರಾಷ್ಟ್ರದ ಸಂಪತ್ತನ್ನು ಹೆಚ್ಚಿಸುವ ಯಾವದೊಂದು ಉಪಯುಕ್ತ ಕೈಗಾರಿಕೆಯನ್ನು ಕಲಿಸುವದರಿಂದಲೇ ನಾನು ಮಕ್ಕಳ ಶಿಕ್ಷಣವನ್ನು ಪ್ರಾರಂಭಿಸುವೆನು.'—

**ಮೂಲಶಿಕ್ಷಣದ ಪೂರ್ವಪೀಠಿಕೆ:—**

'ಧರ್ಮಕ್ಷೇತ್ರೇ ಕುರುಕ್ಷೇತ್ರೇ' —ಗೀತಾ

ಒಂದೆಡೆಗೆ ಭಾರತದ ಸ್ವಾತಂತ್ರ್ಯಕ್ಕಾಗಿ ಸಹಸ್ರಮುಖವಾದ ಸತ್ಯಾ

ಗ್ರಹದ ಸಮರ ಸನ್ನಾಹವನ್ನು ಗಾಂಧೀಜಿಯವರು ಮಾಡುತ್ತಿದ್ದಾರೆ. ಇತ್ತ ವಿವಿಧ ವಿಧಾಯಕ ಕಾರ್ಯಕ್ರಮಗಳನ್ನು ಮುಂದೊರೆಸುತ್ತಿದ್ದಾರೆ. ಹರಿಜನೋದ್ಧಾರವೂ ಭರದಿಂದ ಸಾಗಬೇಕಾಗಿದೆ. ಹೀಗೆ ರಾಜಕೀಯ ರಣರಂಗದಲ್ಲಿ ತಮ್ಮ ವ್ಯಕ್ತಿತ್ವದ ವಿಶ್ವರೂಪವನ್ನು ಪ್ರಕಟಿಸುವ ಸಮಯದಲ್ಲಿ ಗಾಂಧೀಜಿಯವರಿಗೆ,— ದೀರ್ಘಕಾಲದ ದಾಸ್ಯದಿಂದ ಭಾರತೀಯರಲ್ಲಿ ಉಂಟಾಗಿರುವ 'ಕ್ಲೈಬ್ಯ' ವೂ, ಕ್ಷುದ್ರವಾದ 'ಹೃದಯ ದೌರ್ಬಲ್ಯ' ವೂ ಅಳಿದುಹೋಗುವಂತೆ ಮಾಡಬೇಕಾಯಿತು. ಇದಕ್ಕಾಗಿ ಅವರು ೧೯೦೭ ರಲ್ಲಿ ತಮ್ಮ 'ಶಿಕ್ಷಣ ಗೀತೆ,' ಯಾದ ಮೂಲಶಿಕ್ಷಣದ ವಿಚಾರಗಳನ್ನು ಜನತೆಯ ಎದುರು ಇಟ್ಟರು. ಯುದ್ಧಭೂಮಿಯಲ್ಲಿಯೇ ಅರ್ಜುನನಿಗೆ ಭಗವಂತನು ಗೀತೆಯನ್ನು ಬೋಧಿಸಿ ಆತನನ್ನು 'ಸ್ವಕರ್ಮ ನಿರತ' ನನ್ನಾಗಿ ಮಾಡಿದನು. ಕರ್ಮಯೋಗದಲ್ಲಿಯೇ ಜೀವನದ ಸಾರ್ಥಕತೆಯೆಂದು ಸಾರಿಹೇಳಿದನು. ಮಗುವನ್ನು ಮೊದಲಿನಿಂದಲೂ ಜೀವನೋಪಯೋಗಿಯಾದ ಕೃತಿಗಳಲ್ಲಿಯೇ ತೊಡಗಿಸಿ ಆತನ ಜೀವನದ ಪೂರ್ಣತೆಯನ್ನು ಸಾಧಿಸಬೇಕೆಂದು ಗಾಂಧೀಜಿಯವರಾದರೂ ಹೇಳುವರು. ಇದೇ ಅವರ ಶಿಕ್ಷಣ–'ಗೀತೆಯ ಗುಟ್ಟು'. ಗೀತೆಯು ವೇದಾಂತದ ವಿವಿಧ ತತ್ವಗಳ ಸಮನ್ವಯವಾಗಿದೆ. **ಮೂಲಶಿಕ್ಷಣವು ಗಾಂಧೀಜಿಯವರ ಜೀವನದ ವಿವಿಧಕಾರ್ಯಗಳ ಸಮನ್ವಯವಾಗಿದೆ.** ತಮ್ಮದೊಂದು ಲೇಖನದಲ್ಲಿ ಅವರು ಹೇಳಿದ ಮಾತುಗಳು ಈ ಸಂದರ್ಭದಲ್ಲಿ ನೆನಪಿಗೆ ಬರುವಂತಿವೆ:— **"ನನ್ನ ಜೀವನವೆನ್ನುವದು ಅವಿಭಾಜ್ಯವಾಗಿದೆ, ಅಖಂಡವಾಗಿದೆ. ನನ್ನ ಚಟುವಟಿಕೆಗಳೆಲ್ಲವೂ ಒಂದು ಒಂದರಲ್ಲಿ ಬೆರೆತುಕೊಳ್ಳುತ್ತಿವೆ. ಮಾನವ ಸಮಾಜದ ಬಗ್ಗೆ ನನಗಿರುವ ಅಪಾರವಾದ ಪ್ರೇಮವೇ ಇವುಗಳಿಗೆ ಮೂಲಕಾರಣವಾಗಿದೆ."**

೧೯೩೭ ನೇ ಜುಲೈ ತಿಂಗಳಲ್ಲಿ ಗಾಧೀಜಿಯವರು ತಮ್ಮ ಅನುಭವದ ಬೆಳಕಿನಲ್ಲಿ, ಅಂತರಂಗ ಪ್ರೇರಣೆಯಿಂದ ಕಂಡ ಶಿಕ್ಷಣಕ್ರಮದ ಸ್ಥೂಲವಾದ ರೂಪರೇಷೆಯನ್ನು ಜನತೆಯ ಎದುರು ಇಟ್ಟರು. ಅದರ ಸಾರವು ಹೀಗೆ:—

'ಮಗುವಿನ ಶಿಕ್ಷಣವು ಜೀವನೋಪಯೋಗಿಯಾದ ಕೈಗಾರಿಕೆಯಿಂದ

ಪ್ರಾರಂಭವಾಗಬೇಕು. ಮಕ್ಕಳಿಂದ ರಚಿತವಾದ ವಸ್ತುಗಳನ್ನು ಸರಕಾರವು ಕೊಂಡರೆ ಶಿಕ್ಷಣವು ಸ್ವಾವಲಂಬಿಯಾಗಬಲ್ಲದು. ಕೇವಲ ಸಾಕ್ಷರತೆಯು ಶಿಕ್ಷಣವೆನಿಸಲಾರದು. ಮಗುವಿನ ಶರೀರ, ಮನಸ್ಸು, ಅಂತಃಕರಣಗಳ ಸಮನ್ವಯ ವಿಕಾಸ ಬೇಕು. ಅವುಗಳಲ್ಲಿ ಒಳ್ಳೆಯದಾದುದೆಲ್ಲವನ್ನು ಹೊರಗೆ ಬರುವಂತೆ ಮಾಡುವದೆ ಶಿಕ್ಷಣ. ಕೈಗಾರಿಕೆಯನ್ನು ಶಾಸ್ತ್ರೀಯವಾಗಿ–ಏಕೆ ಎನಿತು–ಎಂದು ಪ್ರತಿಯೊಂದು ಹೆಜ್ಜೆಗೂ ವಿಮರ್ಶೆಯಿಂದ ಕೂಡಿ–ಕಲಿಸಿದರೆ ಬುದ್ಧಿವಿಕಾಸವು ಸಹಜವಾಗಿ ಆಗುವದು.'

ಗಾಂಧೀಜಿಯವರ ಈ ವಿಚಾರಗಳಿಂದ ಸಾಂಪ್ರದಾಯಿಕ ಶಿಕ್ಷಣ ಪ್ರಪಂಚದಲ್ಲಿ ಸಿಡಿಲು ಎರಗಿದಂತಾಯಿತು. ಅನೇಕರು ಅನೇಕವಿಧವಾಗಿ ಅವುಗಳಿಗೆ ಆಕ್ಷೇಪವೆತ್ತಿದರು. ಈ ವಿಚಾರಗಳ ಸರಿಯಾದ ಮಂಥನವಾಗಬೇಕು, ಅವುಗಳಿಗೊಂದು ಮೂರ್ತಸ್ವರೂಪ ಕೊಡಬೇಕೆಂದು **ವರ್ಧಾದಲ್ಲಿ ಶಿಕ್ಷಣ ತಜ್ಞರ ಪರಿಷತ್ತೊಂದನ್ನು ಕರೆಯಲಾಯಿತು. ಈ ಪರಿಷತ್ತಿನ ಪ್ರತಿಫಲವಾಗಿ 'ಝಾಕೀರ ಹುಸೇನ ಸಮಿತಿ' ಯು ವಿರಚಿತವಾಯಿತು.** ಗಾಂಧೀಜಿಯವರ ಸೂತ್ರರೂಪವಾದ ವಿಚಾರಗಳನ್ನು ಈ ಸಮಿತಿಯವರು ಸವಿವರವಾಗಿ ಪರಿಶೀಲಿಸಿದರು. ಈ ಸೂತ್ರಗಳಿಗನುಗುಣವಾಗಿ ಒಂದು ನಿರ್ದಿಷ್ಟವಾದ ಶಿಕ್ಷಣ ಯೋಜನೆಯನ್ನು ಸಿದ್ಧಗೊಳಿಸಿದರು; ಇದೇ 'ರಾಷ್ಟ್ರೀಯ ಮೂಲಶಿಕ್ಷಣ ಯೋಜನೆ.' **೧೯೩೮ ರ ಹರಿಪುರ ಕಾಂಗ್ರೆಸ್ಸಿನಲ್ಲಿ ಈ ಯೋಜನೆಗೆ ರಾಷ್ಟ್ರೀಯ ಶಿಕ್ಷಣ ಯೋಜನೆಯೆಂದು ಕಾಂಗ್ರೆಸ್ಸು ಮನ್ನಣೆ ಕೊಟ್ಟಿತು.** ಈ ಹೊಸ ಶಿಕ್ಷಣದ ಪ್ರಚಾರ–ಪ್ರಯೋಗಗಳಿಗಾಗಿ **'ಹಿಂದುಸ್ಥಾನಿ ತಾಲೀಮಿಸಂಘ'** ವೆಂಬ ಸಂಸ್ಥೆಯು ನಿರ್ಮಾಣವಾಯಿತು. ಕೆಲವೊಂದು ಮರ್ಯಾದಿತ ಪ್ರದೇಶಗಳಲ್ಲಿ ಈ ಹೊಸ ಶಿಕ್ಷಣದ ಪ್ರಯೋಗ ಪರೀಕ್ಷೆಗಳು ನಡೆದವು. ಈ ಶಿಕ್ಷಣದ ಕಾರ್ಯಕರ್ತರ ಅನುಭವದ ವಿಚಾರ–ವಿಮರ್ಶೆಗಳಿಗಾಗಿ ೧೯೩೯ ರಲ್ಲಿ **ಪುಣೆಯಲ್ಲಿ ಪರಿಷತ್ತೊಂದು** ಸೇರಿತು. ಪ್ರಯೋಗಾನುಭವಗಳಿಂದ ಅವಶ್ಯವೆಂದು ಕಂಡು ಬಂದ ಒಂದೆರಡು ತಿದ್ದುಪಡೆಗಳನ್ನು ಈ ಯೋಜನೆಗೆ ಜೋಡಿಸಲಾಯಿತು.

ಕೇವಲ ಮೂಲೋದ್ಯೋಗವೇ ಶಿಕ್ಷಣ ಕೇಂದ್ರವಾಗಿ ಉಳಿಯದೆ **ನಿಸರ್ಗ ಹಾಗೂ ಸಮಾಜಗಳೂ ಶಿಕ್ಷಣದ ಕೇಂದ್ರಗಳೆಂದು** ಗೊತ್ತಾಯಿತು. ಮಹಾಯುದ್ಧದ ಬೇಗೆಯು ಇದೇ ಸಮಯಕ್ಕೆ ಪಸರಿಸಿತು. ಅದರ ಝಳದಿಂದ ಮೂಲಶಿಕ್ಷಣದ ಕಾರ್ಯವು ಕಮರಿದಂತಾಯಿತು. ಕಾಂಗ್ರೆಸ ಮಂತ್ರಿಗಳ ರಾಜೀನಾಮೆಯಿಂದ ಮೂಲ ಶಿಕ್ಷಣದ ಆಧಾರಸ್ತಂಭಗಳು ಕಳಚಿದವು. ಮುಂದೆ ಸ್ವಾತಂತ್ರ್ಯದ ಆಂದೋಲನವು ಬಿರುಗಾಳಿಯಂತೆ ಬೀಸಿತು. ಮುಂದಾಳುಗಳೂ, ಮೂಲಶಿಕ್ಷಣದ ಕಾರ್ಯಕರ್ತರೂ ಸೆರೆಮನೆಯನ್ನು ಸೇರಿದರು. ಬಂಧನದಲ್ಲಿಯೂ ಮಹಾತ್ಮಾಜಿಯವರು ಮೂಲಶಿಕ್ಷಣದ ವಿಚಾರವನ್ನು ಬಿಟ್ಟುಗೊಡಲಿಲ್ಲ. ಇಲ್ಲಿಯೇ '**ನಯೀ ತಾಲೀಮ,**'—ಹೊಸಶಿಕ್ಷಣವೆಂಬ ಹೆಸರು ಅವರಿಗೆ ಹೊಳೆಯಿತು. ಸೆರೆಮನೆಯಿಂದ ಹೊರಗೆ ಬಂದಮೇಲೆ ೧೯೪೫ ರಲ್ಲಿ ಮೂಲಶಿಕ್ಷಣ ಕಾರ್ಯಕರ್ತರ ಮತ್ತೊಂದು ಸಭೆಯನ್ನು ಸೇವಾಗ್ರಾಮದಲ್ಲಿ ಕರೆಯಲಾಗಿತ್ತು. ಮೂಲಶಿಕ್ಷಣದ ವ್ಯಾಪ್ತಿಯನ್ನೂ, ಅವಧಿಯನ್ನೂ ತಾಯಿಯ ಗರ್ಭದಲ್ಲಿರುವ ಮಗುವಿನಿಂದ ಮರಣದವರೆಗೆ ವಿಸ್ತರಿಸಲಾಯಿತು. ಬೇರೆ ಬೇರೆ ಪ್ರಾಂತಗಳಲ್ಲಿ ಮೂಲಶಿಕ್ಷಣದ ಶಿಕ್ಷಕರನ್ನು ತರಬೇತುಗೊಳಿಸುವ ಕೇಂದ್ರಗಳು ಸ್ಥಾಪಿತವಾದವು. ಕಸ್ತೂರಬಾ ಸ್ಮಾರಕ ನಿಧಿಯವರು ಹಳ್ಳಿಗಳಲ್ಲಿ ಹೆಣ್ಣುಮಕ್ಕಳಿಗಾಗಿ ಮೂಲಶಿಕ್ಷಣದ ಪ್ರಚಾರವನ್ನು ಕೈಕೊಂಡರು. ೧೯೪೬ರಲ್ಲಿ ಪ್ರಾಂತಗಳಲ್ಲೆಲ್ಲ ರಾಷ್ಟ್ರೀಯ ಸರಕಾರಗಳು ಮತ್ತೆ ಸ್ಥಾಪಿತವಾದವು. ಇದೇ ವರುಷ ಸೇರಿದ ಸಭೆಯೊಂದರಲ್ಲಿ ಮೂಲಶಿಕ್ಷಣವು ಪ್ರಯೋಗಾವಸ್ಥೆಯನ್ನು ಯಶಸ್ವಿಯಾಗಿ ಮೀರಿರುವದೆಂದೂ, ಮೊದಲಿನ ಏಳು ವರುಷಗಳ ಶಿಕ್ಷಣದ ಅವಧಿಯಲ್ಲಿ ಇಂಗ್ಲೀಷನ್ನು ಬಿಟ್ಟುಕೊಡಬೇಕೆಂದೂ ಗೊತ್ತಾಯಿತು. ಮೂಲಶಿಕ್ಷಣದ ಶಿಕ್ಷಕರಿಗಾಗಿ, ಶಿಕ್ಷಣಾಧಿಕಾರಿಗಳಿಗಾಗಿ ಅವಶ್ಯವಿರುವ ಅಲ್ಪಾವಧಿಯ ತರಬೇತಿನ ವರ್ಗಗಳನ್ನು ಸರಕಾರದವರು ಕೈಕೊಂಡರು. ೧೯೪೭ ರಲ್ಲಿ ಆಗಸ್ಟ ೧೫ ಭಾರತದ ಅತ್ಯಂತ ಭಾಗ್ಯದ ದಿನ. ಆದರೆ ಬ್ರಿಟಿಶ್ ಸರಕಾರವು ಹಿಂದೆ ಬಿಟ್ಟುಹೋದ ಅನೇಕ ಬಿಗಿಯಾದ ಸಮಸ್ಯೆಗಳನ್ನು ಸ್ವತಂತ್ರಭಾರತದ ಸರಕಾರವು ಎದುರಿಸಬೇಕಾಯಿತು. ಆದರೂ ಮೂಲಶಿಕ್ಷಣವನ್ನು ಅವರು

ಮರೆಯಲಿಲ್ಲ. ೧೯೪೪ರ ಎಪ್ರಿಲದಲ್ಲಿ **ಪಾಟಣಾಜಿಲ್ಲೆಯ 'ವಿಕ್ರಮ'ವೆಂಬಲ್ಲಿ ಅಖಿಲಭಾರತೀಯ ಮೂಲಶಿಕ್ಷಣದ ಸಭೆಯೊಂದನ್ನು ಕರೆಯಲಾಯಿತು. ಮೂಲಶಿಕ್ಷಣದಬಗ್ಗೆ ಕೂಲಂಕಷವಾಗಿ ವಿಚಾರ ವಿಮರ್ಶೆಗಳು ನಡೆದವು. ಭಾರತದ ಸಂಸ್ಕೃತಿಪರಿಸ್ಥಿತಿಗಳಿಗೆ ಮೂಲ ಶಿಕ್ಷಣವೇ ಅನುಗುಣವಾಗಿರುವದೆಂದೂ, ಹಳ್ಳಿಗಳ ಉದ್ಧಾರಕ್ಕೆ ಅದು ಏಕಮೇವ ಸಾಧನವಾಗುವದೆಂದೂ, ಮಹಾತ್ಮರ ಮನೀಷೆಯಾದ ವರ್ಗರಹಿತವಾದ ಸಹಕಾರದ ಆದರ್ಶ ಸಮಾಜವನ್ನು ಮೂಲಶಿಕ್ಷಣವೇ ಕಟ್ಟಬಲ್ಲದೆಂದೂ ವಿಕ್ರಮದ ಈ ಸಭೆಯಲ್ಲಿ ನಿರ್ಣಯಗಳಾದವು.**

**ಹೆಸರಿನಲ್ಲಿ ಏನಿದೆ? :—**

ಗಾಂಧೀಜಿಯವರ ಈ ಶಿಕ್ಷಣ ಯೋಜನೆಗೆ ಬೇರೆ ಬೇರೆ ಹೆಸರಿನಿಂದ ಕರೆದಿರುವದು ಕಂಡುಬರುವದು. ಹಿಂದಿಯಲ್ಲಿ '**ಬುನಿಯಾದಿ ರಾಷ್ಟ್ರೀಯ ಶಿಕ್ಷಾ**,' '**ನಯೀ ತಾಲೀಮ**,' ಇಲ್ಲವೇ ಇಂಗ್ಲೀಷಿನಲ್ಲಿಯ '**ಬೇಸಿಕ್ ಎಜ್ಯುಕೇಶನ್**' ಎಂಬ ಶಬ್ದಗಳಿಗೆ ಸಮವಾಗಿ ಕನ್ನಡದಲ್ಲಿ ಉಪಯೋಗಿಸುವ ಶಬ್ದಗಳಿನ್ನೂ ಪ್ರಮಾಣಿತವಾಗಿಲ್ಲ. '**ಮೂಲ ಶಿಕ್ಷಣ**'ವೆನ್ನುವದು ಹೆಚ್ಚು ಬಳಿಕೆಯಲ್ಲಿದೆ. ಆದರೆ ಹೊಸ ಶಿಕ್ಷಣದ ಹೊಸತನ ಈ ಹೆಸರಿನಲ್ಲಿ ತೋರಿ ಬರುವದಿಲ್ಲ. ಎಲ್ಲ ನಾಗರಿಕರಿಗೂ ಮೂಲಭೂತವಾಗಿ ದೊರೆಯಬೇಕಾದ ಮೊದಲಿನ ಶಿಕ್ಷಣವೆಂಬ ಅರ್ಥಮಾತ್ರ ಇದರಿಂದ ತಿಳಿದುಬರುವದು. **ವೃತ್ತಿ ಪ್ರಧಾನ** ಅಥವಾ **ಉದ್ಯೋಗಪ್ರಧಾನ** ಶಿಕ್ಷಣವೆಂದು ಕೆಲವರು ಹೇಳುವರು. ಈ ಹೆಸರು ಹೊಸ ಶಿಕ್ಷಣದ ತತ್ವಕ್ಕೆ ವಿರೋಧವೆನಿಸುವದು. ಹೊಸಶಿಕ್ಷಣದ ಶಾಲೆಗಳು ಔದ್ಯೋಗಿಕ ಶಿಕ್ಷಣ ಸಂಸ್ಥೆಗಳಲ್ಲ. ಯಾವುದೊಂದು ಉದ್ಯೋಗವನ್ನೇ ಕಲಿಸುವದು ಅವುಗಳ ಮುಖ್ಯೋದ್ದೇಶವಾಗಿಲ್ಲ. ಉತ್ಪತ್ತಿ ಸ್ಥಳದಿಂದ ಹೆಸರುಪಡೆದ ಡಾಲ್ಟನ-ಬಟೇವಿಯಾ ಪದ್ಧತಿಯಂತೆ, ವರ್ಧಾದಲ್ಲಿ ಜನ್ಮ ತಾಳಿದ ಈ ಯೋಜನೆಗೆ '**ವರ್ಧಾ ಶಿಕ್ಷಣ**' ವೆಂತಲೂ ಕರೆಯುವವರಿದ್ದಾರೆ. ಉತ್ಪಾದಕರ ಹೆಸರಿನಿಂದ ಕರೆಯುವ ಮಾಂಟೇಸೋರಿ ಪದ್ಧತಿಯಂತೆ ಇದಕ್ಕೆ

**ಗಾಂಧೀಜಿ-ಯೋಜನೆ**ಯೆಂತಲೂ ಹೇಳುವರು. **'ಉದ್ಯೋಗಮೂಲ'** ಶಿಕ್ಷಣವೆನ್ನುವದು ಹೊಸ ಯೋಜನೆಗೆ ಹೆಚ್ಚಾಗಿ ಹೊಂದಿಕೊಳ್ಳುವಂತಿದೆ. ಉತ್ಪಾದಕವಾದ ಒಂದು ಉದ್ಯೋಗವು ಶಿಕ್ಷಣದ 'ಮೂಲ'ವಾಗಬೇಕು—ತಳಹದಿಯಾಗಬೇಕು. ಹೊಸ ಶಿಕ್ಷಣವೆಂಬ ಗಿಡಕ್ಕೆ ಉತ್ಪಾದಕ ಕಲೆಯು ಮೂಲ—ಬೇರುಗಳಿದ್ದಂತೆ. ಗಿಡದ ಬೇರುಗಳು ಅದರ ಬೆಳವಣಿಗೆಗೆ ಬೇಕಾಗುವ ಪೋಷಕ ದ್ರವ್ಯಗಳನ್ನು ಒದಗಿಸುವಂತೆ, ಮೂಲೋದ್ಯೋಗವು ಮಗುವಿನ ಸರ್ವತೋಮುಖವಾದ ವಿಕಾಸಕ್ಕೆ ಸಾಧನವಾಗಬೇಕು. ಇತ್ತೀಚೆಗೆ **'ಜೀವನ ಶಿಕ್ಷಣ'**ವೆಂತಲೂ ಇದನ್ನು ಕರೆಯುವದುಂಟು. ಹಿಂದಿನ ಶಿಕ್ಷಣದಲ್ಲಿ ಶಾಲೆಯ ಜೀವನಕ್ಕೂ ಹೊರಗಿನ ಜೀವನಕ್ಕೂ ಹೊಂದಿಕೆಯಿರಲಿಲ್ಲ. ಹೊಸ ಶಿಕ್ಷಣವು ಇವೆರಡನ್ನೂ ಸಮರಸವಾಗಿ ಹೊಂದಿಸಿಕೊಳ್ಳುವದು. ವಿಮುಖವಾಗಿ ದೂರ ಸಿಡಿದುನಿಂತ ಜೀವನ ಹಾಗೂ ಶಿಕ್ಷಣಗಳ ಸಹಜ ಸುಂದರವಾದ ಸಮನ್ವಯವೇ ಈ ಯೋಜನೆಯಲ್ಲಿಯ ಹೊಸತನ-ಹಿರಿತನಗಳಾಗಿವೆ. ಅಂತೆಯೇ ಇದಕ್ಕೆ **ಸಮವಾಯ ಶಿಕ್ಷಣ**ವೆಂತಲೂ ಹೇಳುವರು. ಹೊಸ ಶಿಕ್ಷಣದ ರೀತಿಯು ಹೊರಗಿನ ಜೀವನದ ಪ್ರತಿನಿಧಿ, ಪ್ರತಿಬಿಂಬಗಳಂತಾಗುವದು. ಶಾಲೆಗಳು ವಾಸ್ತವ ಜೀವನದ 'ರಂಗಭೂಮಿ'ಗಳು, ಶಿಕ್ಷಣವು ಸರಿಯಾದ 'ಸಾಮಾಜಿಕ ಜೀವನದ ರಂಗತಾಲೀಮು' ಎನ್ನುವಂತಾಗುವದು. 'ಜೀವನ ಶಿಕ್ಷಣ'ವೆಂಬ ಹೆಸರು ಈ ಭಾವವನ್ನು ಸರಿಯಾಗಿ ಸೂಚಿಸುವದು.

**ಮೂಲಶಿಕ್ಷಣದ ವೈಶಿಷ್ಟ್ಯಗಳು :—**

**೧) ಇದು ಜನತಾ-ಶಿಕ್ಷಣ; ರಾಷ್ಟ್ರೀಯ ಶಿಕ್ಷಣ :—**

ಒಂದು ರಾಷ್ಟ್ರದ ಶಿಕ್ಷಣ ಯೋಜನೆಯು ಅಲ್ಲಿಯ ಜನತೆಯ ಜೀವನಕ್ಕೆ ಸಮರಸವಾಗಿ ಹೊಂದಿಕೊಳ್ಳಬೇಕು. ಅದರ ಆಶೆ—ಆಕಾಂಕ್ಷೆಗಳ ಪ್ರತೀಕವಾಗಿರಬೇಕು. ಸಂಸ್ಕೃತಿ ಸಂಪ್ರದಾಯಗಳ ಸತ್ವವನ್ನು ಒಳಗೊಂಡಿರಬೇಕು. **ಶಿಕ್ಷಣದಲ್ಲಿ ಈ 'ರಾಷ್ಟ್ರೀಯತೆ'ಯು ಅನಿವಾರ್ಯವಾದುದು.** ಇವೆಲ್ಲ ಸಂಗತಿಗಳು ಜೀವನವನ್ನು ರೂಪಿಸುವ ಶಕ್ತಿಗಳು. ಭೌಗೋಲಿಕ ಪರಿಸ್ಥಿತಿಯೂ ಐತಿಹಾಸಿಕ ಪರಂಪರೆಯೂ ಶಿಕ್ಷಣದ ಸಂಘಟನೆಯಲ್ಲಿ ಮಹ

ತ್ವದ ಪಾತ್ರವನ್ನು ವಹಿಸುವವು. ಜನತೆಯ ಆರ್ಥಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ಬೇಡಿಕೆಗಳನ್ನು ಒದಗಿಸುವಂತೆ ಶಿಕ್ಷಣದ ಗೊತ್ತುಗುರಿಗಳನ್ನೂ, ರೀತಿ ವಿಧಾನಗಳನ್ನೂ ಕಲ್ಪಿಸಬೇಕಾಗುವದು. **ಸತ್ಯ ಹಾಗೂ ಅಹಿಂಸೆಗಳು ಭಾರತೀಯ ಸಂಸ್ಕೃತಿಯ ಜೀವಾಳವೆನಿಸಿವೆ.** ಮೂಲಶಿಕ್ಷಣವು ಸತ್ಯ—ಅಹಿಂಸೆಗಳ ತಳಹದಿಯ ಮೇಲೆ ಭದ್ರವಾಗಿ ರಚಿತವಾಗಿದೆ. ಮೂಲ ಶಿಕ್ಷಣದ ಶಾಲೆಗಳಲ್ಲಿ ಶಿಕ್ಷಣ ಪಡೆಯುವ ಮಕ್ಕಳು ತಮ್ಮ ಜೀವನದಲ್ಲಿ ಈ ತತ್ವಗಳನ್ನು ಅಳವಡಿಸಿಕೊಳ್ಳುವರು. ಸತ್ಯ ಅಹಿಂಸೆಗಳಿಂದ ಪ್ರೇರಿತರಾಗಿ, ಪರಸ್ಪರ ಪ್ರೇಮ ಸಹಕಾರಗಳಿಂದ ಕೂಡಿದ, ಸ್ವಾವಲಂಬಿಗಳಾದ ನಾಗರಿಕರ ಸಮಾಜವನ್ನು ಕಟ್ಟುವದೆ ಮೂಲಶಿಕ್ಷಣದ ಧ್ಯೇಯವಾಗಿದೆ. ಇದು **ಏಳು ವರ್ಷಗಳ ಸಾರ್ವತ್ರಿಕ ಒತ್ತಾಯದ ಶಿಕ್ಷಣವು.** ಭಾರತದ ಪ್ರತಿಯೊಂದು ವ್ಯಕ್ತಿಗೂ ತನ್ನ ಹದಿನಾಲ್ಕನೆಯ ವಯಸ್ಸಿನವರೆಗೆ ಈ ಏಳು ವರುಷಗಳಲ್ಲಿ ಸರಿಯಾದ ನಾಗರಿಕ ಜೀವನಕ್ಕೆ ಬೇಕಾಗುವ ಬುದ್ಧಿವಿಕಾಸವೂ, ಹೃದಯ ಸಂಸ್ಕರಣವೂ ಮೂಲಶಿಕ್ಷಣದಿಂದ ದೊರೆಯುವದು. ಮ್ಯಾಟ್ರಿಕ್‌ದ ಮಟ್ಟದ ವಿಷಯಜ್ಞಾನವು ಅವರಿಗೆ ಲಭಿಸುವದು. ಇದಲ್ಲದೆ ಚರಿತಾರ್ಥದ ಸಾಧನವಾಗಬಹುದಾದ ಒಂದು ಉತ್ಪಾದಕ ಉದ್ಯೋಗದಲ್ಲಿ ತರಬೇತು ಗೊಳ್ಳುವರು. ಜೊತೆಗೆ ರಾಷ್ಟ್ರಭಾಷೆಯಾದ ಹಿಂದಿಯನ್ನೂ ಕಲಿಯುವರು.

**೨) ಸಾಂಸ್ಕೃತಿಕ ಶಿಕ್ಷಣ:—**

ಹಿಂದಿನ ಶಿಕ್ಷಣವು ಹೆಚ್ಚಾಗಿ ಬುದ್ಧಿಪ್ರಧಾನವಾಗಿದೆ. ನಿಜವಾಗಿ ನೋಡಿದರೆ ಬುದ್ಧಿವಿಕಾಸವೂ ಅದರಿಂದ ಲಭಿಸುವದಿಲ್ಲ. ಜೀವನದ ಬೇಡಿಕೆಗಳನ್ನು ಪೂರೈಸದೆ ಕೆಲವೊಂದು ವಿಷಯಗಳನ್ನು ಪರೀಕ್ಷೆಗಾಗಿ ಪಾಠ ಮಾಡಿಸುವ 'ಬುದ್ಧಿವಿಲಾಸ' ವು ಮಾತ್ರ ಅದರಲ್ಲಿ ತೋರಿಬರುವದು. ಶೀಲ ಸಂವರ್ಧನೆಯೇ ಶಿಕ್ಷಣದ ಗುರಿ. ಭಾವಗಳ ಸಂಸ್ಕರಣವೇ ಶೀಲಸಂವರ್ಧನೆ. ಮೂಲಶಿಕ್ಷಣದ ಶಾಲೆಗಳಲ್ಲಿ ಮಗುವು ಎಲ್ಲರೊಡನೆ ಕೂಡಿಬಾಳುವ ಕಲೆಯನ್ನು ಕಲಿತುಕೊಳ್ಳುವದು. ಎಲ್ಲರ ಹಿತದಲ್ಲಿ ತನ್ನ ಹಿತವನ್ನು ಕಾಣುವ ಸರಿಯಾದ ಸಾಂಘಿಕ ಜೀವನವನ್ನು ಪ್ರತ್ಯಕ್ಷವಾಗಿ ನಡೆಯಿಸಿ ತನ್ನದಾಗಿ ಮಾಡಿಕೊಳ್ಳು

ವದು. ಸರಿಯಾದ ಸಾಮಾಜಿಕ ಜೀವನಕ್ಕೆ ಪೋಷಕವಾದ ಭಾವನೆಗಳನ್ನು ಮೂಲಶಿಕ್ಷಣವು ಮೊದಲಿನಿಂದಲೂ ಬೆಳೆಸುವದು.

**೩) ಸಮಾಜರಚನೆ:—**

ಸಂಸ್ಕೃತಿಯ ಸಹಕಾರವಿಲ್ಲದ ಶಿಕ್ಷಣವು ಸತ್ವಹೀನವಾಗುವದು. **ಸಂಸ್ಕೃತಿಯ ಜೀವಕಳೆಯನ್ನು ವರ್ಧಾಯೋಜನೆಯು ಶಿಕ್ಷಣದಲ್ಲಿ ತುಂಬುವದು. ನಮ್ಮ ಸಂಸ್ಕೃತಿಯು ಹೆಚ್ಚಾಗಿ 'ಗ್ರಾಮನಿಷ್ಠ' ವಾಗಿದೆ.** ಶಹರಗಳ 'ಹೊರಮಿಂಚು' ಬಿಟ್ಟುಕೊಟ್ಟರೆ, ನಮ್ಮ ಗ್ರಾಮ ನಿಷ್ಠವಾದ ಸಂಸ್ಕೃತಿಯ ಕುರುಹುಗಳನ್ನು ಭಾರತದ ಹೃದಯದಂತಿರುವ ಹಳ್ಳಿಯ ಜೀವನದಲ್ಲಿ ನಾವು ಇನ್ನೂ ಕಾಣಬಹುದು. ಸಮಾಜದಲ್ಲಿ ಮೇಲು ಕೀಳೆಂಬ ವಿವಿಧ ವರ್ಗಗಳು ಎಷ್ಟೇ ಒಡಕನ್ನು ಹುಟ್ಟಿಸಿದ್ದರೂ, ಬಹುಜನ ಸಮಾಜದ ಶೋಷಣೆಯು ಅನಂತಮುಖವಾಗಿ ಸಾಗಿದ್ದರೂ, ಇನ್ನೂ ಹಳ್ಳಿಗರಲ್ಲಿ ಸಹಕಾರ ಸಹಾನುಭೂತಿಗಳೂ, ದುಡಿದು ತಿನ್ನುವ 'ಶ್ರಮ ಜೀವನ' ವೂ ಅಲ್ಪವಾದರೂ ಕಂಡುಬರುವದು ಹಿಂದಿನ ಸಂಸ್ಕೃತಿಯ ಪ್ರತಿಫಲವೆಂದು ಹೇಳಬಹುದು. ಜಗತ್ತಿನಲ್ಲಿ ಇಂದು ನೋಡಿದತ್ತೆಲ್ಲ ಸ್ವಾರ್ಥ-ಸ್ಪರ್ಧೆಗಳ ನಿರಂಕುಶವಾದ ಆಳಿಕೆ ಸಾಗಿದೆ. 'ಎಲ್ಲವೂ ತನಗಾಗಿ;' 'ತಾನು ಸುಖಿಯಾದರಾಯಿತು'—ಎನ್ನುವ ಮನೋವೃತ್ತಿ ಇಂದಿನ ಜೀವನದ ಉಸಿರಿನೊಡನೆಯೆ ಜನತೆಯಲ್ಲಿ ಬರತೊಡಗಿದೆ. ಜೀವನದಲ್ಲಿ ಹುದುಗಿದ ವಿಘಾತುಕವಾದ ಸ್ವಾರ್ಥ—ಸ್ಪರ್ಧೆಗಳು ರಾಷ್ಟ್ರಗಳಲ್ಲಿ, ಸಂಸ್ಥೆಗಳಲ್ಲಿ, ಮನೆತನಗಳಲ್ಲಿ, ವ್ಯಕ್ತಿಗಳಲ್ಲಿ ಅಶಾಂತಿ, ಅಸಹನೆ ಹಾಗೂ ಅನೈಕ್ಯತೆಗಳನ್ನು ಉಂಟುಮಾಡಿವೆ. ಮೋಸಕ್ಕೆ ಮಿತಿಯಿಲ್ಲ; ಸತ್ಯಕ್ಕೆ ಸನ್ಮಾನವಿಲ್ಲ. ಸ್ವಾರ್ಥ—ಸ್ಪರ್ಧೆಗಳ ಝಳಕ್ಕೆ ಸಹಕಾರ ಸಹಾನುಭೂತಿಗಳು ಸೀದುಹೋಗಿವೆ. ಬಂಧುಭಾವ ಬತ್ತಿಹೋಗಿದೆ. ದುಡಿಯದೆ ಬರುವ ದುಡ್ಡಿಗೆ ಮನಸೋತವರು ಶ್ರಮಜೀವಿಗಳ ಶೋಷಣೆಯನ್ನು 'ಸಶಾಸ್ತ್ರ' ವಾಗಿ ಮಾಡುತ್ತಿದ್ದಾರೆ. ಈ ಬಗೆಯ ಪರಿಸ್ಥಿತಿಯು ವ್ಯಕ್ತಿಯ ಹಾಗೂ ಸಮಾಜದ ಹಿತಕ್ಕೆ, ಏಳ್ಗೆಗೆ ಹಾನಿಕರವಾಗಿದೆ. ಜನಜೀವನವನ್ನು ಇಂದು ಹೊಸಹಾದಿಗೆ ಹಚ್ಚಬೇಕು. ಶಾಂತಿ,

ಪ್ರೇಮ, ಸತ್ಯಸಹಕಾರಗಳ ತಳಹದಿಯ ಮೇಲೆ ಹೊಸಸಮಾಜದ ರಚನೆ ಯಾಗಬೇಕು. **ಸಮಾಜದ ರಚನೆಯೆಂದರೆ ಮನೆ ಕಟ್ಟುವಂತಲ್ಲ. ಸಮಾಜ—ವ್ಯಕ್ತಿಗಳ ಗುಂಪು. ವ್ಯಕ್ತಿಗಳ ಮನೋವೃತ್ತಿಯಲ್ಲಿ, ವಿಚಾರದಲ್ಲಿ, ಕೃತಿಯಲ್ಲಿ ಪಲ್ಲಟವಾಗಬೇಕು.** ದುಡಿತದ ದುಡ್ಡನ್ನು ಜನರು ಮೆಚ್ಚಬೇಕು. ದುಡಿತದಲ್ಲಿಯೇ ದೊಡ್ಡಿಸ್ತನವನ್ನು ಅವರು ಕಾಣು ವಂತಾಗಬೇಕು. **ಎಲ್ಲರ ಹಿತದಲ್ಲಿಯೇ ತನ್ನ ಹಿತವೂ ಇದೆ ಎಂಬ ಭಾವನೆಯು ಎಲ್ಲರಲ್ಲಿಯೂ ಬರಬೇಕು.** ಇದುವೆ ಹೊಸ ಸಮಾಜದ ರಚನೆ, 'ಸಾಮಾಜಿಕ ಕ್ರಾಂತಿ.' ಈ ಬಗೆಯ ಸಾಮಾಜಿಕ ಕ್ರಾಂತಿಯನ್ನು ಸದ್ದಿಲ್ಲದೆ ಸಾಧಿಸಲು ಮೂಲಶಿಕ್ಷಣವು ಮೊನೆಯಾದ ಅಸ್ತ್ರವೆಂದು ಮಹಾತ್ಮಾಜಿ ಯವರು ಹೇಳಿರುವರು.

**ಮೂಲಶಿಕ್ಷಣವು ಇಂದು ಬೇಕಾಗಿರುವ ಹೊಸ ಸಮಾಜವನ್ನು ಹೇಗೆ ಕಟ್ಟಬಲ್ಲದು?** ಈ ಸಾಮಾಜಿಕ ಕ್ರಾಂತಿಯನ್ನು ಹೇಗೆ ಸಾಧಿಸು ವದು? :—ವ್ಯಕ್ತಿಗಳ ಗುಂಪೇ ಸಮಾಜವಲ್ಲವೆ? ವ್ಯಕ್ತಿಗಳ ಜೀವನವನ್ನು ಕಟ್ಟುವದೇ ಸಮಾಜದ ರಚನೆ. ವ್ಯಕ್ತಿಗಳ ಜೀವನವನ್ನು ಕಟ್ಟುವದು ಶಿಕ್ಷಣದ ಕಾರ್ಯವಾಗಿದೆ. ಶಿಕ್ಷಣವು ಆತ್ಮಸಂಸ್ಕಾರ ರೂಪವಾಗಿದೆ. ಮಗು ವಿನ ನಿಸರ್ಗದತ್ತವಾದ ವಿವಿಧಶಕ್ತಿಗಳನ್ನು ಶಿಕ್ಷಣವು ಬೆಳಕಿಗೆ ತರುವದು. ಅವುಗಳಲ್ಲಿ ಉದಾತ್ತವಾದವುಗಳನ್ನು ಬೆಳೆಯುವಂತೆ ಮಾಡುವದು. ಪ್ರೇರಕ ಶಕ್ತಿಗಳಾದ ಭಾವಗಳನ್ನು ಶುದ್ಧಗೊಳಿಸುವದು. ವಿಷಯಪ್ರಧಾನವಾದ ಸಾಂಪ್ರದಾಯಿಕ ಶಿಕ್ಷಣವು ಈ ಉದ್ದೇಶಗಳನ್ನು ಈಡೇರಿಸಲಾರದು. ಇಂಥ ಶಿಕ್ಷಣದಲ್ಲಿ ಪರೀಕ್ಷೆಯನ್ನೇ ಮುಂದಿಟ್ಟುಕೊಂಡು ವಿದ್ಯಾರ್ಥಿಯು ಸುತ್ತಲಿನ ಪ್ರಪಂಚವನ್ನೇ ಮರೆಯುವನು. 'ಪುಸ್ತಕದ ಹುಳ' ವಾಗಿ ಗಿಳಿಪಾಠದಿಂದ ಪರೀಕ್ಷೆಯಲ್ಲಿ ಬೇಕಾದ 'ಗುಣ' ಗಳನ್ನು ಗಳಿಸಬಹುದು. ಆದರೆ ಈ ಗುಣಗಳು ಆತನ ಜೀವನಕ್ಕೆ, ಸುತ್ತಲಿನ ಸಮಾಜಕ್ಕೆ, 'ಬೇಕಾದ'ವುಗಳಲ್ಲ. ಜೀವನದ ಹೋರಾಟದಲ್ಲಿ ಇವುಗಳಿಗೆ ಬೆಲೆಯಿಲ್ಲ. ಇಂಥ ಶಿಕ್ಷಣದಲ್ಲಿ ಜೀವ ನಕ್ಕೆ ಹೊಂದಿಕೆಯಿಲ್ಲ. ಸಮಾಜದೊಡನೆ ಸಂಪರ್ಕ-ಸಹಕಾರಗಳಿಲ್ಲ. ಸರಿ

ಯಾದ ಸಾಮಾಜಿಕ ಜೀವನಕ್ಕೆ ಶಾಂತಿ–ಪ್ರೇಮ, ಸತ್ಯ–ಸಹಕಾರಗಳು ಅಗತ್ಯ ವಾದವುಗಳು. ಕೃತಿರೂಪವಾದ ಮೂಲಶಿಕ್ಷಣವು ಇವೆಲ್ಲ ಸದ್ಗುಣಗಳನ್ನು ಬೆಳೆಯುವ ಮಕ್ಕಳಲ್ಲಿ ತಂದುಕೊಡಬಲ್ಲದು. ಮಹಾತ್ಮಾಜಿಯವರು ಹೇಳು ವಂತೆ 'ಜಾತಿ ಜಾತಿಗಳಲ್ಲಿ, ರಾಷ್ಟ್ರ–ರಾಷ್ಟ್ರಗಳಲ್ಲಿ ಕಲಹಗಳಾಗಬಾರದೆಂದು ನಾವು ಬಯಸುತ್ತಿದ್ದರೆ, ಮೊದಲಿನಿಂದಲೂ ಮಕ್ಕಳಿಗೆ ಮೂಲಶಿಕ್ಷಣವನ್ನು ಕೊಟ್ಟು ಭದ್ರವಾದ, ವಿಶುದ್ಧವಾದ ತಳಹದಿಯಿಂದ ನಾವು ಪ್ರಾರಂಭಿಸಬೇಕು. **ಈ ಶಿಕ್ಷಣ ಯೋಜನೆಯು ಅಹಿಂಸೆಯಿಂದಲೇ ಉದಯ ಹೊಂದಿದೆ.** ಭಾರತವು ಅಹಿಂಸೆಯನ್ನು ಬಿಟ್ಟು ಕೊಡಲು ನಿರ್ಧರಿಸುವಾಗ್ಗೆ, ಈ ಮನೋ ವೃತ್ತಿಯನ್ನುಂಟುಮಾಡಲು ಮೂಲಶಿಕ್ಷಣವು ಪರಿಪೂರ್ಣವಾದ ಸಾಧನ ವಾಗಿದೆ.' ಸತ್ಯ, ಅಹಿಂಸೆಗಳನ್ನು ನೆಲೆಯಾಗಿಟ್ಟುಕೊಂಡ ಸಮಾಜವು ಸಮಾನತೆಯನ್ನು ಒಪ್ಪಲೇಬೇಕು. ಪರಸ್ಪರ ಸಂಪರ್ಕ ಸಹಕಾರಗಳಿಲ್ಲದ ಮೇಲು ಕೀಳೆಂಬ ವರ್ಗಗಳು ಇಂಥ ಸಮಾಜದಲ್ಲಿ ಉಳಿಯಲಾರವು, ಬೆಳೆಯ ಲಾರವು.

**ಮೂಲಶಿಕ್ಷಣವು ಕ್ರಿಯಾತ್ಮಕವಾಗಿದೆ.** ಉತ್ಪಾದಕವಾದ ಚಟು ವಟಿಕೆಯಲ್ಲಿ ಭೇದಭಾವವಿಲ್ಲದೆ ತೊಡಗಿದ ಬಾಲಕರಿಗೆ ಪರಸ್ಪರ ಬಳಕೆ ಹಾಗೂ ವಿಚಾರವಿನಿಮಯಗಳು ಅಗತ್ಯವಾಗಿಬಿಡುವವು. ತಾವೆಲ್ಲರೂ ಒಂದು ಸರ್ವಸಮ್ಮತವಾದ ಉದ್ದೇಶಕ್ಕಾಗಿ, ಸರ್ವಸಮ್ಮತವಾದ ರೀತಿಯಲ್ಲಿ ಕೆಲಸ ಮಾಡುವವರೆಂಬ ಸಾಂಘಿಕ ಭಾವನೆಯು ಅವರಲ್ಲಿ ತಾನಾಗಿಯೆ ಬೆಳೆದು ಬರುವದು. ಝುಕೀರ ಸಮಿತಿಯವರು ಹೇಳುವಂತೆ, ಭಂಗೀ–ಸಫಾಯಿ ಕೆಲಸ ವನ್ನೊಳಗೊಂಡು ಎಲ್ಲ ಬಗೆಯ ಉಪಯುಕ್ತವಾದ ಶಾರೀರಿಕ ದುಡಿತವನ್ನು ಗೌರವದಿಂದ ಕಾಣುವ ಕೆಲಸಗಾರರನ್ನು ಈ ಯೋಜನೆಯು ಸಿದ್ಧಗೊಳಿಸು ವದು. ಈ ಶಿಕ್ಷಣದಲ್ಲಿ ತರಬೇತಿಯನ್ನು ಪಡೆದವರು ಜೀವನದಲ್ಲಿ ಸಂತೋಷ ದಿಂದ ಸ್ವಾವಲಂಬಿಗಳಾಗುವರು. ಅವರಲ್ಲಿ ಸ್ವಾಭಿಮಾನವೂ ಕರ್ತೃತ್ವಶಕ್ತಿಯೂ ಉಂಟಾಗುವವು. ತಮ್ಮ ಪ್ರಗತಿಯನ್ನು ಸಾಧಿಸುವದಲ್ಲದೆ, ಸಹಕಾರದ ಸಾಮಾಜಿಕ ಜೀವನದಲ್ಲಿ ಸಾರ್ವಜನಿಕ ಸೇವೆಗೆ ಅವರು ಸದಾ ಸಿದ್ಧರಾಗು

ವರು. **ಮಕ್ಕಳ ಮಿದುವಾದ ಮನೋಭೂಮಿಕೆಯಲ್ಲಿ ಮೂಲಶಿಕ್ಷಣವು ಮೂಡಿಸಿದ ಜನಸೇವಾ ಬುದ್ಧಿಯು ಅವರ ಮುಂದಿನ ಜೀವನದಲ್ಲಿ ಬೆಳೆಯುತ್ತ ಹೋಗುವದು.** ಈ ಹೊಸ ಜೀವನದ ಆದರ್ಶವು ಮೂಲ ಶಿಕ್ಷಣದ ಅಂಗೋಪಾಂಗಗಳಲ್ಲೆಲ್ಲ ಹಿನ್ನೆಲೆಯಾಗಿ, ತಾತ್ವಿಕವಾಗಿ ಆವರಿಸಿದೆ. ಮೂಲೋದ್ಯೋಗ, ನಿಸರ್ಗ ಹಾಗೂ ಸಮಾಜಗಳು ಜೀವನದ ಮೂರು ಕೇಂದ್ರಗಳು. ಮೂಲಶಿಕ್ಷಣವೂ ಇವುಗಳನ್ನೇ ಶಿಕ್ಷಣದ ಮೂರು ಕೇಂದ್ರ ಗಳನ್ನಾಗಿ ಮಾಡಿಕೊಂಡು ಮಗುವಿನ ಸರ್ವತೋಮುಖವಾದ ವಿಕಾಸವನ್ನು ಸಾಧಿಸುವದು. ಹೊಸ ಜೀವನವು ಅಪೇಕ್ಷಿಸುವ ಸದ್ಗುಣಗಳನ್ನು ಈ ಮೂರು ಕೇಂದ್ರಗಳ ಸಹಾಯದಿಂದ ಮೂಲಶಿಕ್ಷಣವು ಮಕ್ಕಳಲ್ಲಿ ತಿಳಿಯದೆ ತಂದು ಕೊಡುವದು. ಉದ್ಯೋಗವು ತಾಳ್ಮೆಯನ್ನೂ, ಶ್ರಮಗೌರವವನ್ನೂ ಸಹಕಾರ– ಸ್ವಾವಲಂಬನಗಳನ್ನೂ ತರುವದು. ಪುಸ್ತಕ ವಿದ್ಯೆಯ ಪರೀಕ್ಷೆಗಳಂತೆ, ಮೂಲೋದ್ಯೋಗದ ಪ್ರಗತಿಮಾಪನದಲ್ಲಿ ತಗಲು–ಮೋಸಗಳಿಗೆ ಆಸ್ಪದವಿಲ್ಲ. ಶಿಕ್ಷಣದ ಮೂಲವಾದ ಗ್ರಾಮೋದ್ಯೋಗಗಳಲ್ಲಿ ಸ್ಪರ್ಧೆಗಳಿಗೆ ಸ್ಥಾನವಿಲ್ಲ. ಸೂಕ್ಷ್ಮರೂಪವಾಗಿ ನಡೆಯುವ ಶೋಷಣೆಯು ಇಲ್ಲಿ ಸಾಗಲಾರದು. ಬಡವ ಬಲ್ಲಿದರೆಂಬ ಭೇದಭಾವವಿಲ್ಲ. ಇದರಿಂದ ಸತ್ಯನಿಷ್ಠೆ, ಬಂಧುಭಾವ, ಸಮಾ ನತೆ, ನ್ಯಾಯಬುದ್ಧಿಗಳು ಉದ್ಯೋಗದೊಡನೆ ಬೆರೆತುಕೊಂಡುಬರುವವು. ನಿಸರ್ಗನಿರೀಕ್ಷಣೆ--ಸಂಪರ್ಕಗಳಿಂದ ನಿಸರ್ಗಪ್ರೇಮ, ಸರ್ವಪ್ರಾಣಿಗಳಲ್ಲಿ ಭೂತ ದಯೆಗಳು ಉಂಟಾಗುವವು. ಸಾಮಾಜಿಕ ಸೇವೆಯ ಸುಪ್ರಸಂಗಗಳಲ್ಲಿ ಮಕ್ಕಳು ಸಾಂಘಿಕ ಸಹಕಾರಜೀವನದ ಮರ್ಮವನ್ನು ಅರಿತುಕೊಳ್ಳುವರು. ನಿಜವಾಗಿ ನೋಡಿದರೆ– **ಪ್ರತಿಯೊಂದು ಮೂಲಶಿಕ್ಷಣ ಶಾಲೆಯು ಸಾಮಾಜಿಕ ಜೀವನದ ಕೇಂದ್ರವಾಗಬೇಕು.**

ಮೂಲಶಿಕ್ಷಣದ **ಅಭ್ಯಾಸಪತ್ರಿಕೆಗೂ** ಇದೇ ವಿಚಾರವೇ ಆಧಾರ ವಾಗಿದೆ. ಸಮಾಜವಿಜ್ಞಾನವು ಅಭ್ಯಾಸಪತ್ರಿಕೆಯಲ್ಲಿ ಒಂದು ವಿಷಯವಾಗಿದೆ. ತನ್ನ ನಾಡು ನುಡಿಗಳ ಬಗ್ಗೆ ಆದರವನ್ನು ತಾಳುವ, ಸಮಾಜದ ವಿಶ್ವಾಸ ವನ್ನು ಗಳಿಸುವ, ಸತ್ಯ, ಪ್ರೇಮ ಹಾಗೂ ನ್ಯಾಯಬುದ್ಧಿಗಳಿಂದ ಕೂಡಿದ

ವ್ಯಕ್ತಿಗಳ ನಿರ್ಮಾಣಕ್ಕೆ ಸಮಾಜವಿಜ್ಞಾನವು ಸಾಧನವಾಗಬೇಕು. ಸಮವಾಯ ಪಾಠದ ಮೆಟ್ಟಲುಗಳಲ್ಲಿಯೂ ಕೂಡ ಈ ಜೀವನ ದೃಷ್ಟಿಯೇ ಒಡೆದು ತೋರುವದು. ಜೀವನದ ವಿವಿಧ '**ಪರಿಸ್ಥಿತಿ**'ಗಳಲ್ಲಿ ನಮಗೆ ಒಂದು ಕಾರ್ಯ–ಚಟುವಟಿಕೆಯನ್ನು ಕೈಕೊಳ್ಳುವ '**ಪ್ರೇರಣೆ**'ಯಾಗುವದು. ಈ ಕಾರ್ಯಕ್ಕಾಗಿ ನಾವು ಯೋಚನೆ ಮಾಡಬೇಕು. ಯೋಚನೆಯಿಂದ ಮಾಡುವ ಕಾರ್ಯವೇ '**ಯೋಜನೆ.**' ಅವಶ್ಯವಿರುವ 'ಸಾಧನಸಾಮಗ್ರಿ' ಯನ್ನು ಸಂಗ್ರಹಿಸಬೇಕು. '**ವೇಳೆ–ವೆಚ್ಚ**' ಗಳ **ಅಂದಾಜು** ಮಾಡಬೇಕು. ತಪ್ಪು ತಡೆಗಳ '**ಪರಿಶೀಲನೆ**'ಯಾಗಬೇಕು. ಈ ಬಗೆಯಾಗಿ **ಸಮವಾಯ ಪಾಠದ ವಿಧಾನವು ಜೀವನದ ರೀತಿಯನ್ನೇ ಅನುಸರಿಸುವದು.** ಮುಂದಾಲೋಚನೆಯಿಂದ ಕಾರ್ಯದಲ್ಲಿ ಅಚ್ಚುಕಟ್ಟುತನ, ಅಂದಾಜಿನಿಂದ ಮುನ್ನೋಟ, ಸಾಂಘಿಕ ಚಟುವಟಿಕೆಯಿಂದ ಸಹಕಾರಭಾವನೆ, ಪರಿಶೀಲನೆಯಿಂದ ಆತ್ಮನಿರೀಕ್ಷಣೆ ಹಾಗೂ ಗುಣಗೌರವಗಳು ಸಮವಾಯ ಶಿಕ್ಷಣದೊಡನೆ ಸುಸಂಗತವಾಗಿ ಬರುವವು. **ಹೀಗೆ ಯಾವ ಬಗೆಯಿಂದ ನೋಡಿದರೂ ಮೂಲಶಿಕ್ಷಣವು ಹೊಸ ಸಮಾಜದ ರಚನೆಗೆ ಶ್ರೇಷ್ಠವಾದ ಸಾಂಸ್ಕೃತಿಕ ಸಾಧನವಾಗಿದೆ.**

**೪) ಮೂಲಶಿಕ್ಷಣವು ಹಳ್ಳಿಗಳಿಗಾಗಿ :—**

ಭಾರತದ ಬಹುಜನ ಸಮಾಜವು ಹಳ್ಳಿಗಳಲ್ಲಿ ನೆಲೆಸಿದೆ. **ಹಳ್ಳಿಗಳೇ ಭಾರತದ ಹೃದಯವೆಂದು** ಹೇಳುವದುಂಟು. ಒಂದು ಸಮಯದಲ್ಲಿ ಭಾರತದ ಹಳ್ಳಿಗಳು ಆರ್ಥಿಕ ದೃಷ್ಟಿಯಿಂದ ಸ್ವಯಂಪೂರ್ಣವಾಗಿದ್ದವು. ಶಿಕ್ಷಣಕ್ಕಾಗಿಯೂ ಅವು ಸ್ವಾವಲಂಬಿಯಾಗಿದ್ದವು. ಗ್ರಾಮಪಂಚಾಯತಿಗಳು ಹಳ್ಳಿಗಳಲ್ಲಿ ಶಿಕ್ಷಣಕಾರ್ಯವನ್ನು ವಹಿಸಿಕೊಂಡಿದ್ದವೆಂದು ಹಿಂದೆ ಹೇಳಿದೆ. ಬ್ರಿಟಿಶರ ಆಳಿಕೆಯಲ್ಲಿ ಗ್ರಾಮಪಂಚಾಯತಿಯ ಅಳಿಗಾಲದೊಡನೆ ಹಳ್ಳಿಗಳ ಅವನತಿಯೂ ಕೊನೆಮುಟ್ಟಿತು. ಗ್ರಾಮನಿಷ್ಠವಾದ ನಮ್ಮ ಸಂಸ್ಕೃತಿಯು ಇಳಿಮುಖವಾಯಿತು. ಹಳ್ಳಿಗಳಲ್ಲಿ ಶಿಕ್ಷಣವು ಮಾಯವಾಯಿತು. ವಿದೇಶೀಯ ಶಿಕ್ಷಣ ಪದ್ಧತಿಯು ಭಾರತದ ಹಳ್ಳಿಗರ ಜೀವನಕ್ಕೆ ಎಷ್ಟುಮಾತ್ರವೂ ಹೊಂದಿ

ಕೊಳ್ಳಲಿಲ್ಲ. ನಮ್ಮ ಬಡ ಹಳ್ಳಿಗಳಲ್ಲಿ ಕೇವಲ ಬೌದ್ಧಿಕ ಶಿಕ್ಷಣಕ್ಕೆ ಬೆಲೆಯಿಲ್ಲ. ದುಡಿತಕ್ಕೆ ಬೆಲೆಯಿದೆ. ಅಲ್ಲಿ ಮಗು ಮೊದಲಾಗಿ ಮುದುಕರ ವರೆಗೆ ಕುಟುಂಬದ ಹೆಣ್ಣು—ಗಂಡು—ಎಲ್ಲರೂ ದುಡಿದು ಗಳಿಸುವವರೆ. ಇದರಿಂದ ಹಳ್ಳಿಗರ ಮಕ್ಕಳು ಶಾಲೆಗೆ ಬಾರದಾದರು. ಬಂದವರಲ್ಲಿ ನೂರಕ್ಕೆ ಹತ್ತು ಬಾಲಕರು ಕೂಡ ನಾಲ್ಕನೆಯ ವರ್ಗವನ್ನು ಮುಟ್ಟುತ್ತಿರಲಿಲ್ಲ. ಸಾರ್ವಜನಿಕ ಹಣದ ಅಪಾರವಾದ ಹಾನಿಯು ಇದರಿಂದ ಉಂಟಾಗಿದೆ. ಮೂಲಶಿಕ್ಷಣವು ಈ ಹಾನಿಯನ್ನು ತಪ್ಪಿಸುವದು. ಹಳ್ಳಿಯ ಬಡ ಕುಟುಂಬಗಳು ತಮ್ಮ ಮಕ್ಕಳನ್ನು ಮನೆಗೆಲಸ—ಹೊಲಗೆಲಸಗಳನ್ನು ಬಿಡಿಸಿ ಶಾಲೆಗೆ ಕಳಿಸಲು ಸಿದ್ಧರಿಲ್ಲ. **ಮೂಲಶಿಕ್ಷಣವು ಉತ್ಪಾದಕವಾದ, ಜೀವನೋಪಯೋಗಿಯಾದ ಹಳ್ಳಿಯ ಹೋರೆಯೊಂದನ್ನು—ಕೈಗಾರಿಕೆಯನ್ನು ಶಿಕ್ಷಣದ ಕೇಂದ್ರವಾಗಿ—ಮಾಧ್ಯಮವಾಗಿ—ಮಾಡಿಕೊಳ್ಳುವದು. ಇದರಿಂದ ಶಾಲೆಯ ಶಿಕ್ಷಣವು ಹಳ್ಳಿಯ ಜೀವನದೊಡನೆ ಹೊಂದಿಕೊಳ್ಳುವದು.** ಮೇಲಾಗಿ 'ಗಳಿಸುತ್ತ ಕಲಿಯುವದು' ಮೂಲಶಿಕ್ಷಣದ ತತ್ವವಾಗಿದೆ. ಹಾದಿ ತಪ್ಪಿದ ದೊಡ್ಡೂರಿನ ಹಿರಿಯರಂತೆ ಹಳ್ಳಿಗರು ದುಡಿತವನ್ನು ಬಿಟ್ಟುಕೊಡಲಾರರು. ಮೂಲಶಿಕ್ಷಣವು ಅವರ ದುಡಿತಕ್ಕೆ ತಕ್ಕ ಸಂಸ್ಕಾರವನ್ನು ಕೊಟ್ಟು ಅದನ್ನೇ ಅವರ ಜ್ಞಾನದ, ಸಂಸ್ಕೃತಿಯ ಸಾಧನವನ್ನಾಗಿ ಮಾಡುವದು.

### ೫) ಮೂಲಶಿಕ್ಷಣವು ಸ್ವಾವಲಂಬನಶಿಕ್ಷಣವು :—

ಶಿಕ್ಷಣದಲ್ಲಿ 'ಸ್ವಾವಲಂಬನ' ವು ಹೊಸತೆಂದು ತೋರಬಹುದು; ವಿಚಿತ್ರವೆನಿಸಬಹುದು. ಆದರೆ 'ಸ್ವಾವಲಂಬನವು' ಮೂಲಶಿಕ್ಷಣಕ್ಕೆ ತಳಹದಿಯಾಗಿರುವ ತತ್ವಗಳಲ್ಲಿ ಒಂದಾಗಿದೆ. ಶಿಕ್ಷಣದಲ್ಲಿ ಸ್ವಾವಲಂಬನವು ಎರಡು ಮುಖವಾಗಿದೆ— ಆರ್ಥಿಕ, ನೈತಿಕ ಎಂದು. **ಆರ್ಥಿಕ ಸ್ವಾವಲಂಬನವು** ಒಂದು ವಿಶಿಷ್ಟವಾದ ಉದ್ದೇಶವನ್ನಿಟ್ಟುಕೊಂಡಿದೆ. ಅನೇಕ ಕಾರಣಗಳಿಂದ ಭಾರತದ ಆರ್ಥಿಕ ಪರಿಸ್ಥಿತಿಯು ಹದಗೆಟ್ಟಿದೆ. ಜನತೆಯ ಬಡತನವೂ ಭೀಕರವಾಗಿದೆ. ಸರಕಾರದ ಬೊಕ್ಕಸವೂ ಬಡವಾಗಿದೆ. ರಾಷ್ಟ್ರದ ಮಕ್ಕಳಿಗೆಲ್ಲ ಸಕ್ತಿಯ ಸಾರ್ವತ್ರಿಕ ಶಿಕ್ಷಣವನ್ನು ಕೊಡುವದು ಸರಕಾರದ ಶಕ್ತಿಗೆ ನಿಲುಕದಂತಿದೆ. ಶಿಕ್ಷಣದ

ಸಂಸ್ಕಾರವಿಲ್ಲದ ಜನಾಂಗ ಸತ್ವಹೀನವಾಗುವದು. ಸಕ್ತಿಯ ಸಾರ್ವತ್ರಿಕ ಶಿಕ್ಷಣಕ್ಕಾಗಿ ಅಂದು ವಂದ್ಯ ಗೋಖಲೆಯವರು ವಿದೇಶೀಯ ಆಡಳಿತದಲ್ಲಿ ವ್ಯರ್ಥವಾಗಿ ಯತ್ನಿಸಿದರು. ಇಂದಿನ ಸ್ವತಂತ್ರ ಸರಕಾರವಾದರೂ ಇದನ್ನು ಕೈಗೊಂಡು ಜನತೆಗಾಗಿ ತಾವು ಮಾಡಬೇಕಾದ ಕರ್ತವ್ಯವನ್ನು ಪಾಲಿಸಬೇಕು. ಆರ್ಥಿಕ ಅಸಮರ್ಥತೆ ಈ ಕಾರ್ಯದಲ್ಲಿ ಹೆಚ್ಚಿನ ಆತಂಕವಾಗಿದೆ. ಇದಕ್ಕಾಗಿ **ಶಿಕ್ಷಣವು ಅಂಶತಃ ಆದರೂ ಸ್ವಾವಲಂಬಿಯಾಗಬೇಕು.** ಸರಕಾರದ ಆರ್ಥಿಕ ಭಾರವನ್ನು ಕಡಿಮೆ ಮಾಡಬೇಕು. ಮೂಲೋದ್ಯೋಗಗಳಿಂದ ಮಕ್ಕಳು ಉತ್ಪಾದಿಸಿದ ವಸ್ತುಗಳನ್ನು ಸರಕಾರವು ಕಿಂಚಿತ್ ಹೆಚ್ಚು ಬೆಲೆ ಯನ್ನಾದರೂ ಕೊಟ್ಟು ಕೊಂಡುಕೊಳ್ಳಬೇಕು. ಜನತೆಯ ಸ್ವಾಭಿಮಾನವನ್ನು ಜಾಗೃತಗೊಳಿಸಿದರೆ ಅವರಾದರೂ ತಮ್ಮ ಮಕ್ಕಳ ವಸ್ತುವೆಂದು ಅಕ್ಕರತೆ ಯಿಂದ ತೆಗೆದುಕೊಳ್ಳಬಹುದು. ಹೀಗೆ ಮಾಡಿದಲ್ಲಿ, ರಾಷ್ಟ್ರದ ಮಕ್ಕಳಿಗೆಲ್ಲ ಒತ್ತಾಯದ ಪುಕ್ಕಟೆಯಾದ ಪ್ರಾಥಮಿಕ ಶಿಕ್ಷಣವನ್ನು ಕೊಡಲು ಶಕ್ಯವಾಗ ಬಹುದೆಂದು ಗಾಂಧೀಜಿಯವರ ಹೇಳಿಕೆಯಾಗಿದೆ. ಅಮೇರಿಕೆಯಂಥ ಧನಾಢ್ಯ ದೇಶಗಳಲ್ಲಿ ಅಲ್ಪಪ್ರಮಾಣದಿಂದ ಕೈಕೊಂಡ ಈಬಗೆಯ ಪ್ರಯೋಗಗಳಿಗೆ ಯಶಸ್ಸು ದೊರೆತಿರಲಿಕ್ಕಿಲ್ಲ. ಅದಕ್ಕೆ ಅನೇಕ ಕಾರಣಗಳೂ ಇರಬಹುದು. ಆದರೆ ಭಾರತದ ಬಡತನದಲ್ಲಿ, ಗ್ರಾಮನಿಷ್ಠ ಸಂಸ್ಕೃತಿಯ ಹಿನ್ನೆಲೆಯಲ್ಲಿ, ಸ್ವಾವಲಂಬನದ ಶಿಕ್ಷಣಕ್ಕೆ ಸಾಕಷ್ಟು ಆಸ್ಪದವಿದೆ. ಶಾಲೆಯ ಬಹುಮುಖ ವಾದ ವೆಚ್ಚವನ್ನು ವಿದ್ಯಾರ್ಥಿಗಳ ಗಳಿಕೆಯಿಂದ ನೀಗಿಸುವದು ಸಾಧ್ಯವಾಗು ವದು. ಆದರೆ ಶಿಕ್ಷಕರ ವೇತನದ ಬಹುಭಾಗವನ್ನಾದರೂ ಮಕ್ಕಳ ಮಾಸಿಕ ಗಳಿಕೆಯು ಪೂರೈಸುವಂತಾಗಬೇಕೆಂದು ಮಹಾತ್ಮಾಜಿಯವರ ಮನೀಷೆ ಯಾಗಿದೆ. ಮೂಲಶಿಕ್ಷಣದ ಯಶಸ್ವಿತೆಗೆ ಇದೇ ಒರೆಗಲ್ಲೆಂತಲೂ ಅವರ ಮತ ವಾಗಿದೆ.

**ನೈತಿಕ ಸ್ವಾವಲಂಬನದ** ಪ್ರಯೋಜನವು ಮಕ್ಕಳ ಮನೋವೃತ್ತಿ ಯನ್ನು ತಿದ್ದುವದಾಗಿದೆ. ಪುಸ್ತಕ ವಿದ್ಯೆಯಲ್ಲಿ ಎಷ್ಟೊಂದು ಪದವಿಗಳನ್ನು ಪಡೆದರೂ 'ಮುಂದೇನು?' ಎಂಬ ಪ್ರಶ್ನೆಯು ಇಂದಿನ ಸುಶಿಕ್ಷಿತರನ್ನು

ಪೀಡಿಸುವದು. ಕೇವಲ ಬೌದ್ಧಿಕ ಶಿಕ್ಷಣದ ಗುರಿಯಾದ 'ನೌಕರಿ'ಯು ದೊರೆಯದಂತಾದರೆ ಅವರಿಗೆ ಅಡವಿಯಲ್ಲಿ ಕಣ್ಣುಕಟ್ಟಿ ಬಿಟ್ಟಂತಾಗುವದು. ಸುಶಿಕ್ಷಿತರಲ್ಲಿ ನಿರುದ್ಯೋಗದ ಸಮಸ್ಯೆ ಇಂದಿನಂತೆ ತಲೆಯೆತ್ತುವದು. ಮೂಲ ಶಿಕ್ಷಣವು ಈ ಸಮಸ್ಯೆಗೆ ಒಂದು ಬಗೆಯ ಪರಿಹಾರೋಪಾಯವಾಗಿದೆ. ದುಡಿದು ಚರಿತಾರ್ಥ ಸಾಗಿಸಬಲ್ಲೆನೆಂಬ ಆತ್ಮವಿಶ್ವಾಸವು ಮೂಲಶಿಕ್ಷಣವನ್ನು ಪಡೆದವ ರಲ್ಲಿ ಅಂಕುರಿಸುವದು. ಯಾವ ದುಡಿತವನ್ನೂ ಕೀಳೆಂದು ಭಾವಿಸದೆ, **ಪ್ರಾಮಾಣಿಕತೆಯಿಂದ ಮಾಡುವ ಎಲ್ಲ ದುಡಿತವನ್ನೂ ಗೌರವದಿಂದ ಕಾಣುವ ಮನೋವೃತ್ತಿಯೂ** ಆತನಲ್ಲಿ ಬೆಳೆದುಬರುವದು. ಮೇಲಾಗಿ ಈ ಸ್ವಾವಲಂಬನದ ಭಾವನೆಯು ಜೀವನದಲ್ಲಿ ಅವನು ಕೈಕೊಳ್ಳುವ ಎಲ್ಲ ವ್ಯವಹಾರಗಳಿಗೂ ವ್ಯಾಪಿಸಬಹುದು.

ಮೂಲಶಿಕ್ಷಣದಲ್ಲಿ ಈ ಸ್ವಾವಲಂಬನ ತತ್ವವನ್ನು ಮೆಚ್ಚುವವರೂ ಹಲವರು; ಮೂದಲಿಸುವವರೂ ಕೆಲವರು. 'ಸರಕಾರವು ತನ್ನ ಹೊಣೆಗಾರಿ ಕೆಯ ಕಾರ್ಯಕ್ಕಾಗಿ ಮಕ್ಕಳ ದುಡಿತದ ಪ್ರಯೋಜನವನ್ನು ಈ ರೀತಿಯಾಗಿ ಪಡೆಯುವದು ಅನ್ಯಾಯ, ಬೆಳೆಯುವ ಮಕ್ಕಳಿಗೆ ಇದೊಂದು ಬಗೆಯ ಗುಲಾಮಗಿರಿ, ಶಿಕ್ಷರು ತಮ್ಮ ಶಾಲೆಯ ಪ್ರಾಪ್ತಿಯನ್ನು ಹೆಚ್ಚಿಸುವದಕ್ಕಾಗಿ ಮಕ್ಕಳ ದುಡಿತದ ದುರುಪಯೋಗ ಮಾಡಿಕೊಳ್ಳ ಬಹುದು—' ಇವೇ ಮೊದ ಲಾದ ಆಕ್ಷೇಪಗಳಿಗೆ ಗಾಂಧೀಜಿಯವರು ತಮ್ಮದೇ ಆದ ರೀತಿಯಲ್ಲಿ ಉತ್ತರಿ ಸಿರುವರು. ಪ್ರಾಮಾಣಿಕ ದುಡಿತವು ಗುಲಾಮಗಿರಿಯಲ್ಲ. ಶಾಲೆಯಲ್ಲಿ ಶಿಕ್ಷ ಕರು ದುಡಿಯಬೇಕಾಗುವದು. ತಮ್ಮ ಶಾಲೆಯ ಉತ್ಕರ್ಷಕ್ಕಾಗಿ, ತಮ್ಮೆಲ್ಲರ ಹಿತಕ್ಕಾಗಿ ಮಾಡುವ ದುಡಿತವು ಅವರಿಗೆ ಎಂದೂ ಕೇಡನ್ನು ಮಾಡಲಾರದು. ಇದಲ್ಲದೆ ಅವರ ಶ್ರಮದ ಪ್ರತಿಫಲವನ್ನು ಅವರಿಗೆ ಅನೇಕವಿಧವಾಗಿ ಮುಟ್ಟಿಸ ಬಹುದು. ವಿದ್ಯಾರ್ಥಿಗಳಿಗೆ ವಿವಿಧ ಸೌಕರ್ಯಗಳನ್ನು ಒದಗಿಸಬಹುದು. ಮೇಲಾಗಿ **ಮೂಲಶಿಕ್ಷಣದಲ್ಲಿ ಉದ್ಯೋಗವು 'ದುಡ್ಡಿಗಾಗಿ' ಇರುವ ದಿಲ್ಲ. ಅದು ಶಿಕ್ಷಣದ ಸಾಧನ.** ಮೂಲೋದ್ಯೋಗದ ಮುಖಾಂತರವಾಗಿ ಮಗುವಿನ ದೇಹ—ಮನಸ್ಸು—ಆತ್ಮಗಳ ಪೂರ್ಣ ವಿಕಾಸವನ್ನು ಮಾಡುವದೇ ಮೂಲಶಿಕ್ಷಣದ ಮುಖ್ಯೋದ್ದೇಶವಾಗಿದೆಯೆಂಬುದನ್ನು ಮರೆಯುವಂತಿಲ್ಲ.

**೬) ಮೂಲಶಿಕ್ಷಣವೂ ಹಳ್ಳಿಯ ಕೈಗಾರಿಕೆಗಳೂ :—**

ಗ್ರಾಮೋದ್ಯೋಗಗಳ ಮುಖಾಂತರ ಕೊಡುವ ಶಿಕ್ಷಣವೆಂತಲೂ ಮೂಲಶಿಕ್ಷಣದ ಬಗ್ಗೆ ಹೇಳುವದುಂಟು. ಮೂಲಶಿಕ್ಷಣದ ಕೇಂದ್ರವು ಜೀವನಾವಶ್ಯಕವಾದ ಒಂದು ಗ್ರಾಮೋದ್ಯೋಗ–ಹಳ್ಳಿಯ ಕೈಗಾರಿಕೆ–ಇರಬೇಕು. ಇದಕ್ಕಾಗಿ ಮೂಲಶಿಕ್ಷಣದ ವಿವೇಚನೆಯಲ್ಲಿ ಗ್ರಾಮೋದ್ಯೋಗಗಳ ಬಗ್ಗೆಯೂ ತಿಳಿದುಕೊಳ್ಳುವದು ಅವಶ್ಯವಿದೆ. **ಮೂಲಶಿಕ್ಷಣವು ಮರಣಪ್ರಾಯವಾದ ಹಳ್ಳಿಯ ಕೈಗಾರಿಕೆಗಳಿಗೆ ಮತ್ತೆ ಜೀವದಾನ ಮಾಡಬೇಕೆಂದು ಮಹಾತ್ಮರ ಮನೀಷೆಯಾಗಿದೆ.** ಭಾರತವು ತನ್ನ ವಿವಿಧವಾದ ಕೈಗಾರಿಕೆಗಳಿಂದ ಸಂಪತ್ತಿನ ಬೀಡು–ಸುವರ್ಣ ಭೂಮಿಯೆನಿಸಿತ್ತು. ಬ್ರಿಟಿಶರ ಆಳಿಕೆಯಲ್ಲಿ ಈ ಕೈಗಾರಿಕೆಗಳ ಬುದ್ಧಿಪೂರ್ವಕವಾದ ಕೊಲೆಯಾಯಿತು. ಅಸಂಖ್ಯ ಕಲಾವಿದರು, ಕಾರಾಗೀರರು ತಮ್ಮ ಪರಂಪರಾಗತವಾದ ಜೀವನವೃತ್ತಿಗೆ ಎರವಾದರು. ಹಳ್ಳಿಗಳ ಸಂಪತ್ತು ಮಾಯವಾಯಿತು. ಸಮೃದ್ಧವಾದ ಹಳ್ಳಿಗಳು ಬಡತನ–ನಿರುದ್ಯೋಗಗಳಿಂದ ಬಳಲತೊಡಗಿದವು. ಕೈಗಾರಿಕೆಗಳನ್ನು ಕಳೆದುಕೊಂಡವರು ಕೇವಲ ಭೂಮಿಗಳನ್ನು ಆಶ್ರಯಿಸಬೇಕಾಯಿತು. ಭೂಮಿಗಳಮೇಲೆ ಜನತೆಯ ಭಾರವು ಮಿತಿಮೀರಿ ಹೆಚ್ಚಾಯಿತು. ಜನಸಂಖ್ಯೆಯ ಮುಕ್ಕಾಲು ಭಾಗಕ್ಕೆ–ನೂರರಲ್ಲಿ ೭೫ ಜನರಿಗೆ ಭೂದೇವಿಯೆ ಗತಿಯಾದಳು. ಅನಿಶ್ಚಿತ ಮಳೆ, ತುಣುಕು ಭೂಮಿ, ಬರಗಾಲದ ಬೆದರಿಕೆ ವರುಷದಲ್ಲಿ ೩–೪ ತಿಂಗಳು ಕೆಲಸವಿಲ್ಲದ ವೈಗಳ್ಳತನ, ಇವೆಲ್ಲ ಸಂಗತಿಗಳು ಇಂದಿನ ಭಾರತದ ಹಳ್ಳಿಗಳಿಗೆ ಹೀನ–ದೀನ ಸ್ಥಿತಿಯನ್ನು ತಂದಿವೆ. ಭಾರತದ ಸರಾಸರಿ ವಾರ್ಷಿಕ ಉತ್ಪನ್ನವು ತಲೆಗೆ ೩೦ ರೂಪಾಯಿ ಮಾತ್ರ. ಇಷ್ಟು ಉತ್ಪನ್ನದಿಂದ ಮೂರುದಿನಕ್ಕೆ ಎರಡು ಊಟಗಳು ಮಾತ್ರ ಪ್ರತಿಯೊಬ್ಬನಿಗೆ ದೊರೆಯುವಂತಿದೆ. ಅಮೇರಿಕೆಯ ಸರಾಸರಿ ವಾರ್ಷಿಕ ಉತ್ಪನ್ನ ೧೫೦೦ ರೂಪಾಯಿಗಳು! —

ಹಿಂದೆ ಏನೇ ಇರಲಿ! ಇಂದು ಭಾರತದ ಬಹುಸಂಖ್ಯಾಕ ಜನರು ಒಕ್ಕಲತನವನ್ನೇ ಆಶ್ರಯಿಸಬೇಕಾಗಿದೆ. ವರುಷದ ಮೂರು ನಾಲ್ಕು ತಿಂಗಳಲ್ಲಿ

ಇವರೆಲ್ಲರೂ ನಿರುದ್ಯೋಗಿಗಳು. ಮೂವತ್ತುಕೋಟಿ ಜನತೆಯ ಕಾರ್ಯಶಕ್ತಿ-ಉತ್ಸಾಹಶಕ್ತಿ ಕರ್ನಾಟಕದ ನದಿಗಳ ಮಹಾಪೂರದಂತೆ ವರುವರುಷವೂ ವ್ಯರ್ಥವಾಗಿ ಹರಿದುಹೋಗುತ್ತಿದೆ. ಈ ದುಃಸ್ಥಿತಿಯನ್ನು ಹೋಲಾಡಿಸಲು ಹಳ್ಳಿಯ ಕೈಗಾರಿಕೆಗಳಿಗೆ ಹೊಸದಾಗಿ ಜೀವಕಳೆಯನ್ನು ತುಂಬುವದೇ ಒಂದು ಉಪಾಯವಾಗಿದೆ. ಈ ನಿಶ್ಶಬ್ದವಾದ ಸಾಮಾಜಿಕ ಕ್ರಾಂತಿಯನ್ನುಂಟು ಮಾಡಲು ಮೂಲಶಿಕ್ಷಣವು ಒಳ್ಳೇ ಸಾಧನವಾಗಿರುವದೆಂದು ಮಹಾತ್ಮಾಜಿಯವರು ಹೇಳಿರುವರು. ಮೂಲಶಿಕ್ಷಣದಲ್ಲಿ ನೂಲುವದು, ನೇಯುವದು, ಬಡಿಗತನ, ಒಕ್ಕಲತನಗಳನ್ನು ಕಲಿಸುವರು. ಏಳು ವರುಷಗಳ ನಂತರ ಇವೆಲ್ಲ ಉದ್ಯೋಗಗಳಲ್ಲಿ ಶಿಕ್ಷಣಪಡೆದ ಸಾವಿರಾರು ವಿದ್ಯಾರ್ಥಿಗಳು ಹೊರಬೀಳುವರು. ಮುಂದೆ ಅವರ ಗತಿಯೇನು? ಈಗಾಗಲೇ ಈ ಉದ್ಯೋಗಗಳಲ್ಲಿ ತೊಡಗಿದವರೊಡನೆ ಇವರು ವಿಷಮತೆಯಿಂದ ಸ್ಪರ್ಧಿಸಬಹುದಲ್ಲವೆ? ಹೀಗೆ ಕೆಲವರು ಸಂಶಯಪಡುವರು. ಈ ಸಂಶಯವು ನಿರಾಧಾರವಾಗಿದೆ. ಮೂಲಶಿಕ್ಷಣದಲ್ಲಿ ಒಂದು ವಿಶಿಷ್ಟ ಕಲೆಯ ಇಲ್ಲವೆ ವಿಷಯಗಳ ಶಿಕ್ಷಣವಿಲ್ಲ. ಅದೊಂದು ಶಿಕ್ಷಣ ವಿಧಾನ ಯೋಜನೆ. **ಈ ಹೊಸಯೋಜನೆ ಉದ್ಯೋಗ ಮೂಲವಾಗಿದೆ ಮಾತ್ರ. ಮೂಲಭೂತವಾದ ಉದ್ಯೋಗವು ಮಕ್ಕಳ ಸರ್ವತೋಮುಖವಾದ ಶಿಕ್ಷಣಕ್ಕೆ–ವಿಕಾಸಕ್ಕೆ ಆಧಾರವಾಗಬೇಕು.** ಹೊಸಯೋಜನೆಯ ವಿಚಾರ–ವಿಮರ್ಶೆ ಮಾಡುವಾಗ್ಗೆ ಈ ಮುಖ್ಯ ಮಾತನ್ನೆಂದಿಗೂ ಮರೆಯಕೂಡದು. **ಶಿಕ್ಷಣಶಾಸ್ತ್ರ ದೃಷ್ಟಿಯಿಂದಲೇ ಮೂಲಶಿಕ್ಷಣವನ್ನು ಸಮೀಕ್ಷಿಸಬೇಕಲ್ಲದೆ, ಲಾಭಹಾನಿಯ ಗಣಿತಕ್ಕೆ ಅದನ್ನು ಗುರಿಯಾಗಿ ಮಾಡಬಾರದು.** ಉದ್ಯೋಗದ ಎಳೆಗಳನ್ನು ವಿವಿಧ ವಿಷಯಗಳಿಗೆ ಹೊಂದಿಸಿ ವ್ಯಕ್ತಿಯ ಜೀವನಕ್ಕೆ ಸುಂದರವಾದ ಸುಸಂಸ್ಕೃತಿಯ ಸ್ವರೂಪವನ್ನು ತಂದುಕೊಡಲು ಈ ಯೋಜನೆಯು ಹವಣಿಸುತ್ತಿದೆ. ಇದರಿಂದ ಯಾವ ಬಗೆಯ ಸ್ಪರ್ಧೆಗೂ ಅವಕಾಶವಿಲ್ಲ. ಹಾಗೂ ಮೂಲೋದ್ಯೋಗವು ಮುಂದಿನ ಚರಿತಾರ್ಥಕ್ಕೆ ಸಾಧನವಾಗುವದು.

ಈಗಿನ ಯಂತ್ರಯುಗದಲ್ಲಿಯೂ ಕೈಗಾರಿಕೆಗಳಿಗೆ ಇಷ್ಟೊಂದು ಮಹತ್ವ

ವನ್ನು ಕೊಡುವದು ಹಾಗೂ ರಾಷ್ಟ್ರೀಯ ಶಿಕ್ಷಣ ಯೋಜನೆಯಲ್ಲಿ ಅವುಗಳಿಗೆ ಇಷ್ಟೊಂದು ಉನ್ನತಸ್ಥಾನವನ್ನು ಕಲ್ಪಿಸುವದು ಪುನಃ ಕಾಡು ಸ್ಥಿತಿಗೆ ತೆಗೆದು ಕೊಂಡು ಹೋದಂತೆ-ಎಂಬ ಈ ಆಕ್ಷೇಪಕ್ಕೆ ಇಂದಿನ ಜಗತ್ತಿನ ಪರಿಸ್ಥಿಯ ಅಜ್ಞಾನವೂ ಹಾಗೂ ಅರ್ಥಶಾಸ್ತ್ರದ ವಿಪರ್ಯಾಸವೂ ಕಾರಣವೆಂದು ಹೇಳ ಬಹುದು. ಯಂತ್ರಯುಗದಲ್ಲಿ ಮುಂದರಿದ ಕೆಲವು ರಾಷ್ಟ್ರಗಳು ಇಂದು ಮುಂದೊರೆದಂತೆ ತೋರುತ್ತವೆ. ಆದರೆ ಈ ಸಂಪತ್ತು ನ್ಯಾಯ-ನೀತಿಗಳನ್ನು ಲೆಕ್ಕಿಸದೆ ಈ ರಾಷ್ಟ್ರಗಳು ಸಿದ್ಧಗೊಳಿಸಿದ ತಮ್ಮ ಸರಕುಗಳನ್ನು ಅಧೀನರಾಷ್ಟ್ರ ಗಳಮೇಲೆ ಒತ್ತಾಯದಿಂದ ಹೇರಿ ಬಂದುದು. ಇದಲ್ಲದೆ ಯಂತ್ರಗಳು ತಂದು ಕೊಡುವ ಸಂಪತ್ತು ಕೆಲ ಜನ ಸಿರಿವಂತರ ಕೈಯಲ್ಲಿ ಮಾತ್ರ. ಬಡವರು ಬಡವರಾಗಿಯೇ ಉಳಿಯುವರು. ಆದರೆ ಕೈಗಾರಿಕೆಯ ಮಾತು ಹೀಗಲ್ಲ. ಅವುಗಳ ಪ್ರಚಾರಕ್ಕೆ ಮದ್ದು ಗುಂಡುಗಳ ನೆರವು ಬೇಕಿಲ್ಲ, ಹಿಂಸೆಯ ಗಾಳಿಯೂ ಕೂಡ ಅವುಗಳಿಗೆ ಸೋಂಕುವದಿಲ್ಲ. ಕೈಗಾರಿಕೆಗಳೆಂದೂ ಕೆಲ ಜನರ ಸೊತ್ತಾಗಿ ಮಾತ್ರ ಉಳಿಯುವದಿಲ್ಲ. ಸಿರಿವಂತರ ಸಂಪತ್ತನ್ನು ಹೆಚ್ಚಿಸದೆ ಬಡವರ ಬಡತನವನ್ನು ಕೆಲಮಟ್ಟಿಗಾದರೂ ಅವು ಕಡಿಮೆ ಮಾಡುವವು. ಯಾಂತ್ರಿಕ ವ್ಯವಸಾಯಕ್ಕೆ ಹೆಜ್ಜೆ ಹೆಜ್ಜೆಗೂ ಸ್ಪರ್ಧೆ. **ಕೈಗಾರಿಕೆಗಳಿಗೆ ಈ ಆತ್ಮಘಾತುಕವಾದ ಸ್ಪರ್ಧೆಯ ಭೀತಿಯಿಲ್ಲ.** ಕೈಗಾರಿಕೆಗಳು ಪರಸ್ಪರ ಸಹಕಾರದಿಂದ ಸ್ವಾವಲಂಬಿಗಳಾಗಿ ಸಾಗುವವು. ಭಾರತದಲ್ಲಿ ಕೈಗಾರಿಕೆಗಳಿಂದ ಇನ್ನೊಂದು ವಿಶಿಷ್ಟವಾದ ಪ್ರಯೋಜನವಿದೆ. ನಮ್ಮ ದೇಶದ ಬಹುಸಂಖ್ಯಾಕರಾದ ಒಕ್ಕಲಿಗರಿಗೆ ಕೈಗಾರಿಕೆಗಳು ಕೆಲಸವಿಲ್ಲದ ಸಮಯದಲ್ಲಿ ಉತ್ಪಾದಕವಾದ ಕೆಲಸವನ್ನು ಒದಗಿಸಿಕೊಡುವವು. ದೇಶದ ಬಹುಸಂಖ್ಯಾಕ ಜನರ ನಾಲ್ಕು ತಿಂಗಳದ ನಿರುದ್ಯೋಗಿತೆಯನ್ನಾದರೂ ಹೋಗಲಾಡಿಸುವದು ಆರ್ಥಿಕ ದೃಷ್ಟಿಯಿಂದಲೂ ಸಣ್ಣ ಸಂಗತಿಯೆನಿಸದು.

**ಕೈಗಾರಿಕೆಯ ಇವೆಲ್ಲ ಕಲ್ಯಾಣಕಾರಕ ಗುಣಗಳಿಗಾಗಿಯೇ ಈ ಹೊಸಯೋಜನೆಯಲ್ಲಿ ಅವುಗಳಿಗೆ ಇಷ್ಟೊಂದು ಪ್ರಾಧಾನ್ಯತೆ.** ಯಾಕೆಂದರೆ ಯಂತ್ರಗಳ ಕಾರ್ಯದಂತೆ ಕೈಗಾರಿಕೆಯು ನಿರ್ಜೀವವಾದುದಲ್ಲ.

ಅದೊಂದು ಸಜೀವವಾದ ಕಲೆ. ವ್ಯಕ್ತಿಯ ಆತ್ಮಶಕ್ತಿಗಳನ್ನೆಲ್ಲ ಅರಳಿಸಿ ಅವುಗಳನ್ನು ರೂಪುಗೊಳಿಸುವ ಶಕ್ತಿಯು ಕೈಗಾರಿಕೆಗೆ ಮಾತ್ರ ಉಂಟು. ಕಲೆಯ ಮುಖಾಂತರವಾಗಿ ಆಗುವ ಆತ್ಮಶಕ್ತಿಗಳ ಆವಿಷ್ಕರಣಕ್ಕೆಯೇ ಹೊಸ ಯೋಜನೆಯಲ್ಲಿ 'ಆತ್ಮ ಪ್ರಕಾಶನ' ವೆಂದು ಕರೆದಿರುವರು. ಶಿಕ್ಷಣದ ಉದ್ದೇಶಗಳಲ್ಲಿ ಇದು ಅತ್ಯಂತ ಶ್ರೇಷ್ಠವಾದುದು, ಕೊನೆಯ ಮಾತೆನ್ನಬಹುದು. **ಕೈಗಾರಿಕೆಯು ಜನಜೀವನಕ್ಕೆ ಸಂಪೂರ್ಣವಾಗಿ ಹೊಂದಿಕೊಳ್ಳುವದು.** ಶಿಕ್ಷಣವನ್ನು ಜೀವನದೊಡನೆ ಕೀಲಿಸಿ-'ಹಾಲುಸಕ್ಕರೆ ಬೆರೆಸಿದಂತೆ'-ಎರಡನ್ನೂ ಸಮರಸವಾಗಿ ಹೊಂದಿಸಿ--ಜೀವನದ ಸವಿಯನ್ನು ಹೆಚ್ಚಿಸುವದೇ ಮೂಲಶಿಕ್ಷಣದ ಕಾರ್ಯವಾಗಿದೆ. ಮೂಲಭೂತವಾದ ಕೈಗಾರಿಕೆಯು ಈ ಕಾರ್ಯದಲ್ಲಿ ಅತ್ಯಂತ ಸಹಕಾರಿಯಾಗಿದೆ, ಅತ್ಯುತ್ತಮವಾದ ಸಾಧನವಾಗಿದೆ.

### ೭) ಶಿಕ್ಷಣದ ಕೇಂದ್ರವಾದ ಮೂಲೋದ್ಯೋಗ:—

ಮೂಲಶಿಕ್ಷಣದ ವೈಶಿಷ್ಟ್ಯವು ಮೂಲೋದ್ಯೋಗವಾಗಿದೆ. ಇದುವರೆಗಿನ ಶಿಕ್ಷಣಕ್ಕೆ ಪುಸ್ತಕಗಳೇ ಮಾಧ್ಯಮ. ಪುಸ್ತಕಗಳ ಮುಖಾಂತರವಾಗಿಯೆ ಮಗುವಿನ ಬುದ್ಧಿವಿಕಾಸ. ಪಠ್ಯ ಪುಸ್ತಕಗಳ ವಿವರಣೆಯು ಶಿಕ್ಷಕನ ಕಾರ್ಯ. ಆತನು ಹೇಳಿದ್ದನ್ನು ಕೇಳಿಕೊಳ್ಳುವದು ಬಾಲಕರ ಕಾರ್ಯ. ವೇಳಾಪತ್ರಿಕೆಯ ಗಂಟೆಗಳಂತೆ ವಿಷಯಗಳು ಬದಲಿಸಬೇಕು. ಮಕ್ಕಳ ಆಸ್ಥೆ-ಅವಧಾನಗಳು ವೇಳಾಪತ್ರಿಕೆಯ ತಾಳಕ್ಕೆ ಸರಿಯಾಗಿ ಕುಣಿಯಬೇಕು. ಮೂಲಶಿಕ್ಷಣವು ಈ ಕೃತ್ರಿಮತೆಯನ್ನು ಹೊರದೂಡಿದೆ, ತೀರ ಹೊಸಹಾದಿಯನ್ನು ಹಾಕಿಕೊಂಡಿದೆ. ಮೂಲಶಿಕ್ಷಣದಲ್ಲಿ ಒಂದು ಉದ್ಯೋಗವು ಶಿಕ್ಷಣದ ಮಾಧ್ಯಮವಾಗಬೇಕು. ಈ ಉದ್ಯೋಗದ ಮುಖಾಂತರವಾಗಿಯೆ ಮಗುವಿನ ಶಿಕ್ಷಣವು ಪ್ರಾರಂಭವಾಗಬೇಕು, ಮುಕ್ತಾಯವಾಗಬೇಕು. ಉಳಿದ ವಿಷಯಗಳಂತೆ, ಇಲ್ಲವೇ ಉಳಿದ ವಿಷಯಗಳೊಡನೆ ಉದ್ಯೋಗವೂ ಒಂದು ವಿಷಯವಾಗಬೇಕು ಎಂಬುದು ಇದರರ್ಥವಲ್ಲ. ಏಳು ವರುಷಗಳ ಒತ್ತಾಯದ ಶಿಕ್ಷಣಕಾಲದಲ್ಲಿ ಬಾಲಕರು ಈ ಉದ್ಯೋಗದಲ್ಲಿ ಸಾಕಷ್ಟು ಪರಿಣತಿಯನ್ನು ಪಡೆಯುವದರ ಜೊತೆಗೆ ಒಳ್ಳೇ ನಾಗರಿಕ–ಸಾಮಾಜಿಕ–ಜೀವನಕ್ಕೆ ಬೇಕಾಗುವ ಪಾತ್ರತೆ

ಯನ್ನೂ ಪಡೆಯಬೇಕು. ಉದ್ಯೋಗದ ವಿವಿಧ ವಿಧಾನಗಳನ್ನು ಸೋಪಪತ್ತಿಕ
ವಾಗಿ ತಿಳಿದುಕೊಳ್ಳುವದರಲ್ಲಿ ಸಂದರ್ಭೋಚಿತವಾಗಿ ವಿಷಯಜ್ಞಾನವನ್ನು
ಸಂಗ್ರಹಿಸಬೇಕು. ಮಗುವಿನ ಬುದ್ಧಿ ಹೃದಯಗಳ ವಿಕಾಸವಾಗಬೇಕು.
ಶಿಕ್ಷಣವು ಮುಗಿದಮೇಲೆ ತಾನು ಕಲಿತ ಉದ್ಯೋಗವನ್ನೇ ಮುಂದರಿಸಿ ತನ್ನ
ಜೀವನವನ್ನು ಸಾಗಿಸಲು ಮಗು ಸಮರ್ಥನಾಗಬೇಕು. "ಕೈಗಾರಿಕೆಗಳನ್ನು
ಕೇವಲ ಉತ್ಪಾದನ ಕಾರ್ಯಕ್ಕಾಗಿ ಕಲಿಸಬೇಕಂತಲ್ಲ; ಆದರೆ ಅವುಗಳಿಂದ
ವಿದ್ಯಾರ್ಥಿಗಳ ಬುದ್ಧಿವಿಕಾಸವಾಗಬೇಕು"—ಎಂದು ಗಾಂಧೀಜಿಯವರು ಇದೇ
ಮಾತನ್ನೇ ಒತ್ತಿ ಹೇಳಿರುವರು. "ಕೀಲಿಕೈಯಿಂದ ಕೀಲಿಯನ್ನು ತೆಗೆಯು
ವಂತೆ, **ಉದ್ಯೋಗವೆಂಬ ಕೀಲಿಕೈಯಿಂದ ಜೀವನದ ಬಾಗಿಲವನ್ನು
ತೆರೆದು, ಜೀವನ ಹಾಗೂ ಜೀವನಕ್ಕೆ ಸಂಬಂಧಿಸಿದ ವಿಷಯಗಳ ಪರಿ
ಚಯವನ್ನು ಮಾಡಿಕೊಡುವದು**" ಮೂಲಶಿಕ್ಷಣದ ಉದ್ದೇಶವಾಗಿರುವ
ದೆಂದು ಶ್ರೀ. ವಿನೋಬಾಜಿಯವರು ಹೇಳಿದುದರ ಮಥಿತಾರ್ಥವೂ ಇದೇ.

**ಮೂಲೋದ್ಯೋಗವು ಹೇಗಿರಬೇಕು ? :—**

ಮಾನವನು ಯಾವ ದೇಶದಲ್ಲಿರಲಿ, ಯಾವ ಕಾಲದಲ್ಲಿರಲಿ, ಯಾವುದೇ
ಪರಿಸ್ಥಿತಿಯಲ್ಲಿರಲಿ—ಆತನ ಜೀವನಕ್ಕೆ ಕೆಲವೊಂದು ಸಂಗತಿಗಳು ತೀರ ಅವಶ್ಯ
ವಾದವುಗಳು, ಅಗತ್ಯವಾದವುಗಳು. ಜೀವಧಾರಣೆಗೆ ಆಹಾರವು ಬೇಕು.
ಮಾನರಕ್ಷಣೆಗಾಗಿ ಬಟ್ಟೆ ಬೇಕು. ಮಳೆ—ಬಿಸಿಲುಗಳಿಂದ ದೇಹವನ್ನು ರಕ್ಷಿಸಲು,
ಇರಲು ಆತನಿಗೊಂದು ಆಸರ—ಮನೆ ಬೇಕು. ಆಹಾರ ಸಂಪಾದನೆಗಾಗಿ ಯಾವ
ಉದ್ಯೋಗವನ್ನು ಕೈಕೊಂಡರೂ ಅದಕ್ಕಾಗಿ ಕೆಲವೊಂದು ಉಪಕರಣಗಳು
ಬೇಕು. ಆಹಾರ—ಬಟ್ಟೆ—ಆಸರ (ಹಾಗೂ ಉಪಕರಣಗಳು) ಇವುಗಳಿಗೆ ನಮ್ಮ
**ಜೀವನದ 'ಪ್ರಾಥಮಿಕ ಬೇಡಿಕೆಗಳು'** ಎಂದು ಹೇಳುವದುಂಟು. ಆದಿ
ಮಾನವನಿಂದ ಆಧುನಿಕ ಮಾನವನ ವರೆಗೆ **ಈ ಪ್ರಾಥಮಿಕ ಬೇಡಿಕೆಗಳ
ಪೂರೈಕೆಯೇ ನಮ್ಮ ಜೀವನದ ಪ್ರೇರಕ ಶಕ್ತಿಯಾಗಿದೆ.** ಆಹಾರ—
ಬಟ್ಟೆ—ಆಸರಗಳಿಗಾಗಿ ಉಪಯೋಗಿಸುವ ವಸ್ತುಗಳು ಬದಲಿಸಿದರೂ ಮೂಲ
ಬೇಡಿಕೆಯು ಒಂದೇ ವಿಧವಾಗಿದೆ. ಕಾಡುಸ್ಥಿತಿಯಲ್ಲಿದ್ದ ಮೂಲ ಮಾನವನು

ಬೇಟೆಯಾಡಿ ದೊರಕಿದ ಮಾಂಸವನ್ನೋ ಇಲ್ಲವೇ ಗಡ್ಡೆ ಗೆಣಸುಗಳನ್ನೋ ತಿಂದು ಜೀವಿಸುತ್ತಿದ್ದಿರಬಹುದು. ಎಲೆ ತೊಗಟೆಗಳಿಂದ ತನ್ನ ದೇಹವನ್ನು ಮುಚ್ಚಿಕೊಳ್ಳುತ್ತಿರಬಹುದು. ಗಿಡಗಳ ಪೊದರುಗಳಲ್ಲಿಯೂ ಗವಿಗಳಲ್ಲಿಯೂ 'ಆಸರ' ಪಡೆಯುತ್ತಿರಬಹುದು. ಮೊನೆಯಾದ ಕಲ್ಲುಗಳನ್ನೇ ತನ್ನ ಆಯುಧಗಳನ್ನಾಗಿ ಉಪಕರಣಗಳನ್ನಾಗಿ ಉಪಯೋಗಿಸುತ್ತಿರಬಹುದು. **ಈ ಪ್ರಾಥಮಿಕ ಬೇಡಿಕೆಗಳ ಪೂರೈಕೆಗಾಗಿ ಮಾನವನು ಕೈಕೊಂಡ ಉದ್ಯೋಗ-ಪ್ರಯೋಗಗಳಿಂದಲೇ ಜೀವನದ ಉತ್ಕ್ರಾಂತಿಯಾಗಿದೆ; ನಾಗರಿಕತೆಯ ನಿರ್ಮಾಣವಾಗಿದೆ.** ಮಾನವನ ಇದುವರೆಗಿನ 'ಇತಿಹಾಸ'ಕ್ಕೆ ಈ ಬಗೆಯ ಉದ್ಯೋಗವೇ ಮೂಲಾಧಾರವಾಗಿದೆ. ಈ ಉದ್ಯೋಗ-ಪ್ರಯೋಗಗಳ ಪ್ರಭಾವದಿಂದಲೇ ಮಾನವನು ನಿಸರ್ಗದ ಸಮೃದ್ಧವಾದ ಸಂಪತ್ತಿಯನ್ನು ಸೂರೆಗೊಂಡಿರುವನು. ನಿಸರ್ಗದಲ್ಲಿ ಮರೆಯಾಗಿರುವ ಮಹಾಶಕ್ತಿಗಳನ್ನು ಕಂಡುಹಿಡಿದಿರುವನು. ತನ್ನ ಜೀವನದ ಪ್ರಾಥಮಿಕ ಬೇಡಿಕೆಗಳಲ್ಲಿ ವಿವಿಧ ಸೌಕರ್ಯಗಳನ್ನು ಸಾಧಿಸಿರುವನು. ನಿಸರ್ಗದ ಮಹಾಶಕ್ತಿಗಳನ್ನು ತನ್ನ ಊಳಿಗದ ಆಳುಗಳನ್ನಾಗಿ ಮಾಡಿ ಎಷ್ಟೊಂದು ರೀತಿಯಿಂದ ದುಡಿಸಿಕೊಳ್ಳುತ್ತಿರುವನು.

೧) **ಹೊಸ ಶಿಕ್ಷಣದಲ್ಲಿ ಮೂಲೋದ್ಯೋಗವು ಜೀವನದ ಪ್ರಾಥಮಿಕ ಬೇಡಿಕೆಗಳಾಗಿರುವ ಆಹಾರ, ಬಟ್ಟೆ, ಆಸರಗಳನ್ನು ಒದಗಿಸಬಹುದಾದ ಉದ್ಯೋಗ-ಕಲೆ-ಯಾಗಿರಬೇಕು.** ಜೀವನವೇ ಈ ಉದ್ಯೋಗವನ್ನು ಅವಲಂಬಿಸಿರುವದರಿಂದ ಇದು ಉದ್ದೇಶಪೂರ್ಣವಾದ ಚಟುವಟಿಕೆಯಾಗುವದು, ಶಿಕ್ಷಣದಲ್ಲಿ ಸಜೀವತೆಯುಂಟಾಗುವದು. ಜೀವನ-ಶಿಕ್ಷಣಗಳೆರಡೂ ಬೇರೆ ಬೇರೆಯಾಗಿ ಉಳಿಯದೆ, ಅವುಗಳಲ್ಲಿ ಅನ್ಯೋನ್ಯತೆಯುಂಟಾಗುವದು.

೨) **ಮೂಲೋದ್ಯೋಗವು 'ಉತ್ಪಾದಕ'ವಾಗಿರಬೇಕು.** ಇಂಥ ಉತ್ಪಾದಕವಾದ ಉದ್ಯೋಗದಿಂದಲೇ ಮಗುವಿನ ಸರ್ವಶಕ್ತಿಗಳ ವಿಕಾಸವಾಗುವದು. ಆತನಲ್ಲಿ ಹುದುಗಿದ ನಿಸರ್ಗದತ್ತವಾದ ನಿರ್ಮಾಣ ಶಕ್ತಿಗೆ

ಅನುವು ದೊರೆಯುವದು. ಜೀವನದಲ್ಲಿ (ಹಾಗೂ ಕೆಲವೊಂದು ಅಂಶದಿಂದ ಶಿಕ್ಷಣದಲ್ಲಿ ಕೂಡ) ಸ್ವಾವಲಂಬನವನ್ನು ಸಾಧಿಸಲು ಇದರಿಂದ ಅನುಕೂಲ ವಾಗುವದು.

೩) **ಮೂಲೋದ್ಯೋಗವು 'ಶೈಕ್ಷಣಿಕ' ವಾಗಿರಬೇಕು.** ಮಗು ವಿನ ದೇಹ-ಮನ-ಆತ್ಮಗಳ ಸರ್ವತೋಮುಖವಾದ ವಿಕಾಸವನ್ನು ಸಾಧಿಸಿದರೆ ಮಾತ್ರ ಅದು ಶೈಕ್ಷಣಿಕವೆನಿಸುವದು. ಮೂಲೋದ್ಯೋಗವು ಮಗುವಿನಲ್ಲಿ ಹುದುಗಿದ ವಿವಿಧ ಶಕ್ತಿಗಳನ್ನು ಬೆಳಕಿಗೆ ತರಬೇಕು, ಬೆಳೆಯುವಂತೆ ಮಾಡ ಬೇಕು. ಉಳಿದ ವಿಷಯಗಳೊಡನೆ ಯಾವದೊಂದು ಉದ್ಯೋಗವನ್ನು ಕಲಿ ಸುವದು ಮಾತ್ರ ಮೂಲಶಿಕ್ಷಣದ ಜೀವನ ಶಿಕ್ಷಣದ ಉದ್ದೇಶವಾಗಿಲ್ಲ. ಮೂಲೋದ್ಯೋಗದಲ್ಲಿ ತೊಡಗಿದ ಮಗುವು ನೇರವಾಗಿ ಇಲ್ಲವೇ ನೈಮಿತ್ತಿಕ ವಾಗಿ ವಿವಿಧ ವಿಷಯಜ್ಞಾನವನ್ನು ಸಂಪಾದಿಸಿ ತನ್ನ ಬುದ್ಧಿ ವಿಕಾಸವನ್ನು ಮಾಡಿಕೊಳ್ಳುವನು. ಉದ್ಯೋಗದ ಮುಖಾಂತರವೇ ತನ್ನ ಶರೀರವನ್ನೂ ಬಲಪಡಿಸಿಕೊಳ್ಳುವನು. ಮುಂದಿನ ಜೀವನಕ್ಕಾಗಿ ತನ್ನ ಅವಯವಗಳ ಉಪ ಯೋಗದಲ್ಲಿ ಕುಶಲತೆಯನ್ನು ಪಡೆಯುವನು. **ಜೀವನ ಸಂಗ್ರಾಮಕ್ಕಾಗಿ ತನ್ನ ಶರೀರವನ್ನು ಕಾರ್ಯಕ್ಷಮವಾಗಿ ಮಾಡುವನು.** ಮೂಲೋ ದ್ಯೋಗವು ಮಗುವಿಗೆ ತಾಳ್ಮೆ, ಸಹಕಾರ, ಸಹಾನುಭೂತಿ ಮೊದಲಾದ ಸಾಮಾಜಿಕ ಸದ್ಗುಣಗಳನ್ನು ತಂದುಕೊಡುವದು. ಹೀಗೆ ಶರೀರ-ಮನಸ್ಸು- ಆತ್ಮಗಳ ಸಮನ್ವಯ ವಿಕಾಸ ಮಾಡುವದರಲ್ಲಿಯೆ ಮೂಲೋದ್ಯೋಗದ 'ಶೈಕ್ಷಣಿಕತೆ' ಯು ನೆಲೆಸಿದೆ.

೪) ಮಗುವಿನ ಏಳು ವರುಷದ ಶಿಕ್ಷಣದ ಅವಧಿಯಲ್ಲಿ ಶಿಕ್ಷಣದ ಕೇಂದ್ರವಾಗಿ ಆಯ್ದುಕೊಂಡ **ಮೂಲೋದ್ಯೋಗವು ತರ-ತಮವಾಗಿ ವ್ಯಾಪಿಸುವಂತಿರಬೇಕು.** ಮೂಲೋದ್ಯೋಗದ ಅಂಗೋಪಾಂಗಗಳನ್ನೂ ಹಾಗೂ ಅದರ ವಿವಿಧವಾದ ವಿಧಾನಗಳನ್ನೂ ಏಳು ವರುಷಗಳ ಅಭ್ಯಾಸ ಪತ್ರಿಕೆಯಲ್ಲಿ—ಸುಲಭತೆಯಿಂದ ಕಠಿಣತೆಯ ಕಡೆಗೆ ಎಂಬ ತತ್ವದ ಮೇರೆಗೆ— ಕ್ರಮಬದ್ಧವಾಗಿ ಜೋಡಿಸಲು ಅನುಕೂಲವಾಗುವಂತಿರಬೇಕು. ಉದಾ

ಹರಣೆಗಾಗಿ ಬಟ್ಟೆಯನ್ನು ಪೂರೈಸುವ ನೂಲುವದು-ನೇಯುವದನ್ನೇ ತೆಗೆದು ಕೊಳ್ಳುವದು. ಇದರಲ್ಲಿ ಹತ್ತಿಯ ಕಸರು-ಕಾಳು ತೆಗೆಯುವ ತೀರ ಸುಲಭ ಚಟುವಟಿಕೆಯಿಂದ, ತೀರ ತೊಡಕಿನ ಚಟುವಟಿಕೆಯಾದ ನೇಯುವ ಕ್ರಿಯೆಯ ವರೆಗೂ ಏಳು ವರುಷಗಳ ಅಭ್ಯಾಸ ಪತ್ರಿಕೆಯಲ್ಲಿ ಮೆಟ್ಟಲು-ಮೆಟ್ಟಲುಗಳಾಗಿ ನಾವು ಹೊಂದಿಸಿಕೊಳ್ಳಬಹುದು. ಇದಲ್ಲದೆ ಮೂಲೋದ್ಯೋಗವು ಮಾನ ವನ ಹಲವು ಬಗೆಯ ವ್ಯವಸಾಯಗಳಿಗೆ ಹಾಗೂ ಹಿತಸಂಬಂಧಗಳಿಗೆ ಸಹಜ ವಾಗಿ-ಸುಲಭವಾಗಿ ಹೊಂದಿಸಿಕೊಳ್ಳಲು ಬರುವಂತಿರಬೇಕು.

ಔ) ಶಿಕ್ಷಣದ ಕೇಂದ್ರವಾಗಿ ತೆಗೆದುಕೊಳ್ಳುವ **ಮೂಲೋದ್ಯೋಗವು 'ಕೈಗಾರಿಕೆ'—ಹಸ್ತವ್ಯವಸಾಯವಾಗಿರಬೇಕು. ಹೆಚ್ಚಾಗಿ ಅದು ಒಂದು ಗ್ರಾಮೋದ್ಯೋಗವಿರಬೇಕು.** ಗ್ರಾಮೋದ್ಯೋಗಗಳಲ್ಲಿ ಅಮಾ ನುಷವಾದ ಸ್ಪರ್ಧೆಯಿಲ್ಲ. ಹಲವರು ಹೊಟ್ಟೆಪಾಡಿಗಾಗಿ ದುಡಿದು ಒಬ್ಬನ ಸುಖಸಂಪತ್ತುಗಳನ್ನು ಹೆಚ್ಚಿಸುವ ಅನ್ಯಾಯವಿಲ್ಲ. ಇಲ್ಲಿ ದುಡಿತವು ದಾಸ್ಯ ವೆಂದೆನಿಸದು, ಶೋಷಣೆಗೆ ಒಳಗಾಗದು. ಅಹಿಂಸೆಯೇ ಗ್ರಾಮೋದ್ಯೋಗ ಗಳಿಗೆ ಆಧಾರವಾಗಿದೆ. ನಮ್ಮ ಗ್ರಾಮನಿಷ್ಠ ಸಂಸ್ಕೃತಿ ಹಾಗೂ ಪ್ರಾಚೀನ ಪರಂಪರೆಗೆ ಗ್ರಾಮೋದ್ಯೋಗಗಳು ಸರಾಗವಾಗಿ ಹೊಂದಿಕೊಳ್ಳುವವು. ಕೆಲಸ ಗಾರರ ಶಕ್ತಿ-ಆಯುಷ್ಯಗಳನ್ನೇ ಕುಗ್ಗಿಸುವ ಕಾರಖಾನೆಗಳ ಹೊಗೆ-ಸೆಕೆಗಳ ಬಾಧೆಯಿಂದ ಕೈಗಾರಿಕೆಗಳು ದೂರವಾಗಿರುವವು. ಕೈಗಾರಿಕೆಗಳು ನಿರ್ಜೀವ ವಾದ ಯಾಂತ್ರಿಕ ಕಾರ್ಯವಲ್ಲ. ಅವುಗಳಲ್ಲಿ ಬುದ್ಧಿಮತ್ತೆಗೆ ಹಾಗೂ ಬುದ್ಧಿ ವಿಕಾಸಕ್ಕೆ ತುಂಬಾ ಎಡೆಯಿದೆ. ಅಂತೆಯೇ ಗಾಂಧೀಜಿಯವರು ಮಗುವಿನ ಶಿಕ್ಷಣವನ್ನು ಉತ್ಪಾದಕವಾದ ಕೈಗಾರಿಕೆಯಿಂದ, ಹೆಚ್ಚಾಗಿ ಯಾವುದೊಂದು ಸ್ಥಾನಿಕ ಗ್ರಾಮೋದ್ಯೋಗದಿಂದ ಪ್ರಾರಂಭಿಸಬೇಕೆಂದು ಹೇಳಿರುವರು.

ಶಿಕ್ಷಣದ ಕೇಂದ್ರವಾಗಿ ತೆಗೆದುಕೊಂಡ **ಮೂಲೋದ್ಯೋಗವು ಸ್ಥಳಿಕ-ನೈಸರ್ಗಿಕ ಪರಿಸ್ಥಿತಿಗೆ ಅನುರೂಪವಾಗಿರುವದು.** ಹತ್ತಿ ಹೆಚ್ಚಾಗಿ ಬೆಳೆಯುವ ಪ್ರದೇಶಗಳಲ್ಲಿ ನೂಲುವದು-ನೇಯುವದನ್ನೂ ಉಪಯುಕ್ತವಾದ ಕಟ್ಟಿಗೆ ದೊರೆಯುವ ಕಾಡುಗಳಿದ್ದಲ್ಲಿ ರಟ್ಟು-ಕಟ್ಟಿಗೆಯ ಕೆಲಸವನ್ನೂ, ಜಿಗಟು

ಮಣ್ಣು ದೊರೆಯುವಲ್ಲಿ ಮಣ್ಣಿನ ಕೈಗಾರಿಕೆಯನ್ನೂ, ಮಳೆ-ಭೂಮಿಗಳ ಅನು ಕೂಲತೆಯಿದ್ದಲ್ಲಿ ಕೃಷಿ-ತೋಟಗಾರಿಕೆಯನ್ನೂ ಈ ರೀತಿಯಾಗಿ ಸ್ಥಳಿಕವಾಗಿ ದೊರೆಯುವ ನಿಸರ್ಗದ ಸಾಮುಗ್ರಿ ಸೌಕರ್ಯಗಳನ್ನು ಅನುಲಕ್ಷಿಸಿ ಮೂಲೋ ದ್ಯೋಗವನ್ನು ಗೊತ್ತು ಪಡಿಸಬೇಕಾಗುವದು. ಇಂದು ನೂಲುವದು-ನೇಯು ವದನ್ನೇ ಹೆಚ್ಚಾಗಿ ಮೂಲೋದ್ಯೋಗವಾಗಿ ತೆಗೆದುಕೊಳ್ಳುವದುಂಟು. ಇದಕ್ಕೆ ಕಾರಣಗಳೂ ಇರುವವು. ದೇಶದ ಬಹುಭಾಗದಲ್ಲಿ ಹತ್ತಿ ಬೆಳೆಯು ವದು. ಅವಶ್ಯಕ ಉಪಕರಣಗಳು ಸುಲಭವಾಗಿರುವವು. ಅಲ್ಪ ವೆಚ್ಚದಲ್ಲಿ ಹಳ್ಳಿಗಳಲ್ಲಿಯೇ ಅವುಗಳನ್ನು ಸಿದ್ಧಗೊಳಿಸಬಹುದು. ಮೇಲಾಗಿ ಗಾಂಧೀಜಿ ಯವರು ಹೇಳುವಂತೆ ತಕಲಿಗೆ ಪರಂಪರೆಯ ಪರಿಪಾಠವಿದೆ. ಅದು ಬಾಲಕರ ಅಚ್ಚು ಮೆಚ್ಚಿನ ಒಡವೆಯಾಗಬಹುದು. ಕುಳಿತಲ್ಲಿ, ನಿಂತಲ್ಲಿ, ನಡೆಯುವಾಗ್ಗೆ, ಮಾತನಾಡುವಾಗ್ಗೆ ಯಾವ ಎಡಚಿಲ್ಲದೆ ಅದನ್ನು ನಡೆಸಬಹುದು.

**೮) ಮೂಲಶಿಕ್ಷಣಕ್ಕೆ ಮಾನಸಶಾಸ್ತ್ರದ ಬೆಂಬಲ :—**

ಹರ್ಬಾರ್ಟ, ಪೆಸ್ಟೆಲೋಝಿಯವರು ಆಧುನಿಕ ಶಿಕ್ಷಣದ ಆದ್ಯ ಗುರು ಗಳೆಂದು, ಶಿಕ್ಷಣದಲ್ಲಿ ಶಾಸ್ತ್ರಕಾರರೆಂದು ಹೇಳುವದುಂಟು. ಇವರು ಆಧುನಿಕ ಶಿಕ್ಷಣವನ್ನು ಮಾನಸ ಶಾಸ್ತ್ರದ ತಳಹದಿಯಮೇಲೆ ನಿಲ್ಲಿಸಿರುವರು. ಆಧುನಿಕ ಶಿಕ್ಷಣದ ಸಾಧ್ಯ-ಸಾಧನಗಳನ್ನೂ, ರೀತಿವಿಧಾನಗಳನ್ನೂ ಮೊದಲಿನ ಪರಿಚ್ಛೇದ ಗಳಲ್ಲಿ ಸಾಕಷ್ಟು ವಿವೇಚಿಸಿದೆ. ಇಂದಿನ ಶಿಕ್ಷಣದಲ್ಲಿ ಎದ್ದು ಕಾಣುವ ಮುಖ್ಯ ಮಾತುಗಳೆಂದರೆ:— ೧) **ಈ ಶಿಕ್ಷಣವು 'ಶಿಶು-ಪ್ರಧಾನ' ವಾಗಿದೆ.** ಕಲಿಸುವ ವಿಷಯ-ವಿಧಾನ, ಸಮಯ-ಸಾಧನಗಳೆಲ್ಲವನ್ನೂ ಮಗುವಿನ ದೃಷ್ಟಿ ಯಿಂದಲೇ, ಆತನ ವಯೋಮಾನದ ಒಲವು ಶಕ್ತಿಗಳಿಗೆ ಅನುಗುಣವಾಗುವಂತೆ ಗೊತ್ತುಪಡಿಸಬೇಕು. ೨) **ಮಗುವು** ಮಾಡಿದಂತೆ ಆಗುವ ಮಣ್ಣಿನ ಮುದ್ದೆಯಲ್ಲ. **ಆತನು ಚೈತನ್ಯಸ್ವರೂಪಿಯು.** ಪ್ರತಿಯೊಂದು ಮಗು ವಿಗೂ ಸ್ವತಂತ್ರವಾದ ಒಲವು ಶಕ್ತಿಗಳಿರುವವು. ಶಿಕ್ಷಣವು ಇವುಗಳಿಗೆ ಅನು ಗುಣವಾಗಿ ಸಾಗಬೇಕು. ೩) **ಮಗುವಿನ ಶಿಕ್ಷಣವು ಇಂದ್ರಿಯಗಳ ಸಂಸ್ಕರಣಗಳಿಂದಲೇ ಸುರುವಾಗಬೇಕು.** ಆತನ ಶಿಕ್ಷಣವು ಕೃತಿರೂಪ

ವಾಗಿರಬೇಕು. ಚಟುವಟಿಕೆಯು ಚೈತನ್ಯದ ಉಸಿರು–ಕುರುಹು ಆಗಿರುವದು.
೪) ಮಗುವಿನ ಎಲ್ಲ ಶಕ್ತಿಗಳನ್ನು ಬೆಳೆಸಿ ಜೀವನದ ಎಲ್ಲ ಪರಿಸ್ಥಿತಿಗಳನ್ನು ಎದುರಿಸುವ ಪಾತ್ರತೆಯನ್ನು ಆತನಿಗೆ ತಂದುಕೊಡುವದು ಶಿಕ್ಷಣದ ಕಾರ್ಯವಾಗಿದೆ. ಆತನು ಎಲ್ಲರೊಡನೆ ಕೂಡಿಬಾಳುವ ಒಳ್ಳೇ ನಾಗರಿಕನಾಗಬೇಕು.

**ಮೂಲಶಿಕ್ಷಣವು ಆಧುನಿಕ ಶಿಕ್ಷಣಶಾಸ್ತ್ರದ ಇವೆಲ್ಲ ತತ್ವಗಳನ್ನು ಒಳಗೊಂಡಿದೆ.** ಮೂಲಶಿಕ್ಷಣದಲ್ಲಿ ಮಗುವೇ ಪ್ರಧಾನ,–ಶಿಕ್ಷಕನು ಕೇವಲ ಮಾರ್ಗದರ್ಶಕ. ಮಗುವಿನ ವಯೋಮಾನದ ಒಲವು ಶಕ್ತಿಗಳಿಗೆ ಅನುಗಣವಾಗುವಂತೆ ಮೂಲೋದ್ಯೋಗಗಳೂ ವಿವಿಧವಾಗಿರುವವು. ಅವುಗಳ ಮೆಟ್ಟಿಲುಗಳೂ ಏರುತ್ತ ಹೋಗುವವು. ನೈಸರ್ಗಿಕವಾದ ಕೃತಿಪ್ರೇಮಕ್ಕೆ ಯೋಜನೆಯಲ್ಲಿ ತುಂಬಾ ಆಸ್ಪದವಿದೆ. ಈ ಕೃತಿಪ್ರೇಮವೇ–ಕ್ರಿಯಾಶಕ್ತಿಯೇ ಮೂಲಶಿಕ್ಷಣಕ್ಕೆ ತಳಹದಿಯಾಗಿದೆ. ಮೂಲಶಿಕ್ಷಣವು **‘ಜೀವನ ಮುಖಾಂತರವಾಗಿ ಜೀವಿಗೆ ಜೀವನಶಿಕ್ಷಣ’** ವನ್ನು ಕೊಡುವದು. ಇದಕ್ಕೆ ಜೀವನಶಿಕ್ಷಣವೆಂಬ ಸಾರ್ಥಕವಾದ ಹೆಸರು ಕೂಡ ಇರುವದು. ಇದು ವ್ಯಕ್ತಿಯನ್ನು ಸರಿಯಾದ ಜೀವನಕ್ಕಾಗಿ ಅಣಿಗೊಳಿಸುವದು. ಜೀವನವು ಅಖಂಡವಾಗಿದೆ. ದೇಹ–ಮನಸ್ಸುಗಳನ್ನು ಪ್ರತ್ಯೇಕವಾಗಿ ಭಾವಿಸುವ ಹಿಂದಿನ ವಿಚಾರವನ್ನು ಇಂದಿನ ಮಾನಸಶಾಸ್ತ್ರವು ಸಾಧಾರವಾಗಿ ಬಿಟ್ಟುಕೊಟ್ಟಿದೆ. ಶಾರೀರಿಕ ಚಟುವಟಿಕೆಯು ಬುದ್ಧಿಯನ್ನು ಜಾಗೃತಗೊಳಿಸುವದು. ಬುದ್ಧಿಗೆ ತೀಕ್ಷ್ಣತೆಯನ್ನು ತಂದುಕೊಡುವದು. ಏಳು ವರುಷದ ಬಾಲಕರಲ್ಲಿ ಇನ್ನೂ ಬುದ್ಧಿಯ ವಿಕಾಸವಾಗಿರುವದಿಲ್ಲ. ಓದಿ ಇಲ್ಲವೇ ಊಹಿಸಿ ತಿಳಿದುಕೊಳ್ಳುವ ಶಕ್ತಿಯು ಅವರಲ್ಲಿ ಇನ್ನೂ ಬಂದಿರುವದಿಲ್ಲ. ಇಂದ್ರಿಯಗಳೇ ಅವರಿಗೆ ಜ್ಞಾನದ ಮುಖ್ಯ ಸಾಧನಗಳು. **‘ನಿರೀಕ್ಷಣ, ಪರೀಕ್ಷಣ ಹಾಗೂ ಪ್ರಯೋಗ’ ಗಳಿಂದಲೇ ಅವರು ಸುತ್ತುಮುತ್ತಲಿನ ಪ್ರಪಂಚದ ಪರಿಚಯವನ್ನು ಮಾಡಿಕೊಳ್ಳಬಲ್ಲರು.** ಈ ವಯೋವಿಭಾಗದಲ್ಲಿ ‘ಮಾಡುತ್ತ ಕಲಿ’ ಎಂಬುದೇ ಮಕ್ಕಳ ಶಿಕ್ಷಣದ ಮೂಲ ಸೂತ್ರವಾಗಿರಬೇಕು. ಅಪರ ಶಿಕ್ಷಣದ ಪ್ರಾರಂಭವು

ಅಚ್ಚಾದ ಪುಸ್ತಕದಿಂದಲ್ಲ. ಅದು ಇಂದ್ರಿಯಗಳ ಮುಖಾಂತರವಾಗಿ ಶಾರೀರಿಕ ಚಟುವಟಿಕೆಯಿಂದಲೇ ಪ್ರಾರಂಭವಾಗಬೇಕೆಂದು ಮಾನಸಶಾಸ್ತ್ರವು ಹೇಳು ವದು. ಈ ಚಟುವಟಿಕೆಯು ಉದ್ದೇಶಪೂರ್ಣವಾಗಿದ್ದರೆ, ಉತ್ಪಾದಕ ವಾಗಿದ್ದರೆ, ಸುಯೋಜಿತವಾಗಿದ್ದರೆ, ಹಾಗೂ ಮಕ್ಕಳ ಜೀವನದೊಡನೆ ಸಮನ್ವಿತವಾಗಿದ್ದರೆ—ಶಾರೀರಿಕ, ಮಾನಸಿಕ ಮತ್ತು ಆತ್ಮಿಕ ಶಕ್ತಿಗಳೆಲ್ಲವುಗಳ ವಿಕಾಸವು ಸರಾಗವಾಗಿ ಸಾಗುವದು. ಶಿಕ್ಷಣದ ಕೇಂದ್ರವಾದ **ಮೂಲೋ ದ್ಯೋಗವು ಮಕ್ಕಳ ಸಹಜಪ್ರವೃತ್ತಿಗಳನ್ನು ವಿಧಾಯಕ, ರಚನಾತ್ಮಕ ಕಾರ್ಯದಲ್ಲಿ ತೊಡಗಿಸುವದು.** ಪ್ರಬಲವಾದ ಸಹಜಪ್ರವೃತ್ತಿಗಳಿಗೆ ಇದೊಂದು ಬಗೆಯ ‘ ಉಜ್ವಲೀಕರಣ ’ ವೇ ಸರಿ. ಮಕ್ಕಳ ಈ ವಯೋ ವಿಭಾಗದಲ್ಲಿ ಸ್ಫುಟವಾಗುವ ಸಹಜಪ್ರವೃತ್ತಿಗಳಲ್ಲಿ ‘ ರಚನಾಪ್ರವೃತ್ತಿ ’ ಯೂ ಒಂದಾಗಿದೆ. ಕೆಲವು ಪಕ್ಷಿಗಳಲ್ಲಿಯೂ ಕೂಡಾ ಈ ರಚನಾಪ್ರವೃತ್ತಿಯ ಕಾರ್ಯವನ್ನು ನಾವು ಕಾಣಬಹುದು. ತಮ್ಮ ಗೂಡು ಕಟ್ಟುವಲ್ಲಿ ಅವು ತೋರಿ ಸುವ ಮುನ್ನೋಟ, ರಚನಾಚಾತುರ್ಯ, ಸಾಧನಸಂಗ್ರಹ ಮುಂತಾದವುಗಳು ಮಾನವನ ಬುದ್ಧಿಗೂ ಬೆರಗುಬಡಿಸುವಂತಿರುವವು. ಮಕ್ಕಳ ಆಟಗಳಲ್ಲಿಯೂ ಕೂಡ ಈ ರಚನಾಶಕ್ತಿಯ ಪ್ರಭಾವವು ಒಡೆದುಕಾಣುವದು. ಎಷ್ಟೊಂದು ಸಂಘಟನೆ, ಎಷ್ಟೊಂದು ಸುನಿಯೋಜಿತಕಾರ್ಯ, ಎಷ್ಟೊಂದು ಕಾರ್ಯಕುಶ ಲತೆಯನ್ನು ಅವರು ತಮ್ಮ ಆಟಗಳಲ್ಲಿ ತೋರಿಸುವರು ! ರಚನಾ-ಪ್ರವೃತ್ತಿಯ ಕಾರ್ಯದಲ್ಲಿ ಮಗುವಿನ ಬುದ್ಧಿಶಕ್ತಿ—ವಿಚಾರಶಕ್ತಿ ಹಾಗೂ ಕ್ರಿಯಾಶಕ್ತಿಗಳೆ ರಡೂ ಕೂಡಿಯೇ ಕೆಲಸಮಾಡುವವು. **ಬುದ್ಧಿಶಕ್ತಿ ಹಾಗೂ ಕ್ರಿಯಾ ಶಕ್ತಿಗಳೆರಡನ್ನೂ ಪ್ರತ್ಯೇಕಿಸಿರುವದು ಹಿಂದಿನ ಶಿಕ್ಷಣದ ಹಿರಿದಾದ ದೋಷವಾಗಿದೆ. ನಮ್ಮ ಜೀವನವು ಕೇವಲ ವಿಚಾರಾತ್ಮಕವಲ್ಲ— ಕೇವಲ ಕ್ರಿಯಾತ್ಮಕವಾದುದಲ್ಲ. ಜ್ಞಾನ–ಕ್ರಿಯೆಗಳ ಬಂಧುರವಾದ ಬಾಂಧವ್ಯವನ್ನು ಜೀವನವು ಸಾಧಿಸಬೇಕು.** ಹೀಗಾದರೆ ಮಾತ್ರ ನಿಜ ವಾದ ವ್ಯಕ್ತಿವಿಕಾಸವಾಗುವದು. ಜೀವನದಲ್ಲಿ ಸಾರ್ಥಕತೆಯಾಗುವದು. ಮೂಲಶಿಕ್ಷಣವು ಮಗುವಿನ ಶಿಕ್ಷಣದಲ್ಲಿ ಕೃತಿಯ ಮುಖಾಂತರವಾಗಿ ಜ್ಞಾನ

ಸಾಧನೆಯ ಸುಪ್ರಸಂಗಗಳನ್ನೊದಗಿಸುವದು. ಕೃತಿ ಹಾಗು ಜ್ಞಾನಗಳ ಸುಂದರವಾದ ಸಂಗಮವನ್ನು-ಸಮವಾಯವನ್ನು ಸಾಧಿಸುವದು. **ಮಗುವಿನ ನೈಸರ್ಗಿಕವಾದ ಕೃತಿಪ್ರೇಮ ಹಾಗೂ ರಚನಾಪ್ರವೃತ್ತಿಗಳ ಎಳೆಗಳ ಗುಂಟೆ ಆತನ ಶಿಕ್ಷಣವನ್ನು ಸಾಗಿಸುವದರಿಂದ ಮೂಲಶಿಕ್ಷಣಕ್ಕೆ ಮಾನಸ ಶಾಸ್ತ್ರದ ಸಂಪೂರ್ಣವಾದ ಬೆಂಬಲವಿದೆ.**

**೯) ದುಡಿತವೇ ದೇವಪೂಜೆ—'ಶ್ರಮ-ಗೌರವ':—**

**"ನಜಾತು ತಿಷ್ಠತಿ ಅಕರ್ಮಕೃತ್ ಕ್ಷಣಮಪಿ"**—'ದುಡಿಯದೆ ಒಂದರಗಳಿಗೆಯಾದರೂ ಯಾರೂ ಉಳಿಯಲಾರರು'—ಎಂದು ಗೀತೆಯಲ್ಲಿ ಭಗವಂತನು ಹೇಳಿರುವನು. **ದುಡಿತವು ಜೀವನದ ಉಸಿರು-ಪ್ರಾಣ ವೆನಿಸಿಕೊಳ್ಳುವದು.** ಉಸಿರಾಡಿಸುವದು ಕೂಡಾ ಒಂದುಬಗೆಯ ದುಡಿತವೇ ಸರಿ. ಜೀವನೋಪಯೋಗಿಯಾದ ದುಡಿತವನ್ನು ಶ್ರಮವಿಭಾಗ ತತ್ವದ ಮೇರೆಗೆ ಸಮಾಜದ ಹಿತಕ್ಕಾಗಿ ಹಿಂದಿನ ಹಿರಿಯರು ನಾಲ್ಕು ವರ್ಣಗಳಲ್ಲಿ ಹಂಚಿದರು. ಬರಬರುತ್ತ ಚಾತುರ್ವರ್ಣಗಳ ಈ ಸದುದ್ದೇಶವು-ಮೂಲ ತತ್ವವು ಕಣ್ಮರೆಯಾಯಿತು. ನಾಲ್ಕು ವರ್ಣಗಳು ಕೈಕೊಳ್ಳುವ ಕಾರ್ಯ ಗಳಲ್ಲಿ ಕೆಲವೊಂದು ಕೀಳು, ಕೆಲವೊಂದು ಮೇಲು—ಎನ್ನುವ ಕಲ್ಪನೆಗೆ ಮೊದ ಲಾಯಿತು. ಇದೇ ಕಲ್ಪನೆಯೇ ಜಾತಿ ಜಾತಿಗಳಲ್ಲಿ ಮೇಲು ಕೀಳು, ಉಚ್ಚ ನೀಚಗಳೆಂಬ ಭಾವನೆಗೆ ಎಡೆಗೊಟ್ಟಿತು. ಬುದ್ಧಿಜೀವಿಗಳ ಕೈ ಮೇಲಾಯಿತು. ಶಾರೀರಿಕ ದುಡಿತವನ್ನು ಮಾಡುವವರು ಬುದ್ಧಿ ಜೀವಿಗಳ 'ಕೈಕೆಳಗೆ' ದುಡಿ ಯುವವರಾದರು. ಅವರು 'ಶೂದ್ರ' ರಾದರು, ದಾಸರಾದರು. ಇದರಿಂದಲೇ ದಾಸ್ಯದ-ಗುಲಾಮಗಿರಿಯ ಪ್ರಾರಂಭವಾಯಿತು. ವಿಜ್ಞಾನಗಳ ಶೋಧನಗಳಿಂದ ಔದ್ಯೋಗಿಕ ಕ್ರಾಂತಿಯಾಯಿತು. ವಿವಿಧ ವಸ್ತುಗಳ ಉತ್ಪತ್ತಿ ಸಾಧನಗಳಾದ ವಿಜ್ಞಾನದ ಶೋಧಗಳು ಬುದ್ಧಿ ಜೀವಿಗಳ ಹಾಗೂ ಸಿರಿವಂತರ ಕೈಸೇರಿದವು. ಉದ್ಯೋಗಗಳು ಕೆಲವೊಂದು ಪ್ರದೇಶಗಳಲ್ಲಿ ಕೇಂದ್ರೀಕೃತವಾದವು. ಅವು ಗಳ ಪ್ರಾಪ್ತಿಯೆಲ್ಲವೂ ಕೆಲವೊಂದು ಸಿರಿವಂತರ ಸೊತ್ತಾಯಿತು. ಹಣದಿಂದ ಒದಗುವ ಜೀವನ ಸೌಕರ್ಯಗಳೂ ಮಾನಮರ್ಯಾದೆಗಳೂ ಇಂಥವರಿಗೆ

ಮಾತ್ರ ಮೀಸಲಾದವು. **ಸಮಾಜದಲ್ಲಿ ಆರ್ಥಿಕ ಸಮತೆ-ತೂಕಗಳು ತಪ್ಪಿ ಹೋದವು.** ತೆಗ್ಗಿದ್ದಲ್ಲಿ ನೀರು ಹರಿಯುವಂತೆ ಧನಿಕರು ಹೆಚ್ಚು ಧನಕೂಡಿಸು ವಂತಾಯಿತು. ಬಡವರ ಬಡತನವು ಹೆಚ್ಚುತ್ತ ನಡೆಯಿತು. ಶ್ರಮಜೀವಿ ಗಳು 'ಕೂಲಿ'ಕಾರರು. ಕೇವಲ ಕೂಲಿಗೆ ಮಾತ್ರ ಅವರು ಅಧಿಕಾರಿಗಳು. ಅವರು ಶ್ರಮಪಡಬೇಕು, ಧನಿಕರು ಸುಖಪಡಬೇಕು. **ಹೀಗೆ ಸಮಾಜ ದಲ್ಲಿ 'ಶೋಷಕ'-'ಶೋಷಿತ' ಗಳೆಂಬ ಎರಡು ವರ್ಗಗಳಾದವು.** ಸಮಾಜದ ಒಕ್ಕಟ್ಟು ಸಡಿಲಿಸಿತು. ಇವೆರಡು ವರ್ಗಗಳು ಮೇಲು-ಕೀಳೆಂಬ ಭಾವನೆಯಿಂದ ದೂರ ಸಿಡಿದುನಿಂತಿವೆ. ಪರಸ್ಪರ ಸಂಪರ್ಕ ಸಹಕಾರಗಳಿಲ್ಲ. ಹಿತಸಂಬಂಧಗಳಲ್ಲಿ ಹೊಂದಿಕೆಯಿಲ್ಲ. ಕಾರಖಾನೆಗಳಲ್ಲಿ ದುಡಿಯುವವರು ನಿರ್ಜೀವ ಯಂತ್ರಗಳೊಡನೆ ತಾವೂ ನಿರ್ಜೀವ ಯಂತ್ರಗಳಾಗಬೇಕು. ಧನಿಕರಿಂದ ಬಡವರ ಶೋಷಣೆ, ಬುದ್ಧಿವಂತರಿಂದ ಬುದ್ಧಿಹೀನರ ಶೋಷಣೆ ಸಶಾಸ್ತ್ರವಾಗಿ ಸಾಗಲು ಅನುವಾಯಿತು. **ಕೆಲವರು 'ಉಳ್ಳವರು';** ಅವ ರಿಗೆ ಬೇಕಾದ ಸೌಕರ್ಯಗಳೆಲ್ಲವೂ ಉಂಟು; ಬೇಕಾಗುವದಕ್ಕಿಂತಲೂ ಹಲವು ಪಟ್ಟು ಹೆಚ್ಚಿಗೆ ಉಂಟು. **ಉಳಿದ ಬಹುಸಂಖ್ಯಾಕರು 'ಇಲ್ಲ ದವರು';** ಇವರಿಗೆ ಜೀವದದಲ್ಲಿ ಯಾವ ಸೌಕರ್ಯಗಳೂ ಇಲ್ಲ. ಇಷ್ಟೇ ಏಕೆ? ಜೀವನದ ಮೂಲ ಬೇಡಿಕೆಗಳಾದ ಅನ್ನ, ಬಟ್ಟೆ, ಆಸರಗಳೂ ಕೂಡ ನಾಕಷ್ಟು ದೊರೆಯುವಂತಿಲ್ಲ. ಇಂದು ದೇಶದಲ್ಲಿ ನೆಲೆಸಿದ ಈ ಆರ್ಥಿಕ, ಸಾಮಾಜಿಕ ವಿಷಮತೆಗೆ-ರಾಜಕೀಯ ಕಾರಣಗಳೇನೇ ಇರಲಿ, ಅರ್ಥ ಶಾಸ್ತ್ರವು ಅದರ ಕಾರ್ಯಕಾರಣ ಸಂಬಂಧವನ್ನು ಹೇಗಾದರೂ ವಿವರಿಸಲಿ, ಶಿಕ್ಷಣ ಶಾಸ್ತ್ರದ ದೃಷ್ಟಿಯಿಂದ ನೋಡಿದರೆ ಈ ದುಸ್ಥಿತಿಗೆ **ಎರಡು ದೊಡ್ಡ ಪ್ರಮಾದಗಳೇ** ಕಾರಣಗಳೆಂದು ಹೇಳಬಹುದು. ಜನತೆಯ ಶಿಕ್ಷಣದಲ್ಲಿ **ಶಾರೀರಿಕ ದುಡಿತ ಹಾಗೂ ಬುದ್ಧಿಕಾರ್ಯಗಳನ್ನು ಸರಿಯಾಗಿ ಹೊಂದಿಸಿಕೊಳ್ಳದಿರುವದು** ಮೊದಲನೆಯ ಪ್ರಮಾದವು. ಶಾರೀರಿಕ ಶ್ರಮವು ಕೀಳೆಂಬ ಕಲ್ಪನೆಯಾಗುವಂತೆ **ಬುದ್ಧಿಕಾರ್ಯಕ್ಕೆ-ಬುದ್ಧಿವಿಲಾ ಸಕ್ಕೆ-ಅಲ್ಲದ ಸಲ್ಲದ ಪ್ರಾಶಸ್ತ್ಯವನ್ನೂ ಗೌರವವನ್ನೂ ಕೊಟ್ಟಿರುವದು** ಎರಡನೆಯ ಪ್ರಮಾದವೆಂದು ಹೇಳಬಹುದು.

ಮೂಲಶಿಕ್ಷಣವು ಇವೆರಡೂ ಪ್ರಮಾದಗಳಿಂದಲೂ ದೂರವಾಗಿರುತ್ತದೆ. ಈ ಪ್ರಮಾದಗಳಿಂದಾಗುವ ದುಷ್ಪರಿಣಾಮದಿಂದ ಮುಂದಿನ ಪೀಳಿಗೆಯನ್ನು ರಕ್ಷಿಸಲು ಪ್ರಯತ್ನಿಸುತ್ತದೆ. ಮೂಲಶಿಕ್ಷಣವು ಜೀವನೋಪಯೋಗಿಯಾದ ಗ್ರಾಮೋದ್ಯೋಗವನ್ನೇ-ಕೈಗಾರಿಕೆಯನ್ನೇ-ಶಿಕ್ಷಣದ ಕೇಂದ್ರವಾಗಿಟ್ಟುಕೊಳ್ಳುವದು. ಕೈಗಾರಿಕೆಗಳಿಗೆ ಅನವಶ್ಯಕ ಅಧಿಕೋತ್ಪಾದನೆಯ ಆತಂಕವಿಲ್ಲ. ಸ್ಪರ್ಧೆ–ಶೋಷಣೆಗಳ ಸಂಪರ್ಕವಿಲ್ಲ. ಉದ್ಯೋಗವು ಮಗುವಿನ ಶಿಕ್ಷಣವನ್ನು ಜೀವನಕ್ಕೆ, ನಿಸರ್ಗಕ್ಕೆ, ಸಮಾಜಕ್ಕೆ ಹೊಂದಿಕೊಳ್ಳುವದರಿಂದ, **ಜೀವನಕ್ಕೆ ದುಡಿತವು ಅಗತ್ಯವೆಂಬ ಭಾವನೆಯು ಮಗುವಿನಲ್ಲಿ ಮೊದಲಿನಿಂದಲೂ ಒಡಮೂಡುವದು.** ಸಮಾಜದೊಡನೆ ಬರುವ ಸಂಪರ್ಕಗಳಿಂದ ಸಹಕಾರವೂ ಸೇವಾಬುದ್ಧಿಯೂ ತಿಳಿಯದೆಯೇ ಸ್ಫುರಿಸುವವು. ಸಮಾಜದ ಬೇಡಿಕೆಗಳ ಪೂರೈಕೆಗಾಗಿ, ಸಮಾಜದ ಒಟ್ಟು ಹಿತಕ್ಕಾಗಿ ತಾನು ದುಡಿಯಬೇಕು. ಉಪಯುಕ್ತವಾದ, ಉತ್ಪಾದಕವಾದ ಯಾವದೇ ಬಗೆಯ ದುಡಿಮೆಯಿಂದ ಜನತಾಜನಾರ್ದನನಿಗೆ ತನ್ನ ಅಳಿಲು ಸೇವೆಯನ್ನು ಸಲ್ಲಿಸಬೇಕೆನ್ನುವ ಅರಿವು ಆತನಿಗುಂಟಾಗುವದು.

'ಉದ್ಯೋಗದಲ್ಲಿ ಮೇಲು–ಕೀಳುಗಳಿಲ್ಲ. ನಿನ್ನ ಕೆಲಸವನ್ನು ಸರಿಯಾಗಿ ಮಾಡು. ಅದರಲ್ಲಿಯೇ ಎಲ್ಲ ಗೌರವವು ಅಡಕವಾಗಿರುವದು' ಎಂದು ಕವಿಯೊಬ್ಬನು ಹೇಳಿರುವನು. ಗಾಂಧೀಜಿಯವರಿಗೆ ಜೀವನದಲ್ಲಿ ಬೆಳಕು–ಸ್ಫೂರ್ತಿಗಳನ್ನಿತ್ತ ರಸ್ಕಿನ್, ಟಾಲಸ್ಟಾಯ್‌ರೆಂಬ ಮಹರ್ಷಿಗಳು ಶ್ರಮಗೌರವವನ್ನು ಸ್ವೋದಾಹರಣೆಗಳಿಂದ ಸಾರಿದ್ದಾರೆ. ಸಮಾಜೋಪಯೋಗಿಯಾದ ಯಾವುದಾದರೊಂದು ಶಾರೀರಿಕ ದುಡಿತವನ್ನು ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯೂ ಕೆಲ ಸಮಯವಾದರೂ ತಪ್ಪದೇ ಮಾಡಬೇಕೆಂದು ಟಾಲಸ್ಟಾಯ್‌ನು ಹೇಳಿರುವನು. ಹೀಗೆ ಮಾಡದಿದ್ದರೆ ಸಮಾಜದಿಂದ ಆತನಿಗೆ ದೊರೆಯುವ ಪೋಷಣೆ–ರಕ್ಷಣೆಗೆ ಆತನಿಗೆ ಅಧಿಕಾರವಿಲ್ಲದಂತಾಗುವದು. ಈ ಕರ್ತವ್ಯಬುದ್ಧಿಯಿಂದ ಪ್ರತಿಯೊಬ್ಬರೂ ಮಾಡಲೇಬೇಕಾದ ಶಾರೀರಿಕ ಶ್ರಮಕ್ಕೆ ಅವರ 'bread labour', 'ರೊಟ್ಟಿಗಾಗಿ ರಟ್ಟೆ ಮುರಿದು

ದುಡಿಯುವದು' ಎಂದು ಹೇಳಿರುವರು. ಜಗತ್ತಿನಲ್ಲಿ ಕೇವಲ ಬುದ್ಧಿಜೀವಿಗಳ ಸಂಖ್ಯೆ ಕೈಬೆರಳಿನ ಮೇಲೆ ಎಣಿಸಲು ಬರುವಂಥದು. ಉಳಿದವರೆಲ್ಲರೂ ಶ್ರಮ ಜೀವಿಗಳು. **ಶ್ರಮಜೀವಿಗಳೇ ಉತ್ಪಾದಕರು.** ಜೀವನೋಪಯೋಗಿಯಾದ ಎಲ್ಲ ವಸ್ತುಗಳನ್ನೂ ಅವರೇ ಒದಗಿಸುವವರು. **ಶಾರೀರಿಕ ಶ್ರಮವೇ ಜೀವನದ ಅಡಿಗಲ್ಲಾಗಿದೆ,** ಆಧಾರಸ್ತಂಭವಾಗಿದೆ.

ಈ **ಶ್ರಮಗೌರವದ ಕಲ್ಪನೆಯು ನಮಗೆ ತೀರ ಹೊಸದಲ್ಲ.** ಪ್ರಾಚೀನಕಾಲದ ಆಶ್ರಮಶಿಕ್ಷಣದಲ್ಲಿ ಗುರು ಶಿಷ್ಯರೆಲ್ಲರೂ ಕೂಡಿಕೊಂಡು ಹೊಲದಲ್ಲಿ ದುಡಿಯುತ್ತಿದ್ದರು. ದಾಸರು, ಶರಣರು ಶ್ರಮಗೌರವವನ್ನು ಹಲವು ವಿಧದಿಂದ ಹೇಳಿರುವರು; ಹಾಡಿರುವರು. ದೇಹದಿಂದ ಮಾಡುವ ಕೆಲಸವೆಲ್ಲವೂ 'ಇದೇ ಹರಿ ಪೂಜೆ' ಎಂದು ದಾಸರೊಬ್ಬರು ಹೇಳಿರುವರು. 'ಕಾಯಕವೇ ಕೈಲಾಸ' ವೆಂದು ಬಸವಣ್ಣನವರು ಆಡಿ–ಮಾಡಿ ತೋರಿಸಿದರು. ಗಾಂಧೀಜಿಯವರಿಗೆ ತಕಲಿಯು ನೂಲಿನ ಎಳೆಯೊಡನೆ ಶ್ರೀರಾಮನನ್ನು ತರುತ್ತಿತ್ತಂತೆ. ಶರಣನಾದ ಕುಂಬಾರ ಗುಂಡಯ್ಯನಿಗೆ ಅರಲಿನಲ್ಲಿ ಆದಿತತ್ವವಾದ ಪ್ರಕೃತಿಯು ಕಾಣುತ್ತಿತ್ತು; ತಿಗರಿಯಲ್ಲಿ ವಿಶ್ವಚಕ್ರವು ತಿರುಗುತ್ತಿತ್ತು; ಕೈಗೋಲು ಈಶಸಂಕಲ್ಪದ ಕುರುಹಾಗಿತ್ತು. **ಪ್ರಾಮಾಣಿಕವಾಗಿ ಕೈಕೊಳ್ಳುವ ದೇಹದ ದುಡಿತವೆಲ್ಲವೂ ದೇವರ ಪೂಜೆಯೆಂಬ** ಭಾವನೆಯನ್ನು ಎಂದಿನಿಂದಲೂ ನಮ್ಮ ಹಿರಿಯರು ತಾಳುತ್ತ ಬಂದಿರುವರು. ವಿದೇಶೀಯ ವಿಷಯ ಪ್ರಧಾನವಾದ ಶಿಕ್ಷಣದಿಂದ ಮಾಸಿಹೋದ ಈ ಭಾವನೆಯನ್ನು ಮೂಲ ಶಿಕ್ಷಣವು ಮತ್ತೆ ಸಜೀವವಾಗಿ ಮಾಡಬಯಸುವದು. '**ಕೈ ಕೆಸರಾದರೆ ಬಾಯಿ ಮೊಸರು**' ಎನ್ನುವ ಹಿಂದಿನ ದುಡಿತದ ತತ್ವವೇ ಇಂದು ಮೂಲ ಶಿಕ್ಷಣದಲ್ಲಿ ಹೊಸರೂಪ ತಾಳಿ ಬಂದಿದೆ. **ದುಡಿಯದೇ ಬರುವ ದುಡ್ಡಿನ ಬೆನ್ನು ಹತ್ತಿ ಜನತೆಯು ನೀತಿ–ಪ್ರೇಮ–ಪ್ರಾಮಾಣಿಕತೆಗಳನ್ನು ಬಿಟ್ಟುಕೊಟ್ಟಿದೆ.** ತನ್ನ ಚರಿತಾರ್ಥಕ್ಕೆ ಬೇಕಾದ್ದಕ್ಕಿಂತಲೂ ಹೆಚ್ಚಿಗೆ ಗಳಿಸುವ ಹುಚ್ಚಿನಿಂದ ವ್ಯಕ್ತಿಯು ಚಾರಿತ್ರ್ಯಕ್ಕೆ ಎರವಾಗುತ್ತಿದ್ದಾನೆ. ಉಳಿದವರಿಗೆ ಕೊರತೆಯನ್ನುಂಟುಮಾಡಿ ತನ್ನ ಮನೆ ತುಂಬಿಕೊಳ್ಳುವದು ಒಂದು

ಬಗೆಯ ಕಳವು, ಹಿಂಸೆಯೆಂದು ಗಾಂಧೀಜಿಯವರು ಹೇಳಿರುವರು. ಮೂಲ ಶಿಕ್ಷಣವು ಜೀವನವನ್ನು ಉತ್ಪಾದಕ ಉದ್ಯೋಗದೊಡನೆ ಹೊಂದಿಸಿಕೊಂಡು ದುಡಿತದ ಹಿರಿಮೆಯನ್ನು ಮೊದಲಿನಿಂದಲೂ ಮಕ್ಕಳ ಮನಸ್ಸಿನಲ್ಲಿ ಮೂಡಿಸುವದು, ಸಮಾಜೋಪಯೋಗಿಯಾದ ಕೆಲಸಗಳಲ್ಲಿ ಮಕ್ಕಳನ್ನು ತೊಡಗಿಸಿ ಆ ಬಗೆಯ ದುಡಿತದಲ್ಲಿಯೇ ದೇವನನ್ನು ಕಾಣುವ ಸದ್ಭಾವನೆಯನ್ನು ಅವರಲ್ಲಿ ಉಂಟುಮಾಡುವದು.

**೧೦) ಸಹೇತುಕವಾದ ಕೃತಿಮೂಲಶಿಕ್ಷಣ, ಹಾಗೂ ಪೂರ್ಣ ಜೀವನ:—**

ಸಚೇತನ ಕೃತಿಗೂ ಯಾಂತ್ರಿಕಕಾರ್ಯಕ್ಕೂ ಇರುವ ವ್ಯತ್ಯಾಸವನ್ನು ಹಿಂದೆ ವಿವರವಾಗಿ ಹೇಳಿಕೊಟ್ಟಿದೆ. ಯಾಂತ್ರಿಕಕ್ರಿಯೆಯು ಶಕ್ತಿಪ್ರೇರಿತವಾದುದು. ಉಗಿಶಕ್ತಿಯು ಮುಂದೆ ನೂಕುವವರೆಗೆ ಉಗಿಬಂಡಿಯು ಮುನ್ನುಗ್ಗುವದು, ನಿಲ್ಲಿಸಿದರೆ ನಿಂತುಬಿಡುವದು. **ಸಚೇತನ ಕ್ರಿಯೆಯು ಹಾಗಲ್ಲ. ಅದು ಸಹೇತುಕವಾದುದು, ಉದ್ದೇಶಪ್ರೇರಿತವಾದುದು.** ಉದ್ದೇಶವು ಈಡೇರುವವರೆಗೆ ಅದರ ಕಾರ್ಯವು ನಡುವೆ ನಿಲ್ಲದೆ ಮುಂದೆ ಸಾಗುವದು. ತನ್ನ ಉದ್ದೇಶದ ಸಿದ್ಧಿಗಾಗಿ ಸಚೇತನವು ಮುನ್ನೋಟದಿಂದ ಯೋಚಿಸುವದು. ಹೊಳವು ಹಂಚಿಕೆಗಳನ್ನು ಹಾಕುವದು. ಅನುಕೂಲತೆಗಾಗಿ, ಅವಶ್ಯಕತೆಗಾಗಿ ಇವುಗಳಲ್ಲಿ ಬೇಕಾದ ಹೆಚ್ಚು ಕಡಿಮೆ ಮಾಡುವದು. ಕಾರ್ಯಸಿದ್ಧಿಗಾಗಿ ಬೇಕಾಗುವ ಸಾಧನ ಸಾಮಗ್ರಿಯನ್ನು ಸಂಗ್ರಹಿಸುವದು. ಕಾರ್ಯಸಿದ್ಧಿಗಾಗಿ ಸಾಹಸ ಪಡುವದು. ವಿವಿಧ ಕೃತಿಗಳನ್ನು ಕೈಕೊಳ್ಳುವದು. ತಪ್ಪುತಡೆಗಳ ಪರಿಶೀಲನೆಯನ್ನು ಮಾಡುವದು, ಪರ್ಯಾಲೋಚನೆ ಮಾಡುವದು, ತಿದ್ದಿಕೊಳ್ಳುವದು. ಉರುಳುವ ಚೆಂಡು, ತಿರುಗುವ ಗಾಲಿ ನಡುವೆ ತಡೆಯುಂಟಾದರೆ ನಿಂತುಬಿಡುವದು. ಆದರೆ ಸಚೇತನದ ಸಹೇತುಕ ಕ್ರಿಯೆಯು ಹಾಗಲ್ಲ. ಅದು ಪರಿಸ್ಥಿತಿಗೆ ಪೂರ್ಣವಾಗಿ ಪರಾಧೀನವಾದುದಲ್ಲ. ಪ್ರತಿಕೂಲವಾದ ಪರಿಸ್ಥಿತಿಯನ್ನು ಅದು ಎದುರಿಸುವದು. **ಉದ್ದೇಶದ ಸಾಧನೆಯಲ್ಲಿ ಎದುರು ಬರುವ ಎಡರು ತೊಡರುಗಳನ್ನು ಮೀರಲು ಸಹೇ**

**ತುಕ ಕ್ರಿಯೆಯು ಹವಣಿಸುವದು.** ಭಾವನಾತ್ಮಕ ಕ್ರಿಯೆಯಿಂದಲೂ ಸಹೇತುಕ ಕ್ರಿಯೆಯು ವಿಭಿನ್ನವಾದುದು. ಭಾವನಾತ್ಮಕ ಕ್ರಿಯೆಯಲ್ಲಿಯೂ ಮಾಡಬೇಕಾದ ಕೆಲಸದ ತಿಳುವಳಿಕೆಯಿರುವದು. ಸಾಧನದ ಸೂಚನೆಯೂ ಇರುವದು. ಆದರೆ ನಿರ್ಣಯವು ಮಾತ್ರ ವಿಚಾರಪೂರ್ವಕವಾಗಿ ಕೈಕೊಂಡದ್ದಲ್ಲ. ಅದು ತೀವ್ರವೂ ತಾತ್ಪೂರ್ತಿಕವೂ ಆಗಿರುವದು. ಉದ್ದೇಶದ ಸ್ಥಿರವಾದ ಶಕ್ತಿ ಸ್ಫೂರ್ತಿಗಳು ಅದಕ್ಕಿರುವದಿಲ್ಲ. ಸಭಾಸ್ಫೂರ್ತಿಯಿಂದ ನೆರೆಮನೆಗೆ ಹೋಗುವದು, ಕ್ಷಮೆ ಬೇಡಿ ಮನೆಗೆ ಮರಳಿ ಬರುವದು **ಭಾವನಾತ್ಮಕ ಕೃತಿಗೆ** ಉದಾಹರಣೆಯಾಗಿ ಕೊಡಬಹುದು. ಆದರೆ ಸಹೇತುಕ ಕ್ರಿಯೆಯಲ್ಲಿ ಪೂರ್ವಾಪರ ವಿಚಾರವಿರುವದು. ಸ್ಥಿರವಾದ, ಸಾಧಾರವಾದ ನಿರ್ಣಯವಿರುವದು. ನಮ್ಮ ಕೃತಿಗಳೆಲ್ಲವೂ ವಿಚಾರಾತ್ಮಕವಾಗಿರಬೇಕು. ಸ್ವತಂತ್ರ ಹಾಗೂ ಸಂಪೂರ್ಣ ವಿಚಾರದಿಂದ ಕೈ ಕೊಂಡವುಗಳಾಗಿರಬೇಕು. ಇದನ್ನು ಸಾಧಿಸುವದು ಶಿಕ್ಷಣದ ಉದ್ದೇಶಗಳಲ್ಲಿ ಒಂದಾಗಿದೆ. ಮೂಲಶಿಕ್ಷಣದಲ್ಲಿಯಂತೂ ಇಂಥ ಕೃತಿಗೆ ಹೆಚ್ಚಿನ ಮಹತ್ವವಿದೆ.

**ಸಹೇತುಕ ಕ್ರಿಯೆಯು ಸಚೇತನ ಪ್ರಾಣಿಗಳ ವೈಶಿಷ್ಟ್ಯವಾಗಿರುವದು.** ಏಕಾಣುವಾದ ಕ್ರಿಮಿಯಿಂದ ದೇವದೇವನ ಕಲಾಕೃತಿಯಾದ ಮಾನವನ ವರೆಗಿನ ಎಲ್ಲ ಸಚೇತನ ಜೀವಿಗಳಲ್ಲಿ ಅದನ್ನು ಹೆಚ್ಚು ಕಡಿಮೆಯಾಗಿ ನಾವು ಕಾಣಬಹುದು. **ಕ್ರಿಯೆಯ ಸಹೇತುಕತೆಯು ಏತರಲ್ಲಿದೆ? ಅದು ಜೀವನಸ್ಪರ್ಶಿಯಾಗಿರಬೇಕು. ಜೀವನೋಪಯೋಗಿಯಾಗಿರಬೇಕು.** 'ಬಾಳಬೇಕು—ಬದುಕಬೇಕು' ಎನ್ನುವ ಜೀವನ ಸಂಗ್ರಾಮದಲ್ಲಿ ಅದಕ್ಕೊಂದು ಸ್ಥಾನವಿರಬೇಕು. 'ಇಂದು ಅಥವಾ ಮುಂದು, ಇಂಥದೊಂದು ನನಗೆ ಬೇಕು'— ಎನ್ನುವ **ಪ್ರಯೋಜನದಲ್ಲಿ ಪ್ರಬಲವಾದ ಪ್ರೇರಕಶಕ್ತಿಯಿದೆ.** ಇಂಥ ಕ್ರಿಯೆಯಲ್ಲಿ ಮನಸ್ಸು ತಾನಾಗಿ ಹರಿಯುವದು. ಕೈಕೊಂಡ ಕೃತಿಯಲ್ಲಿ ಮನಸ್ಸು ಹರಿಯುವದೇ **'ಆಸ್ಥೆ.' ಆಸ್ಥೆ—ಅವಧಾನಗಳನ್ನು** ತಾಯಿಮಕ್ಕಳೆಂದು ಹೇಳುವರು. 'ಕರುವನೆಳಗಂದಿ ತಾನರಸಿಕೊಂಡು' ಬರುವಂತೆ ಆಸ್ಥೆಯಿರುವ ಕೃತಿಯಲ್ಲಿ

ಅವಧಾನವು–ಮನಸ್ಸಿನ ಏಕಾಗ್ರತೆಯು ತಾನಾಗಿಯೇ ತಲೆದೋರುವದು. ಆಸ್ಥೆಯಿರುವ ಕೃತಿಯಲ್ಲಿ ಮಗುವು ತನ್ನ ಎಲ್ಲ ಶಾರೀರಿಕ ಹಾಗೂ ಮಾನಸಿಕ ಶಕ್ತಿಗಳನ್ನು ವಿನಿಯೋಗಿಸುವನು. ಪೂರ್ವಬಾಲ್ಯದ ವಯೋಮಾನದಲ್ಲಿ ಮಗುವಿನ ಆಸ್ಥೆಯ ವಿಷಯವು 'ವಾಸ್ತವ'ವಾದುದು, ಕೃತಿರೂಪವಾದುದು. ಓದಿ ಇಲ್ಲವೆ ಕೇಳಿ, ಕಾಣುವದರಲ್ಲಿ ಕಾಣದ್ದನ್ನು ತಿಳಿದುಕೊಳ್ಳುವ ತರ್ಕ ಶಕ್ತಿಯು ಆತನಿಗಿನ್ನೂ ಲಭಿಸಿರುವದಿಲ್ಲ. ತನಗೆ ಬೇಕಾಗಿರುವ ವಸ್ತು ಹಾಗೂ ಕೃತಿಗಳಲ್ಲಿಯೇ ಆತನಿಗೆ ಆಸಕ್ತಿಯೆನಿಸುವದು. ಜೀವನ ವಿಕಾಸ ರೂಪವಾದ 'ಜೀವನ' ಶಿಕ್ಷಣವು ಇಂಥ ಸಹೇತುಕವಾದ ಕೃತಿಯಿಂದಲೇ–ಕೃತಿಯ ಮುಖಾಂತರವಾಗಿಯೇ ಮಗುವಿನ ಶಿಕ್ಷಣವನ್ನು ಮೊದಲುಮಾಡು ವದು, ಮುಂದೆ ಸಾಗಿಸುವದು. ಓದುಬರೆಹಗಳಿಂದ ಕೂಡಿದ ಹಿಂದಿನ ಶಿಕ್ಷಣದಲ್ಲಿ ಮಗುವಿನ ಮನಸ್ಸು ತಾನಾಗಿಯೇ ಹರಿಯುತ್ತಿದ್ದಿಲ್ಲ. ಇದು ನನಗೆ ಬೇಕೆನ್ನುವ ಪ್ರಯೋಜನ ಭಾವನೆಯ ಬೆಂಬಲವವು ಹಿಂದಿನ ಶಿಕ್ಷಣ ಕ್ಕಿರಲಿಲ್ಲ. ಇದರಿಂದ ಮಗುವಿಗೆ ಕಲಿಯುವ ವಿಷಯದಲ್ಲಿ ಆಸ್ಥೆ–ಅವಧಾನ ಗಳುಂಟಾಗುತ್ತಿರಲಿಲ್ಲ. ಕೃತ್ರಿಮವಾದ ಉಪಾಯಗಳಿಂದ ಆಸ್ಥೆಯನ್ನೂ, ಹೆದರಿಕೆಯಿಂದ ಅವಧಾನವನ್ನೂ ಹುಟ್ಟಿಸುವದು ರೂಢಿಯಾಗಿದೆ. ಇದರಿಂದ ಕಲಿಸುವದು ಹಾಗೂ ಕಲಿಯುವದು ಕೂಡಿಯೇ ಸಫಲವಾಗುವದಿಲ್ಲ. **ನಿಜ ವಾದ ಅವಧಾನವಿರುವಲ್ಲಿ ಮಕ್ಕಳು ತಾವಾಗಿಯೇ ಕೆಲಸದಲ್ಲಿ ತೊಡಗುವರು.** ಹೀಗಿರುವಲ್ಲಿ ಶಿಸ್ತಿನ ತೊಡಕೇ ಉಂಟಾಗುವದಿಲ್ಲ. ಪರಂ ಪರೆಯ ಶಿಕ್ಷಣದಲ್ಲಿ, 'ಶಿಸ್ತು' ಎನ್ನುವದಕ್ಕೆ ಬೇರೊಂದು ವಿಚಿತ್ರವಾದ ಅರ್ಥ ಬಂದಿದೆ. ಮಕ್ಕಳು 'ಕೈಕಟ್ಟಿಕೊಂಡು'–'ದೇವರ್ಹಾಂಗ' ತೆಪ್ಪಗೆ ಕುಳಿತು ಕೊಳ್ಳುವಂತೆ ಮಾಡುವದೇ ಇಂದಿನ 'ಶಿಸ್ತು' ಆಗಿದೆ. ಬಗೆಬಗೆಯ ನಾದ-ನೋಟಗಳಿಂದ ಮಕ್ಕಳ ಮನಸ್ಸು ಸ್ವಾಭಾವಿಕವಾಗಿ ಅತ್ತಕಡೆಗೆ ಎಳೆಯು ವದು. ತಿಳಿಯಲಾರದ, ಹಾಗೂ ಅಪರಿಚಿತ ವಿಷಯಗಳನ್ನು ತಿಳಿದು ಕೊಳ್ಳುವ ಲವಲವಿಕೆಯು ಆತನಲ್ಲಿ ಉಂಟಾಗುವದು ಸಹಜವಾಗಿದೆ. ಇದ ಕ್ಕಾಗಿ ಮಗುವು ಏನಾದರೂ 'ಧಡಪಡ' ಮಾಡುವದೂ ಅಷ್ಟೇ ಸಹಜ

ವಾಗಿದೆ. ಆದರೆ ಇದೆಲ್ಲವೂ ಪರಂಪರೆಯ ಶಿಕ್ಷಕನಿಗೆ ಅಪಥ್ಯವೆನಿಸುವದು. ಇದೆಲ್ಲವೂ 'ಧಾಂದಲೆ,' ಕಿಡಿಗೇಡಿತನ. ಇದನ್ನು ಹತ್ತಿಕ್ಕಿ, ವರ್ಗದಲ್ಲಿ ಶಿಕ್ಷಕನು ಪೋಲಿಸರಂತೆ ದಂಡಧಾರಿಯಾಗಿ ಶಾಂತಿ ಸುವ್ಯವಸ್ಥೆಗಳನ್ನು ಕಾಯ್ದುಕೊಳ್ಳಬೇಕು. ಸಚೇನತವಾದ, ಕುತೂಹಲದಿಂದ ಕೂಡಿದ ಹಾಗೂ ಕೃತಿಪ್ರೇಮವುಳ್ಳ ಮಗುವನ್ನು ನಿರ್ಜೀವವಾದ, ನಿಶ್ಚೇಷ್ಟವಾದ ಶಿಲಾಪ್ರತಿಮೆಯನ್ನಾಗಿ ಮೊದಲು ಮಾಡಬೇಕು. ಆ ಮೇಲೆ ಶಿಕ್ಷಕನಿಂದ ಹರಿದು ಬರುವ ಜ್ಞಾನ(?)ಗಂಗೆಯು ಈ ನಿರ್ಜೀವವಾದ, ಬರಿದಾದ ಪಾತ್ರೆಗಳಲ್ಲಿ ತುಂಬಬೇಕು. ಈ ಬಗೆಯ ವಿಧಾನವು ಚೈತನ್ಯಸ್ವರೂಪವಾದ ಮಗುವಿಗೆ ಶಿಕ್ಷಣವು ಮಾಡುವ ಅಕ್ಷಮ್ಯವಾದ ಅನ್ಯಾಯವಾಗಿದೆ, ಅಪರಾಧವಾಗಿದೆ. ಕ್ರಿಯಾತ್ಮಕನಾದ–ಕೃತಿಮೂಲವಾದ ಮೂಲಶಿಕ್ಷಣವು ಈ ಶೈಕ್ಷಣಿಕ 'ಮಹಾಪಾತಕ'ದಿಂದ ಸುದೂರವಾಗಿದೆ. ಶಿಕ್ಷಣದ ಕೇಂದ್ರವಾದ ಸಹೇತುಕ ಹಾಗೂ ಮಗುವಿನ ಜೀವನಕ್ಕೆ ಸಂಬಂಧಿಸಿದ ಕೃತಿಯಲ್ಲಿ ಆತನ ಆಸ್ಥೆ ಅವಧಾನಗಳು ತಾವಾಗಿಯೇ ಜನಿಸುವವು, ನೆಲಿಸುವವು. ಇದರಿಂದ **ಕ್ರಿಯಾತ್ಮಕವಾದ ಶಿಕ್ಷಣದಲ್ಲಿ 'ಶಿಸ್ತು' ಪಾಲಿಸುವ ತೊಡಕೇ ಉದ್ಭವಿಸುವದಿಲ್ಲ.** ಮಾಂಟೇಸೋರಿ ವರ್ಗಗಳಲ್ಲಿ ಇದನ್ನು ಮೊದಲು ನೋಡುತ್ತಿದ್ದೆವು. ಮೂಲಶಿಕ್ಷಣ ಶಾಲೆಗಳಲ್ಲಿ ಈ ಮಾತಿನ ಸತ್ಯತೆಯು ನಮಗೆ ಪೂರ್ಣವಾಗಿ ಗೋಚರವಾಗುವದು.

ಸಹೇತುಕವಾದ ಕೃತಿಯಲ್ಲಿ ಶಿಕ್ಷಣೋಪಯೋಗಿಯಾದ ಇನ್ನೊಂದು ಮಹತ್ವದ ಅಂಶವಿರುವದು. ಅದು **ರಚನಾತ್ಮಕವಾದ ಕಾರ್ಯವಿರುವದು.** ಉದ್ದೇಶವು ಚಿಕ್ಕದಿರಲಿ, ದೊಡ್ಡದಿರಲಿ, ಅದರ ಪೂರ್ತಿಗಾಗಿ ಏನಾದರೊಂದು ಸುವ್ಯವಸ್ಥಿತವಾದ ವಿಧಾಯಕ ಕಾರ್ಯವನ್ನು ಕೈಕೊಳ್ಳಬೇಕಾಗುವದು. ಏನಾದರೂ ಮಾಡಬೇಕೆನ್ನುವ ಈ ಹಂಬಲಕ್ಕೆ ರಚನಾಪ್ರವೃತ್ತಿಯೇ ಆಧಾರವಾಗಿರುವದು. ಶಿಕ್ಷಣಕ್ಕೆ ಸಹಾಯವಾಗುವ ಸಹಜ ಪ್ರವೃತ್ತಿಗಳಲ್ಲಿ ಇದೂ ಒಂದು. **ಚಿಕ್ಕಮಕ್ಕಳಲ್ಲಿ ರಚನಾಪ್ರವೃತ್ತಿಯು ಒಳ್ಳೇ ಪ್ರಬಲವಾಗಿರುವದು.** ಅವರ ಅವಯವಗಳು ಒಂದರಗಳಿಗೆಯಾದರೂ ಸುಮ್ಮನೆ ಕೂಡ್ರುವದಿಲ್ಲ. ಅವರ 'ಕಿಡಿಗೇಡಿತನ'ವಾದ ಒಗೆ

ಯುವದೂ, ಮುರಿಯುವದೂ, ನಮಗೆ ವಿಧ್ವಂಸಕವೆನಿಸಿದರೂ, ಬೆಳೆಯುವ ಮಕ್ಕಳ ದೃಷ್ಟಿಯಲ್ಲಿ ಅದೆಲ್ಲವೂ ವಿಧಾಯಕವೇ ಸರಿ. ಮುರಿಯುವದು—ಮಾಡುವದು, ಇವುಗಳಲ್ಲಿಯ ಭೇದವನ್ನರಿಯದ ಮಗುವಿಗೆ ಎರಡೂ ರಚನಾತ್ಮಕ ಕ್ರಿಯೆಯ ಇಬ್ಬಗೆಂಸಾಗಿಯೇ ಭಾವಿಸಬೇಕು. ಮುರಿಯುವದೇ ಮಗುವಿನ ಉದ್ದೇಶವಲ್ಲ. ಏನಿರುವದೆಂಬುದನ್ನು ತಿಳಿದುಕೊಳ್ಳುವದೇ ಅದರ ಉದ್ದೇಶವಾಗಿರುವದು. **ರಚನಾತ್ಮಕ ಕೃತಿಯಲ್ಲಿ ಪೂರ್ವಾಪರ ಯೋಜನೆಯಿರುವದು.** ನೂತನ ವಸ್ತು ನಿರ್ಮಾಣಕ್ಕೆ ಕಲ್ಪಕತೆ ಬೇಕು. ಹೀಗಾಗಬೇಕೆನ್ನುವ ಒಂದು ಆದರ್ಶವಿರಬೇಕು, ಮಾದರಿಯನ್ನು ಮುಂದಿಟ್ಟು ಕೊಳ್ಳಬೇಕು. ಮಾಡುವ ವಿಧಾನದಲ್ಲಿ ಕುಶಲತೆ ತಂದುಕೊಳ್ಳಬೇಕು. ಮೂಲಶಿಕ್ಷಣದಲ್ಲಿ ರಚನಾತ್ಮಕ ಕೃತಿಯೇ ಶಿಕ್ಷಣದ ಕೇಂದ್ರವಾಗಿರುವದು. ರಚನಾತ್ಮಕ ಕೃತಿಯಲ್ಲಿ ತೊಡಗಿದ ಮಗುವು ತನ್ನ ವಿವಿಧಶಕ್ತಿಗಳನ್ನೆಲ್ಲ ವಿನಿಯೋಗಿಸಿಕೊಳ್ಳುವದು. ನಿಸರ್ಗವು ಮಗುವಿಗೆ ಕೊಟ್ಟ ಅನೇಕ ಕಾಣಿಕೆಗಳಲ್ಲಿ ರಚನಾಪ್ರವೃತ್ತಿಯು ಹಿರಿದಾಗಿದೆ. ಪರಿಮಿತಿಯಲ್ಲಿ ಅಲ್ಪಸ್ವಲ್ಪ ಹೆಚ್ಚು ಕಡಿಮೆಯಾಗಿ ತೋರಿದರೂ, ಈ ರಚನಾತ್ಮಕ ಪ್ರತಿಭೆ—**ರಚನಾತ್ಮಕ ಪ್ರವೃತ್ತಿ ಎಲ್ಲ ಮಕ್ಕಳಿಗೂ ಸಮಾನವಾಗಿರುವದು.** ಶಿಕ್ಷಣವು ಈ ರಚನಾತ್ಮಕ ಪ್ರವೃತ್ತಿ—ಪ್ರತಿಭೆಗಳನ್ನು ಆಧಾರವಾಗಿಟ್ಟುಕೊಳ್ಳಬೇಕು. ಅದಕ್ಕೆ ಪ್ರೋತ್ಸಾಹವನ್ನೀಯಬೇಕು. ವಿಧಾಯಕ ರೀತಿಯಲ್ಲಿ ಮಗುವು ತನ್ನ ಜೀವನವನ್ನೂ, ನೂತನ ಸಮಾಜವನ್ನೂ ರಚಿಸಲು ರಚನಾಪ್ರವೃತ್ತಿಯಿಂದಲೇ ಮುಂದರಿಯುವದು. **ಮಡುವುಗಟ್ಟಿ ಮಲೆತು ನಿಂತ ಜನಜೀವನಕ್ಕೆ, ಹರಿಗಡಿದು ಹೊಸಹಾದಿಗೆ ಹಚ್ಚಿದ 'ಕ್ರಾಂತಿಕಾರ' ರೆಲ್ಲ ಪ್ರಭಾವಿಯಾದ ರಚನಾತ್ಮಕ ಪ್ರಭೆಯಿಂದ ಕೂಡಿದವರೇ ಆಗಿರುವರು.** ಸಾಹಿತಿಯಾಗಿರಲಿ, ಸತ್ಯಾಗ್ರಹಿಯಾಗಿರಲಿ, ಸಂಶೋಧಕನಾಗಿರಲಿ, ಸನ್ಯಾಸಿಯಾಗಿರಲಿ—ಇವರೆಲ್ಲರೂ ರಚನಾತ್ಮಕ ಕ್ಷೇತ್ರದಲ್ಲಿ ಅತಿರಥ ಮಹಾರಥರೆ ಸರಿ. ಇದ್ದ ಸಂಗತಿಗಳನ್ನೇ ಅಂದವಾಗಿ, ಅನೇಕ ಬಗೆಯಾಗಿ ಕೂಡಿಸಿ ಕಟ್ಟುವದು ರಚನೆಯ ಕಾರ್ಯ. ರಚನಾ—ಪ್ರತಿಭೆಯುಳ್ಳ ಮಹಾಪುರುಷರೆಲ್ಲರೂ

ಇದನ್ನೇ ಮಾಡಿರುವರು. ಹಳೆಯದರಲ್ಲಿ ಒಳ್ಳೆಯದೆಲ್ಲವನ್ನೂ ಒಳಗೊಂಡ ಹೊಸಸೃಷ್ಟಿಯನ್ನು ವಿವಿಧ ಕ್ಷೇತ್ರಗಳಲ್ಲಿ ಇವರು ಮಾಡಿರುವರು. ಜನತೆಯ ಭಾವನೆಗೆ, ವಿಚಾರಗಳಿಗೆ ಹಾಗೂ ಜೀವನಕ್ಕೆ ಇವರು ಹೊಸಹಾದಿಯನ್ನು ಹಾಕಿಕೊಟ್ಟರು. ರಚನಾತ್ಮಕ ಕೃತಿಯನ್ನೇ ಕೇಂದ್ರವಾಗಿಟ್ಟುಕೊಂಡ **ಮೂಲಶಿಕ್ಷಣವು ಮಕ್ಕಳಲ್ಲಿ ರಚನಾತ್ಮಕ ದೃಷ್ಟಿಯನ್ನು ಮೂಡಿಸುವದು. ರಚನಾತ್ಮಕ, ವಿಧಾಯಕ ಮನೋವೃತ್ತಿಯನ್ನು ಉಜ್ವಲಗೊಳಿಸುವದು.** ರಚನಾತ್ಮಕ ಮನೋವೃತ್ತಿಯಲ್ಲಿ ಸತ್ಯ ಸೌಂದರ್ಯಗಳ ಪ್ರತೀತಿ–ಪ್ರೀತಿ–ನಿರ್ಮಿತಿಗಳಿರುವವೆಂದು ಹೇಳುವದುಂಟು. ರಚನಾತ್ಮಕ ಕ್ರಿಯೆಯ ಮುಖಾಂತರವಾಗಿ ಶಿಕ್ಷಣವನ್ನು ಪಡೆದ–ತನ್ನ ಜೀವನವನ್ನು ಕಟ್ಟಿದ–ಮಗುವು ಸತ್ಯ ಸೌಂದರ್ಯಗಳನ್ನರಸುವದು, ಸತ್ಯ ಸೌಂದರ್ಯಗಳನ್ನು ಮೆಚ್ಚುವದು, ಸತ್ಯ ಸೌಂದರ್ಯಗಳನ್ನು ತನ್ನ ಕೃತಿಗಳಲ್ಲಿ ಮೂರ್ತವಾಗಿ ಮೂಡಿಸುವದು. **ಇಂಥ ಮಕ್ಕಳು ಕ್ರಿಯಾಶೀಲರಾಗುವರು. ಅವರ ಪ್ರತಿಯೊಂದು ಕೃತಿಯೂ ಕಲಾತ್ಮಕವಾಗುವದು.** ಕವಿಯು ಸೌಂದರ್ಯದಲ್ಲಿ ಸತ್ಯವನ್ನು ಕಂಡರೆ, ಗಾಂಧೀಜಿಯವರು ಸತ್ಯದಲ್ಲಿ, ಸರಲತೆಯಲ್ಲಿ ಸೌಂದರ್ಯವನ್ನು ಕಂಡರು. ವಿಧಾಯಕ ವಾತಾವರಣದಲ್ಲಿ ಬೆಳೆಯುವ ಮಗುವಿಗೆ ಈ ದೃಷ್ಟಿಯು ತಿಳಿಯದೆ ಬರುವದು. ಕೃತಿಮೂಲ ಶಿಕ್ಷಣದಲ್ಲಿ ಗುರುವಿಗೂ ವಿದ್ಯಾರ್ಥಿಗಳಿಗೂ ಪ್ರೀತಿ–ಆತ್ಮೀಯತೆಗಳು ತೀರ ಅಗತ್ಯವಾದವುಗಳು. ಇವುಗಳಿಂದಲೇ ಗುರುಶಿಷ್ಯರಲ್ಲಿ ಆಶ್ರಮಕಾಲದ ಬಾಂಧವ್ಯವು ಬೆಳೆದುಬರುವದು. **ಮಕ್ಕಳ ಮೇಲಿನ ಅಪಾರವಾದ, ನಿರ್ವ್ಯಾಜವಾದ ಮಮತೆ, ಕೃತಿಮೂಲಶಿಕ್ಷಣಕ್ಕೆ ಮೂಲಾಧಾರವೆನ್ನಬಹುದು.** ಬೇರೆ ಏನಿದ್ದರೂ ಈ ಮಮತೆಯಿಲ್ಲದಿದ್ದರೆ ಎಲ್ಲವೂ ವ್ಯರ್ಥವೇ. ಈ ಬಗೆಯ ಪ್ರೇಮಪೂರ್ಣ, ರಚನಾತ್ಮಕ ಸನ್ನಿವೇಶಗಳಲ್ಲಿ ಮೂಲಶಿಕ್ಷಣವು ಮಗುವಿನ ಮೈ–ಮನಗಳನ್ನು ಕಟ್ಟುವದು, ರೂಪಿಸುವದು. ಹೀಗೆ ಬೆಳೆದ ಮಕ್ಕಳೇ ನೂತನ ಸಮಾಜದ ನವನಾಗರಿಕರಾಗುವರು. ಈ ಬಗೆಯ ರಚನಾತ್ಮಕ ಪ್ರತಿಭೆಯುಳ್ಳ ವ್ಯಕ್ತಿಗಳಿಂದ ಹೊಸಸಮಾಜವನ್ನು ಕಟ್ಟು

ವದೇ ಗಾಂಧೀಜಿಯರು ಅಪೇಕ್ಷಿಸಿದ **'ಸದ್ದಿಲ್ಲದ ಸಾಮಾಜಿಕ ಕ್ರಾಂತಿ.'** ಹೊಸಸಮಾಜವು ರಚನಾತ್ಮಕ ಕ್ರಿಯೆಯ ಲಕ್ಷಣಗಳಾದ ಸತ್ಯ–ಸಹಕಾರಗಳನ್ನೇ ತನ್ನ ತಳಹದಿಯಾಗಿ ಮಾಡಿಕೊಳ್ಳುವದು. ಈ ಸ್ಪರ್ಧೆ–ಶೋಷಣ ಮೊದಲಾದ ದೋಷಗಳಿಂದ ಮಗುವನ್ನು ಮುಕ್ತಗೊಳಿಸುವದು, **'ಕಾರಣ ಪುರುಷ'ರಾದ, 'ಕ್ರಾಂತಿಕಾರ'ರಾದ ಗಾಂಧೀಜಿಯವರ ಈ ಕನಸನ್ನು ಮೂಲಶಿಕ್ಷಣವು ನನಸಾಗಿ ಮಾಡಬೇಕಾಗಿದೆ.**

**ಕೃತಿಮೂಲಶಿಕ್ಷಣವು ಮಗುವಿನ ವ್ಯಕ್ತಿತ್ವದಲ್ಲಿ ಪೂರ್ಣತೆಯನ್ನು ತಂದುಕೊಡುವದು.** ಮಗುವಿನ ವಿವಿಧಶಕ್ತಿಗಳನ್ನೆಲ್ಲ ಹೊಂದಿಸಿಕೊಂಡು ಆತನ ಜೀವನವನ್ನು **ಪೂರ್ಣಜೀವನವನ್ನಾಗಿ ತುಂಬುಜೀವನವನ್ನಾಗಿ** ಮಾಡುವದು. **ಮಗುವಿನ 'ವ್ಯಕ್ತಿತ್ವ'ವೆಂದರೆ ಆತನ ಮೈ-ಮನ-ಆತ್ಮಗಳ ಸಮುಚ್ಚಯ.** 'ಅಖಂಡ ಶಿಕ್ಷಣ'ವೆಂಬ ಪರಿಚ್ಛೇದದಲ್ಲಿ ಮಗುವಿನ ಚೈತನ್ಯದ–ಜೀವನದ ಅಖಂಡತೆಯ ಬಗ್ಗೆ ಸಾಕಷ್ಟು ವಿವೇಚಿಸಿದೆ. ಜೀವನದ ಎಲ್ಲ ಕಾರ್ಯಗಳಲ್ಲಿ ಮಗುವಿನ **'ಸಮಗ್ರ ವ್ಯಕ್ತಿತ್ವ'ವೇ** ಸಹಕರಿಸುವದು. ಆತನ ಪ್ರತಿಯೊಂದು ಕೃತಿಯೊಡನೆ ಈ ತ್ರಿಕರಣಗಳ ಸಂಬಂಧವು ಬರುವದು. ವ್ಯಕ್ತಿತ್ವದಲ್ಲಿ ಪೂರ್ಣತೆ–ಹೊಂದಿಕೆಯನ್ನು ಸಾಧಿಸುವದೆಂದರೆ, ಈ ತ್ರಿಕರಣಗಳಲ್ಲಿ ಪೂರ್ಣತೆ–ಹೊಂದಿಕೆಯನ್ನು ತರುವದು. ಕೃತಿಮೂಲಶಿಕ್ಷಣದಿಂದ ಈ ಉದ್ದೇಶವು ಈಡೇರುವದು. ಸಹೇತುಕ–ರಚನಾತ್ಮಕವಾದ ಕೃತಿಯು ಮಗುವಿನ ಮೈ–ಮನ-ಆತ್ಮಗಳಲ್ಲಿ ಹುದುಗಿದ ಶಕ್ತಿಗಳನ್ನೆಲ್ಲ ಹೊರಗೆ ಬರುವಂತೆ ಮಾಡುವದು. ಸುಪ್ತವಾದವುಗಳನ್ನು ಸ್ಫುಟಗೊಳಿಸುವದು. ಆ ಶಕ್ತಿಗಳನ್ನೆಲ್ಲ ಒಂದು ವಿಶಿಷ್ಟವಾದ ಉದ್ದೇಶದ ಪೂರ್ತಿಗಾಗಿ, ಪರಸ್ಪರ ವಿರೋಧವಾಗದಂತೆ, ಒಂದು ಮತ್ತೊಂದರೊಡನೆ ಸಹಕರಿಸುವಂತೆ, ಸರಾಗವಾಗಿ ಹೊಂದಿಸಿಕೊಳ್ಳುವದು, ವಿನಿಯೋಗಿಸಿಕೊಳ್ಳುವದು. ಗಡಿಯಾರದ ಪರಿಚಿತ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಮೇಲೆ ನೋಡಿದರೆ ಎರಡು ಮುಳ್ಳುಗಳು ವೇಳೆತೋರಿಸುವ 'ಉದ್ದೇಶ'ಕ್ಕಾಗಿ 'ಕಾರ್ಯ' ಮಾಡುತ್ತಿರುವವು. ಆದರೆ ಒಳಗೆ ನೋಡಿದರೆ–ಎಷ್ಟೊಂದು ಚಿಕ್ಕ ದೊಡ್ಡ

ಚಕ್ರಗಳು ಈ ಉದ್ದೇಶ ಸಾಧನೆಗಾಗಿ, ಅಜ್ಞಾತವಾಗಿ, ಒಂದು ಮತ್ತೊಂದಕ್ಕೆ ಕಾಲ್ತೊಡಕಾಗದೆ ಕೂಡಿ ಕೆಲಸಮಾಡುತ್ತಿರುವವು. ಹಿಂದಿನ ವಿಷಯಪ್ರಧಾನ ವಾದ ಗಿಳಿ ಓದಿನ ಶಿಕ್ಷಣದಲ್ಲಿ ಈ ಹೊಂದಿಕೆಯಿರಲಿಲ್ಲ. ಅದು ಏಕಾಂಗಿ ಯಾದ ಶಿಕ್ಷಣ. ಅಂತೆಯೇ ಆ ಶಿಕ್ಷಣವನ್ನು ಪಡೆದವರ ವ್ಯಕ್ತಿತ್ವದಲ್ಲಿ ಒಂದು ಊನತೆ—ಅಪೂರ್ಣತೆ ಒಡೆದು ತೋರುವದು. ಕಾರ್ಯಕ್ಷಮತೆಯ ಕೊರತೆಯು ಅವರ ಶರೀರದಲ್ಲಿ, ಸದ್ಭಾವನೆಗಳ ಕೊರತೆಯು ಅವರ ಹೃದಯದಲ್ಲಿ—ಉಂಟಾಗುವದರಿಂದ ವ್ಯಕ್ತಿತ್ವದ ಎಲ್ಲ ಅಂಗಗಳ ವಿಕಾಸವು ಅವರಲ್ಲಿ ಆಗಿರುವ ದೆಂದು ಹೇಳಲು ಬಾರದು. **ಇವರು ' ಸುಶಿಕ್ಷಿತ 'ರಾದರೂ ಸುಸಂಸ್ಕೃತ ರಲ್ಲ.** ಜೀವನದ ಸಮಸ್ಯೆಗಳನ್ನು ಇವರು ಯಶಸ್ವಿಯಾಗಿ ಎದುರಿಸಲಾರರು, ಬಿಡಿಸಲಾರರು.

ಮಗುವಿನ ಪೂರ್ಣಜೀವನವನ್ನು ಸಾಧಿಸುವದೇ ಮೂಲ ಶಿಕ್ಷಣದ ಗುರಿಯಾಗಿದೆ. ಆತನ **ಶಾರೀರಿಕ, ಮಾನಸಿಕ, ಆತ್ಮಿಕಶಕ್ತಿಗಳ ಸಮನ್ವಿತವಾದ ವಿಕಾಸವೇ** ಆತನ ವ್ಯಕ್ತಿತ್ವದಲ್ಲಿ ಹೊಂದಿಕೆ, ಪೂರ್ಣತೆಯನ್ನು ತಂದುಕೊಡುವದು. ಕ್ರಿಯಾತ್ಮಕ ಶಿಕ್ಷಣದಲ್ಲಿ ಈ ಸಮನ್ವಿತವಾದ ವಿಕಾಸವು ಅಡಕವಾಗಿದೆ. ಏಳು ವರುಷಗಳ ಅವಧಿಯಲ್ಲಿ, ಮೂಲೋದ್ಯೋಗದಲ್ಲಿಯ ಕುಶಲತೆಯೊಡನೆ, ಸಾಮಾನ್ಯವಾದ ಶಾರೀರಿಕ ಕಾರ್ಯಕ್ಷಮತೆಯನ್ನೂ ಮೂಲಶಿಕ್ಷಣವು ತಂದುಕೊಡುವದು. ಮೂಲೋದ್ಯೋಗವನ್ನು ಹಿಂದಿನ ಕಾಲದಲ್ಲಿ ತಂದೆಯಿಂದ ಮಗನು ಕಲಿಯುವಂತೆ, ಕೇವಲ ತಾಂತ್ರಿಕವಾಗಿ, ' ಯಾಂತ್ರಿಕವಾಗಿ ' ಕಲಿಸುವಂತಿಲ್ಲ. ಅದರಲ್ಲಿಯ ಆಗುಹೋಗುಗಳನ್ನೂ, ಕಾರ್ಯ-ಕಾರಣಗಳನ್ನೂ ಮಗುವು ಅರಿತುಕೊಳ್ಳಬೇಕು. ಪ್ರಾಸಂಗಿಕವಾಗಿ ಉಪಯುಕ್ತವಿಷಯಗಳ ಜ್ಞಾನವನ್ನೂ ಪಡೆದುಕೊಳ್ಳಬೇಕು. ಇದರಿಂದ ವಿವಿಧ ಮಾನಸಿಕ ಹಾಗೂ ಬೌದ್ಧಿಕ ಶಕ್ತಿಗಳ ವಿಕಾಸವೂ ಆಗುವದು. ಮೂಲೋದ್ಯೋಗದಲ್ಲಿ ತೊಡಗಿದ ಮಗುವು ಎಲ್ಲರೊಡನೆ ಕೂಡಿ ಕೆಲಸ ಮಾಡಬೇಕಾಗುವದು. ಉದ್ಯೋಗದಲ್ಲಿ ಒಬ್ಬರಿಗೊಬ್ಬರು ಕೊಡುವದು-ತೆಗೆದುಕೊಳ್ಳುವದು, ನೆರವಾಗುವದು-ನೆರವು ಪಡೆಯುವದು ಅನಿವಾರ್ಯ

ವಾಗಿದೆ. ತಾಳ್ಮೆ-ತತ್ಪರತೆಗಳೂ ಅಗತ್ಯವೆನಿಸುವವು. ಕೂಡಿ ಕೆಲಸ ಮಾಡುವದ ರಿಂದ ಉದಾತ್ತಧ್ಯೇಯವಾದ ಜೀವನದಲ್ಲಿ 'ಕೂಡಿಬಾಳುವ' ಕಲೆಯೂ ಮಗುವಿಗೆ ಹಸ್ತಗತವಾಗುವದು. **ಎಲ್ಲರ ಹಿತಕ್ಕಾಗಿ ತನ್ನದೊಬ್ಬನ ಹಿತವನ್ನು, ಸ್ವಾರ್ಥವನ್ನು ಬಿಟ್ಟುಕೊಡುವದೇ ತ್ಯಾಗವಾಗಿದೆ.** ಪ್ರೀತಿ ಸಹಾನುಭೂತಿಗಳಿಂದ ಮಾಡುವ ತ್ಯಾಗದಲ್ಲಿಯೇ ಹೃದಯದ ಸಂಸ್ಕಾರವಿದೆ ಆತ್ಮೋನ್ನತಿಯಿದೆ. ಈ ರೀತಿಯಾಗಿ ಮೂಲೋದ್ಯೋಗದ ಮುಖಾಂತರ ವಾಗಿ ಮಗುವಿನ ಶಾರೀರಿಕ, ಮಾನಸಿಕ ಹಾಗೂ ಆತ್ಮಿಕ ಶಕ್ತಿಗಳೆಲ್ಲವೂ ಪ್ರಕಟವಾಗುವವು, ಪರಿಣತಿ-ಪೂರ್ಣತೆಗಳನ್ನು ಪಡೆಯುವವು. ಒಂದು ಧ್ಯೇಯ ದಿಂದ ಪ್ರೇರಿತರಾದ ಜನರು ಧ್ಯೇಯಸಾಧನೆಗಾಗಿ ಒಟ್ಟುಗೂಡಿ ಕೆಲಸ ಮಾಡುವಂತೆ, ಒಂದು ಸಹೇತುಕ ಕಾರ್ಯಾಚರಣೆಯಲ್ಲಿ ಮಗುವಿನ ತ್ರಿವಿಧ ವಾದ ಈ ಶಕ್ತಿಗಳೆಲ್ಲ ಸರಾಗವಾಗಿ ಕೂಡಿಕೊಂಡು ಕೆಲಸ ಮಾಡುವವು. **ಈ ಮೂರು ಬಗೆಯ ಶಕ್ತಿಗಳೆಂಬ ಎಳೆಗಳೆ ಹಾಸುಹೊಕ್ಕಾಗಿ ಹೊಂದಿಕೊಂಡು ಮಗುವಿನ ವ್ಯಕ್ತಿತ್ವವನ್ನು ಹೆಣೆಯುವವು.** ಈ ಹೊಂದಿಕೆಯಲ್ಲಿಯೇ ಮಗುವಿನ ವ್ಯಕ್ತಿತ್ವದ ಪೂರ್ಣತೆಯಿದೆ, ತುಂಬು ಜೀವನವಿದೆ. ಮೂಲ ಶಿಕ್ಷಣವು ಮೂಲೋದ್ಯೋಗದ ಮುಖಾಂತರ ಇದನ್ನು ಸಾಧಿಸಬೇಕಾಗಿದೆ.

### (೧೧) ಮೂಲಶಿಕ್ಷಣವೂ, ಮಾತೃಭಾಷೆಯೂ.

**ಮೂಲಶಿಕ್ಷಣದಲ್ಲಿ ಮಾತೃಭಾಷೆಗೆ ಅತ್ಯಂತ ಮಹತ್ವದ ಸ್ಥಾನ ವಿದೆ.** ಪರಕೀಯ ಆಳಿಕೆಯಲ್ಲಿ ಪ್ರಚಲಿತವಾದ ಶಿಕ್ಷಣವು ಮಾತೃಭಾಷೆ ಯನ್ನು ತೀರ ಕಡೆಗಣಿಸಿತು. ಇಂಗ್ಲೀಷ ಶಿಕ್ಷಣದ ಪ್ರಸಾರವು ದೇಶೀಯ ಮಾತೃಭಾಷೆಗಳಿಗೆ ಮೃತ್ಯುವಿನಂತಾಯಿತು. '....ಭಾರತದ ಸಮಗ್ರವಾಙ್ಮಯ ಕ್ಕಿಂತಲೂ ಯುರೋಪದ ಹತ್ತೆಂಟು ಹೊತ್ತಿಗೆಗಳು ಶ್ರೇಷ್ಠವಾಗಿವೆ'ಯೆಂದು ನಮ್ಮ ದೇಶದಲ್ಲಿ ಇಂಗ್ಲಿಷ ಶಿಕ್ಷಣವನ್ನು ಮೊದಲು ಸುರುವುಮಾಡಿದ ಮೆಕಾಲೆ ಸಾಹೇಬರು ಏತದ್ದೇಶೀಯಭಾಷೆಗಳನ್ನೆಲ್ಲ ಹೀಯಾಳಿಸಿರುವರು. ನಮ್ಮ ದೇಶ, ನಮ್ಮ ಭಾಷೆಗಳ ಬಗ್ಗೆ ನಮ್ಮಲ್ಲಿಯೇ ಅನಾದರವನ್ನುಂಟುಮಾಡು

ವದು ಪರಕೀಯ ಸರಕಾರವು ಕೈಕೊಳ್ಳುವ ಪ್ರಥಮಕಾರ್ಯವಾಗಿದೆ. ಗ್ರಾಮ ಪಂಚಾಯತಿಗಳ ನಿರ್ಮೂಲನವಾಯಿತು. ಅವುಗಳ ಮುಖಾಂತರವಾಗಿ ಹಳ್ಳಿಗರಿಗೆ ದೊರೆಯುತ್ತಿದ್ದ ಮಾತೃಭಾಷೆಯ ಶಿಕ್ಷಣವು ಮುಳುಗಿಹೋಯಿತು. ಇಂಗ್ಲೀಷು ಶಿಕ್ಷಣದ ಮಾಧ್ಯಮವಾಯಿತು. ಮೆಕಾಲೆಯವರು ಹೊಂಚು ಹಾಕಿದಂತೆ ನಡೆ-ನುಡಿಗಳಲ್ಲಿ ಇಂಗ್ಲೀಷರ ಅಂಧಾನುಕರಣವನ್ನು ಮಾಡುವ 'ಸುಶಿಕ್ಷಿತ' ಅಲ್ಪಸಂಖ್ಯಾಕವಾದ ವರ್ಗವೊಂದು ನಿರ್ಮಾಣವಾಯಿತು. **ಇಂಗ್ಲೀಷ ಭಾಷೆಯ ಮುಖಾಂತರ ಕೊಡುವ ಶಿಕ್ಷಣದಿಂದ ಕೇವಲ ಮಾತೃಭಾಷೆಗಳಿಗಷ್ಟೇ ಪೆಟ್ಟುತಗಲಲಿಲ್ಲ. ಅದರಿಂದ ಒದಗಿದ ಅನರ್ಥಪರಂಪರೆಯು ನಮ್ಮ ದೇಶದ ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕಕ್ಷೇತ್ರಗಳಲ್ಲಿ ಕೂಡ ಪಸರಿಸಿತು.** ಸಹಾಯ, ಸಹಾನುಭೂತಿಗಳಿಲ್ಲದೆ ದೇಶೀಯ ಭಾಷೆಗಳು ಮೂಲೆಗುಂಪಾದವು. ತಮ್ಮ ಭಾಷೆಯ ಮುಖಾಂತರವಾಗಿ ಜನತೆಯು ಪಡೆಯುತ್ತಿದ್ದ ಸಂಸ್ಕೃತಿಗೆ ತಡೆಯುಂಟಾಯಿತು. **ದೇಶದಾದ್ಯಂತ ನಿರಕ್ಷರತೆಯು ನೆಲೆಸಲು ಪರಭಾಷೆಯ ಶಿಕ್ಷಣವು ಕಾರಣವಾಯಿತು.** 'ರಾಜಭಾಷೆ'ಯಾದ ಇಂಗ್ಲೀಷು 'ರಾಷ್ಟ್ರಭಾಷೆ'ಯಾಗುವದು ಎಂದಿಗೂ ಸಾಧ್ಯವಿರಲಿಲ್ಲ. ಶಾಲೆಗಳಲ್ಲಿ ಮಕ್ಕಳು ಎರಡು ಭಾಷೆಗಳನ್ನು ಕಲಿಯಬೇಕಾಯಿತು. ಇದರಿಂದ ಶಿಕ್ಷಣ ಪ್ರಸಾರಕ್ಕೆ ತುಂಬಾ ತಡೆಯಾಯಿತು. ಇಂಗ್ಲೀಷು ಭಾಷೆಯ ಮುಖಾಂತರವಾಗಿ ಕೆಲವರಿಗೆ ದೊರೆತ ಶಿಕ್ಷಣವು ಬಹುಸಂಖ್ಯಾಕವಾದ ಸಾಮಾನ್ಯಜನತೆಗೆ 'ಇಂಗಿ'ಬರಬೇಕು, 'ಇಳಿದು'ಬರಬೇಕೆಂಬ ಮನೀಷೆಯೇನೋ ಇದ್ದಿತಂತೆ. ಆದರೆ ಪರಿಣಾಮವು ಮಾತ್ರ ಅದಕ್ಕೆ ವಿರೋಧಿಯಾಗಿದೆ. ಪರಕೀಯ ಭಾಷೆಯಲ್ಲಿದ್ದ ಜ್ಞಾನವು ನಮ್ಮ ಜನತೆಗೆ ಇಳಿದು ಬರುವದಕ್ಕೆ ಪ್ರತಿಯಾಗಿ, ಪರಂಪರಾಗತವಾಗಿ ಬಂದ **ಸ್ವಕೀಯವಾದ ಸಾಹಿತ್ಯ-ಸಂಸ್ಕೃತಿಗಳಿಗೆ ಬಹುಜನ ಸಮಾಜವು ಎರವಾಯಿತು.** ಸನ್ ೧೯೧೭ರಲ್ಲಿಯೇ ಗಾಂಧೀಜಿಯವರು ಹೇಳಿದರು, 'ಇಂಗ್ಲೀಷು ಎಂದಿಗೂ ನಮ್ಮ ರಾಷ್ಟ್ರಭಾಷೆಯಾಗಲಾರದು. ಅಂತರ್‌ರಾಷ್ಟ್ರೀಯ ವಿನಿಯೋಗಕ್ಕಾಗಿ

ಬೇಕಾದವರು ಅದನ್ನು ಕಲಿಯಬಹುದು' ಎಂದು. ಸನ್ ೧೯೩೭ರಲ್ಲಿ ಇದೇ ಮಾತನ್ನೇ 'ಶಿಕ್ಷಣದ ಅಭ್ಯಾಸ ಪತ್ರಿಕೆಯಲ್ಲಿ ಇಂಗ್ಲೀಷು ಭಾಷೆಗೆ ಸ್ಥಾನವಿರ ಕೂಡದು' ಎಂಬುದಾಗಿ ಜನತೆಯ ಗಮನಕ್ಕೆ ತಂದರು. ಕೇಂದ್ರ ಶಿಕ್ಷಣ ಸಲಹಾಸಮಿತಿಯವರೂ ಇದೇ ತತ್ವವನ್ನೇ ಸಮರ್ಥಿಸಿರುವರು. ಮಹಾತ್ಮಾಜಿ ಯವರು ಮಾತೃಭಾಷೆಯ ಬಗ್ಗೆ ಹೇಳಿದುದನ್ನೇ ಶಿಕ್ಷಣಶಾಸ್ತ್ರವೂ, ಮಾನಸ ಶಾಸ್ತ್ರವೂ ಅನುಮೋದಿಸುವವು. **ನಾಡು-ನುಡಿಗಳಿಗೊಂದು ಪರಂಪರೆ ಇತಿಹಾಸವಿರುವದು. ಶಿಕ್ಷಣವು ಇದನ್ನು ದುರ್ಲಕ್ಷಿಸಲಾರದು.** ನಮ್ಮ ಪ್ರಾಚೀನ ಸಂಸ್ಕೃತಿಯೂ, ಸಾಹಿತ್ಯವೂ ಅನೇಕ ಆಘಾತಗಳನ್ನು ತಡೆದು ಕೊಂಡು ಜನತೆಯ ರಕ್ತನಾಳಗಳಲ್ಲಿ ಹರಿದುಬಂದಿವೆ, ಜೀವನಪ್ರವಾಹದಲ್ಲಿ ತೇಲಿಬಂದಿವೆ. ಜನತೆಯ ಶಿಕ್ಷಣವು ಈ ಪ್ರಾಚೀನ ಸಾಹಿತ್ಯವನ್ನೂ, ಪರಂಪರೆ ಗಳನ್ನೂ, ಸಂಸ್ಕೃತಿಯ ಸಾಧನಗಳನ್ನೂ ತನ್ನ ತಳಹದಿಯಾಗಿಟ್ಟುಕೊಳ್ಳ ಬೇಕು. ಅವುಗಳ ಸತ್ವವನ್ನು ಒಳಗೊಂಡಿರಬೇಕು. ಈ ಭದ್ರವಾದ ತಳ ಹದಿಯ ಮೇಲೆ ನಿಂತುಕೊಂಡು ಪರಕೀಯವಾದರೂ ಒಳ್ಳೆಯದೆಲ್ಲವನ್ನೂ ಅದು ತೆಗೆದುಕೊಳ್ಳಬಹುದು. ತನ್ನೊಳಗೆ ಅರಗಿಸಿಕೊಳ್ಳಬಹುದು. ನಮಗೆ ದೊರೆತ ವಿದೇಶೀಯ ಶಿಕ್ಷಣಕ್ಕೆ ಈ ನೆಲೆಯಿರಲಿಲ್ಲ. ಇದರಿಂದ ಅದನ್ನು ಪಡೆದವರು ತಮ್ಮ ದೇಶದಲ್ಲಿಯೇ ಪರಕೀಯರಂತಾದರು. ಇವರ ನಡೆ-ನುಡಿಗಳೂ ಆಹಾರವಿಹಾರಗಳೂ ಬಹುಜನ ಸಮಾಜದಿಂದ ಭಿನ್ನವಾದವು. ಹೀಗಾಗಿ **ಸಮಾಜದಲ್ಲಿ 'ಸುಶಿಕ್ಷಿತ'ರೆಂದು ಹೇಳಿಕೊಳ್ಳುವ ಹೊಸ ದೊಂದು 'ವರ್ಗ'ವೇ ನಿರ್ಮಾಣವಾಯಿತು.** ಪಾಶ್ಚಾತ್ಯ ಶಿಕ್ಷಣವನ್ನು ಪಡೆಯದ **ಬಹುಜನ ಸಮಾಜವು ಇವರಿಗೆ 'ಬಹಿಷ್ಕೃತ'ವಾಯಿತು.** ಪರಸ್ಪರ ಸಂಪರ್ಕಸಮಾಗಮಗಳಿರಲಿಲ್ಲ. ಇವರಿಗೆ ದೊರೆತ ಶಿಕ್ಷಣವು ಬಹು ಜನ ಸಮಾಜಕ್ಕೆ ಪೋಷಣೆ-ರಕ್ಷಣೆಗಳನ್ನೊದಗಿಸಲಿಲ್ಲ. ತದ್ವಿರುದ್ಧವಾಗಿ ಬಹುಜನ ಸಮಾಜದ ಸಬಲವಾದ ಶೋಷಣೆಯ ಸಾಧನವಾಯಿತು. ಕಲಿತ ಮಗನು ಕಲಿಯದ ತಂದೆಯನ್ನೂ ಕೂಡ ಕೀಳೆಂದು ಭಾವಿಸುವಷ್ಟು ಇದರ ದುಷ್ಪರಿಣಾಮವು ದೂರದವರೆಗೆ ಹಬ್ಬಿತು.

ಪರಭಾಷೆಯ ಮುಖಾಂತರವಾಗಿ ಕೊಡುವ ಶಿಕ್ಷಣವು ಇನ್ನೊಂದು ರೀತಿಯಿಂದಲೂ ಹಾನಿಕರವಾಯಿತು. ಮಗುವಿನ ಮನಸ್ಸಿನಲ್ಲಿ **ವಿಚಾರವು ಮೂಡುವ ಭಾಷೆಯೊಂದು. ವಿಷಯವನ್ನು ತಿಳಿದುಕೊಳ್ಳುವ ಹಾಗೂ ಪ್ರಕಟಿಸುವ ಭಾಷೆ ಬೇರೊಂದು. ಶಿಕ್ಷಣ, ಮಾನಸಶಾಸ್ತ್ರಗಳ ದೃಷ್ಟಿಯಿಂದ ಈ ವಿಧಾನವು ಅತ್ಯಂತ ವಿಘಾತುಕವಾದುದು. ಇದರಿಂದ ಆತನ ವಿಚಾರದ ಶಕ್ತಿಯು ಕುಂಠಿತವಾಗುವದು. ಆತ್ಮಪ್ರಕಾಶನಕ್ಕೆ ಆತಂಕವೊದಗುವದು. ವಿಷಯಜ್ಞಾನವೂ ಅಪಕ್ವವಾಗುವದು.** ಶಿಕ್ಷಣದಲ್ಲಿ ಪರಭಾಷೆಯ ಮಾಧ್ಯಮವು ಕಲಿಯುವವರಿಗೂ, ಕಲಿಸುವವರಿಗೂ ಇಬ್ಬರಿಗೂ ಕಾಲ್ತೊಡಕಾಗುವದು. ಕಲಿಯುವವರು ಮಾಧ್ಯಮವಾದ ಪರಭಾಷೆಯನ್ನು ಮೊದಲು ಚೆನ್ನಾಗಿ ಬಲ್ಲವರಾಗಬೇಕು. ಆ ಮೇಲೆ ಅದರ ಮುಖಾಂತರವಾಗಿ ಬಂದ ವಿಚಾರಗಳನ್ನು, ತಿಳಿದುಕೊಳ್ಳಲು ಯತ್ನಿಸಬೇಕು. ಹೀಗಾಗಿ ವಿಷಯಜ್ಞಾನವು ನೇರವಾಗಿ ಅವರ ಮನಸ್ಸಿಗೆ ಮುಟ್ಟುವದಿಲ್ಲ. ಮಾಧ್ಯಮದ ಪರಭಾಷೆ ಚೆನ್ನಾಗಿ ಬಾರದಿದ್ದರೆ ಒಮ್ಮೊಮ್ಮೆ ವಿಷಯಜ್ಞಾನವು ವಿಕೃತಿಯನ್ನು ಹೊಂದುವದು. ತಪ್ಪು ತಿಳುವಳಿಕೆಯಾಗುವದು. ಇದೇ ರೀತಿಯಾಗಿ ಪರಭಾಷೆಯಲ್ಲಿ ಕಲಿಸುವವರಿಗೂ ಇಷ್ಟೇ ತೊಂದರೆಯುಂಟು. ವಿಷಯನಿರೂಪಣೆಯಲ್ಲಿ ವಿಷಯಜ್ಞಾನಕ್ಕಿಂತಲೂ ನಿರೂಪಣೆಯ ಭಾಷೆಯೆ ಹೆಚ್ಚು ಮಹತ್ವದ್ದಾಗಿಬಿಡುವದು. ಪರಭಾಷೆಯ ಸೊಬಗು ಸೌಷ್ಟವಗಳ ಕಡೆಗೆ ಅವರ ಲಕ್ಷವು ಹೆಚ್ಚಾಗಿ ತೊಡಗುವದು. ಇಲ್ಲವೆ ಅದರಲ್ಲಿಯೇ ಅವರು ತಲ್ಲೀನರಾಗಿಬಿಡುವರು. ಈ ಪರಭಾಷೆಯ ಮೋಹವು ಒಳ್ಳೇ ಪ್ರಬಲವಾಗಿದೆ. ಸಾಮಾನ್ಯವಾದ ಒಂದೆರಡು ವಿಚಾರಗಳನ್ನು—ಮನೆತನದ ‘ ಖಾಸಗೀ ’ ಪತ್ರಗಳನ್ನು ಕೂಡ ತಮ್ಮ ಮಾತೃಭಾಷೆಯಲ್ಲಿ ಹೇಳಲು ಬಾರದ ‘ ಸುಶಿಕ್ಷಿತ ’ರ ಸಂಖ್ಯೆಯೇ ಹೆಚ್ಚೆಂದು ಹೇಳಬಹುದು. **ಪರಭಾಷೆಯ ಮುಖಾಂತರವಾಗಿ ಬಂದ ಈ ‘ಎಂಜಲು’ ವಿದ್ಯೆಯು ಭಾರತದ ಬುದ್ಧಿಮತ್ತೆಗೆ ಬಂಜೆತನವನ್ನು ತಂದೊಡ್ಡಿದೆ.** ಈ ಮೊದಲು ಭಾರತದ ಪ್ರತಿಭೆಯು ಬಹುಮುಖವಾಗಿ ಪ್ರತಿಫಲಿಸುತ್ತಿತ್ತು. ನಾಡಿನ ಮೂಲೆಮೂಲೆಗಳಲ್ಲಿ ಕವಿಗಳೂ, ಕಲಾವಿದರೂ, ವಿಜ್ಞಾನಿಗಳೂ,

ತತ್ವಜ್ಞಾನಿಗಳೂ ಪದೇಪದೇ ಉದಯಿಸುತ್ತಿದ್ದರು. ಇಂದು ಏನಿದೆ? ಆಗಾಗ್ಗೆ ಅಪರೂಪವಾಗಿ ಒಬ್ಬ ಜಗದೀಶಚಂದ್ರರು, ಒಬ್ಬ ರಾಧಾಕೃಷ್ಣರು ತಲೆ ಎತ್ತಿ ನಿಲ್ಲಬಹುದು. ಇದಕ್ಕೆ ಬುದ್ಧಿಯ ಕೊರತೆ ಕಾರಣವಾಗಿಲ್ಲ. ಪರಭಾಷೆಯ ಮುಖಾಂತರವಾಗಿ ಕೊಡುವ ಶಿಕ್ಷಣವೇ ಇದಕ್ಕೆ ಹೊಣೆಯಾಗಿದೆ.

**ಜನತೆಯಲ್ಲಿ ಜ್ಞಾನಪ್ರಸಾರವು ಜನತೆಯಾಡುವ 'ತಾಯ್ನುಡಿ' ಯಲ್ಲಿಯೇ ಆಗಬಲ್ಲದು, ಆಗಬೇಕು**–ಎನ್ನುವ ಮಾತನ್ನು ನಮ್ಮ ಹಿರಿಯರು ಎಂದೋ ತಿಳಿಸಿರುವರು. ಬೌದ್ಧರು ಜೈನರು ತಮ್ಮ ಧರ್ಮ ಪ್ರಚಾರಕ್ಕಾಗಿ ಆಗಿನ ಜನಸಾಮಾನ್ಯರ 'ಆಡುವ ಭಾಷೆ'ಯಾದ ಅರ್ಧಮಾಗಧಿಯನ್ನೂ, ಪಾಲಿಯನ್ನೂ ಆಶ್ರಯಿಸಿದರು. ಕನ್ನಡ ನಾಡಿನಲ್ಲಿ ಈ ಮಾತು ಚನ್ನಾಗಿ ಗೋಚರಿಸುವದು. 'ಸಕ್ಕದಂ' ಬೆರಿಸದೆ ಕಾವ್ಯವನ್ನು ಕಟ್ಟಿ ತನ್ನ ಪ್ರತಿಜ್ಞೆಯನ್ನು ಕೊನೆಗಾಣಿಸಿದ ಆಂಡಯ್ಯನಂಥ ಕವಿಗಳು ಇಲ್ಲಿ ಇರುವರು. 'ಸಕ್ಕದದಲ್ಲಿನ್ನೇನು ?' ಎಂದು ಜಗನ್ನಾಥದಾಸರು ಕನ್ನಡವನ್ನು ಎತ್ತಿಹಿಡಿದರು. **ಈ ಬಗೆಯಿಂದ ಸಾಹಿತ್ಯವೂ ಸಂಸ್ಕೃತಿಯೂ ಜನರಾಡುವ ಭಾಷೆಯಲ್ಲಿಯೇ ಹರಿದು ಹೋಗಿ ಅವರ ಹೃದಯವನ್ನು ಮುಟ್ಟಿದವು. ಸುಪ್ತವಾದ ಅವರ ಬುದ್ಧಿಮತ್ತೆಯನ್ನು ಜಾಗೃತಗೊಳಿಸಿದವು.** ಅಂತೆಯೇ ಇಲ್ಲಿಯ ಜನತೆ 'ಕುರಿತೋದದೆಯುಂ ಕಾವ್ಯಪರಿಣತಮತಿ'ಗಳಾದರು. ಹಳ್ಳಿಹಳ್ಳಿಗಳಲ್ಲಿ ರಸಿಕತೆಯ ಸೆಲೆಯಾದ ಜಾನಪದ ಸಾಹಿತ್ಯವು ಹುಟ್ಟಿತು. ಅಪಾರವಾದ ಜ್ಞಾನಭಾಂಡಾರವನ್ನೊಳಗೊಂಡ ದಾಸಸಾಹಿತ್ಯವೂ, ವಚನ ವಾಙ್ಮಯವೂ ನಿರ್ಮಾಣವಾದವು. **ಗಾಂಧೀಜಿಯವರ ದಿವ್ಯದೃಷ್ಟಿಗೆ ಮಾತೃಭಾಷೆಯ ಈ ಮಹಿಮೆಯು ಹೊಳೆಯದಿರಲಿಲ್ಲ.** ಪರಭಾಷೆಯ ಮುಖಾಂತರ ಕೊಡುವ ಶಿಕ್ಷಣವನ್ನು ನಿಲ್ಲಿಸಲು ಮಹಾತ್ಮಾಜಿಯವರು ಮಾಡಿದ ಪ್ರಯತ್ನಗಳು ಇಂದು ಮೂಲಶಿಕ್ಷಣಯೋಜನೆಯಲ್ಲಿ ಫಲಿಸಿವೆ, ಮೂರ್ತಿಸ್ವರೂಪವಾಗಿ ನಿಂತಿವೆ. ಮೂಲಶಿಕ್ಷಣದಲ್ಲಿ ಮಗುವಿನ ಶಿಕ್ಷಣವೆಲ್ಲವೂ ಆತನ ಮಾತೃಭಾಷೆಯ ಮುಖಾಂತರವಾಗಿಯೇ ಸಾಗುವದು. ಇದು ಮಾತ್ರವಲ್ಲದೆ, ತನ್ನ ಮಾತೃಭಾಷೆಯ ಯಥಾರ್ಥವಾದ

ಜ್ಞಾನವೂ, ತನ್ನ ಭಾಷೆಯಲ್ಲಿರುವ ಸಾಹಿತ್ಯದ ತಕ್ಕಮಟ್ಟಿಗೆ ಪರಿಚಯವೂ ಹಾಗೂ ತನ್ನ 'ಆತ್ಮಪ್ರಕಾಶನ'ಕ್ಕಾಗಿ–ವಿಚಾರ ವಿನಿಮಯಕ್ಕಾಗಿ–ತನ್ನ ಭಾಷೆಯ ಮೇಲೆ ಸಾಕಷ್ಟು ಪ್ರಭುತ್ವವೂ ಮಗುವಿಗೆ ಬರುವಂತೆ ಮೂಲಶಿಕ್ಷಣವು ಪ್ರಯತ್ನಿಸುವದು. ಇದಕ್ಕಾಗಿ ಮಾತೃಭಾಷೆಯಲ್ಲಿ ವಿವಿಧ ವಿಷಯಗಳ ಮೇಲೆ ಅವಶ್ಯಕವಾದ ವಾಙ್ಮಯದ ನಿರ್ಮಾಣವು ಅನುಭವದ ಬೆಳಕಿನಲ್ಲಿ ಅಗತ್ಯವೆನಿಸಿದಂತೆ ಕಾಲಾನುರೋಧವಾಗಿ ಆಗುವದು ಸಹಜವಿದೆ.

**೧೨) ಮೂಲಶಿಕ್ಷಣದಲ್ಲಿ 'ಅನುಬಂಧವೂ' 'ಸಮವಾಯ' ತತ್ವವೂ:—**

**'ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ'**–(ಗೀತಾ.) ಮೂಲಶಿಕ್ಷಣದಲ್ಲಿ ಅನುಬಂಧವು–ಸಮವಾಯವು ಸಾಂಪ್ರದಾಯಿಕ ಶಿಕ್ಷಕರಿಗೆ ಬಿಡಿಸಲಾರದ ಒಗಟಾಗಿದೆ. ಇದುವರೆಗಿನ ಶಿಕ್ಷಣ ಪದ್ಧತಿಗಳನ್ನೆಲ್ಲ ಮೀರುವ ಮೂಲಶಿಕ್ಷಣದ ದೊಡ್ಡಿಸ್ತನವೂ ಅನುಬಂಧದಲ್ಲಿ ಅಡಕವಾಗಿದೆ. ಅನುಬಂಧವು ಮೂಲಶಿಕ್ಷಣದ ದೌರ್ಬಲ್ಯವನ್ನು ಒಳಗೊಂಡಿದೆ. ಶಿಕ್ಷಣ ಪ್ರಪಂಚಕ್ಕೆ ಅನುಬಂಧದ ತತ್ವವು ಅಪರಿಚಿತವಾದುದೇನೂ ಅಲ್ಲ. ಜರ್ಮನ್ ತತ್ವಜ್ಞಾನಿಯಾದ ಝಿಲರ್‌ನಿಂದ ನಮ್ಮ ರಾಷ್ಟ್ರಪಿತರಾದ ಗಾಂಧೀಜಿಯವರೆಗೆ ಈ ತತ್ವದ ಪರಂಪರೆಯಿದೆ. ಆದರೆ **ಶಿಕ್ಷಣದಲ್ಲಿ ಈ ತತ್ವವನ್ನು ಜೀವನದೊಡನೆ ಇಷ್ಟೊಂದು ನಿಕಟವಾಗಿ, ಸಮರಸವಾಗಿ ಹೊಂದಿಸಿದ ಹೊಸತನ ಹಾಗೂ ಶ್ರೇಯಸ್ಸುಗಳು ಗಾಂಧೀಜಿಯವರಿಗೆ ಸಲ್ಲುವದು.** ಅನುಬಂಧಕ್ಕೆ ಸಮವಾಯವೆಂತಲೂ ಹೇಳುವರು. ಸಮವಾಯವೇ ಜೀವಾಳವಾಗಿದ್ದ ಮೂಲಶಿಕ್ಷಣಕ್ಕೆ ಸಮವಾಯ ಶಿಕ್ಷಣವೆಂತಲೂ ಕರೆಯುವರು.

**ಅನುಬಂಧವೆಂದರೆ ಹೊಂದಿಕೆ, ಸಂಬಂಧೀಕರಣ.** ಮೂಲಶಿಕ್ಷಣದಲ್ಲಿ ಉತ್ಪಾದಕವಾದ ಕೈಗಾರಿಕೆಯು ಶಿಕ್ಷಣದ ಕೇಂದ್ರವಾಗಿರುವದಷ್ಟೆ. ಕೇಂದ್ರ ಚಟುವಟಿಕೆಯು ಸಹೇತುಕವಾಗಿರುವದರಿಂದ, ರಚನಾತ್ಮಕವಾಗಿರುವದರಿಂದ, ಮಗುವು ಅದರಲ್ಲಿ ಸ್ವಯಂ ಪ್ರೇರಣೆಯಿಂದ, ಸಂತೋಷ

ದಿಂದ ತೊಡಗಿರುವದು. ಮಗುವು ಚಟುವಟಿಕೆಯನ್ನು ಕೇವಲ ಯಾಂತ್ರಿಕ ವಾಗಿ ಸಾಗಿಸುವಂತಿಲ್ಲ. ಅದನ್ನು 'ಸಶಾಸ್ತ್ರ'ವಾಗಿ ನಿರ್ವಹಿಸಬೇಕು. ಕೇಂದ್ರ ಕಲಿಯೇ ಮೂಲೋದ್ಯೋಗವು. ಈ ಮೂಲೋದ್ಯೋಗದ ಪ್ರತಿಯೊಂದು ಮೆಟ್ಟಲನ್ನೂ, ವಿಧಿ ವಿಧಾನಗಳನ್ನೂ ಮಗುವು ಬುದ್ಧಿಪೂರ್ವಕವಾಗಿ ತಿಳಿದು ಕೊಳ್ಳಬೇಕು. ತಾನು ಮಾಡುತ್ತಿರುವ ಪ್ರತಿಯೊಂದು ಕೃತಿಯ ಹಾಗೂ ಉಪಕೃತಿಗಳ ಬಗ್ಗೆ 'ಏಕೆ—ಎನಿತು' ಎಂಬ ಕಾರ್ಯಕಾರಣ ಸಂಬಂಧವನ್ನು ತಿಳಿಯಬೇಕು. ಚಟುವಟಿಕೆಯಲ್ಲಿ ತೊಡಗಿದಾಗ್ಗೆ ಆತನಿಗೆ ಅನೇಕ ಅಡಚಣಿ ಗಳು ಒದಗುವವು. ಅಜ್ಞಾತ ವಸ್ತುಗಳ ಉಪಯೋಗವನ್ನು ಮಾಡಬೇಕಾಗ ಬಹುದು. ಈ ಸಮಯಗಳಲ್ಲಿ ಆತನ ಕುತೂಹಲವು ಸಹಜವಾಗಿಯೇ ಜಾಗೃತವಾಗುವದು. ಈ ಸಂದರ್ಭಗಳಲ್ಲಿ ಜೀವನೋಪಯೋಗಿಯಾದ ವಿವಿಧ ವಿಷಯಗಳ ಜ್ಞಾನವನ್ನು ಮೂಲೋದ್ಯೋಗದೊಡನೆ ಸಂಬಂಧಿಸ ಬಹುದು. ಈ ಸಂದರ್ಭಗಳೇ 'ಜ್ಞಾನಸಾಧನದ ಸುಪ್ರಸಂಗಗಳು.' **ಉದ್ಯೋಗದೊಡನೆ ಹೀಗೆ ಸಮರಸವಾಗಿ ಬರುವ ಜ್ಞಾನವೇ ಸಮ ನ್ವಿತ ಜ್ಞಾನವು.** ಕುತೂಹಲದ ತೃಪ್ತಿಗಾಗಿ ಒದಗಿಸಿದ ಈ ಜ್ಞಾನವು— ಹಸಿದ ಹೊಟ್ಟೆಯಲ್ಲಿ ಹಾಕಿದ ಪೌಷ್ಟಿಕ ಆಹಾರದಂತೆ—ಮಗುವಿನ ಮನಸ್ಸಿ ನೊಡನೆ ಏಕರೂಪವಾಗುವದು. ಜೀವನೋಪಯೋಗಿ ಆಗುವದು. ಹಳ್ಳಿ ಗರು ಹೇಳುವಂತೆ— 'ಹಸೀ ಗೋಡ್ಯಾಗ ಹರಳಿಟ್ಟ್ಯಾಂಗ' ಮನಸ್ಸಿನಲ್ಲಿ ದೃಢ ವಾಗಿ ನೆಲೆಸುವದು.

**ಮೂಲೋದ್ಯೋಗವು** ಮಗುವಿನ **ಶಿಕ್ಷಣವೆಂಬ ಗಿಡದ 'ಮೂಲ' ಬೇರು ಇದ್ದಂತೆ.** ಗಿಡದ ಬೇರುಗಳು ಭೂಮಿಯಲ್ಲಿ ಹರಡಿಕೊಂಡು ಗಿಡದ ಬೆಳವಣಿಗೆಗೆ ಬೇಕಾಗುವ ಪೋಷಕದ್ರವ್ಯಗಳನ್ನು ಒದಗಿಸುವವು; ಗಿಡವು ಫಲಿಸುವಂತೆ ಮಾಡುವವು. ಎಲೆ, ಹೂ, ಹೀಚು, ಕಾಯಿ ಮೊದಲಾದ ಗಿಡದ ವಿವಿಧ ರೂಪಗಳಲ್ಲಿ ಹರಿದಾಡುವದು, ಬೇರುಗಳ ಮುಖಾಂತರವಾಗಿ ಗಿಡವು ತೆಗೆದುಕೊಂಡ ತನಗೆ ಬೇಕಾಗುವ ಜೀವಸತ್ವಗಳು. ಇದೇ ರೀತಿಯಲ್ಲಿ ಮಗುವು ಉತ್ಪಾದಕವಾದ ಉದ್ಯೋಗದ ಮುಖಾಂತರವಾಗಿ ತನ್ನ ಅಂದಿನ

ಮುಂದಿನ ಜೀವನಕ್ಕೆ ಅಗತ್ಯವಿರುವ ವಿವಿಧ ವಿಷಯ ಜ್ಞಾನವನ್ನು, ತನಗೆ ಬೇಕಾದ ಸಮಯದಲ್ಲಿಯೇ ತೆಗೆದುಕೊಳ್ಳುವನು. ಹೀಗೆ ಸಂಗ್ರಹಿಸಿದ ವಿವಿಧ ವಿಷಯಜ್ಞಾನದಿಂದಲೇ ಮಗುವಿನ ಜೀವನವು ಫಲಿಸುವದು. ಮೂಲೋದ್ಯೋಗವು ಸಹೇತುಕ ರಚನಾತ್ಮಕಕೃತಿಯಾಗಿರುವದರಿಂದ, ಉದ್ದೇಶಪೂರ್ತಿಗಾಗಿ **ಮಗುವಿನ ಮೈ-ಮನ-ಅಂತಃಕರಣಗಳಲ್ಲಿ ಹುದುಗಿದ ಶಕ್ತಿಗಳೆಲ್ಲ ಹೊರಗೆ ಬರುವವು.** ಹೊಂದಿಕೆಯಿಂದ ಸಮನ್ವಯವಾಗಿ ಅವುಗಳ ವಿಕಾಸವಾಗುವದು. ಹೀಗೆ ಮಾಡಿದಲ್ಲಿ ಮೂಲಶಿಕ್ಷಣವು ಕೇವಲ ಒಂದು ಉದ್ಯೋಗಶಿಕ್ಷಣವಾಗಿ ಉಳಿಯದೆ, ಮಗುವಿನ ಸರ್ವತೋಮುಖವಾದ ವಿಕಾಸಕ್ಕೆ ಸಾಧನವಾಗುವದು. ಮೂಲಶಿಕ್ಷಣದ ಈ ಮರ್ಮವನ್ನರಿಯದವರು ಅದೊಂದು ಉದ್ಯೋಗಶಿಕ್ಷಣವೆಂದೂ, ಇಲ್ಲವೇ ವಿವಿಧ ವಿಷಯಗಳೊಡನೆ ಒಂದು ಉದ್ಯೋಗವನ್ನೂ ಬೆರಿಸಿ ಕಲಿಸುವ ಕ್ರಮವೆಂದೂ ತಪ್ಪು ತಿಳುವಳಿಕೆ ಮಾಡಿಕೊಳ್ಳುವರು. ಮೂಲಶಿಕ್ಷಣದಲ್ಲಿ ಉದ್ಯೋಗವು ಶಿಕ್ಷಣದ ಮಾಧ್ಯಮವಾಗಿದೆ. ಮಗುವಿನ ಅನೇಕ ಮುಖವಾದ ಆತ್ಮಪ್ರಕಾಶನದ ಸಾಧನವಾಗಿದೆ. ಈ ಬಗೆಯ ಶೈಕ್ಷಣಿಕವೂ, ಉತ್ಪಾದಕವೂ ಆದ ಉದ್ಯೋಗವು ಜೀವನದೊಡನೆ ಶಿಕ್ಷಣವನ್ನು ಸಮರಸವಾಗಿ ಒಂದುಗೂಡಿಸುವದು.

**ಉದ್ಯೋಗ ಹಾಗೂ ಶಿಕ್ಷಣಗಳ ಬಂಧುರವಾದ ಬಾಂಧವ್ಯವೇ ಅನುಬಂಧವು, ಸಮವಾಯವು.** ಜೀವನದಲ್ಲಿ ಅಕಲ್ಪಿತವಾಗಿ ನಮಗೆ ಮತ್ತೊಬ್ಬರಲ್ಲಿ ಊಟಮಾಡಬೇಕಾಗುವದು, ಇಲ್ಲವೇ ಸ್ನೇಹ—ಸಂಪರ್ಕಗಳುಂಟಾಗುವವು. ಹೀಗೆ ಪರಸ್ಪರ ಸಂಬಂಧವನ್ನುಂಟುಮಾಡುವ ಶಕ್ತಿಗೆ 'ಅನ್ನೋದಕಋಣಾನುಬಂಧ, ಪೂರ್ವಜನ್ಮದ ಋಣಾನುಬಂಧ'ವೆಂದು ಹಿಂದಿನಿಂದ ಹಿರಿಯರು ಹೇಳುತ್ತ ಬಂದಿರುವರು. ಮೂಲೋದ್ಯೋಗಕ್ಕೂ, ವಿಷಯಜ್ಞಾನಕ್ಕೂ 'ಪ್ರಾಸಂಗಿಕ'ವಾಗಿ ತಂದುಕೊಡುವ ಈ ಸಂಬಂಧವನ್ನೇ 'ಅನುಬಂಧ' ಇಲ್ಲವೇ 'ಸಮವಾಯ'ವೆಂದು ಕರೆದಿರುವರು. ಮೂಲಶಿಕ್ಷಣವು ಅಪೇಕ್ಷಿಸುವ ಈ ಸಮವಾಯ ಸಂಬಂಧವು ಸೂಕ್ಷ್ಮವಾಗಿದೆ, ಮಾರ್ಮಿಕವಾಗಿದೆ. ಶ್ರೀ. ವಿನೋಬಾಜಿಯವರು ಅದನ್ನು ಒಳ್ಳೇ ಸುಲಭ

ವಾಗಿ ಒಂದು ಉದಾಹರಣೆಯಿಂದ ವಿಶದಪಡಿಸಿರುವರು. ಈ ಸಂದರ್ಭದಲ್ಲಿ ಅವರು ಕೊಡುವ **ಮಣ್ಣು-ಮಡಿಕೆಗಳ ದೃಷ್ಟಾಂತವು** ಮನೋವೇಧಕ ವಾಗಿದೆ. 'ಮಣ್ಣು ಮಡಿಕೆಯಲ್ಲ; ಮಡಿಕೆ ಮಣ್ಣಲ್ಲ. ಇಲ್ಲವೇ 'ಮಣ್ಣು+ ನೀರು' ಅಂದರೆ ಮಡಿಕೆಯಲ್ಲ. ಹಾಗಾದರೆ ಮಣ್ಣು ಮಡಿಕೆಗಳ ಸಂಬಂಧ ವೆಂತಹದು? ಕಲಾವಿದನಾದ ಕುಂಬಾರನು ತನ್ನ ಕಲೆಯನ್ನೂ ಪ್ರತಿಭೆ ಯನ್ನೂ ಮಣ್ಣಿನಲ್ಲಿ ತುಂಬಿದರೆ ಮಣ್ಣು ಮಡಿಕೆಯಾಗುವದು. ಮಣ್ಣು ಮಡಿಕೆಗಳಲ್ಲಿರುವ ಈ ಬಗೆಯ ಸಂಬಂಧವು 'ಸಮವಾಯ' ಸಂಬಂಧವು. ಮೂಲೋದ್ಯೋಗ ಮತ್ತು ಮಗುವಿನ ಬುದ್ಧಿವಿಕಾಸಗಳ ಸಂಬಂಧವು ಇದೇ ರೀತಿಯದಾಗಿರುವದು. ಮೂಲೋದ್ಯೋಗದಲ್ಲಿ ಕಲಾವಿದನಾದ ಶಿಕ್ಷಕನು ಜೀವಕಳೆಯನ್ನು ತುಂಬಬೇಕು. ಅಂದರೆ ಮಾತ್ರ ಮಗುವಿನ ಸರ್ವತೋ ಮುಖವಾದ ವಿಕಾಸವಾಗುವದು. ಆತನ ವ್ಯಕ್ತಿತ್ವವು ಸುಂದರವಾಗಿ ರೂಪು ಗೊಳ್ಳುವದು. ಆತನ ಜೀವನವು ಉಪಯುಕ್ತವಾದ ಕಲಾಕೃತಿಯಾಗುವದು. ಆದರೆ ಒಂದು ಮಾತನ್ನು ಇಲ್ಲಿ ನೆನಪಿನಲ್ಲಿಡಬೇಕಾದುದು. ಸರಿಯಾದ ಅನುಬಂಧವನ್ನು ಸಾಧಿಸಲು, ಶಿಕ್ಷಕನಿಗೆ ಮೂಲೋದ್ಯೋಗದಲ್ಲಿ ಸಾಕಷ್ಟು ಪರಿಣತಿಯೂ ಬೇಕು, ವಿಷಯಜ್ಞಾನವೂ ಸಾಕಷ್ಟಿರಬೇಕು.

**ಶಿಕ್ಷಣದಲ್ಲಿ 'ಅನುಬಂಧವು' ಜ್ಞಾನಸಂಪಾದನೆಯ ಸ್ವಾಭಾ ವಿಕವಾದ ರೀತಿಯಾಗಿದೆ.** ಅಂತೆಯೇ ಮಾನಸಶಾಸ್ತ್ರದ ಸಂಪೂರ್ಣ ವಾದ ಬೆಂಬಲವು ಅದಕ್ಕಿದೆ. ಜ್ಞಾನವು ನಮಗೆ ಅನುಭವಮುಖಾಂತರವಾಗಿ ಬರುವದು. ಜ್ಞಾನೇಂದ್ರಿಯಗಳಿಂದ ನಾವು ಅನುಭವವನ್ನು ಪಡೆಯುವೆವು: ಮಾತಿನ ಹಾಗೂ ವ್ಯವಹಾರದ ಅನುಕೂಲತೆಗಾಗಿ, 'ಕಣ್ಣು ನೋಡುವದು ಕಿವಿ ಕೇಳುವದು' ಎಂದು ನಾವು ಹೇಳುತ್ತಿದ್ದರೂ ನಮ್ಮ ಎಲ್ಲ ಕ್ರಿಯೆಗಳಲ್ಲಿ ಶರೀರ ಹಾಗೂ ಮನಸ್ಸು ಇವುಗಳ ಸಹಕಾರವೂ ಅನ್ಯೋನ್ಯತೆಯೂ ಕೂಡಿ ಕೊಂಡಿರುವವು. ನಮ್ಮ ಎಲ್ಲ ಶಾರೀರಿಕ ಕೃತಿಗಳಿಗೂ ಮನಸ್ಸು ಪ್ರೇರಕ ಶಕ್ತಿಯಾಗಿರುವದು. **ಚೈತನ್ಯದ ಜೀವನ ಹೋರಾಟದಲ್ಲಿ ಶರೀರ ಮನಸುಗ್ಗಳೆರಡೂ ಅದರ ಸಾಧನಗಳು.** ತ್ರಿಮೂರ್ತಿಗಳಂತೆ ದೇಹ-

ಮನ–ಆತ್ಮಗಳೆಲ್ಲವೂ ಚೈತನ್ಯದ ವಿವಿಧರೂಪುಗಳು. ಇಂದಿನ ಮಾನಸ ಶಾಸ್ತ್ರವು ಈ ಮೂರರಲ್ಲಿರುವ ಏಕಜೀವತೆ ಅಖಂಡತೆಗಳನ್ನು ಕಂಡುಹಿಡಿದಿರುವದು. ಅನುಬಂಧ ತತ್ವಕ್ಕೆ ಆತ್ಮದ ಈ ಅಖಂಡತೆಯೇ ಕಾರಣವಾಗಿರುವದು. ಮಗುವಿನ ಎಲ್ಲ ಚಟುವಟಿಕೆಗಳಲ್ಲಿ ಆತನ ಸಮಗ್ರವಾದ, ' ಅಖಂಡ'ವಾದ ಆತ್ಮವೇ ವ್ಯವಹರಿಸುವದೆಂಬುವದನ್ನು ಮರೆಯಕೂಡದು. **ಅಂತೆಯೇ ಬೇರೆ ಬೇರೆ ಇಂದ್ರಿಯಗಳ ಮುಖಾಂತರವಾಗಿ ಮಗುವು ಗಳಿಸುವ ಅನುಭವವು ಬೇರೆ ಬೇರೆಯಾಗಿ ಉಳಿಯುವದಿಲ್ಲ. ಅವುಗಳೆಲ್ಲವೂ ಒಂದು ವಿಶಿಷ್ಟ ರೀತಿಯಲ್ಲಿ ಒಂದುಗೂಡುವವು.** ಹೀಗೆ ಒಂದುಗೂಡಿದ ಹಿಂದಿನ ಅನುಭವಗಳ ಬೆಳಕಿನಲ್ಲಿ ಮಗುವು ಮುಂದಿನ ಅನುಭವವನ್ನು ಗುರುತಿಸುವನು; ತನ್ನದಾಗಿಮಾಡಿಕೊಳ್ಳುವನು. ಇದರಿಂದ ಮೂಲೋದ್ಯೋಗದಲ್ಲಿ ತೊಡಗಿದ ಮಗುವು ಪ್ರಾಸಂಗಿಕವಾಗಿ, ಹಾಗೂ ಆನುಷಂಗಿಕವಾಗಿ ಪಡೆದುಕೊಂಡ ಜ್ಞಾನದ ಅಂಶಗಳು ಬಿಡಿಬಿಡಿಯಾಗಿಯೇ, ಹಿಂದುಮುಂದಾಗಿಯೇ ಉಳಿಯದೆ ಹೊಂದಿಕೆಯಾಗಿ ಒಂದುಗೂಡುವವು.

ಶಿಕ್ಷಣದಲ್ಲಿ ಈ ಹೊಂದಿಕೆಯ ತತ್ವವನ್ನೇ ಮುಂದಿಟ್ಟುಕೊಂಡು, ವಿಷಯವಿವೇಚನೆಯಲ್ಲಿ ಕೆಲವೊಂದು ಪ್ರಯೋಗಗಳಾಗಿವೆ. ಮೊದಲನೆಯದಾಗಿ **ಅಭ್ಯಾಸ ಪತ್ರಿಕೆಯಲ್ಲಿಯ ವಿವಿಧವಿಷಯಗಳನ್ನು ಸಂದರ್ಭಾನುಸಾರವಾಗಿ ಸಂಬಂಧಿಸಿ ಕಲಿಸಬೇಕೆನ್ನುವದು.** ಇತಿಹಾಸದಲ್ಲಿ ಭೂಗೋಲವನ್ನು ಜೋಡಿಸಬಹುದು. ನೈಸರ್ಗಿಕ–ಭೌಗೋಲಿಕ ಪರಿಸ್ಥಿತಿಯು ಮಾನವನ ಜೀವನವನ್ನೂ, ಚಟುವಟಿಕೆಗಳನ್ನೂ ಹೇಗೆ ನಿಯಂತ್ರಿಸುವದೆಂಬುದು ಇತಿಹಾಸ–ಭೂಗೋಲಗಳಲ್ಲಿ ಸಹಜವಾದ ಸಂಬಂಧೀಕರಣಕ್ಕೆ ಸಹಾಯವಾಗುವದು. ಭಾಷೆಗೂ ಜೋಡಿಸಬಹುದು. ನಿಸರ್ಗದ ಬಹುಮುಖವಾದ ಸೌಂದರ್ಯವು ಕವಿಯ ಕಲ್ಪನೆಯನ್ನೂ ಭಾವನೆಯನ್ನೂ ಹೇಗೆ ಚೇತರಿಸಿದೆಯೆಂಬುದನ್ನು ತೋರಿಸಿಕೊಡಬಹುದು. ಎರಡನೆಯದಾಗಿ **ಆರಿಸಿದ ಅನುರೂಪವಾದ ಒಂದು ವಿಷಯವನ್ನು ಕೇಂದ್ರವಾಗಿಟ್ಟುಕೊಂಡು ಉಳಿದವುಗಳನ್ನೆಲ್ಲ ಅದಕ್ಕೆ ಜೋಡಿಸಿಕೊಳ್ಳುವದು** ಸಂಬಂಧೀಕರಣದ

ಇನ್ನೊಂದು ರೀತಿಯು. ಭೂಗೋಲವಿಷಯವು ಕೇಂದ್ರವಿಷಯವಾಗಬಹುದು. ಭೂಗೋಲದೊಡನೆ ಉಳಿದೆಲ್ಲ ವಿಷಯಗಳನ್ನೂ ಸಂಬಂಧಿಸಲು ಸುಲಭ ವಾಗಿದೆ. ಮೂರನೆಯದಾಗಿ ಮಕ್ಕಳು ಕೈಕೊಳ್ಳುವ **ಒಂದು ಕೃತಿಯು ವಿವಿಧ ವಿಷಯಗಳ ಸಂಬಂಧೀಕರಣಕ್ಕೆ ಕೇಂದ್ರವಾಗಬಹುದು.** ಇದಕ್ಕೇ ಯೋಜನಾ ಪದ್ಧತಿಯೆಂತಲೂ ಹೇಳಬಹುದು. ಒಂದು ತೊಡಕಿನ ಕೃತಿ ಯೋಜನೆಯಲ್ಲಿ ಮಗು ತೊಡಗಿದಾಗ್ಗೆ ಆತನಿಗೆ ಆ ಕೃತಿಗೆ ಸಂಬಂಧಿಸಿದ ಅನೇಕ ವಿಷಯಗಳ ಜ್ಞಾನವು ಅವಶ್ಯಕವೆನಿಸುವದು. ಅದನ್ನು ಆತನು ಕೇಳಿ, ಓದಿ ಗಳಿಸಬಹುದು. ಆದರೆ ' ಈ ಯೋಜನೆ' (ಕೃತಿ)ಗಳೆಲ್ಲ ಕೃತ್ರಿಮ ವಾದವುಗಳು. ಮಗುವಿನ ಅಂದಿನ ಇಲ್ಲವೇ ಮುಂದಿನ ಜೀವನಕ್ಕೆ ಹೊಂದಿ ಕೊಂಡವುಗಳಲ್ಲ. ವಿಶಿಷ್ಟವಿಷಯಗಳ ಸಂಬಂಧೀಕರಣಕ್ಕಾಗಿ ಹಿಡಿದುತಂದ, ಹುಡುಕಿತಂದ ಕೃತಿಗಳಿವು. ಈ ಕೃತಿಗಳು ಜೀವನದ ವಸ್ತುಗಳಲ್ಲ, ಅವುಗಳ ಭಾವಚಿತ್ರಗಳು. ಮಗುವಿನ ನೈಜವಾದ ಜೀವನವಲ್ಲ, ಜೀವನದ ನಾಟಕವು ಮಾತ್ರ. **ಮೂಲಶಿಕ್ಷಣದಲ್ಲಿ ಸಂಬಂಧೀಕರಣವು, ಅನುಬಂಧವು ಹಿಂದಿನ ಎಲ್ಲ ಪ್ರಯೋಗಗಳಿಗಿಂತಲೂ ಹೊಸ ಹಾದಿಯನ್ನು ಹಾಕಿ ಕೊಂಡಿದೆ. ಗಾಂಧೀಜಿಯವರ ಆರ್ಷದೃಷ್ಟಿಗೆ ಹೊಳೆದ 'ಸಮವಾಯ' ತತ್ವವು ಕೇವಲ ಸಂಬಂಧೀಕರಣವಲ್ಲ.** ಒಂದರಲ್ಲಿ ಮತ್ತೊಂದನ್ನು, ಉದ್ಯೋಗ ವಿಷಯಜ್ಞಾನಗಳ ಸರಿಬೆರಿಕೆಯನ್ನು ಮಾತ್ರ ಮಾಡುವದಲ್ಲ. ಎರಡು ಕಟ್ಟಿಗೆಯ ತುಂಡುಗಳನ್ನು ಕೂಡಿಸಿ ಕಟ್ಟುವಂತಲ್ಲ. ಅದು ಒಂದು ಸಜೀವ ಸಸಿಯೊಡನೆ ಮತ್ತೊಂದು ಸಜೀವವಾದ ಸಸಿಯ ' ಕಲಮು ' ಮಾಡುವಂತಿರುವದು. ಎರಡನ್ನೂ ಏಕಜೀವವನ್ನಾಗಿ ಮಾಡುವದು. **ಒಂದರ ಜೀವರಸವು ಮತ್ತೊಂದಕ್ಕೆ ' ಪುಷ್ಟಿ 'ಯನ್ನೀಯಬೇಕು. ಮತ್ತೊಂದರ ಸವಿಯು ಎರಡನೆಯದರ ಮಾಧುರ್ಯವನ್ನು ಹೆಚ್ಚಿಸಬೇಕು. ಮೂಲಶಿಕ್ಷಣದಲ್ಲಿ ಉದ್ಯೋಗ ಬುದ್ಧಿವಿಕಾಸ(ಶಿಕ್ಷಣ)ಗಳ 'ಬೇರೀಜು' ಸಮವಾಯವಲ್ಲ. ಆದರೆ ಅವುಗಳ 'ಕಲಮು'ಮಾಡುವದು, ಏಕ ಜೀವವಾಗಿ ಮಾಡುವದು.** ಶ್ರೀ. ವಿನೋಬಾಜಿಯವರು ಹೇಳುವಂತೆ

'ಉದ್ಯೋಗವು ಶಿಕ್ಷಣಕ್ಕೆ ಸಜೀವತೆಯನ್ನು ತಂದುಕೊಡುವದು. ಶಿಕ್ಷಣವು ಉದ್ಯೋಗವನ್ನು ಪ್ರಕಾಶಿತವಾಗಿ ಮಾಡುವದು.'

ಜೀವನಾವಶ್ಯಕವಾದ ಇಲ್ಲವೇ ಅಭ್ಯಾಸಪತ್ರಿಕೆಯಲ್ಲಿ ಅಡಕವಾದ ಎಲ್ಲ ವಿಷಯಗಳ ಜ್ಞಾನವನ್ನು ಮೂಲೋದ್ಯೋಗವೊಂದರ ಮುಖಾಂತರ ವಾಗಿಯೇ ಮಗುವಿಗೆ ಮಾಡಿಕೊಡಲು ಸಾಧ್ಯವೇ ಎಂಬುದು ವಿಚಾರಣೀಯ ವಾದ ಪ್ರಶ್ನೆಯಾಗಿದೆ. ಇದು ಸಾಧ್ಯವೆಂದು ಗಾಂಧೀಜಿಯವರ ಮತವಾಗಿದೆ. ಸಾಧ್ಯವಾಗಬೇಕೆಂದು ಅವರ ಮನೀಷೆಯಾಗಿದೆ. ಮೂಲೋದ್ಯೋಗವನ್ನು ಸಶಾಸ್ತ್ರೀಯವಾಗಿ ಕಲಿಸಿದರೆ, ಉದ್ಯೋಗಕ್ಕೂ ಜೀವನಕ್ಕೂ ಅವಶ್ಯವಾ ಗಿರುವ ಉಪಯುಕ್ತ ವಿಷಯಗಳ ಸಾಕಷ್ಟು ಪರಿಚಯವನ್ನು ಅದರ ಮುಖಾಂತರವಾಗಿ ಮಾಡಿಕೊಡಲು ಬರುವದೆಂದು ಅವರ ದೃಢವಾದ ನಂಬುಗೆ. ಬೌದ್ಧಿಕವಾದ **ಇಂದಿನ ಶಿಕ್ಷಣದಲ್ಲಿ ವಿಷಯಗಳಿಗೆ ಇಲ್ಲದ ಮಹತಿಯು ಬಂದಿದೆ. ಶಿಕ್ಷಕನ ವಿಷಯಜ್ಞಾನಕ್ಕೂ ಅವಾಸ್ತವ ವಾದ ಮನ್ನಣೆಯುಂಟಾಗಿದೆ. ಮೂಲಶಿಕ್ಷಣವು ಇವೆರಡನ್ನೂ ಮನ್ನಿಸುವದಿಲ್ಲ. ಮೂಲಶಿಕ್ಷಣದಲ್ಲಿ ಶಿಕ್ಷಕನ 'ಪದವಿ'ಗಳಿಗೆ ಪ್ರಾಧಾ ನ್ಯತೆಯಿಲ್ಲ. ಅದರೆ ಆತನಲ್ಲಿ ಅವಶ್ಯವಾಗಿರಬೇಕಾದುದು ನೈತಿಕ, ಸಾಂಸ್ಕೃತಿಕ ಪಾತ್ರತೆ.** ಇದೇ ರೀತಿಯಾಗಿ ಇಂದಿನ ಶಿಕ್ಷಣದಲ್ಲಿ ವಾಸ್ತವ ಜೀವನಕ್ಕೆ ಅನುಪಯುಕ್ತವಾದ ಎಷ್ಟೋ ವಿಷಯಗಳನ್ನು ಅವಶ್ಯಕತೆಯ ಕಡೆಗೆ ಲಕ್ಷ್ಯಕೊಡದೆ ಮಗುವಿನ ತಲೆಯಲ್ಲಿ ನಿರರ್ಥಕವಾಗಿ ನಾವು ತುಂಬು ವೆವು. ಇದರಿಂದ ಕಲಿಯುವ ಮಗುವಿನ ಹಾಗೂ ಕಲಿಸುವ ಶಿಕ್ಷಕನ ಸಮಯ ಹಾಗೂ ಉತ್ಸಾಹಗಳ ಅಪಾರವಾದ ಹಾನಿಯೊದಗುವದು.

ಮೂಲಶಿಕ್ಷಣದಲ್ಲಿ ಕೆಲವು ವರ್ಷಗಳ ಪ್ರಯೋಗದ ನಂತರ ಒಂದು ಸಂಗತಿಯು ತಿಳಿದುಬಂದಿತು. ಝುಕೀರ ಸಮಿತಿಯು ಅಭ್ಯಾಸದಲ್ಲಿ ಹಾಕಿ ಕೊಟ್ಟ ಎಲ್ಲ ವಿಷಯಗಳ ಜ್ಞಾನವನ್ನು ಕೇವಲ ಒಂದು ಮೂಲೋದ್ಯೋಗದ ಮುಖಾಂತರವಾಗಿಯೇ ಮಾಡಿಕೊಡಲು ಪ್ರಯೋಗ ಕ್ಷೇತ್ರಗಳಲ್ಲಿ ಶಿಕ್ಷಕರಿಗೆ ಸಾಧ್ಯವೆನಿಸಲಿಲ್ಲ. ಪೂನಾಪರಿಷತ್ತಿನಲ್ಲಿ ಈ ವಿಚಾರದ ವಿಮರ್ಶೆಯಾಯಿತು.

**'ಮೂಲೋದ್ಯೋಗ' ದ ಜೊತೆಗೆ 'ನಿಸರ್ಗ' ಹಾಗೂ 'ಸಮಾಜ' ಗಳೆಂಬ ಮತ್ತೆರಡು ಕೇಂದ್ರಗಳನ್ನು ಮಗುವಿನ ಶಿಕ್ಷಣಕ್ಕಾಗಿ ತೆಗೆದು ಕೊಳ್ಳಲಾಯಿತು.** ಉದ್ಯೋಗದಂತೆಯೇ 'ನಿಸರ್ಗ' ಹಾಗೂ 'ಸಮಾಜ' ಗಳು ಜೀವನಕ್ಕೆ ನಿಕಟವಾಗಿ ಹೊಂದಿದವುಗಳಾದ್ದರಿಂದ ಜೀವನಶಿಕ್ಷಣವು ಇವುಗಳಿಗೆ ಸಹಜವಾಗಿ ಹೊಂದಿಕೊಳ್ಳುವದು. **ಮಗುವಿನ ಜೀವನವು ೧) ಉದ್ಯೋಗ, ೨) ನಿಸರ್ಗ, ೩) ಸಮಾಜಗಳೆಂಬ ಮೂರು 'ಪರಿಸರಣ'-'ಪರಿಸ್ಥಿತಿ' ಗಳಲ್ಲಿ ಸಾಗುವದು.** 'ಮೂರು ಸುತ್ತಿನ ಕೋಟೆss ಅದರೊಳಗssಒಂದು ಚೆಂದದ ಬಸವ' ಎಂದು ಕೋಲಾಟ ದಲ್ಲಿ ಹೆಣ್ಣುಮಕ್ಕಳು ಹಾಡುವದುಂಟು. ಬೆಳೆಯುವ ಪ್ರತಿಯೊಬ್ಬ ಮಗು, 'ಉದ್ಯೋಗ-ನಿಸರ್ಗ-ಪರಿಸರಣ'ಗಳೆಂಬ ಈ ಮೂರುಸುತ್ತಿನ ಕೋಟೆ ಯಲ್ಲಿ ನಿಂತುಕೊಂಡು ತನ್ನ ಜೀವನ ಸಂಗ್ರಾಮವನ್ನು ನಡೆಸುವನು. ಜೀವನ ವಿಕಾಸವನ್ನು ಮಾಡಿಕೊಳ್ಳುವನು. ಉದ್ಯೋಗವೇ ಜೀವನವಾದುದರಿಂದ, ಮಗುವಿನ ಶಿಕ್ಷಣವು ಉದ್ಯೋಗದಿಂದಲೇ ಮೊದಲಾಗುವದು. ಉದ್ಯೋ ಗವು ಮೊದಲನೆಯ ಪರಿಸ್ಥಿತಿ-ಪರಿಸರಣ. ಉದ್ಯೋಗಕ್ಕಾಗಿ ಅನೇಕ ಮೂಲ ದ್ರವ್ಯಗಳು ಬೇಕು. ನೂಲುವದಕ್ಕಾಗಿ ಹತ್ತಿ ಬೇಕು. ಬಡಿಗತನಕ್ಕಾಗಿ ಕಟ್ಟಿಗೆ ಬೇಕು. ನಿಸರ್ಗವು ಇವುಗಳನ್ನು ಒದಗಿಸುವದು. ಹೀಗೆ ಉದ್ಯೋಗ–ನಿಸರ್ಗಗಳು ಒಂದನ್ನೊಂದು ವ್ಯಾಪಿಸುವವು, ಕೂಡಿಕೊಳ್ಳುವವು. ಮಗುವು ಸಾಮಾಜಿಕ ಪ್ರಾಣಿ, ಒಂಟಿಗನಾಗಿ ಬಾಳಲಾರನು. ಸಾಮಾಜಿಕ ಜೀವನ ದಲ್ಲಿಯೇ ಆತನ ಸರ್ವಶಕ್ತಿಗಳು ಬೆಳಕಿಗೆ ಬರುವವು, ಒಲಿಯುವವು. ಮಾನ ವನು ಇದುವರೆಗೆ ಕಟ್ಟಿಕೊಂಡ ಶ್ರೇಷ್ಠವಾದ ಸಾಹಿತ್ಯ–ಸಂಸ್ಕೃತಿಗಳಿಗೆ ಸಾಮಾಜಿಕ ಜೀವನವೇ ತಳಹದಿಯಾಗಿದೆ. ಉದ್ಯೋಗದಲ್ಲಿ ಉಳಿದವರ ನೆರವು ಬೇಕು, ಕೊಡು–ತೆಗೆದುಕೊಳ್ಳುವ 'ಸಹಕಾರ' ಬೇಕು. ಕೂಡಿ ಕೆಲಸಮಾಡಬೇಕು. ಕೂಡಿ ಬಾಳುವ ಸಾಂಘಿಕ ಜೀವನವನ್ನು ಸಾಗಿಸಬೇಕು. ಸಮಾಜದ ಸುಖದುಃಖಗಳಲ್ಲಿ ಸಮಭಾಗಿಯಾಗಬೇಕು. ಈ ರೀತಿಯಲ್ಲಿ ಉದ್ಯೋಗವು ಸಮಾಜವನ್ನೂ ವ್ಯಾಪಿಸುವದು. **ಉದ್ಯೋಗಮೂಲವಾದ**

**ಮಗುವಿನ ಶಿಕ್ಷಣದಲ್ಲಿ ಈ ಮೂರು 'ಪರಿಸರಣ'ಗಳು ಸ್ವಾಭಾವಿಕ ವಾಗಿ-'ಸಮನ್ವಿತ'ವಾಗಿ ಹೊಂದಿಕೊಳ್ಳುವವು.** ಇದುವೇ 'ಸಮ ವಾಯ' ಶಿಕ್ಷಣವು. **ವಾಮನನು ತ್ರಿವಿಕ್ರಮನಾಗಿ ಮೂರು ಹೆಜ್ಜೆಗಳಲ್ಲಿ ವಿಶ್ವವನ್ನೆಲ್ಲ ವ್ಯಾಪಿಸಿ ಮೀರಿ ನಿಂತನಂತೆ. ಹಾಗೆಯೇ ಮಗುವು ತನ್ನ ಜೀವನದ ಮೂರು ಹೆಜ್ಜೆಗಳಿಂದ ಮೂರು ಪರಿಸರಣಗಳನ್ನೂ ವ್ಯಾಪಿಸಿ, ತನ್ನ ವ್ಯಕ್ತಿವಿಕಾಸದಲ್ಲಿ 'ಉನ್ನತ'ನಾಗಿ ನಿಲ್ಲುವನು.**

ಉದ್ಯೋಗ ನಿಸರ್ಗ ಸಮಾಜಗಳೆಂಬ ಮೂರು ಪರಿಸರಣಗಳು ಮಗು ವಿನ ಶಿಕ್ಷಣದಲ್ಲಿ ನಮಗೆ ಮೂರು ಬಗೆಯ **ಶೈಕ್ಷಣಿಕ 'ಪರಿಸ್ಥಿತಿ'ಗಳನ್ನು** ಒದಗಿಸುವವು. ಈ ಮೂರು 'ಪರಿಸ್ಥಿತಿ'ಗಳು ಕೇಂದ್ರ ಚಟುವಟಿಕೆಗೆ ಮಗುವಿನಲ್ಲಿ 'ಪ್ರೇರಣೆ'ಯನ್ನು ಹುಟ್ಟಿಸುವವು. ವಿವಿಧವಿಷಯಗಳನ್ನು ಮೂಲೋದ್ಯೋಗದೊಡನೆ ಸಮನ್ವಿತವಾಗಿ ಮಾಡಲು 'ಜ್ಞಾನಸಾಧನದ' ಸುಪ್ರಸಂಗಗಳಾಗುವವು. ಉದ್ಯೋಗವು (೧) **'ಆರ್ಥಿಕ ಪರಿಸ್ಥಿತಿ'**ಯ ನ್ನೊದಗಿಸುವದು.ಇದರಲ್ಲಿ ಮೂಲೋದ್ಯೋಗದ ವಿವಿಧಕೃತಿಗಳನ್ನೂ, ಉಪ ಕೃತಿಗಳನ್ನೂ ಹಾಗೂ ಉಪಕರಣಗಳನ್ನೂ ಮಗುವು ಕಲಿಯುವದು : ಹತ್ತಿಯನ್ನು ಬಿಡಿಸುವದರಿಂದ ನೇಯುವವರೆಗೆ, ಮಡಿಮಾಡುವದರಿಂದ ಫಲ ತೆಗೆದು ಕೊಳ್ಳುವವರೆಗೆ; ಮಡಿಕೆಹೊಡೆಯುವದರಿಂದ ರಾಶಿಯನ್ನು ಮನೆಗೆ ತೆಗೆದು ಕೊಂಡು ಹೋಗುವವರೆಗೆ.

ಎರಡನೆಯ ಕೇಂದ್ರವಾದ ನಿಸರ್ಗವು (೨) **'ನೈಸರ್ಗಿಕ ಪರಿಸ್ಥಿತಿ'** ಯನ್ನು ಒದಗಿಸುವದು. ಇದರಲ್ಲಿ:—ಆಕಾಶದಲ್ಲಿಯ ಅದ್ಭುತ ಚಮತ್ಕಾರ ಗಳು; ರಮಣೀಯವಾದ ದೃಶ್ಯಗಳು; ಸೂರ್ಯ, ಚಂದ್ರ ಹಾಗೂ ಮಿನುಗುವ ತಾರೆಗಳು; ನಿತ್ಯಜೀವನಕ್ಕೆ ಹಾಗೂ ಉದ್ಯೋಗಕ್ಕೆ ಸಂಬಂಧಿಸಿದ ಹವೆ, ಮಳೆ, ಗಾಳಿ ಬೆಳಕುಗಳೂ; ಪಶುಪಕ್ಷಿಗಳೂ, ಕ್ರಿಮಿಕೀಟಕಗಳೂ, ಹಾಗೂ ಪಶುಪಕ್ಷಿಗಳನ್ನು ಪ್ರೀತಿಯಿಂದ ಸಾಕುವದು.

ಮೂರನೆಯ ಕೇಂದ್ರವಾದ ಸಮಾಜವು (೩) **ಸಾಮಾಜಿಕ ಪರಿಸ್ಥಿತಿ ಯನ್ನು** ಒದಗಿಸುವದು. ಇದರಲ್ಲಿ:—ಸಾಂಘಿಕ ಜೀವನವೂ; ಯಾತ್ರೆಗಳೂ

ಉತ್ಸವಗಳೂ; ಸಮಾಜಸೇವೆಯ ಅನೇಕ ಸುಪ್ರಸಂಗಗಳೂ; ಸ್ವಚ್ಛತೆ, ಸಂಘಟನೆ ಮುಂತಾದವುಗಳು.

ಕೊನೆಯದಾಗಿ **ಸಮವಾಯದ ಸ್ವರೂಪವನ್ನು ಚೆನ್ನಾಗಿ ಅರಿತು ಕೊಂಡರೂ ಅದನ್ನು ಆಚರಿಸುವಾಗ್ಗೆ ಶಿಕ್ಷಕರು ಅತ್ಯಂತ ದಕ್ಷತೆ ವಹಿಸಬೇಕಾಗುವದು.** 'ಸಮನ್ವಯ'ವು ಆರ್ಯಧರ್ಮದ, ಆರ್ಯ ಸಂಸ್ಕೃತಿಯ ತಿರುಳಾಗಿದೆ. ವಿವಿಧತೆಯಲ್ಲಿ ಏಕರೂಪತೆ ಏಕಸೂತ್ರತೆಯನ್ನು ಕಾಣುವ ವಿಶಾಲವಾದ ಹಾಗೂ ಸಮನ್ವಯದ ದೃಷ್ಟಿಯು ಶಿಕ್ಷಕರಲ್ಲಿ ನಿರ್ಮಾಣವಾಗಬೇಕು. ವಿಷಯಗಳ ಶಿಕ್ಷಣಕ್ಕಾಗಿ ಚಟುವಟಿಕೆಯನ್ನು ಆಯ್ದು ಕೊಳ್ಳಬೇಕಿಲ್ಲವೆಂಬುದನ್ನು ಮರೆಯಕೂಡದು. 'ಪರಿಸ್ಥಿತಿ'ಯಿಂದ ಪ್ರೇರಿತ ರಾಗಿ ಬಾಲಕರೇ ಚಟುವಟಿಕೆಯನ್ನು ಸಂದರ್ಭಾನುಸಾರವಾಗಿ ತಾವೇ ಗೊತ್ತುಪಡಿಸಬೇಕು. ಈ ಸ್ವಯಂಪ್ರೇರಣೆಯಿಲ್ಲದಿದ್ದರೆ ಶಿಕ್ಷಣವು ಯಶಸ್ವಿ ಯಾಗಿ ಸಾಗಲಾರದು, ಅಂದಿನ ಚಟುವಟಿಕೆಗೆ ಅಗತ್ಯವಿರುವ ಸಾಧನ ಸಾಮಗ್ರಿಯನ್ನೆಲ್ಲ ಪೂರ್ವಾಲೋಚನೆಯಿಂದ ಸಿದ್ಧತೆಮಾಡಿಕೊಂಡಿರಬೇಕು. **ಶಿಸ್ತುಸಂಘಟನೆಗಳು ಸಮವಾಯ ಶಿಕ್ಷಣದ ಹೃದಯವಂತಿವೆ.** ಅವುಗಳಲ್ಲಿ ಶಿಥಿಲತೆಯುಂಟಾದರೆ ಶಿಕ್ಷಕನ ಶ್ರಮವೆಲ್ಲ ನಿಷ್ಫಲವಾಗುವದು. ಅನಿರೀಕ್ಷಿತವಾದ ಆತಂಕಗಳಿಗಾಗಿ ಮುನ್ನೋಟದಿಂದ ಶಿಕ್ಷಕನು ಸಿದ್ಧತೆ ಮಾಡಿಕೊಂಡಿರಬೇಕು. ಪಾಠಕ್ಕೆ ಹಾಕಿಕೊಂಡ ಅವಧಿಯನ್ನು ಚಟುವಟಿಕೆ ಹಾಗೂ ಸಮವಾಯ ಜ್ಞಾನಗಳಲ್ಲಿ ಹವಣಾಗುವಂತೆ ಹಂಚಬೇಕು. **ಚಟು ವಟಿಕೆಯ ಒಂದು ಮೆಟ್ಟಿಲು ಮುಂದಿನ ಮೆಟ್ಟಿಲಿಗೆ ಸಹಾಯಕ ವಾಗಬೇಕು.** ಅವುಗಳಲ್ಲಿ **ಕ್ರಮಬದ್ಧ**ತೆಯಿರಬೇಕು. ಒಂದು ಕೃತಿಯ ಮುಖಾಂತರವಾಗಿ ದೊರೆತ ಸಮನ್ವಿತ ಜ್ಞಾನವನ್ನು ಅದೇ ಕೃತಿಯ ಮುಂದಿನ ಮೆಟ್ಟಲುಗಳಲ್ಲಿ ಸ್ಥಿರಗೊಳಿಸಬೇಕು. ಕೊನೆಯದಾಗಿ ಅನುಬಂಧವು **ಸಮ ವಾಯವು ಹೇಗೋ ಹಿಡಿದು ತಂದು ಜೋಡಿಸುವಂತೆ ಕೃತ್ರಿಮವಾ ಗಿರಕೂಡದು.** ಹೆಚ್ಚು ವಿಷಯಗಳನ್ನಾಗಲೀ ಇಲ್ಲವೇ ಸಂದರ್ಭಕ್ಕೆ ಹೊಂದಿ ಕೊಳ್ಳದ ಅಪ್ರಸ್ತುತ ಸಂಗತಿಗಳನ್ನಾಗಲೀ 'ಬಾದರಾಯಣ ಸಂಬಂಧ'ದಿಂದ

ಜಗ್ಗಿ ಜಗ್ಗಿ ಜೋಡಿಸಲು ಹವಣಿಸುವದು ತೀರ ಹುಚ್ಚುತನವಾಗುವದು, ಹಾಸ್ಯಾಸ್ಪದವಾಗುವದು. ವೇಳಾಪತ್ರಿಕೆಯ ಗಂಟೆ-ಗಡಿಯಾಳಗಳ ತಾಳಕ್ಕೆ ಗಾಣದೆತ್ತಿನಂತೆ ಹೆಜ್ಜೆಹಾಕುತ್ತಿರುವ ಸಾಂಪ್ರದಾಯಿಕ ಶಿಕ್ಷಕರಿಗೆ, ಅನುಬಂಧದ ರೀತಿಯು ಕೆಲಕಾಲ ಅಡವಿಯಲ್ಲಿ ಕಣ್ಣುಕಟ್ಟಿಬಿಟ್ಟಂತೆನಿಸಬಹುದು. ಆದರೆ ಪೂರ್ವಾಲೋಚನೆಯಿಂದ ಸುಯೋಜಿತವಾಗಿ ಕಾರ್ಯವನ್ನು ಸಾಗಿಸಿದರೆ ಮಾತ್ರ ಅದರಲ್ಲಿ ಅವರಿಗೆ ಯಶಸ್ಸು ದೊರೆಯುವದು.

**ಸಾರಾಂಶ: — (ಮೂಲಶಿಕ್ಷಣಯೋಜನೆ)**

ಮೂಲಶಿಕ್ಷಣವು ಜೀವನೋಪಯೋಗಿಯಾದ ಉತ್ಪಾದಕಕಲೆಯ, ವಿಶೇಷವಾಗಿ ಹಳ್ಳಿಯ ಕೈಗಾರಿಕೆಯ ಮುಖಾಂತರವಾಗಿ ಕೊಡುವ ಶಿಕ್ಷಣವು. ಇದು ಭಾರತದ ಪ್ರಾಚೀನ ಗ್ರಾಮನಿಷ್ಠ ಸಂಸ್ಕೃತಿಗೆ ಅನುಗುಣವಾಗಿದೆ. ಸತ್ಯ—ಅಹಿಂಸೆ—ಸಹಕಾರಗಳು ಇದಕ್ಕೆ ತಳಹದಿಯಾಗಿವೆ. ಇದರ ಉಪಯೋಗವು ಹೆಚ್ಚಾಗಿ ಹಳ್ಳಿಗರಿಗಾಗಿ. ಏಳನೆಯ ವರುಷದಿಂದ ಹದಿನಾಲ್ಕನೆಯ ವರುಷದ ವರೆಗೆ ಭಾರತದ ಪ್ರತಿಯೊಬ್ಬ ವ್ಯಕ್ತಿಗೆ ದೊರೆಯುವ ಸಾರ್ವತ್ರಿಕವಾದ ಒತ್ತಾಯದ ಶಿಕ್ಷಣವಿದು. ಮುಂದಿನ ನಾಗರಿಕರಾಗುವ ಇಂದಿನ ಮಕ್ಕಳಿಗೆ ತಮ್ಮ ನಾಡು ಇತಿಹಾಸ ಸಾಹಿತ್ಯಗಳ ಬಗ್ಗೆ ಅಭಿಮಾನವನ್ನೂ ಆದರವನ್ನೂ ಇದು ಹುಟ್ಟಿಸುವದು. ಮೇಲಾಗಿ ಗಳಿಸುತ್ತ ಅವರು ಕಲಿಯುವರು. ಆದುದರಿಂದ ಇದು ರಾಷ್ಟ್ರೀಯ ಶಿಕ್ಷಣವು, ಸ್ವಾವಲಂಬನ ಶಿಕ್ಷಣವು. ವ್ಯಕ್ತಿಯು ನೌಕರಿಗಾಗಿ ಅಂಡಲೆಯದೆ ಉದ್ಯೋಗದ ಬಲದಿಂದ ತನ್ನ ಕಾಲಮೇಲೆ ತಾನು ನಿಲ್ಲುವಂತೆ ಮಾಡಲು ಇದು ಹವಣಿಸುವದು. ಇದರಿಂದ ನಿರುದ್ಯೋಗಿತನವೂ ಕಡಿಮೆಯಾಗುವದು. ಇದು ಸಾಂಸ್ಕೃತಿಕವಾದ ಶಿಕ್ಷಣವು. ಸಹಕಾರ, ಸಹಾನುಭೂತಿ ಮೊದಲಾದ ಸಾಮಾಜಿಕ ಸದ್ಗುಣಗಳನ್ನು ಬೆಳೆಯಿಸಿ, ಘಾತುಕಗಳಾದ ಸ್ಪರ್ಧೆ, ಸ್ವಾರ್ಥ ಮೊದಲಾದ ಭಾವನೆಗಳಿಗೆ ಆಸ್ಪದವು ದೊರೆಯದಂತೆ ಮಾಡುವದು ಈ ಯೋಜನೆಯ ಉದ್ದೇಶವು. ಇಂಥ ಭಾವನೆಗಳಿಂದ ಕೂಡಿದ, ಸ್ವಾಭಿಮಾನ—ಸ್ವಾವಲಂಬನಗಳಿಂದ ಕೂಡಿದ ವರ್ಗರಹಿತವಾದ ಹಾಗೂ ಶೋಷಣರಹಿತವಾದ ನೂತನ ಸಮಾಜವನ್ನು

ರಚಿಸುವದೇ ಈ ಶಿಕ್ಷಣಯೋಜನೆಯ ಧ್ಯೇಯವಾಗಿದೆ. ಪರಭಾಷೆಯ ಮುಖಾಂತರವಾಗಿ ಶಿಕ್ಷಣಕೊಡುತ್ತಿದ್ದ ಹಾನಿಕರವಾದ ಹಿಂದಿನ ರೀತಿಯನ್ನು ಇದು ಬಿಟ್ಟು ಕೊಟ್ಟಿದೆ. ಮೂಲಶಿಕ್ಷಣವು ಮಾತೃಭಾಷೆಯ ಮುಖಾಂತರವಾಗಿಯೇ ಸಾಗುವದು. ಇದು ಕೃತಿಮೂಲಶಿಕ್ಷಣವು. ಮಗುವಿನ ಆತ್ಮ ಪ್ರಕಾಶನಕ್ಕೆ–ಆತನ ಶಾರೀರಿಕ, ಮಾನಸಿಕ, ಆತ್ಮಿಕ ಶಕ್ತಿಗಳು ಬೆಳಕಿಗೆ ಬರಲು–ಉದ್ಯೋಗ, ನಿಸರ್ಗ ಹಾಗೂ ಸಾಮಾಜಿಕಗಳೆಂಬ ಮೂರು ಜೀವನದ ಪರಿಸರಣಗಳು, ಪರಿಸ್ಥಿತಿಗಳು. ಮೂಲೋದ್ಯೋಗಕ್ಕೆ ನಿಸರ್ಗದ ಸಹಕಾರ ಬೇಕು. ಮಗುವು ಸಮಾಜದಲ್ಲಿ ಬಾಳುವನು. ಈ ಮೂರು ಕೇಂದ್ರಗಳ ಮುಖಾಂತರವಾಗಿ ಮಗುವಿನ ಬುದ್ಧಿವಿಕಾಸವಾಗಬೇಕು. ಮೂಲೋದ್ಯೋಗವು ಜೀವನದ ಪ್ರಾಥಮಿಕ ಬೇಡಿಕೆ–ಅನ್ನ, ಬಟ್ಟೆ, ಆಸರ–ಗಳನ್ನು ಒದಗಿಸುವಂತಿರಬೇಕು, ಶೈಕ್ಷಣಿಕವಾಗಿರಬೇಕು. ಉದ್ಯೋಗದ ನಿರ್ವಹಣೆಯಲ್ಲಿ ಹೀಗೆ ಹೊಂದಿಕೊಂಡು ಬರುವ ಜ್ಞಾನಕ್ಕೆ ಸಮನ್ವಿತ ಜ್ಞಾನವೆನ್ನುವರು. ಹೊಂದಿಕೆಯ ಈ ರೀತಿಗೆ ಅನುಬಂಧ ಇಲ್ಲವೆ ಸಮವಾಯವೆನ್ನುವರು. ಈ ಯೋಜನೆಯು ಜೀವನಶಿಕ್ಷಣಗಳೆರಡನ್ನೂ ಏಕರೂಪವಾಗಿ ಹೊಂದಿಸಿಕೊಳ್ಳುವದು, ಒಂದುಗೂಡಿಸುವದು. ಅಂತೆಯೇ ಇದಕ್ಕೆ 'ಜೀವನಶಿಕ್ಷಣ' ವೆಂತಲೂ ಕರೆಯುವರು. ಈ ಯೋಜನೆಗೆ ಮಾನಸಶಾಸ್ತ್ರದ ಬೆಂಬಲವಿದೆ. ಹಿಂದಿನ ಹಾಗೂ ಇಂದಿನ ತತ್ವದ ಮನ್ನಣೆಯಿದೆ. ಇದರ ಉಪಯುಕ್ತತೆಯು ಪ್ರಯೋಗದಿಂದ ಪ್ರಮಾಣಿತವಾಗಿದೆ. ಸ್ವತಂತ್ರ ಭಾರತದ ರಾಷ್ಟ್ರೀಯಶಿಕ್ಷಣ ಯೋಜನೆಯೆಂದು ರಾಜ್ಯಘಟನೆಯಲ್ಲಿ ಇದಕ್ಕೆ ಮನ್ನಣೆ ದೊರೆತಿದೆ. ಮೇಲಾಗಿ ಈ ಯೋಜನೆಗೆ ಮಹಾತ್ಮಾಜಿಯವರ ಅಂತಃಸ್ಫೂರ್ತಿಯ : ಆಶೀರ್ವಾದವಿದೆ.

**ಏಳು ವರುಷದ ಈ ಅಭ್ಯಾಸ ಪತ್ರಿಕೆಯಲ್ಲಿ ಇಂಗ್ಲೀಷೊಂದನ್ನು ಬಿಟ್ಟು ವ್ಯಾಟ್ರಿಕ'ದವರೆಗಿನ ವಿಷಯಜ್ಞಾನವಿದೆ. ಇದಲ್ಲದೇ ಮೂಲೋದ್ಯೋಗದಲ್ಲಿ ಪರಿಣತಿಯೂ, ಹಾಗೂ ರಾಷ್ಟ್ರಭಾಷೆಯ ಪರಿಚಯವೂ ಬಾಲಕರಿಗಾಗುವದು.** ಝುಕೀರ ಸಮಿತಿಯವರು ಮೂಲಶಿಕ್ಷಣದ ಯೋಜನೆಯ ಅಭ್ಯಾಸ ಪತ್ರಿಕೆಯಲ್ಲಿ ಕೆಳಗಿನ ವಿಷಯಗಳನ್ನು ಸೇರಿಸಿರುವರು.

**ಮೂಲೋದ್ಯೋಗ:—** ಇದು ಜೀವನೋಪಯೋಗಿಯಾದ, ಶೈಕ್ಷಣಿಕವಾದ, ಹಳ್ಳಿಯ ಕೈಗಾರಿಕೆಯಾಗಿರಬೇಕು.(೧) ನೂಲುವದು; (೨) ಬಡಿಗತನ; (೩) ಒಕ್ಕಲತನದ ಬೇಸಾಯ; (೪) ತೋಟಗಾರಿಕೆ; (೫) ಚರ್ಮದ ಕೆಲಸ. ಇವುಗಳಲ್ಲಿ ಆರಿಸುವಾಗ್ಗೆ ಸ್ಥಳಿಕ ಪರಿಸ್ಥಿತಿಯನ್ನು ಲಕ್ಷದಲ್ಲಿಡಬೇಕು. ಸ್ಥಳಿಕ ಪರಿಸ್ಥಿತಿಗೆ–ಸೌಕರ್ಯಗಳಿಗೆ ಅನುಗುಣವಾಗುವಂತೆ ಬೇರೊಂದು ಉಪಯುಕ್ತವಾದ ಕೈಗಾರಿಕೆಯನ್ನಾದರೂ ತೆಗೆದುಕೊಳ್ಳಬಹುದು.

**ಮಾತೃಭಾಷೆ:—** ಮೂಲಶಿಕ್ಷಣದಲ್ಲಿ ಮಾತೃಭಾಷೆಗೆ ಮಹತ್ವದ ಸ್ಥಾನವಿದೆ. ಚಟುವಟಿಕೆಗಳ ವಿವರಣೆಯಲ್ಲಿ, ನೋಡಿದ–ಮಾಡಿದ ಸಂಗತಿಗಳ ವರ್ಣನೆಯಲ್ಲಿ ಮಾತೃಭಾಷೆಯ ಪ್ರಭುತ್ವವನ್ನು ಮಗುವಿಗೆ ತಂದುಕೊಡಬಹುದು. ಶಿಕ್ಷಣವು ಮಾತೃಭಾಷೆಯ ಮುಖಾಂತರವಾಗಿಯೇ ಸಾಗಬೇಕು. ತಾಯಿನುಡಿಯಲ್ಲಿಯೇ ಮಗುವಿನ ಆತ್ಮಪ್ರಕಾಶನಕ್ಕೆ ತುಂಬಾ ಎಡೆಯುಂಟು.

**ಗಣಿತ:—** ಚಟುವಟಿಕೆಯ ಮುಖಾಂತರವಾಗಿಯೇ ಗಣಿತವನ್ನು ಕಲಿಸಬೇಕು. ಅವರು ಕಲಿಯುವ ಗಣಿತವು ವ್ಯಾವಹಾರಿಕವಾಗಬೇಕು–ನಿತ್ಯ ಜೀವನೋಪಯೋಗಿಯಾಗಬೇಕು. 'ಜೀವನದ ಸನ್ನಿವೇಶ ಹಾಗೂ ಮೂಲೋದ್ಯೋಗದ ವಿವಿಧ ಸಂದರ್ಭಗಳಿಗೆ ಹೊಂದಿಸಿಕೊಂಡು' ಗಣಿತ ಶಿಕ್ಷಣವನ್ನು ಕೊಡಬೇಕು.

**ಸಮಾಜವಿಜ್ಞಾನ:—** ಕಾಡು ಸ್ಥಿತಿಯಿಂದ ನಾಗರಿಕತೆಯ ತುದಿಯನ್ನು ಮುಟ್ಟಿದ ಮಾನವ ಸಮಾಜದ ಪ್ರಗತಿಯ ರೂಪರೇಷೆಗಳು ಇದರಲ್ಲಿ ಬರುವವು. ನಿಸರ್ಗದ ಶಕ್ತಿ ಸಂಪತ್ತುಗಳನ್ನು ವಿನಿಯೋಗಿಸಿಕೊಂಡು ಮಾನವನು ತನ್ನ ಜೀವನದಲ್ಲಿ ಮಾಡಿಕೊಂಡ ಪ್ರಗತಿ ಪರಿವರ್ತನೆಗಳನ್ನೆಲ್ಲ ಮಗುವು ತಿಳಿದುಕೊಳ್ಳಬೇಕು.ಅದರಲ್ಲಿ ಹಾಗೂ ತನ್ನ ನಾಡಿನ ಪ್ರಗತಿಯಲ್ಲಿ ಆತನು ಆಸಕ್ತಿ ವಹಿಸಬೇಕು. ಅದನ್ನು ಹೆಚ್ಚು ಉನ್ನತವಾಗಿ ಮಾಡಲು ಯತ್ನಿಸಬೇಕು. **ನಾಗರಿಕ ಧರ್ಮದಲ್ಲಿ, ಹಕ್ಕುಗಳೊಡನೆ ಹೊಣೆಗಾರಿಕೆಯೂ ಇರುವದೆಂಬುದರ ಅರಿವು ಆತನಿಗಾಗಬೇಕು. ವಿಶ್ವದ ಎಲ್ಲ ಧರ್ಮಗಳಲ್ಲಿ ಭಕ್ತಿಭಾವವಿರಬೇಕು.** ಸತ್ಯ ಪ್ರೇಮ ಸಹಕಾರಗಳಿಂದ ಕೂಡಿ

ದವರಾಗಿ, ಅವುಗಳನ್ನೇ ನೆಲೆಯಾಗಿಟ್ಟುಕೊಂಡ ಸಮಾಜವನ್ನು ಕಟ್ಟುವ ಹವಣಿಕೆಯುಂಟಾಗಬೇಕು. (೧) **ಇತಿಹಾಸ,** (೨) **ಪೌರನೀತಿ,** (೩) **ಭೂಗೋಲ ಇವು ಸಮಾಜವಿಜ್ಞಾನದ ಮೂರು ಮುಖಗಳು.** ಇತಿಹಾಸವು ನಡೆದ ಘಟನೆಗಳ ನಿರ್ಜೀವ ಯಾದಿಯಾಗಿರದೆ, ಮಾನವನ ಪ್ರಗತಿಯ ತಪ್ಪುತಡೆಗಳ ಸಜೀವ ಚಿತ್ರವಾಗಬೇಕು. ಅದರ ಶಿಕ್ಷಣದಲ್ಲಿ ಭಾರತೀಯ ದೃಷ್ಟಿ ಬರಬೇಕು. ಭೂಗೋಲದ ಮಹತಿಯನ್ನು ಮೂಲಶಿಕ್ಷಣ ಯೋಜನೆಯು ಚನ್ನಾಗಿ ತಿಳಿದಿದೆ. ಎಲ್ಲ ವಿಷಯಗಳಿಗಿಂತಲೂ **ಭೂಗೋಲವು ಜೀವನಕ್ಕೆ ಹೆಚ್ಚು ನಿಕಟವಾಗಿ ಸಂಬಂಧಿಸಿದೆ.** ಸ್ವಂತ ಮನೆಯ ಪರಿಚಯದಿಂದ, ಮಾನವನ ಮನೆಯಾದ ವಿಶ್ವದ ಪರಿಚಯವನ್ನು ಚಟುವಟಿಕೆಯ ವಿವಿಧ ಸಂದರ್ಭಗಳಲ್ಲಿ ಮಗುವಿಗೆ ಮಾಡಿಕೊಡಬೇಕು.

**ಸಾಮಾನ್ಯವಿಜ್ಞಾನ:**—ನಿಸರ್ಗವನ್ನು ಸರಿಯಾಗಿ ನಿರೀಕ್ಷಿಸುವ, ಪರೀಕ್ಷಿಸುವ, ವಿನಿಯೋಗಿಸುವ ದೃಷ್ಟಿಯೂ ಮಗುವಿನಲ್ಲಿ ಉಂಟಾಗುವಂತೆ ಯತ್ನಿಸಬೇಕು. **ವಿಜ್ಞಾನದ ಕಾರ್ಯವು 'ವಿನಾಶ' ಮಾಡುವದಲ್ಲ, ಮಾನವನ ಸೇವೆಗಾಗಿ,** ಹಿತಕ್ಕಾಗಿ ಎಂಬುದನ್ನು ಮಕ್ಕಳ ಮನಸ್ಸಿನಲ್ಲಿ ಬಿಂಬಿಸಬೇಕು. ಸಾಮಾನ್ಯವಿಜ್ಞಾನದಲ್ಲಿ **ನಿಸರ್ಗ, ಸಸ್ಯಜೀವನ, ಪ್ರಾಣಿಜೀವನ, ಶರೀರವಿಜ್ಞಾನ, ಆಕಾಶನಿರೀಕ್ಷಣ** ಮೊದಲಾದ ಅಂಶಗಳು ಬರುವವು.

**ಚಿತ್ರಕಲೆ:**— ಮೂಲೋದ್ಯೋಗದ ಸಾಧನಗಳಲ್ಲಿಯೇ ಚಿತ್ರಕಲೆಯು ರೂಪುಗೊಳ್ಳಬೇಕು. ಆಕಾರ, ರಚನೆ, ಬಣ್ಣ ಹಾಗು ಪ್ರಮಾಣಬದ್ಧತೆಗಳ ಜ್ಞಾನವು ಮಗುವಿನಲ್ಲಿ ಬರಬೇಕು. **ಸೌಂದರ್ಯಾಭಿರುಚಿಯುಂಟಾಗಬೇಕು.** ಚಿತ್ರಗಳಿಂದಲೇ ಅಕ್ಷರಗಳನ್ನು ತಾಯಿನುಡಿಯಲ್ಲಿ ತಯಾರಿಸಲು ಕೂಡ ಯತ್ನಿಸಬಹುದು.

**ಸಂಗೀತ:**— ಮನಸ್ಸಿನ ಏಕಾಗ್ರತೆಗಾಗಿ ಸಂಗೀತವು ಸಬಲವಾದ ಸಾಧನವಾಗಿದೆ. ಭಕ್ತಿಮಾರ್ಗವು ಸಂಗೀತವನ್ನು ತುಂಬಾ ಬಳಸಿಕೊಂಡಿದೆ. ಕೆಲಕಾಲವಾದರೂ **ಮನಸ್ಸಿಗೆ ನೆಮ್ಮದಿಯನ್ನೂ ವಿಸ್ಮರಣವನ್ನೂ ತಂದುಕೊಡುವ ಶಕ್ತಿಯು ಸಂಗೀತಕ್ಕಿದೆ.** 'ರಂಗ ಕೊಳಲ

ನೂದಲಾಗಿ ...', ಚರಾಚರ ಪ್ರಪಂಚವೆಲ್ಲವೂ ಸ್ತಿಮಿತವಾಗಿ ಏಕಾಗ್ರತೆಯಿಂದ ಕೇಳುತ್ತಿತ್ತಂತೆ. ರಾಷ್ಟ್ರಗೀತವನ್ನು, ಎಲ್ಲರೂ ಏಕಕಂಠದಿಂದ ಸರಾಗವಾಗಿ ಹಾಡಲು ಬರಬೇಕು. **ಸಂಘಗೀತಗಳು, ಸಾಭಿನಯಹಾಡುಗಳು, ಜಾನಪದ ಗೀತಗಳು, ನೃತ್ಯಗಳು ಇವುಗಳಿಗೆ ಈ ಯೋಜನೆಯು ಪ್ರಾಶಸ್ತ್ಯವನ್ನು ಕೊಟ್ಟಿದೆ.** ಒಟ್ಟಿನಲ್ಲಿ ಸಂಗೀತದ ಆನಂದ, ತಾಳ, ಲಯಗಳು ಮಗುವಿನ ಜೀವನದಲ್ಲಿ ಮೂಡಿಬರಬೇಕು.

**ಹಿಂದುಸ್ತಾನಿ:**— ಹಿದುಸ್ತಾನಿಯು ಭಾರತದ ರಾಷ್ಟ್ರಭಾಷೆಯು. **ಪ್ರಾದೇಶಿಕ ಭಾಷೆಗಳ ಬೆಳವಣಿಗೆಗೆ ಕಾಲ್ತೊಡಕಾಗದಂತೆ** ಹಿಂದುಸ್ತಾನಿಯನ್ನೂ ಬಾಲಕರು ಕಲಿಯುವರು. ಬೇರೆ ಬೇರೆ ಪ್ರಾಂತಗಳಲ್ಲಿ ಪರಸ್ಪರ ಬಳಕೆಗೆ ಒಂದೇ ಆದ ಅನುಕೂಲ ಭಾಷೆಯೆಂದರೆ ಹಿಂದುಸ್ತಾನಿಯು. ಒಂದೇ ರಾಷ್ಟ್ರಭಾಷೆಯು ಈ ವ್ಯಾವಹಾರಿಕವಾದ ಅನುಕೂಲತೆಯೊಡನೆ **ಏಕರಾಷ್ಟ್ರತ್ವದ ಭಾವನೆಗೂ ಪೋಷಕವಾಗುವದು.** ಇದಕ್ಕಾಗಿ ಹಿಂದುಸ್ತಾನಿಯನ್ನು ಅಭ್ಯಾಸ ಪತ್ರಿಕೆಯಲ್ಲಿ ಸೇರಿಸಲಾಗಿದೆ. ವೇಳಾಪತ್ರಿಕೆಯಲ್ಲಿ ಹಿಂದುಸ್ತಾನಿ ಸಂಗೀತಗಳೆರಡಕ್ಕೂ ಅವಕಾಶವನ್ನು ಒದಗಿಸಲಾಗಿದೆ.

ಇವೆಲ್ಲ ವಿಷಯಗಳ ಮಹತಿಯನ್ನೂ ಜೀವನದಲ್ಲಿ ಅವುಗಳಿಗಿರುವ ಉಪಯುಕ್ತತೆಯನ್ನೂ ಶಿಕ್ಷಕರು ಅರಿತುಕೊಂಡು ಮೂಲಚಟುವಟಿಕೆಗೆ ಇವುಗಳನ್ನೆಲ್ಲ ಸಂದರ್ಭಾನುಸಾರವಾಗಿ ಅನುಬಂಧಿಸಿಕೊಳ್ಳಬೇಕು. ಮಗುವಿನ ಸರ್ವತೋಮುಖವಾದ ಸರ್ವಶಕ್ತಿಗಳ ಸಮನ್ವಿತವಾದ ವಿಕಾಸವು ಸಾಧಿಸುವಂತೆ ಯತ್ನಿಸಬೇಕು. **ಒಂದು ಚೈತನ್ಯದ ಮೂರ್ತಿಯನ್ನು ತಾವು ರೂಪಗೊಳಿಸುತ್ತಿರುವರೆಂಬ ಭಾವನೆಯು ಪ್ರತಿಯೊಂದು ಕಾರ್ಯದಲ್ಲಿಯೂ ಅವರಿಗೆ ಪ್ರೇರಕಶಕ್ತಿಯಾಗಬೇಕು.** ರಾಷ್ಟ್ರಪಿತನ ಆಕಾಂಕ್ಷೆಯಾದ ಶೋಷಣರಹಿತವಾದ, ವರ್ಗರಹಿತವಾದ, ಪ್ರೇಮ ಸತ್ಯ ನ್ಯಾಯಗಳನ್ನೇ ನೆಲೆಯಾಗಿಟ್ಟುಕೊಂಡ ಒಂದು **ನೂತನ ಸಮಾಜವನ್ನು ಕಟ್ಟುವ 'ರಾಷ್ಟ್ರ ನಿರ್ಮಾಣ'ಕಾರ್ಯದಲ್ಲಿ ತಾವು ಭಾಗವಹಿಸುತ್ತಿರುವರೆಂಬುದನ್ನು** ಅವರು ದೃಢವಾಗಿ ನಂಬಬೇಕು.

# ಪರಿಶಿಷ್ಟ ೧

## ಸಾಮಾಜಿಕ ಶಿಕ್ಷಣ

ಭಾರತವು ಇಂದು ಸ್ವತಂತ್ರರಾಷ್ಟ್ರವಾಗಿದೆ. ಸುಮಾರು ಎರಡು ಶತಮಾನಗಳ ಪರದಾಸ್ಯದಿಂದ ಇಂದು ನಾವು ಬಿಡುಗಡೆ ಹೊಂದಿರುವೆವು. ಸಾವಿರಾರು ಮೈಲುಗಳಾಚೆಗೆ ಕುಳಿತು ನಮ್ಮ ಜೀವನದಲ್ಲಿ ಸುಖದುಃಖದ ಸೂತ್ರಗಳನ್ನು ಜಗ್ಗಿ ತಮಗೆ ಬೇಕಾದಂತೆ ಪರಕೀಯರು ನಮ್ಮನ್ನು ಕುಣಿಸುತ್ತಿದ್ದರು. ಇಂದು ನಮ್ಮ ಸುಖದುಃಖಗಳಿಗೆ, ಆಗುಹೋಗುಗಳಿಗೆ ನಾವೇ ಹೊಣೆಗಾರರು. **ಜನತೆಯ ಜೀವನವನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ರಚಿಸುವ ಹಾಗೂ ರೂಪಿಸುವ ಶಕ್ತಿಯು ಇಂದು ಜನತೆಯ ಕೈಗೆ ಬಂದಿದೆ.** ಕೀರ್ತಿಶಾಲಿಗಳಾದ ಅನೇಕ ಸ್ತ್ರೀ–ಪುರುಷರು ತಮ್ಮ ಅಪಾರವಾದ ಬಲಿದಾನದಿಂದ ಈ ಶಕ್ತಿಯನ್ನು, ರಾಜಕೀಯ ಸ್ವಾತಂತ್ರ್ಯವನ್ನು ರಾಷ್ಟ್ರಕ್ಕೆ ಸಲ್ಲಿಸಿದ್ದಾರೆ. ಅವರು ಗಳಿಸಿದ ಈ ಶಕ್ತಿಯನ್ನು ಅಚ್ಚಳಿಯದೆ ಉಳಿಸಿಕೊಳ್ಳುವದೂ, ರಾಷ್ಟ್ರಹಿತವಾಗುವಂತೆ ಸರಿಯಾಗಿ ಉಪಯೋಗಿಸಿಕೊಳ್ಳುವದೂ ಜನತೆಯನ್ನೇ ಕೂಡಿದೆ.

ನಮ್ಮ ದೇಶದ ಬಹುಜನ ಸಮಾಜವು ಈಗಿರುವ ಪರಿಸ್ಥಿತಿಯಲ್ಲಿ ಈ ಹೊಣೆಯನ್ನು ಯಥಾರ್ಥವಾಗಿ ಹೊರಬಹುದೆ? ಬಾಡಿಗೆಯ ಮನೆಯಲ್ಲಿರುವವರು ತಮ್ಮ ಕೊರತೆಗಳನ್ನು, ತಮಗೆ ಬೇಕಾದುದನ್ನು, 'ಮಾಲಿಕ'ನಿಗೆ ತಿಳಿಸಿ, ಆತನು ಅವುಗಳನ್ನು ಸರಿಪಡಿಸುವವರೆಗೆ ಕೈಕಟ್ಟಿಕೊಂಡು ಕುಳಿತು ಬಿಡುವರು. ದೀರ್ಘಕಾಲದ ದಾಸ್ಯದಿಂದ ನಮ್ಮ ಮನೋವೃತ್ತಿಯೂ ಹೀಗೆಯೇ ಆಗಿಬಿಟ್ಟಿದೆ. ಯಾವುದೇ ಬಗೆಯ ಶಕ್ತಿಯಾಗಲೀ, ಇಲ್ಲವೇ ಅಧಿಕಾರವಾಗಲಿ ಅದನ್ನು ಉಪಯೋಗಿಸುವವರಲ್ಲಿ ಅದರ ಸರಿಯಾದ ತಿಳುವಳಿಕೆಯಿರಬೇಕು, ಅದರ ಪ್ರಭಾವ–ಪ್ರಯೋಜನಗಳನ್ನು ಅವರು ಅರಿಯುವಂತಿರಬೇಕು. ಭಾರತದ ಬಹುಜನ ಸಮಾಜಕ್ಕೆ ಈ ಬಗೆಯ ಅರಿವು–ತಿಳುವಳಿಕೆಗಳನ್ನು ತಂದುಕೊಡುವದು ಮಹತ್ವದ ಕಾರ್ಯವಾಗಿದೆ. ಈ ಕಾರ್ಯವನ್ನು ಅದೇಕೆ? ಎಲ್ಲ ಕಾರ್ಯಗಳನ್ನೂ ಸರಕಾರವೇ ಮಾಡಬೇಕೆಂಬ 'ಬಾಡಿಗೆದಾರರ ಮನೋ

ಪ್ರವೃತ್ತಿಯು' ನಮ್ಮ ಮನಸ್ಸಿನಿಂದ ಮೊದಲು ತೊಲಗಬೇಕು. ಸರಕಾರವು ನ್ನ ರೀತಿಯಲ್ಲಿ ಇದಕ್ಕಾಗಿ ಸೇವೆಸಲ್ಲಿಸುತ್ತಿದೆ. ಸಹಾಯಸಲಕರಣೆಗಳನ್ನು ಒದಗಿಸುತ್ತಿದೆ. ಆದರೆ ಹೆಚ್ಚಾಗಿ ಇದು ಸಾಮಾಜಿಕಕಾರ್ಯ. ಸಮಾಜವು ನ್ನನ್ನು ತಾನೇ ತಿದ್ದಿಕೊಳ್ಳಬೇಕಾಗಿದೆ. ಅದರ ಮನೋವೃತ್ತಿಯು ಬದಲಿಸ ಬೇಕು. ಅಸಹಾಯತೆಯ ಭಾವವು ಅಳಿದುಹೋಗಬೇಕು. ಸ್ವತಂತ್ರರಾಷ್ಟ್ರ ದಲ್ಲಿ ಸ್ವಾಭಿಮಾನದ ಜೀವನವನ್ನು ಸಾಗಿಸುವ ಪಾತ್ರತೆ ಎಲ್ಲರಿಗೂ ಬರಬೇಕು. ನಾಗರಿಕತೆಯ ಹಕ್ಕುಗಳೊಡನೆ ಹೊಣೆಗಾರಿಕೆಯೂ, ಮಾಡಲೇಬೇಕಾದ ಕರ್ತವ್ಯಗಳೂ ಇರುವವೆಂಬ ನಂಬಿಕೆ ಪ್ರತಿಯೊಬ್ಬರಲ್ಲಿ ಉಂಟಾಗಬೇಕು. **ಸಮಾಜದ ಮನೋವೃತ್ತಿಯಲ್ಲಿ ಈ ಬಗೆಯ 'ಕ್ರಾಂತಿ'ಯಾಗ ಬೇಕು.** ಸಮಾಜದ ಜೀವನದಲ್ಲಿ ನಿಶ್ಶಬ್ದವಾಗಿ ಈ ಬಗೆಯ 'ಕ್ರಾಂತಿ' ಯನ್ನು ಸಾಧಿಸುವದೇ ಸಾಮಾಜಿಕ ಶಿಕ್ಷಣದ ಮುಖ್ಯೋದ್ದೇಶವಾಗಿದೆ.

ಸಾಮಾಜಿಕ ಶಿಕ್ಷಣದ ಉದ್ದೇಶ ಹಾಗೂ ವ್ಯಾಪ್ತಿಗಳು ಇಂದು ಇಷ್ಟೊಂದು ವಿಶಾಲವಾಗಿವೆ, ಉದಾತ್ತವಾಗಿವೆ. ಪ್ರಾರಂಭದಲ್ಲಿ ಸಾಕ್ಷರತೆಯ ಪ್ರಸಾರವೇ ಇದರ ಗುರಿಯಾಗಿತ್ತು. ನಮ್ಮ ದೇಶದ ಇಂದಿನ ಪರಿಸ್ಥಿತಿ ಯಲ್ಲಿಯೂ ಕೂಡ **ಸಾಕ್ಷರತೆಯ ಪ್ರಸಾರವು** ಅತ್ಯಂತ ಮಹತ್ವದ ಕಾರ್ಯ ವಾಗಿದೆ. ಪ್ರಗತಿಪರವಾದ ಉಳಿದ ರಾಷ್ಟ್ರಗಳೊಡನೆ ನಮ್ಮನ್ನು ಈ ವಿಷಯ ದಲ್ಲಿ ಹೋಲಿಸಿ ನೋಡಿದರೆ ನಾವೆಷ್ಟು ಹಿಂದೆ ಉಳಿದಿರುವೆವೆಂಬುದು ಹೊಳೆ ಯುವಂತಿದೆ.

| | ಹಿಂದುಸ್ತಾನ | ಅಮೇರಿಕೆ | ಇಂಗ್ಲಂಡ | ಜರ್ಮನಿ |
|---|---|---|---|---|
| ಸರಾಸರಿ ಜೀವಮಾನ:— | ೨೭ | ೬೨ | ೬೨ | ೬೨ |
| ಸಾಕ್ಷರತೆಯ ಪ್ರಮಾಣ ನೂರಕ್ಕೆ:— | ೧೫ | ೯೫ | ೧೦೦ | ೧೦೦ |
| ಹತ್ತುಸಾವಿರ ಜನರಲ್ಲಿ ರೇಡಿಯೋ ಉಳ್ಳವರು:— | .೪ | ೧೯೦೦ | ೧೮೦೦ | ೧೨೦೦ |

ಇದೇ ಮೇರೆಗೆ ಭೂಮಿಯ ಹುಟ್ಟುವಳಿಯಲ್ಲಿಯೂ ನಮ್ಮ ದೇಶಕ್ಕೂ ಉಳಿದ ರಾಷ್ಟ್ರಗಳಿಗೂ ಅಪಾರವಾದ ಅಂತರವು ಕಂಡುಬರುವದು.

ವಿಜ್ಞಾನದ ಯುಗದಲ್ಲಿ, ಜಗತ್ತು ಪ್ರಗತಿಪಥದಲ್ಲಿ ಹೀಗೆ ವೇಗದಿಂ
ಮುಂದಡಿ ಇಡುತ್ತಿರಲು, **ನಾವು ಜಗತ್ತಿನ ಜೀವನದ ಓಘದಿಂದ ದೂ
ನಿಂತುಕೊಳ್ಳಲಾರೆವು.** 'ನಮ್ಮದು ನಮಗೆ ನಾಕು', 'ನಮ್ಮಷ್ಟ
ನಾವಿರುವೆವು' ಎಂದು ಹಿಂದಿನ ಹಿರಿಯರು ಹೇಳುವ ತತ್ವವು ಇಂದು ನ
ಲಾರದು. ಇಂದಿನ ಜೀವನದಲ್ಲಿ ಈ ಮನೋವೃತ್ತಿಯು ಆತ್ಮತೃಪ್ತಿಯಾಗ
ಆತ್ಮವಂಚನೆಯಾಗುವದು. ನಮ್ಮ ನಾಡು ಹಳ್ಳಿಗಳಲ್ಲಿ ವ್ಯಾಪಿಸಿದೆ. ಜ
ಹಳ್ಳಿಗಳಲ್ಲಿ ನೆಲೆಸಿದೆ. ನಿರಕ್ಷರಿಯಾದ ಜನತೆ ಓಡುವ ಜಾಗತಿಕ ಜೀವ
ದೊಡನೆ ಕೂಡಿಕೊಳ್ಳುವದು ದೂರವಾಗಿರಲಿ, ಬೆಳೆಯುವ ಬಡತನದೊಡ
ಜೀವನದಲ್ಲಿ ಆಸ್ಥೆಯೇ ಇಲ್ಲದಂತಾಗಿದೆ. ಆತ್ಮವಿಶ್ವಾಸವೇ ಅಳಿದುಹೋಗಿ
ಹೀಗಾಗಿ ರಾಷ್ಟ್ರನಿರ್ಮಾಣದ ಯಾವ ಕಾರ್ಯವೂ ಯಶಸ್ವಿಯಾಗದಂತಾಗಿ
ಜನತೆಯ ಹಿತಕ್ಕಾಗಿ ಸರಕಾರವು ಕೈಕೊಳ್ಳುವ ಅನೇಕ ಯೋಜನೆಗಳಿ
ಜನತೆಯ ಸಹಕಾರವೇ ಹೆಚ್ಚಾಗಿ ದೊರೆಯದಂತಾಗುವದು. ಈ ಯೋಜನೆ
ಉದ್ದೇಶ ಉಪಯುಕ್ತತೆಗಳನ್ನು ತಿಳಿದುಕೊಳ್ಳುವ ಬುದ್ಧಿ–ಶಕ್ತಿ, ತಿಳುವ
ಗಳು ನಿರಕ್ಷರಿಯಾದ ಜನತೆಯಲ್ಲಿಲ್ಲ. ಲಿನಲಿಥಗೋ ಸಮಿತಿಯವರು ಹೇ
ದಂತೆ "**ಸರಕಾರದ ಉಪಯುಕ್ತವಾದ ಯೋಜನೆಗಳೆಲ್ಲ ನಿರಕ್ಷರ
ಯೆಂಬ ಬಂಡೆಗಲ್ಲಿನ ಮೇಲೆ ಒಡೆದು ಚೂರುಚೂರಾಗುವವು.**"

ಹಳ್ಳಿಗಳ ಬಡತನವು ದೂರವಾಗಬೇಕು. ಹಳ್ಳಿಗರ ಗಳಿಕೆ ಎನಿ
ದರೂ ಹೆಚ್ಚಾಗಬೇಕು. ಪ್ರಪಂಚದ ದೂರದ ಮೂಲೆಗಳಲ್ಲಿ ಒದಗುವ ಘಟ
ಗಳು ತಮ್ಮ ನಿತ್ಯಜೀವನಕ್ಕೆ ಹೇಗೆ ನಿಕಟವಾಗಿ ಸಂಬಂಧಿಸಿರುವವೆಂಬುದ
ಅವರು ಕಂಡುಕೊಳ್ಳುವಂತಾಗಬೇಕು. ತಮ್ಮ ದೇಶದ ಆಗುಹೋಗುಗಳ
ಅವರು ಅರಿತುಕೊಳ್ಳುವಂತಾಗಬೇಕು. ತಾವೂ ಉಳಿದವರಂತೆ ನಾಗರಿಕ
ದೇಶದ ಆಡಳಿತದಲ್ಲಿ ತಮಗೂ ಒಂದು ಬಗೆಯ ಅಂಗವಿದೆ; ತಮಗೆ ದೊ
ಮತದಾನದ ಹಕ್ಕು ಹೊಣೆಗಾರಿಕೆಯ ಕರ್ತವ್ಯವಾಗಿದೆ; ಇತ್ಯಾದಿ ವಿಚ
ಗಳು ಹಳ್ಳಿಗರಿಗೆ ತಿಳಿಯಬೇಕಾದರೆ, ಅವರು ಜ್ಞಾನಯುತರಾಗಬೇಕು. ಅ
ತಿಳುವಳಿಕೆಯನ್ನು ಹೆಚ್ಚಿಸಲು ಸರಿಯಾದ ಜ್ಞಾನವೇ ಸಾಧನವಾಗಿದೆ. ಹಿಂ

ಕಾಲದಲ್ಲಿ ಪುರಾಣ, ಕೀರ್ತನ, ಪ್ರವಚನಗಳು ಜ್ಞಾನದಾನದ ಸಾಧನಗಳಾಗಿದ್ದವು. ಇಂದು ಆ ಸಾಧನಗಳು ಮಾಯವಾಗಹತ್ತಿವೆ. ಇದ್ದರೂ ಕೂಡ ಇಂದಿನ ಜೀವನಕ್ಕೆ ಸಾಲದಂತಿವೆ. **ಇಂದಿನ ಜ್ಞಾನಸಂಪತ್ತೆಲ್ಲವೂ ಅಚ್ಚಾಗಿ ಹೊರಬೀಳುತ್ತಿದೆ.** ಪುಸ್ತಕಗಳೂ, ಮಾಸಿಕಗಳೂ, ವೃತ್ತಪತ್ರಿಕೆಗಳೂ ಈ ಜ್ಞಾನವನ್ನು ಮನೆಮನೆಗೆ ಒಯ್ದು ಮುಟ್ಟಿಸುತ್ತಿವೆ. ನಿರಕ್ಷರಿಗಳಾದ ಹಳ್ಳಿಗರಿಗೆ ಈ ಜ್ಞಾನಸಾಮಗ್ರಿಯೆಲ್ಲವೂ ಬೀಗಹಾಕಿದ ಪೆಟ್ಟಿಗೆಯಲ್ಲಿಟ್ಟಂತೆ, ಕನ್ನಡಿಯೊಳಗಿನ ಗಂಟಿನಂತೆ ಆಗಿದೆ. **ಕಣ್ಣಿದ್ದೂ ಕುರುಡರಂತೆ** ಅವರ ಸ್ಥಿತಿಯಾಗಿದೆ. ತಮ್ಮ ಸ್ಥಿತಿಗತಿಗಳನ್ನೂ, ಸುತ್ತಲೂ ನಡೆದುದನ್ನೂ ತಿಳಿದುಕೊಳ್ಳಲು ಅವರಿಗೆ ಜ್ಞಾನದ ಕಣ್ಣು ಕೊಡಬೇಕಾಗಿದೆ. ಸಾಕ್ಷರತೆಯ ಪ್ರಸಾರವು ಇದಕ್ಕೆ ಉತ್ತಮವಾದ ಸಾಧನವಾಗಿದೆ.

ಸಮಾಜ ಶಿಕ್ಷಣವು ಹಳ್ಳಿಗಳ ಸಂಘಟನೆಯ, ಗ್ರಾಮೋದ್ಧಾರದ ಒಂದು ಸಾಧನವೆಂದು ಭಾವಿಸಬೇಕು. ಹಳ್ಳಿಗರ ಸುಸ್ಥಿತಿ ಸಂಘಟನೆಗಳ ಕಾರ್ಯವು ಮೊದಲು ಆಗಬೇಕಾದುದು ಅವಶ್ಯವೇನೋ ಸರಿ. ಆಮೇಲೆ ‘ ಶಿಕ್ಷಣ ’. ಇದು ಸರಿಯಾದ ಸ್ವಾಭಾವಿಕವಾದ ಕ್ರಮ. ಗ್ರಾಮೋದ್ಧಾರವು ಬಹುಮುಖವಾಗಿ ಸಾವಧಾನವಾಗಿ ನಡೆಯಬೇಕಾದ ಕಾರ್ಯ. ಸರಕಾರವು ಕೈಕೊಳ್ಳುವ ಗ್ರಾಮೋದ್ಧಾರದ ವಿವಿಧ ಯೋಜನೆಗಳಲ್ಲಿ ಹಳ್ಳಿಯ ಜನತೆ ಆಸ್ಥೆವಹಿಸಬೇಕು; ಸಹಕಾರ ನೀಡಬೇಕು. ಸಮಾಜ ಶಿಕ್ಷಣವು ಈ ಮನೋವೃತ್ತಿಯನ್ನು ಹಳ್ಳಿಯ ಜನತೆಯಲ್ಲಿ ತಂದುಕೊಡಬೇಕು. ಸಾಕ್ಷರತೆಯ ಪ್ರಸಾರವೂ ಇದಕ್ಕೆ ಪೋಷಕವಾಗಿರುವದು.

ಸಾಕ್ಷರತೆಯ ಪ್ರಸಾರಕ್ಕೆ ‘ **ಪ್ರೌಢಶಿಕ್ಷಣ** ’ವೆಂತಲೂ ಹೇಳುವದುಂಟು. ಪರದೇಶಗಳಲ್ಲಿ ಶಾಲೆಕಾಲೇಜುಗಳ ಶಿಕ್ಷಣವು ಮುಗಿದ ಮೇಲೆ ಹೆಚ್ಚಿನ ಶಿಕ್ಷಣವನ್ನು ಹೊಂದುವದಕ್ಕೆ ಪ್ರೌಢಶಿಕ್ಷಣವೆನ್ನುವರು. ವಿದ್ಯಾಭ್ಯಾಸವನ್ನು ಮುಗಿಸಿ ತಮ್ಮ ಜೀವನವನ್ನು ಸಾಗಿಸುತ್ತಿರುವಾಗಲೆ ತಮತಮಗೆ ಆಸ್ಥೆಯಿರುವ ವಿಷಯಗಳ ಹೆಚ್ಚಿನ ಅಭ್ಯಾಸವನ್ನು ಇಂಥ ವರ್ಗಗಳಲ್ಲಿ ಅಲ್ಲಿಯ ಜನರು ಮಾಡುವರು. ಇಲ್ಲವೇ ತಾವು ಕೈಕೊಂಡಿರುವ ಉದ್ಯೋಗಕ್ಕೆ

ಸಂಬಂಧಿಸಿದ ಹೆಚ್ಚಿನ ತಾಂತ್ರಿಕ ಇಲ್ಲವೇ ಶಾಸ್ತ್ರೀಯ ಜ್ಞಾನವನ್ನಾದರೂ ಮಾಡಿಕೊಳ್ಳುವರು. ನಮ್ಮಲ್ಲಿ ಪ್ರೌಢಶಿಕ್ಷಣವೆಂದರೆ, 'ಪ್ರೌಢರ ಶಿಕ್ಷಣ;' ಮೈಸೂರಿನವರು ಹೇಳುವಂತೆ **ವಯಸ್ಕರಿಗಾಗಿ ಶಿಕ್ಷಣವೆಂತಲೇ** ಭಾವಿಸಬೇಕು. ಇಂದು ಈ ಶಿಕ್ಷಣಕ್ಕೆ ಸಮಾಜ ಶಿಕ್ಷಣವೆಂಬ ಅರ್ಥಪೂರ್ಣವಾದ ಹೆಸರು ಬಂದಿದೆ. 'ಸಾಕ್ಷರತೆಯ ಪ್ರಸಾರ'ವೆಂಬುದು ತೀರ ಮರ್ಯಾದಿತವಾದುದು. 'ಪ್ರೌಢಶಿಕ್ಷಣ'ವೆಂಬುದು ವಸ್ತುಸ್ಥಿತಿಯ ವಿಪರ್ಯಾಸವಾಗುವದು. **ಸ್ವಂತತ್ರ ಭಾರತದಲ್ಲಿ ಸುಜ್ಞಾನಿಗಳಾಗಿ, ಸ್ವಾಭಿಮಾನಿಗಳಾಗಿ ಎಲ್ಲರೊಡನೆ ಸಮತೆಯಿಂದ ಕೂಡಿಕೊಂಡು ಬಾಳುವ ನಾಗರಿಕರನ್ನು ನಿರ್ಮಾಣಮಾಡುವದೇ ಸಮಾಜ ಶಿಕ್ಷಣದ ಗುರಿಯಾಗಿದೆ.**

ಸಮಾಜ ಶಿಕ್ಷಣದ ಉದ್ದೇಶವು ಎಷ್ಟೇ ವ್ಯಾಪಕವಾಗಿರಲಿ, ಉದಾತ್ತವಾಗಿರಲಿ, ಅದರಲ್ಲಿ ಸಾಕ್ಷರತೆಯ ಪ್ರಸಾರವನ್ನು ಯಾರೂ ಕಡೆಗಣಿಸುವಂತಿಲ್ಲ. ಜನತೆಯ ಇಂದಿನ ಪರಿಸ್ಥಿತಿಯಲ್ಲಿ, ಪ್ರಾರಂಭಕ್ಕೆ ಸಾಕ್ಷರತೆಯ ಪ್ರಸಾರವನ್ನೇ ಮುಖ್ಯೋದ್ದೇಶವನ್ನಾಗಿ, ಮುಖ್ಯಕಾರ್ಯಕ್ರಮವನ್ನಾಗಿ ಇಟ್ಟುಕೊಂಡರೂ ತಪ್ಪಾಗದು. ಸಾಕ್ಷರತೆಯನ್ನು ತಂದುಕೊಡುವದೆಂದರೆ, ಚಿಕ್ಕಂದಿನಲ್ಲಿ ಓದುಬರೆಹ ಕಲಿಯದವರಿಗೆ, ಇಲ್ಲವೇ ಕಲಿತು ಪೂರ್ಣವಾಗಿ ಮರೆತುಬಿಟ್ಟವರಿಗೆ ಮತ್ತೆ ಓದಲೂ ಬರೆಯಲೂ ಬರುವಂತೆ ಮಾಡುವದಾಗಿದೆ. **ಸಾಕ್ಷರತೆಯಲ್ಲಿ ಬರೆಹಕ್ಕಿಂತಲೂ ಓದಿಗೆ ಹೆಚ್ಚು ಪ್ರಾಶಸ್ತ್ಯವಿದೆ.** ತನ್ನ ಬಳಗದವರಿಗೆ, ಗೆಳೆಯರಿಗೆ, ಸಾಮಾನ್ಯಸಂಗತಿಗಳ ಬಗ್ಗೆ ಪತ್ರವನ್ನು ಬರೆಯಲೂ, ಹಾಗೂ ಬಂದ ಪತ್ರಗಳನ್ನು ಓದಲೂ ಶಕ್ತರಾದ ಜನರಿಗೆ 'ಸಾಕ್ಷರ'ರೆಂದು ಸರಕಾರದ ಜನಗಣನೆಯಲ್ಲಿ ಗ್ರಹಿಸುವದುಂಟು. ಸುಲಭವಾದ ವಿಷಯದ ಅಚ್ಚಾದ ಪುಸ್ತಕವನ್ನೂ ಸುವಾಚ್ಯವಾಗಿ ಬರೆದ ಲೇಖಗಳನ್ನೂ ಓದಲೂ ಬರಬೇಕು. ನೂರರವರೆಗೆ ಎಣಿಸಲು ಬರಬೇಕು. ತಪ್ಪುತಡೆಯಾದರೂ ತಕ್ಕಮಟ್ಟಿಗೆ ಬರೆಯಲು ಬರಬೇಕು. ಇವು ಇಂದಿನ ಸಾಕ್ಷರತೆಯ ಪ್ರಮಾಣವಾಗಿದೆ.

ಸಮಾಜ ಶಿಕ್ಷಣದ ಅಂಗವಾಗಿ ಸಾಕ್ಷರತೆಯ ವರ್ಗಗಳನ್ನು ನಡೆಸುವ ಕಾರ್ಯಕರ್ತರು ಕೆಲವೊಂದು ಸಂಗತಿಗಳನ್ನು ತಿಳಿದವರಾಗಿರಬೇಕು. ಅವರು

**ಪ್ರೌಢರ ಮನೋಭೂಮಿಕೆಯನ್ನು ಲಕ್ಷದಲ್ಲಿಡಬೇಕು.** ಶಾಲೆಯಲ್ಲಿ ಚಿಕ್ಕ ಮಕ್ಕಳಿಗೆ ಕಲಿಸುವದಕ್ಕೂ ವಯಸ್ಕರಿಗೆ ಓದುಬರೆಹ ಕಲಿಸುವದಕ್ಕೂ ವ್ಯತ್ಯಾಸವಿದೆ. ಚಿಕ್ಕಮಕ್ಕಳಿಗೆ ಕಲಿಯುವ ವಿಷಯವೂ ಹೊಸದು, ಲಿಪಿಯೂ ಅಪರಿಚಿತವಾದುದು. ಆದರೆ, ವಯಸ್ಕರಿಗೆ ಲಿಪಿಯೊಂದೇ ಅಪರಿಚಿತವಾದುದು. ಅಂತೆಯೇ ಅಲ್ಪಾವಧಿಯಲ್ಲಿ ಅವರಿಗೆ ಸಾಕ್ಷರತೆಯನ್ನು ತಂದುಕೊಡಲು ಸಾಧ್ಯವಿದೆ. ಮೇಲಾಗಿ ವಯಸ್ಕರಿಗೆ ಚಿಕ್ಕಮಕ್ಕಳಂತೆ ಕಲಿಯುವದೊಂದೇ ಉದ್ಯೋಗವಾಗದು. ತಮ್ಮ ಬಿಡುವಿನ ವೇಳೆಯಲ್ಲಿ, ಅನುಕೂಲವಾದ ಮನೋವೃತ್ತಿಯಲ್ಲಿ ಮಾತ್ರ ಅವರು ಕಲಿಯಬಹುದು. ಸುಗ್ಗಿ ತೀರಿದಮೇಲೆ, ಮತ್ತೆ ಬಿತ್ತುವ ಸಂಧಿಯವರೆಗೆ ಮಾತ್ರ ಒಕ್ಕಲಿಗರಿಗೆ ಸಾಕ್ಷರತೆಗಾಗಿ ಸಮಯ ದೊರೆಯುವದು. ವರುಷದ ಯಾವ ದಿನದಲ್ಲಿಯೇ ಆಗಲಿ ಅವರಿಗೆ ಮಡಿತ ತಪ್ಪಿದ್ದಲ್ಲ. ಸಾಲದ ಶೂಲ, ತೆರಿಗೆಯ ತಗಾದೆ ಹೀಗೆ ಒಂದಲ್ಲ ಎರಡಲ್ಲ, ಹಲವಾರು ಚಿಂತೆಗಳು ಹುಳಹತ್ತಿದಹಾಗೆ ಅವರ ಮನಸ್ಸನ್ನು ಕೊರೆಯುತ್ತಿರುವವು. **ದಣಿದ ದೇಹ, ನೊಂದ ಮನಸ್ಸು—ಇದು ಸಾಮಾನ್ಯವಾಗಿ ಪ್ರೌಢರ ಮನೋಭೂಮಿಕೆ.** ಹೀಗಿರಲು, ಚಿಕ್ಕಮಕ್ಕಳಿಗೆ ಪಾಠ ಹೇಳಿ ಕೊಡುವಂತೆ ಪಾಟಿ-ಪೇನ್ಸಿಲುಗಳನ್ನು ಕೊಟ್ಟು ವಯಸ್ಕರನ್ನು ಅಕ್ಷರ ತೀಡಲು ಹಚ್ಚುವದು ತೀರ ತಪ್ಪೆನಿಸುವದು, ನಿರರ್ಥಕವಾದ ಶ್ರಮವಾಗುವದು. ವಯಸ್ಕರಿಗೆ ಕಲಿಸುವ ರೀತಿ ವಿಧಾನಗಳು ಅವರ ಮನೋಭೂಮಿಕೆಗೆ ಅನುಗುಣವಾಗಿರಬೇಕು. ಕಲಿಯುವಾಗ್ಗೆ 'ಇಂದು ಇಂತಿಷ್ಟು—ನಾಳೆ ಮತ್ತಿಷ್ಟು' ಹೀಗೆನಿಸುವ **ಪ್ರಗತಿಯ ಪ್ರೇರಕಶಕ್ತಿಯು** ಅವರಿಗೆ ಅಗತ್ಯವಾದುದು. ಎರಡನೆಯದಾಗಿ, ಕಲಿಸುವ ವಿಧಾನವು ನೀರಸವಾಗಿರಕೂಡದು. ಅವರ ನೊಂದ ಮನಸ್ಸಿಗೆ ಸಂತೋಷವನ್ನು ತಂದು ಕೊಡುವಂತೆ ಅದು ಆಕರ್ಷಕ—ಮನರಂಜಕವಾಗಿರಬೇಕು. ' ಮೂರನೆಯದಾಗಿ, **ಓದುಬರೆಹದ ವಿಷಯಗಳು ಅವರ ಜೀವನಕ್ಕೆ ಹೊಂದಿಕೊಂಡವುಗಳಾಗಿರಬೇಕು.** ಅವುಗಳ ಅವಶ್ಯಕತೆ ಹಾಗೂ ಉಪಯುಕ್ತತೆಗಳು ಅವರಿಗೆ ತಾನಾಗಿಯೇ ಅನಿಸುವಂತಿರಬೇಕು.

ಹೀಗೆ ಮಾಡದಿದ್ದರೆ ಸಮಾಜಶಿಕ್ಷಣದ ಕಾರ್ಯದಲ್ಲಿ ಎರಡು ಹೆಚ್ಚಿನ ಆತಂಕಗಳನ್ನು ಕಾರ್ಯಕರ್ತರು ಎದುರಿಸಬೇಕಾಗುವದು. :–(೧) '**ಕಲಿತು ನಾನೇನು ಮಾಡಬೇಕಾಗಿದೆ?**' ಎನ್ನುವ ಹಳ್ಳಿಗನ ಉದಾಸೀನತೆಯು ಮೊದಲನೆಯದು. ಕಲಿಯುವದೆಂದರೆ ಕೇವಲ ನೌಕರಿಗಾಗಿ ಎನ್ನುವ ನಂಬಿಕೆ ನಮ್ಮ ಜನತೆಯಲ್ಲಿ ದೃಢವಾಗಿ ನೆಲಸಿದೆ. **ಸರಿಯಾದ ಬಾಳುವೆಗೆ ಬೇಕಾಗುವ ಬೆಳಕು–ತಿಳುವಳಿಕೆ ವಿದ್ಯೆಯಿಂದ ಬರುವದೆಂಬುದನ್ನು** ಅಜ್ಞ ಜನತೆಗೆ ಇಂದು ಬಿಂಬಿಸಿ ಕೊಡಬೇಕಾಗಿದೆ. ಸಮಾಜ ಶಿಕ್ಷಣದ ಕಾರ್ಯ ಕರ್ತನು ಇದನ್ನು ಎಲ್ಲ ರೀತಿಗಳಿಂದಲೂ ಮೊದಲು ನೆರವೇರಿಸಬೇಕು. ಹಳ್ಳಿಗರ ಈ ಉದಾಸೀನತೆಯನ್ನು ತೆಗೆದು ಹಾಕಲು ಎಲ್ಲ ಬಗೆಯಿಂದಲೂ ಯತ್ನಿಸಬೇಕು. ನಿರಕ್ಷರತೆಯಿಂದಾಗುವ ಅನರ್ಥಗಳನ್ನು ಅವರ ನಿದರ್ಶನಕ್ಕೆ ತಂದುಕೊಡಬೇಕು. ನಿತ್ಯಜೀವನದಲ್ಲಿ ನಿರಕ್ಷರತೆ ಅಜ್ಞ ಜನರ ಅನೇಕ ಮುಖವಾದ ಶೋಷಣೆಗೆ ಹೇಗೆ ಕಾರಣವಾಗಿದೆಯೆಂಬುದನ್ನೂ ಸಾಕ್ಷರತೆಯಿಂದಾಗುವ ಅನೇಕ ಲಾಭಗಳನ್ನೂ ಅವರು ಮನಗಾಣುವಂತೆ ಮಾಡಬೇಕು. (೨) '**ನಮ್ಮ ಕಲಿಯುವ ವಯಸ್ಸು ಮೀರಿ ಹೋಗಿದೆ. ನಮಗಿನ್ನು ಓದು ಬರೆಹ ಬಾರದು,**' ಎನ್ನುವ ವಯಸ್ಕರ ಭೀತಿಯು ಎರಡನೆಯ ಆತಂಕವಾಗಿದೆ. ವಯಸ್ಕರ ಈ ಭೀತಿಯು ನಿರಾಧಾರವಾಗಿರುವದೆಂಬುದನ್ನು ಕಾರ್ಯಕರ್ತರಾದ ಶಿಕ್ಷಕರು ಸಾಧಾರವಾಗಿ ತೋರಿಸಬೇಕು. ಬೇರೆ ಬೇರೆ ಕಡೆಗಳಲ್ಲಿ ವಯಸ್ಕರು ಹೇಗೆ ಕಲಿಯುತ್ತಿರುವರೆಂಬುದನ್ನೂ, ಕಲಿತು ಲಾಭ ಪಡೆಯುತ್ತಿರುವರೆಂಬುದನ್ನೂ ಅವರಿಗೆ ತಿಳಿಸಿ ಹೇಳಬೇಕು. ಸಾಕ್ಷರತೆಯ ಹೊಸಪದ್ಧತಿಯಿಂದ ಹತ್ತೆಂಟು ಅಕ್ಷರಗಳನ್ನು ಒಂದು ತಾಸಿನಲ್ಲಿ ಕಲಿಸಿ ತೋರಿಸಿ ಅವರಲ್ಲಿ ಆತ್ಮವಿಶ್ವಾಸವನ್ನು ಹುಟ್ಟಿಸಬೇಕು.

ಸಮಾಜ ಶಿಕ್ಷಣದಲ್ಲಿ ಸಾಕ್ಷರತೆಯ ಪ್ರಸಾರವು ಒಂದು ಪ್ರಧಾನವಾದ ಕಾರ್ಯವೆಂಬುದು ನಿಜ. ಆದರೆ **ಕೇವಲ ಸಾಕ್ಷರತೆಯೇ ಸಮಾಜ ಶಿಕ್ಷಣದ ಗುರಿಯಾಗಿಲ್ಲ.** ಹಿಂದೆ ಹೇಳಿದಂತೆ ಸಮಾಜ ಶಿಕ್ಷಣದ ಗುರಿಯು ಸಾಕ್ಷರತೆಗಿಂತಲೂ ಹೆಚ್ಚು ವ್ಯಾಪಕವಾಗಿದೆ, -ಉದಾತ್ತವಾಗಿದೆ. ಅನೇಕ

ರಾಜಕೀಯ ಆಘಾತಗಳಿಂದ, ಆರ್ಥಿಕ ಆತಂಕಗಳಿಂದ ಬಹುಜನ ಸಮಾಜವು ಇಂದು ಬಹಳೇ ಹಿಂದುಳಿದಿದೆ, ಸತ್ವಹೀನವಾಗಿದೆ. ಬಹುಜನ ಸಮಾಜವು ಸತ್ವ ಹೀನವಾದರೆ ಅಪಾರವಾದ ಬಲಿದಾನದಿಂದ ದೊರಕಿಸಿದ ಸ್ವಾತಂತ್ರ್ಯವು ಅವರ ಪಾಲಿಗೆ ನಿರರ್ಥಕವಾಗುವದು. ಸ್ವಾತಂತ್ರ್ಯದ ಸವಿಯಾದ ಫಲಗಳು ಎಲ್ಲರಿಗೂ ಸಮಾನವಾಗಿ ದೊರೆಯದೆ ಸ್ವಾರ್ಥಸಾಧುಗಳಾದ ಕೆಲವರಿಗೆ ಮಾತ್ರ ಮೀಸಲಾಗಿ ಉಳಿಯಬಹುದು. ಬಡತನದ ನಿವಾರಣೆಯೂ ಇಂದೇ ಆಗುವ ಕಾರ್ಯವಲ್ಲ. ಅದಕ್ಕಾಗಿ ಜನತೆಯ ಸರಕಾರವು ನಾವಧಾನವಾಗಿ ಅನೇಕ ಯೋಜನೆಗಳನ್ನು ಕೈಕೊಳ್ಳುತ್ತಿದೆ. ಆದರೆ ಈ ವಿವಿಧ ಯೋಜನೆಗಳ ಪ್ರಯೋಜನವನ್ನು ಪೂರ್ಣವಾಗಿ ತಿಳಿದುಕೊಂಡು ಅವುಗಳಲ್ಲಿ ಸಕ್ರಿಯವಾಗಿ ಸಹಕರಿಸುವ ತಿಳುವಳಿಕೆ ಜನತೆಯಲ್ಲಿ ಬರಬೇಕು. ದೇಶದ ಹಿತಕ್ಕಾಗಿ ತಾತ್ಕಾಲಿಕವಾದ ತೊಂದರೆಗಳನ್ನು ಸಹಿಸಲು, ತ್ಯಾಗವನ್ನು ಮಾಡಲು ಅವರು ಸಿದ್ಧರಾಗಬೇಕು. ಬಹುಸಂಖ್ಯಾಕವಾದ ಜನತೆಗೆ ಇಂದು ತಮ್ಮ ದೇಶದ ಹೆಸರು ಕೂಡ ಗೊತ್ತಿಲ್ಲ, ಪ್ರಪಂಚದ ಪರಿಚಯವಂತೂ ದೂರವಾಯಿತು. ಇಂಥವರಿಗೆ 'ದೇಶ'ಕ್ಕಾಗಿ ದುಡಿಯಬೇಕೆನ್ನುವ ಸ್ಫೂರ್ತಿಯು ಹೇಗೆ ಬರಬೇಕು? **ಸಮಾಜ ಶಿಕ್ಷಣವು ಅಜ್ಞರಾದ ವಯಸ್ಕರಿಗೆ ದೇಶದ ಸ್ಥಿತಿಗತಿಗಳನ್ನು ತಿಳಿಸಿಹೇಳುವದು.** ದೇಶದ ವಿವಿಧ ಸಮಸ್ಯೆಗಳ ಹಾಗೂ ಸರಕಾರವು ಅವುಗಳ ಪರಿಹಾರಕ್ಕಾಗಿ ಆಗಾಗ್ಗೆ ಕೈಕೊಳ್ಳುವ ಯೋಜನೆಗಳ ಪರಿಚಯವನ್ನು ಮಾಡಿಕೊಡುವದು. ಇದೇ ಉದ್ದೇಶಕ್ಕಾಗಿ ಬಾನುಲಿ ಕೇಂದ್ರಗಳು ಏರ್ಪಡಿಸುವ ಕಾರ್ಯಕ್ರಮವನ್ನು ಶಕ್ಯವಿರುವಲ್ಲೆಲ್ಲ ಉಪಯೋಗಿಸಿಕೊಳ್ಳಬಹುದು. ಅಜ್ಞಜನತೆಯಲ್ಲಿ ಅನರ್ಥಕಾರಿಗಳಾದ ಅನೇಕ ಮೂಢನಂಬಿಕೆಗಳು ಇನ್ನೂ ನೆಲಸಿವೆ. ಇವುಗಳನ್ನು ಜ್ಞಾನಪ್ರಸಾರದಿಂದ ಕ್ರಮೇಣ ಕಡಿಮೆ ಮಾಡುವದೂ ಸಮಾಜ ಶಿಕ್ಷಣದ ಕಾರ್ಯವಾಗಿದೆ. ಇದೇ ಮೇರೆಗೆ ಸಿಡುಗುಗಳ ಪ್ರತಿಬಂಧಕೋಪಾಯಗಳನ್ನೂ, ಸಾಮಾನ್ಯಬೇನೆಗಳ ಸುಲಭೋಪಾಯಗಳನ್ನೂ, ಪ್ರಥಮೋಪಾಯಗಳನ್ನೂ ಅವರಿಗೆ ಗೊತ್ತುಮಾಡಿಕೊಡಬಹುದು. ಸ್ವಚ್ಛತೆ ಶುಚಿತ್ವಗಳ ಅವಶ್ಯಕತೆಯನ್ನು ಅವರ ಮನಸ್ಸಿನ ಮೇಲೆ ಬಿಂಬಿಸ

ಬಹುದು. ಇಂದು ಜನತೆಯ ರಾಜ್ಯವಿದೆ. **ವಯಸ್ಕನಾದ ಪ್ರತಿಯೊಬ್ಬ ಸ್ತ್ರೀ–ಪುರುಷರಿಗೆ ಮತದಾನದ ಹಕ್ಕಿದೆ.** ಈ ಮತದಾನದ ಅಧಿಕಾರವಿದ್ದ, ಅನೇಕ ಮುಖವಾದ ಮಹತಿಯನ್ನರಿಯದ ಬಹುಜನ ಸಮಾಜವು ಎಂಥ ಪ್ರತಿನಿಧಿಗಳನ್ನಾರಿಸಿಕೊಡಬಹುದೆಂಬುದನ್ನು ಬೇರೆ ಹೇಳಬೇಕಿಲ್ಲ. **ಪ್ರತಿನಿಧಿತ್ವವೇ ದೂಷಿತವಾದರೆ, ಪ್ರಜಾರಾಜ್ಯವು ಹದಗೆಡುವದು.** ಇದನ್ನು ತಪ್ಪಿಸುವದು ಸಮಾಜ ಶಿಕ್ಷಣದ ಮಹತ್ಕಾರ್ಯಗಳಲ್ಲಿ ಒಂದಾಗಿದೆ. ಒಟ್ಟಿನಲ್ಲಿ, ಸಾಕ್ಷರತೆಯನ್ನೂ, ಉಪಯುಕ್ತವಾದ ಉಳಿದ ಸಾಧನೆಗಳನ್ನೂ ವಿನಿಯೋಗಿಸಿಕೊಂಡು ಜನತೆಯ ತಿಳುವಳಿಕೆಯನ್ನು ಹೆಚ್ಚಿಸುವದು, ಸ್ವತಂತ್ರವಾಗಿ ವಿಚಾರಮಾಡುವ ಶಕ್ತಿಯನ್ನುಂಟುಮಾಡುವದು, ಹಿತಾಹಿತಗಳನ್ನು ತಿಳಿದುಕೊಳ್ಳುವ ವಿವೇಕವನ್ನು ಜಾಗೃತಗೊಳಿಸುವದು, ಉಪಯುಕ್ತವಾದ ವಿವಿಧ ವಿಷಯಗಳ ಜ್ಞಾನವನ್ನು ಮಾಡಿಕೊಡುವದು, — ಸಮಾಜಶಿಕ್ಷಣದ ವಿಶಾಲವಾದ ಉದ್ದೇಶ ಹಾಗೂ ಕಾರ್ಯಕ್ರಮದಲ್ಲಿ ಇವೆಲ್ಲವುಗಳೂ ಬರುವವು.

ಸಮಾಜ ಶಿಕ್ಷಣದಲ್ಲಿ ನಿರಕ್ಷರತೆಯ ನಿವಾರಣೆಯು ಮೊದಲಿನ ಹಾಗೂ ಮಹತ್ವದ ಕಾರ್ಯವಾಗಿದೆ. ಆದರೆ **ವಯಸ್ಕರಿಗೆ ಕಲಿಸುವ 'ಪದ್ಧತಿ'ಯು ಮಾನಸಶಾಸ್ತ್ರದ ಮೂಲತತ್ವಗಳಿಗೆ ವಿರೋಧಿಯಾಗಿರಬಾರದು.** ಪ್ರಗತಿಯು ಮಂದವಾಗಿರಕೂಡದು. ವಿಧಾನವು ನೀರಸವಾಗಿರಬಾರದು. ಈ ಕಾರ್ಯಕ್ಕಾಗಿ ಇಂದು ಪ್ರಚಾರದಲ್ಲಿರುವ ಕೆಲವು ಪದ್ಧತಿಗಳನ್ನು ತಿಳಿದುಕೊಳ್ಳಬಹುದು. ಚಿಕ್ಕಮಕ್ಕಳಿಗೆ ಅಕ್ಷರವನ್ನು ಕಲಿಸುವಾಗಲೂ ಇವೇ ಪದ್ಧತಿಗಳನ್ನು ಉಪಯೋಗಿಸುವದುಂಟು:— (೧) **ಅಕ್ಷರ ಪದ್ಧತಿ:**— ಸಾಂಪ್ರದಾಯಿಕ ಶಿಕ್ಷಣದಲ್ಲಿ ಇದು 'ಪುರಾತನ'ವಾದುದು. ಅಕ್ಷರಗಳನ್ನು ವರ್ಣಮಾಲೆಯ 'ಕ್ರಮ' ದಂತೆಯೇ 'ಹಾಕಿಕೊಟ್ಟು ತೀಡಿಸಿ' ಕಲಿಸುವದು ಇದರಲ್ಲಿ ಕಂಡುಬರುವದು. ಅರ್ಥರಹಿತವಾದ ಅಕ್ಷರಗಳಲ್ಲಿ ಮಕ್ಕಳಿಗೆ ಆಸ್ಥೆ ಹೇಗೆ ಹುಟ್ಟಬೇಕು? ವಯಸ್ಕರ ಮನೋಭೂಮಿಕೆಯನ್ನರಿತುಕೊಂಡರೆ ನೀರಸವಾದ ಈ ವಿಧಾನವು ಅವರಿಗೆ ಎಂದೂ ರುಚಿಸದು. ಇತ್ತೀಚೆಗೆ **ನಿರ್ಜೀವವಾದ ಈ ಅಕ್ಷರಗಳಿಗೆ ಚಿತ್ರಗಳ ಜೋಡು ಕೊಡಲಾಗುತ್ತಿದೆ.**

ಅಕ್ಷರಗಳನ್ನು ನೆನಪಿನಲ್ಲಿಡಲು ವಯಸ್ಕರಿಗೆ ಇದರಿಂದ ಅಲ್ಪ ಸಹಾಯವಾಗ ಬಹುದು. ಆದರೆ ಕೇವಲ ಅಕ್ಷರಗಳಿಗಾಗಿ ಹಿಡಿದು ತಂದ ಚಿತ್ರಗಳಲ್ಲಿ ತುಂಬಾ ಕೃತ್ರಿಮತೆಯು ತೋರಿಬರುವದು.

(೨) **ಆಕಾರ ಪದ್ಧತಿ**:— ಆಕಾರದ ಸಾದೃಶ್ಯದ ಮೇರೆಗೆ ಅಕ್ಷರಗಳ ಗುಂಪುಗಳನ್ನು ಕಟ್ಟುವದು. ಉದಾ :— ವರ್ತುಲ ಹಾಗೂ ರೇಷೆಗಳಿಂದ ' ರ,ಠ, ಈ,ಕ ' ಗಳನ್ನು ರಚಿಸುವದು. ಈ ಸಾದೃಶ್ಯದ ಸ್ಥಿರೀಕರಣಕ್ಕಾಗಿ ಚಿಕ್ಕಮಕ್ಕ ಳಿಗೆ ' ಅಪ್ಪನ ಬಳೆ ' ಹಾಗೂ ' ಅಜ್ಜನ ಬಡಿಗೆ ' ಗಳನ್ನು ಎರವಾಗಿ ತೆಗೆದು ಕೊಂಡರೆ, ವಯಸ್ಕರಿಗೆ ಹೇಳುವಾಗ್ಗೆ ಬಂಡಿಯ ಗಾಲಿ ಹಾಗೂ ನೊಗಗಳನ್ನು ಉದಾಹರಿಸಬಹುದು.

(೩) **ಅವಯುವ ಪದ್ಧತಿ**: — ' ನೋಡಿ ನುಡಿ 'ಯೆನ್ನುವ ತತ್ವವೇ ಈ ಪದ್ಧತಿಗೆ ಆಧಾರವಾಗಿದೆ. ಕರಿಹಲಿಗೆಯಮೇಲೆ ಒಂದು ಶಬ್ದವನ್ನು ಒರೆಯು ವದು; ಅದನ್ನು ತೋರಿಸಿ ನುಡಿದಂತೆ ನುಡಿಯಲು ಹೇಳುವದು; **ಸ್ವರ ಹಾಗೂ ಸಂಕೇತಗಳ ಈ ಮೈತ್ರಿಯನ್ನು** ದೃಢಗೊಳಿಸಿದ ಮೇಲೆ, ಶಬ್ದದ ಅವಯವಗಳಾದ ಅಕ್ಷರಗಳನ್ನು ಪ್ರತ್ಯೇಕಿಸಿ ಅವುಗಳ ಪರಿಚಯವನ್ನು ಮಾಡಿ ಕೊಡುವದು; ಆ ಅಕ್ಷರಗಳನ್ನೇ ಹಿಂದು ಮುಂದಾಗಿ ಜೋಡಿಸಿ ಬೇರೆ ಬೇರೆ ಶಬ್ದಗಳನ್ನು ರಚಿಸುವದು. ಉದಾ: — ' ಕಸಬರಿಗೆ ' ಯಲ್ಲಿಯ ಅಕ್ಷರಗಳನ್ನು ವಿವಿಧವಾಗಿ ಜೋಡಿಸಿ ಅನೇಕ ಶಬ್ದಗಳನ್ನು ರಚಿಸುವದು. ಕಸ, ರಸ, ಕರ, ಸರ, ಬರ, ಕರಿ, ಸರಿ, ಗರಿ, ಬರಿ ... ಮುಂತಾದವುಗಳು. ಇದಕ್ಕಾಗಿ ಆರಿಸಿದ ಮೂಲಶಬ್ದಗಳು ನಿರಕ್ಷರಿಗಳಾದ ವಯಸ್ಕರಿಗೆ ಪೂರ್ವ ಪರಿಚಿತವಾಗಿರಬೇಕು. ' ವಾಕ್ಯ ' ಹಾಗೂ ' ಪ್ರಾಸಂಗಿಕ ' ಪದ್ಧತಿಗಳಲ್ಲಿಯೂ ಇದೇ ಕ್ರಮವನ್ನು ಅನುಸರಿಸುವರು.

(೪) **' ಸಮವಾಯ ' ಇಲ್ಲವೇ ' ಕಥಾಪದ್ಧತಿ '** :—ಸ್ವರ—ಸಂಕೇತ, ಹಾಗೂ ಅರ್ಥ—ಆಕಾರಗಳೆಲ್ಲವೂ ಒಂದು ಕಥೆಯಲ್ಲಿ ಸಮನ್ವಿತವಾಗಿ ಬರು ವದರಿಂದ ಇದಕ್ಕೆ **' ಸಮವಾಯ '** ಇಲ್ಲವೇ **ಕಥಾಪದ್ಧತಿ** ಯೆಂದು ಕರೆ ಯುವರು. **ಗುಡಿ, ನಳ, ಇಲಿ, ಗಂಟೆ** ಮೊದಲಾದ ಶಬ್ದಗಳಲ್ಲಿ ಮೊದಲಿನ

ಅಕ್ಷರಗಳಾದ ಗು, ಸ, ಇ, ಗ, ಮುಂತಾದವುಗಳಲ್ಲಿ ಮೇಲಿನ ನಾಲ್ಕು ಸಂಗತಿಗಳೂ ಸಮನ್ವಿತವಾಗಿ ಬರುವವು. ಇವೇ ಶಬ್ದಗಳು ಬರುವಂತೆ ಕಟ್ಟಿದ ಕಥೆಯು ಅವುಗಳಿಗೆ ಹೊಂದಿಕೆಯನ್ನು ತಂದುಕೊಡುವದು. ಉಪಯೋಗಿಸುವ ಚಿತ್ರಗಳು ವಯಸ್ಕರ ನೆನಪಿಗೆ ಬಹಳೇ ಸಹಾಯಕವಾಗುವವು. ವಯಸ್ಕರ ಮನೋಭೂಮಿಕೆಗೂ ಇದು ತುಂಬಾ ಅನುಕೂಲವಾದುದು. ಅವರು **ಶೀಘ್ರವಾಗಿ ತಿಳಿದುಕೊಳ್ಳುವರು ಹಾಗೂ ಶೀಘ್ರವಾಗಿ ಮರೆತುಬಿಡುವರು.** ಮೇಲಾಗಿ ಇದು ಸಂಭಾಷಣೆಯ ರೀತಿಯನ್ನೇ ಅನುಸರಿಸುವದರಿಂದ, ವಿವಿಧ ವಿಷಯಗಳನ್ನು ಸಹಜವಾಗಿ ತಿಳಿಸಿ ಹೇಳಲು ಸಂದರ್ಭಗಳು ಒದಗುವವು. ಅಕ್ಷರಗಳನ್ನು ಕಥೆಯಲ್ಲಿ ಕಟ್ಟುವದರಿಂದ ಅವುಗಳಿಗೆ ಸ್ವಾರಸ್ಯ ಸಜೀವತೆಗಳೆರಡೂ ಉಂಟಾಗುವವು. ಇದರಿಂದ ವಯಸ್ಕರು ತೀವ್ರ ಮರೆತು ಬಿಡುವದನ್ನು ತಪ್ಪಿಸಬಹುದು. ಕಥೆಯೊಡನೆ ಅಕ್ಷರಗಳು ಹುಟ್ಟುವದರಿಂದ ಚಂಚಲವಾದ ಅವರ ಚಿತ್ತಕ್ಕೆ ಏಕಾಗ್ರತೆಯನ್ನು ತಂದುಕೊಡಲು ಒಳ್ಳೇ ಅನುಕೂಲವಾಗುವದು. **ಈ ಪದ್ಧತಿಯು ಪ್ರಯೋಗದಿಂದ ಪರಿಣಾಮಕಾರಿಯಾಗಿದೆ, ಯಶಸ್ವಿಯಾಗಿದೆ**ಯೆಂದು ಕಂಡು ಬಂದಿರುವದು. ಈ ಪದ್ಧತಿಯ ಮೇರೆಗೆ ಅಕ್ಷರಗಳನ್ನು ಕಲಿಸುವ 'ಪಟ'ಗಳು ಎಲ್ಲ ಭಾಷೆಗಳಲ್ಲಿಯೂ ಇಂದು ದೊರೆಯುವವು.

ಬುದ್ಧಿ ಬಲಿತ ಪ್ರೌಢರಿಗೆ ಈ ಪದ್ಧತಿಗಳ ಆಡಂಬರವೇಕೆ? ನೇರವಾಗಿ ಅವರಿಗೆ ಅಕ್ಷರಗಳನ್ನು ಕಲಿಸಬಹುದಲ್ಲವೇ? ಎಂದು ಕೇಳುವವರೂ ಇರುವರು. ಅವರಿಗೆ ಆಸ್ಥೆ ಇರುವ ತಮ್ಮ ಹೆಸರನ್ನೂ, ತಮ್ಮವರ ಹೆಸರನ್ನೂ ಇತ್ಯಾದಿಯಾಗಿ ಬರೆಸಲು ಪ್ರಾರಂಭಿಸಬಹುದು ಎಂತಲೂ ಇವರು ಹೇಳುವರು. ಈ ಮಾತಿನಲ್ಲಿರುವ ತಥ್ಯಾಂಶವನ್ನು ಯಾರೂ ಅಲ್ಲಗಳೆಯಲಾರರು. ಆದರೆ ಪದ್ಧತಿಯೆಂದರೆ ಕಾಯದೆಯ ಕಟ್ಟುನಿಟ್ಟುಗಳಲ್ಲ. **ಅಲ್ಪಶ್ರಮದಿಂದ ಹೆಚ್ಚಿನ ಫಲವನ್ನು ಪಡೆಯಲು ಸಹಾಯಮಾಡುವದೇ ಪದ್ಧತಿಯಾಗುವದು.** ಈ ದೃಷ್ಟಿಯಿಂದ ವಿಚಾರಿಸಿದರೆ, ವಯಸ್ಕರ ಮನೋಭೂಮಿಕೆಗೆ ಅನುಗುಣವಾಗುವಂತೆ, ಅವರ ಜೀವನಕ್ಕೆ ಹೊಂದಿಕೊಳ್ಳುವ

ಯಾವದೊಂದು ಪದ್ಧತಿಯನ್ನು ಹಿಡಿದುಕೊಂಡು ಸಾಗುವದು ಉಚಿತವಾಗಿದೆ. ಮೇಲಾಗಿ ಸಾಕ್ಷರತೆ ಹಾಗೂ ಸಮಾಜ ಶಿಕ್ಷಣಗಳೆರಡನ್ನೂ ಹಾಸುಹೊಕ್ಕಾಗಿ ಹೊಂದಿಸಿಕೊಳ್ಳಲು ಹಾಗೂ ಅಲ್ಪ ಸಮಯದಲ್ಲಿ ಹೆಚ್ಚು ಫಲವನ್ನು ಪಡೆಯಲು ಸರಿಯಾದ ಪದ್ಧತಿಯು ಅವಶ್ಯವೆನಿಸುವದು.

**ಸಾಕ್ಷರತೆಯನ್ನು** ಯಾವುದೇ ಪದ್ಧತಿಯಿಂದಲಾದರೂ ತಂದುಕೊಡ ಬಹುದು. ಆದರೆ ಅದನ್ನು **ಸ್ಥಿರಗೊಳಿಸುವದು ಮಹತ್ವದ ಸಂಗತಿ ಯಾಗಿದೆ.** ಇಲ್ಲವಾದರೆ ಅದಕ್ಕಾಗಿ ವಿನಿಯೋಗಿಸಿದ ಹಣವೂ, ವೇಳೆಯೂ, ಉತ್ಸಾಹವೂ ವ್ಯರ್ಥವಾಗಿ ಹೋಗುವವು. ಹೀಗಾಗದಂತೆ ಮಾಡುವದು ತೀರ ಅಗತ್ಯವಾಗಿದೆ. ಇದಕ್ಕಾಗಿ ಸಾಕ್ಷರತೆ ಕೇವಲ ಬಿಡಿ ಅಕ್ಷರಗಳನ್ನು ಕಲಿಸುವಂತಾಗದೆ 'ಸಮಾಜಶಿಕ್ಷಣ' ದೊಡನೆ ಹಾಸುಹೊಕ್ಕಾಗಿ ಕೂಡಿ ಕೊಳ್ಳುವಂತಾಗಬೇಕು. ಅದರ ಅವಶ್ಯಕತೆ ಅವರ ನಿತ್ಯ ಜೀವನದಲ್ಲಿ ಅನಿಸು ವಂತಾಗಬೇಕು; ಹಾಗೂ ನಿತ್ಯ ಜೀವನಕ್ಕೆ ನಿಕಟವಾಗಿ ಸಂಬಂಧಿಸುವಂತೆ ಸಮಾಜ ಶಿಕ್ಷಣದ ಕಾರ್ಯವು ನಡೆಯಬೇಕು. ಅದಕ್ಕೂ ಹೆಚ್ಚಿನದೆಂದರೆ **ವಯಸ್ಕರಿಗೆ ಉಚಿತವಾದ ವಾಙ್ಮಯವನ್ನು ಒದಗಿಸಬೇಕು.** ಉಳಿದ ಭಾಷೆಗಳಲ್ಲಿ ಈ ವಿಷಯದಲ್ಲಿ ಸಾಕಷ್ಟು ಕಾರ್ಯವಾಗಿದೆ. ಕನ್ನಡದಲ್ಲಿ ಮಾತ್ರ ಇಂಥ ವಾಙ್ಮಯದ ಕೊರತೆ ತುಂಬಾ ಇದೆ. ಅವರಿಗೆ ಒದಗಿಸುವ ಪುಸ್ತಕಗಳು ಚಿಕ್ಕವುಗಳಾಗಿರಬೇಕು; ದೊಡ್ಡ ಅಕ್ಷರಗಳಲ್ಲಿ ಸುವಾಚ್ಯವಾಗಿ ಅಚ್ಚಾಗಿರಬೇಕು; ಸಚಿತ್ರವಾಗಿರಬೇಕು. ಅಲ್ಪಬೆಲೆಯುಳ್ಳವುಗಳಾಗಿರಬೇಕು. ಅವುಗಳಲ್ಲಿ :—೧) **ನಿತ್ಯಜೀವನದಲ್ಲಿ ಉಪಯೋಗಿಸುವ ವಸ್ತುಗಳು.** ಉದಾ:—ಕಡ್ಡಿಪೆಟ್ಟಿಗೆ, ಕಲ್ಲೆಣ್ಣೆ ಇತ್ಯಾದಿ. ಇವುಗಳ ಪರಿಚಯವನ್ನು ಮಾಡಿ ಕೊಡುವಂಥವುಗಳು. ೨) **ಸ್ವಚ್ಛತೆ-ಆರೋಗ್ಯ** :—ಸಾಂಸರ್ಗಿಕ ರೋಗಗಳು, ಪಿಡುಗುಗಳು ಇವುಗಳ ಪ್ರತಿಬಂಧಕೋಪಾಯಗಳು, ಶುದ್ಧವಾದ ನೀರು, ಇತ್ಯಾದಿ. ೩) **ಔದ್ಯೋಗಿಕ**:—ಸುಧಾರಿಸಿದ ಒಕ್ಕಲತನ, ಗೊಬ್ಬರಗಳು, ಬೀಜ ಗಳು ಇತ್ಯಾದಿ. ೪) **ಪೌರಧರ್ಮ ಹಾಗೂ ಸಂಸ್ಕೃತಿ**:—ನಮ್ಮ ದೇಶದ ಪರಿಚಯ, ಆಡಳಿತದ ಸ್ವರೂಪ, ನಾಗರಿಕನಿಗಿರುವ ಹಕ್ಕುಗಳೂ, ಹೊಣೆ

ಗಾಂಕೆಯೂ, ಮತದಾನದ ಅಧಿಕಾರ—ಅದರ ಮಹತಿ ಹಾಗೂ ಪಾವಿತ್ರ್ಯ ಮುಂತಾದವುಗಳು; ಮಹಾಪುರುಷರ, ಸಾಧುಸಂತರ ಚರಿತ್ರೆ ಮತ್ತು ಉಪದೇಶ, ಸರ್ವಧರ್ಮಗಳ ಸಮಾನತೆ-ಇತ್ಯಾದಿ.—ಇವೆಲ್ಲ ವಿಷಯಗಳನ್ನು ಒಳಗೊಂಡ **ಸುಲಭವಾದ, ತಿಳಿಯಾದ, ಪ್ರಾದೇಶಿಕವಾದ ಹಳ್ಳಿಗರ ಭಾಷೆಯಲ್ಲಿಯೇ ಬರೆದ ವಾಙ್ಮಯವು** ನಮ್ಮಲ್ಲಿ ಇನ್ನೂ ವಿಪುಲವಾಗಿ ಬೆಳೆಯಬೇಕಾಗಿದೆ. ಇದಕ್ಕೆ ವಿಶೇಷವಾದ ವಿದ್ವತ್ತೆಯು ಬೇಡ. ಅನುಭವ ಪ್ರಯೋಗಗಳಿಂದಲೇ ಇಂಥ ವಾಙ್ಮಯವು ಬೆಳೆದುಬರಬೇಕು. ಸಮಾಜ ಶಿಕ್ಷಣದಲ್ಲಿ ಪ್ರತ್ಯಕ್ಷವಾಗಿ ದುಡಿಯುತ್ತಿರುವ ಕಾರ್ಯಕರ್ತರಿಂದಲೇ ಅದು ರಚಿತವಾಗಬೇಕು.

**ಸಮಾಜ ಶಿಕ್ಷಣವು ರಾಷ್ಟ್ರದ ವಿಧಾಯಕ ಕಾರ್ಯಕ್ರಮದಲ್ಲಿ ಹಿರಿದಾದ ಕೆಲಸವಾಗಿದೆ.** ಜನತೆಯ ಅಜ್ಞಾನವೂ, ನಿರಕ್ಷರತೆಯೂ, ರಾಷ್ಟ್ರ ನಿರ್ಮಾಣದ ಎಲ್ಲ ಕೆಲಸಗಳಿಗೂ ಕಾಲ್ತೊಡಕಾಗಹತ್ತಿದೆ. ಸಮಾಜ ಶಿಕ್ಷಣದ ಪ್ರಸಾರದಲ್ಲಿ **ಸೇವಾಬುದ್ಧಿಯಿಂದ** ಸಹಾಯ ಮಾಡುವದು ದೇಶದ ಹಿತವನ್ನು ಬಯಸುವ ಪ್ರತಿಯೊಬ್ಬ ಸುಶಿಕ್ಷಿತನ ಕರ್ತವ್ಯವಾಗಿದೆ. ನಿಜವಾಗಿ ಇದನ್ನು ಆತನು ಕರ್ತವ್ಯಬುದ್ಧಿಯಿಂದಲೇ ಮಾಡಬೇಕು. ಶ್ರಮಜೀವಿಗಳು ತಮ್ಮ ಬೆವರಿನ ದುಡಿತದಿಂದ ಸರಕಾರದ ಬೊಕ್ಕಸವನ್ನು ತುಂಬುವರು. ಆ ಹಣದಿಂದಲೇ ತಾವು 'ಸುಶಿಕ್ಷಿತ' ರಾಗಿರುವರೆಂಬುದನ್ನು ಅವರು ಮರೆಯಕೂಡದು. ಇದಕ್ಕಾಗಿ **ಪ್ರತಿಯೊಬ್ಬ ಸುಶಿಕ್ಷಿತನು ಅಜ್ಞರಾದ ರೈತರಿಗೆ, ಶ್ರಮಜೀವಿಗಳಿಗೆ ಋಣಿಯಾಗಿರುವನು.** ತಮಗೆ ದೊರೆತ ಜ್ಞಾನದ ಬೆಳಕು ಹಳ್ಳಿಗಳಲ್ಲಿ ಹರಡುವಂತೆ ಮಾಡುವದರಿಂದ ಈ ಕೃತಜ್ಞತೆಯ ಋಣವನ್ನು ಅಲ್ಪವಾದರೂ ತೀರಿಸಿದಂತಾಗುವದು. ಸರಕಾರವೇ ಎಲ್ಲ ಕೆಲಸವನ್ನು ಮಾಡಲಿ ಎಂದು ಕೈಕಟ್ಟಿಕೊಂಡು ಕೂಡುವದು ಸರಿಯಾಗದು. ಇಲ್ಲವೇ ಇಂಥ ಕೆಲಸಕ್ಕೂ ಕೂಡ ಹೆಚ್ಚಿನ ಆರ್ಥಿಕ ಪ್ರತಿಫಲವು ದೊರೆಯಬೇಕೆಂಬ ಆಶೆಯನ್ನಿಟ್ಟುಕೊಳ್ಳುವದು ವಿಹಿತವಾಗದು. **ಈ ಬಗೆಯ ತ್ಯಾಗದ ಕೆಲಸಗಳಿಗೆ ಧನಬಲಕ್ಕಿಂತಲೂ ಜನಬಲವೇ ಮಿಗಿ**

**ಲಾದುದು; ಕಾಯದೆಯ ಒತ್ತಾಯಕ್ಕಿಂತಲೂ ಹೃದಯದ ಸ್ವಯಂ ಪ್ರೇರಣೆಯೇ ಹೆಚ್ಚು ಪ್ರಬಲವಾದುದು.**

## ಪರಿಶಿಷ್ಟ ೨

### ಸಹಶಿಕ್ಷಣ

ಸ್ತ್ರೀ ಶಿಕ್ಷಣದ ಅವಶ್ಯಕತೆಯ ಬಗ್ಗೆ ವಿವೇಚಿಸುವ ಕಾಲವು ಇಂದು ಗತಿಸಿ ಹೋಗಿದೆ. ಸ್ತ್ರೀಶಿಕ್ಷಣವು ದೃಢವಾಗಿ ನೆಲೆಸಿದೆ, ಮುಂದೊರೆಯುತ್ತಿದೆ. ' ನ ಸ್ತ್ರೀ ಸ್ವಾತಂತ್ರ್ಯಮರ್ಹತಿ; ' ' ಸರ್ವತೋಮುಖೀ ಪ್ರಭುತಾ ನಾರೀಷು '–ಎಂದು ಹಿಂದೆ ಹೇಳುತ್ತಿದ್ದ ಮಾತುಗಳು ಇಂದು ಕೇವಲ ಕೇಳಿಕೆಯ ಸಂಗತಿಗಳು. ಸಮಾಜದ ಒಂದು ವಿಶಿಷ್ಟವಾದ ವಿವಸ್ಥಾವಸ್ಥೆಯಲ್ಲಿ ಸ್ತ್ರೀಜೀವನದಮೇಲೆ ಈ ನಿರ್ಬಂಧಗಳನ್ನು ತಾತ್ಕಾಲಿಕವಾಗಿ ಹಾಕಿರಬಹುದು. **ಆದರೆ ಉಪನಿಷತ್ಕಾಲದಿಂದಲೂ ಸ್ತ್ರೀಯರಿಗೆ ಸಮಾಜದಲ್ಲಿ ಸರಿಯಾದ ಸ್ಥಾನವನ್ನೂ ಮಾನವನ್ನೂ** ಕೊಟ್ಟಿರುವದನ್ನು ನಾವು ಕಾಣಬಹುದು. ಸಂಸಾರ ರಥದ ಎರಡು ಗಾಲಿಗಳಲ್ಲಿ ಪುರುಷನಂತೆ ಸ್ತ್ರೀಯೂ ಒಬ್ಬಳು. ನಮ್ಮ ಲೌಕಿಕ, ಧಾರ್ಮಿಕ ವ್ಯವಹಾರಗಳಲ್ಲಿ ಸ್ತ್ರೀಯರ ಪಾತ್ರವು ಅತ್ಯಂತ ಪ್ರಧಾನವಾಗಿದೆ. ಬಸವಣ್ಣನವರು ಮಾಡಿದ ಮಹತ್ಕಾರ್ಯಗಳಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ಜೀವನದಲ್ಲಿ ಪುರುಷನೊಡನೆ ಸ್ತ್ರೀಯಳಿಗೆ ಸಮಾನತೆಯನ್ನು ತಂದು ಕೊಟ್ಟಿರುವದೂ ಒಂದಾಗಿದೆ. **ಗಾಂಧೀಜಿಯವರಿಂದ ಅಂತಃಸ್ಫೂರ್ತಿಯನ್ನು ಪಡೆದ ಸ್ತ್ರೀಯರು ಸತ್ಯಾಗ್ರಹ ಸಮರದಲ್ಲಿ ಪುರುಷರೊಡನೆ ಸಮಾನಸ್ಥೈರ್ಯ-ಧೈರ್ಯಗಳಿಂದ ಭಾಗವಹಿಸಿದರು.** ಜೀವನದ ಎಲ್ಲ ರಂಗಗಳಲ್ಲಿಯೂ ಇಂದು ಸ್ತ್ರೀಯರು ತಮ್ಮ ಕ್ರಿಯಾಶಕ್ತಿ-ಬುದ್ಧಿಶಕ್ತಿಗಳಿಂದ ಎಲ್ಲರನ್ನೂ ಬೆರಗುಗೊಳಿಸುತ್ತಿದ್ದಾರೆ. ಅವರಿಗೆ ದೊರೆತ ಶಿಕ್ಷಣವು ಈ ಶಕ್ತಿಗಳ ಪ್ರಕಟನೆಗೆ ಅನುವು ಮಾಡಿಕೊಟ್ಟಿದೆ.

ಆದರೆ ಸ್ತ್ರೀಯರಿಗೆ ಕೊಡಬೇಕಾದ ಶಿಕ್ಷಣವು ಎಂತಹದಿರಬೇಕೆಂಬುದು ಇಂದಿಗೂ ಒಂದು ಜಟಿಲ ಪ್ರಶ್ನೆಯಾಗಿದೆ. ಸ್ತ್ರೀಶಿಕ್ಷಣದ ಬಗ್ಗೆ ಎರಡು ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಡುವದು ಇನ್ನೂ ಕಠಿಣವಾಗಿದೆ. ಅಂತೆಯೇ ಈ ತೊಡಕು:— ೧) **ಹುಡುಗರಿಗೂ, ಹುಡುಗೆಯರಿಗೂ ಕೊಡುವ ಶಿಕ್ಷಣವು ವಿಷಯವಿಧಾನಗಳಲ್ಲಿ ಒಂದೇ ವಿಧವಾಗಿರಬೇಕೆ?** ೨) **ಹುಡುಗ ಹುಡುಗೆಯರನ್ನು ಒಂದೆಡೆಯಲ್ಲಿಯೇ ಕೂಡಿಸುವದು. ಈ ನಿಕಟವಾದ ಸಹವಾಸವು ಹಿತಕರವಾಗಬಹುದೆ?** ಸಹಶಿಕ್ಷಣದ ಅಸ್ತಿತ್ವವು ಇವೆರಡು ಪ್ರಶ್ನೆಗಳಿಗೆ ಬರುವ ಉತ್ತರವನ್ನೇ ಹೆಚ್ಚಾಗಿ ಅವಲಂಬಿಸಿದೆ. ಸಹಶಿಕ್ಷಣವು ಬೇಡವೆನ್ನುವವರು ಹೇಳುವದೆಂದರೆ:—ಸ್ತ್ರೀಯು ಪುರುಷನಿಂದ ನೈಸರ್ಗಿಕವಾಗಿ ಭಿನ್ನಳು. **ನಿಸರ್ಗವು ತನ್ನ ಕಾರ್ಯದಲ್ಲಿ ಸ್ತ್ರೀಯಿಂದ ಬೇರೊಂದು ಬಗೆಯ ಕಾರ್ಯವನ್ನೂ, ಸಹಕಾರವನ್ನೂ, ಅಪೇಕ್ಷಿಸುತ್ತಿದೆ.** ಅವಳ ಶರೀರರಚನೆಯೂ ಈ ಕಾರ್ಯಕ್ಕೆ ಅನುರೂಪವಾಗಿ ನಿರ್ಮಿತವಾಗಿದೆ. ಅವಳ ಅಂತರಂಗದ ಭಾವನೆಗಳೂ, ಮಾನಸಿಕ ಒಲವುಗಳೂ ವಿಶಿಷ್ಟವಾಗಿವೆ. ಸಂತಾನ ಪರಂಪರೆಯನ್ನು ರಕ್ಷಿಸುವದು ಅವಳ ಕೆಲಸ. **ಸ್ತ್ರೀಯು ಗೃಹಲಕ್ಷ್ಮಿ, ಮಾತೃದೇವತೆ.** ಇವೆರಡು ಅಂಶಗಳಿಂದ ಅವಳು ಮಾಡಬೇಕಾದ ಕಾರ್ಯವು ಅತೀವ ಮಹತ್ವದ್ದಾಗಿದೆ. ನಿಸರ್ಗವು ನಿಯಮಿಸಿದಂತೆ, ಅವಳು ಮಾಡಬೇಕಾದ ಇವೆರಡು ಕಾರ್ಯಗಳಿಗಾಗಿ ಶಿಕ್ಷಣವು ಸ್ತ್ರೀಯರನ್ನು ಅಣಿಗೊಳಿಸಬೇಕು. ಇದಕ್ಕಾಗಿಯೇ ಅವಳ ಶಿಕ್ಷಣದ ವಿಷಯ ಹಾಗೂ ವಿಧಾನಗಳು ಪುರುಷರಿಂದ ವಿಭಿನ್ನವಾಗಿರಬೇಕು. ಈ ದೃಷ್ಟಿಯಿಂದ ನೋಡಿದಲ್ಲಿ **ಮೂಲ (ಜೀವನ) ಶಿಕ್ಷಣವು ಸ್ತ್ರೀಜೀವನಕ್ಕೆ ಸಮರಸವಾಗಿ ಹೊಂದಿಕೊಳ್ಳುವದು.** ಸ್ತ್ರೀಜೀವನದ ವಿಭಿನ್ನತೆಗೆ, ವೈಶಿಷ್ಟ್ಯಕ್ಕೆ ಅದು ಹೆಚ್ಚಾಗಿ ಹೊಂದಿಕೊಳ್ಳುವದು. ಮೂಲಶಿಕ್ಷಣವು ಸಾಂಸ್ಕೃತಿಕವಾಗಿದೆ. ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಇದುವರೆಗೆ ಅಚ್ಚಳಿಯದೆ ರಕ್ಷಿಸಿದವರು ಸ್ತ್ರೀಯರೇ ಆಗಿರುವರು. ಪುರುಷರ ಜೀವನವು ಹೊರಗಿನ ಅನೇಕ ಶಕ್ತಿಗಳ ಆಘಾತಕ್ಕೆ ಬಲಿಯಾಗಿ ಬದಲಿಸಬಹುದು. ಆದರೆ ಸಂಪ್ರ

ದಾಯ ನಿಷ್ಠಳಾದ ಸ್ತ್ರೀಯು ಪ್ರಾಚೀನ ಪರಂಪರೆಗಳನ್ನೆಲ್ಲ ಜತನಮಾಡಿರು ವಳು. ಮೂಲಶಿಕ್ಷಣವು ಸ್ವಾವಲಂಬನ ಶಿಕ್ಷಣವು. ದೊಡ್ಡೋರಿನ ಕೆಲವು ಸ್ಥಿತಿ ವಂತರನ್ನು ಬಿಟ್ಟರೆ ಹಳ್ಳಿಗಳಲ್ಲಿ ಹೆಣ್ಣುಮಕ್ಕಳೇ ಹೆಚ್ಚಾಗಿ ಸಂಸಾರವನ್ನು ನಡೆಸುವರು. ಪುರುಷರೊಡನೆ ಸಮಾನವಾಗಿ ದುಡಿಯುವರು. ಮೂಲಶಿಕ್ಷ ಣವು ಒಂದು ಜೀವನೋಪಯೋಗಿಯಾದ ಕಲೆಯನ್ನು ಶಿಕ್ಷಣದ ಕೇಂದ್ರ ವಾಗಿಟ್ಟುಕೊಳ್ಳುವದು. **ಉದ್ಯೋಗ ತತ್ಪರತೆಯು ಸ್ತ್ರೀಜೀವನದ ಉಸಿ ರಾಗಿರುವದು.** ಸ್ತ್ರೀಯು ಕಲಾಪ್ರೇಮಿಯಾಗಿರುವಳು. ಅಂದ–ಚೆಂದ, ನಯ–ನುಸರುಗಳು ಅವಳು ಮಾಡುವ ಪ್ರತಿಯೊಂದು ಕೆಲಸದಲ್ಲಿಯೂ ಸಹಜ ವಾಗಿಯೇ ಸಾಧಿಸುವವು. ಸಂಸಾರದ ಚಿಕ್ಕದೊಡ್ಡ ಎಲ್ಲ ಕೆಲಸಗಳಲ್ಲಿ ಅವಳು ಮುಟ್ಟಿದ್ದೇ ಚಿನ್ನ, ಮಾಡಿದ್ದೇ ಚೆಂದವಾಗುವದು. ಮೇಲಾಗಿ ಉದ್ಯೋಗಕ್ಕೆ ಬೇಕಾಗುವ **ತಾಳ್ಮೆ, ತನ್ಮಯತೆಗಳು ಸ್ತ್ರೀಯರಿಗೆ ಹುಟ್ಟುಗುಣಗಳಾ ಗಿರುವವು.** ಶಾಂತಿ–ಸಹಕಾರಗಳ ಜೀವನಕ್ಕೆ ಅವಳೇ ಆದಿಗುರು.

ಮೂಲಶಿಕ್ಷಣದ ಯೋಜನೆಯಲ್ಲಿ ಸಹಶಿಕ್ಷಣಕ್ಕೆ ಸಾಮಾನ್ಯವಾಗಿ ಮಾನ್ಯ ತೆಯನ್ನು ಕೊಟ್ಟಿರುವರು. ಮೂಲಶಿಕ್ಷಣದ ಕೆಲವು ಆದರ್ಶ ಶಾಲೆಗಳಲ್ಲಿ ೭ ರಿಂದ ೧೪ ವರುಷಗಳವರೆಗೆ ಹುಡುಗ–ಹುಡುಗೆಯರು ಒಂದೆಡೆಯಲ್ಲಿಯೇ, ಒಂದೇ ವಿಧವಾದ ಶಿಕ್ಷಣವನ್ನು ಪಡೆಯುವರು. ಸಹಶಿಕ್ಷಣದಲ್ಲಿ ಕೆಲವೊಂದು ಪ್ರಯೋಜನಗಳೂ ಕಂಡುಬರುವವು. ೧) ಪರಿಚಯದಿಂದ ಸ್ತ್ರೀ–ಪುರುಷ ರಲ್ಲಿ **ಪರಸ್ಪರ ತಿಳುವಳಿಕೆ** ಹೆಚ್ಚಾಗುವದು. ೨) ಮಿತವಾದ ಹಾಗೂ ಹಿತವಾದ ಸ್ಪರ್ಧೆಯಿಂದ ಅವರ **ಬುದ್ಧಿಶಕ್ತಿಗೆ ಉತ್ತೇಜನವು** ದೊರಿ ಯುವದು. ೩) ಹಿತಸಂಬಂಧಗಳು ಬೇರೆಯಾಗಿದ್ದರೂ ಹೊಂದಿಕೊಂಡು ಹೋಗುವ **ಜೀವನ ಕಲೆಯನ್ನು** ಇಬ್ಬರೂ ಕೂಡಿಯೆ ಕಲಿಯುವರು. ೪) ಸ್ತ್ರೀಯರಲ್ಲಿ ಹೀನ, ದೀನ ಭಾವನೆಯು ಅಳಿದುಹೋಗಿ ಸಮಾಜದಲ್ಲಿ ತಮ ತಮಗೆ ಅನುರೂಪವಾದ ಸ್ಥಾನಮಾನಗಳನ್ನು ಅವರು ಗಳಿಸುವರು. ೫) ಸ್ತ್ರೀ–ಪುರುಷರಲ್ಲಿ ಕಂಡುಬರುವ ಅಸ್ವಾಭಾವಿಕವಾದ ಸಂಕೋಚಸಾಶಂಕ ವೃತ್ತಿಗಳು ಇಲ್ಲದಂತಾಗುವವು. ಪರಸ್ಪರರಲ್ಲಿ ಸಹಕಾರ ಸಹೃದಯತೆಗಳು ನೆಲೆಸುವವು. ೬) ಜೀವನದಲ್ಲಿ ಸ್ತ್ರೀಪುರುಷರಿಬ್ಬರೂ ಕೂಡಿಕೊಂಡೇ ಬಾಳ

ಬೇಕು. ಜೀವನ ಶಿಕ್ಷಣವೂ ಜೀವನದ ಈ ರೀತಿಯನ್ನೇ ಅನುಕರಿಸಬೇಕು.

ಸಹಶಿಕ್ಷಣದ ನೈತಿಕ ಪ್ರಯೋಜನಗಳೇನೆ ಇರಲಿ, ಕೊನೆಯವರೆಗೂ ಬಾಲಕ–ಬಾಲಿಕೆಯರಿಗೆ ಒಂದೇ ವಿಧವಾದ ವಿದ್ಯಾಕ್ರಮವಿರಬೇಕೆಂಬುವದನ್ನು ಮಾತ್ರ ಎಲ್ಲರೂ ಒಪ್ಪಲಾರರು. ಜ್ಞಾನಪ್ರಾಪ್ತಿಗೆ ಮೂಲಸಾಧನಗಳಾದ ಓದುಬರೆಹ, ವ್ಯಾವಹಾರಿಕವಾದ ಗಣಿತ ಮುಂತಾದವುಗಳನ್ನು ಮೊದಲಿನ ಕೆಲವು ವರುಷಗಳಲ್ಲಿ ಬಾಲಕ-ಬಾಲಿಕೆಯರಿಬ್ಬರಿಗೂ ಸಮಾನವಾಗಿ ಕಲಿಸಬಹುದು. ಆದರೆ ಆ ಮೇಲೆ ಸ್ತ್ರೀಯರಿಗಾಗಿ ಪ್ರತ್ಯೇಕವಾದ ವಿದ್ಯಾಕ್ರಮವನ್ನು ಅನುಸರಿಸಬೇಕಾಗುವದು. ಜೀವನದಲ್ಲಿ ಹೆಣ್ಣುಮಕ್ಕಳಿಗೆ ಇರುವ ಸ್ಥಾನ, ಅವರು ವಹಿಸುವ ಪಾತ್ರ ಹಾಗೂ ಮಾಡಲೇಬೇಕಾಗುವ ಕೆಲಸಗಳು ಇವುಗಳಿಗೆ ಅನುಗುಣವಾಗುವಂತೆ ಸ್ತ್ರೀಯರಿಗೆ ಪ್ರತ್ಯೇಕವಾದ ಶಿಕ್ಷಣದ ಏರ್ಪಾಡು ಮಾಡಬೇಕು. ಇಬ್ಬರಿಗೂ ಸಮಾನವಾಗಿರುವ ಇಂದಿನ ಅಭ್ಯಾಸಪತ್ರಿಕೆಯಲ್ಲಿ ಸ್ತ್ರೀಜೀವನಕ್ಕೆ ಏನೂ ಸಂಬಂಧವಿಲ್ಲದ ಹಾಗೂ ಎಳ್ಳಷ್ಟಾದರೂ ಉಪಯೋಗವಿರದ ಅನೇಕ ವಿಷಯಗಳು ಸೇರಿಕೊಂಡಿವೆ. ಇವುಗಳಿಗೆ ಪ್ರತಿಯಾಗಿ, ಗೃಹವಿಜ್ಞಾನ, ಸುಲಭವಾಗಿ, ಸ್ಥಳೀಕವಾಗಿ ದೊರೆಯುವ ವಸ್ತುಗಳಿಂದಲೇ ಮನೆಯನ್ನು ಶೃಂಗರಿಸುವ ಕಲೆ, ಪಾಕಶಾಸ್ತ್ರ ಹಾಗೂ ಆಹಾರ ವಿಜ್ಞಾನ, ಸಂತತಿಶಾಸ್ತ್ರ, ಶಿಶುಸಂಗೋಪನ, ಗೃಹಕೈಗಾರಿಕೆಗಳು, ಪ್ರಥಮ ಚಿಕಿತ್ಸೆ, ಹೊಲಿಗೆ, ಹಾಗೂ ಪೌರನೀತಿ ಇವೇ ಮೊದಲಾದ ಅನೇಕ ವಿಷಯಗಳಿಗೆ ಸ್ತ್ರೀಶಿಕ್ಷಣದ ಮೇಲಿನ ವರ್ಗಗಳಲ್ಲಿ ಸಾಕಷ್ಟು ಪ್ರವೇಶವೂ ಪ್ರಾಶಸ್ತ್ಯವೂ ದೊರೆಯಬೇಕು.

ಸಹಶಿಕ್ಷಣದ ಬಗ್ಗೆ ಸಮಾಜದಲ್ಲಿರುವ ಭಿನ್ನಾಭಿಪ್ರಾಯವನ್ನು ಝಾಕೀರ ಸಮಿತಿಯವರೂ ಗಮನಿಸಿದಂತೆ ತೋರುತ್ತದೆ. ಮೂಲಶಿಕ್ಷಣದ ಏಳು ವರುಷಗಳ ಪೂರ್ಣಾವಧಿಯಲ್ಲಿ ಸಹಶಿಕ್ಷಣವೇ ಇರಬೇಕೆಂದು ಅವರು ಒತ್ತಾಯಪಡಿಸಿಲ್ಲ. ಕೊನೆಯ ಎರಡು ವರುಷಗಳಲ್ಲಿ ೧೨ನೆಯ ವರುಷ ಮುಗಿದ ನಂತರ ಹೆಣ್ಣುಮಕ್ಕಳಿಗಾಗಿ ಪಾಲಕರಿಂದ ಬೇಡಿಕೆಯು ಬಂದರೆ, ಪ್ರತ್ಯೇಕ ಶಾಲೆಗಳನ್ನು ಏರ್ಪಡಿಸಬೇಕೆಂದು ಸಮಿತಿಯವರು ಅಭಿಪ್ರಾಯಪಟ್ಟಿದ್ದಾರೆ

ಶ್ರೀ. ಝುಕೀರ ಹುಸೇನರು ತಮ್ಮದೊಂದು ಭಾಷಣದಲ್ಲಿ ರಕ್ಕವಿದ್ದರೆ ಹತ್ತು ವರುಷಗಳನ್ನು ಮೀರಿದ ಬಾಲಕ–ಬಾಲಿಕೆಯರಿಗೆ ಪ್ರತ್ಯೇಕವಾಗಿ ಶಿಕ್ಷಣವನ್ನು ಕೊಡಬಹುದೆಂತಲೂ ಸೂಚಿಸಿದ್ದಾರೆ. ಒಟ್ಟಿನಲ್ಲಿ ನೈಸರ್ಗಿಕವಾದ ಕಾಮ ಪ್ರವೃತ್ತಿಯು ಪ್ರಕಟವಾಗುವ, ಪ್ರಬಲವಾಗುವ ಮುನ್ನ ಸಹಶಿಕ್ಷಣದಿಂದ ಹಾನಿಯಾಗಲಾರದು. ಮುಂದಿನ ವರುಷಗಳಲ್ಲಿ ಮಾತ್ರ ಅದರಿಂದ ಮಕ್ಕಳ ನೀತಿಯು ವಾಮಮಾರ್ಗವನ್ನು ಹಿಡಿಯಬಹುದೆಂದು ಸಾಮಾನ್ಯವಾದ ತಿಳು ವಳಿಕೆಯಾಗಿದೆ. ಆದರೆ ಈ ಪ್ರವೃತ್ತಿಯ ಬಗ್ಗೆ ಹಾಗೂ ಲಿಂಗಜ್ಞಾನದ ಬಗ್ಗೆ ಇಂದು ನಾವು ತೋರುತ್ತಿರುವ ಮುಚ್ಚುಮರೆಯೇ ಮಕ್ಕಳಲ್ಲಿ ಅಸ್ವಾಭಾವಿಕ ವಾದ ಕುತೂಹಲವನ್ನು ಹುಟ್ಟಿಸುವದೆಂತಲೂ, ಮೊದಲಿನಿಂದಲೇ ಲೈಂಗಿಕ ವಿಷಯಗಳ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಮಾಡಿಕೊಟ್ಟರೆ ಈ ಕುತೂ ಹಲವೂ ಇಲ್ಲದಂತಾಗುವದು, ಹಾಗೂ ಕಾಮಭಾವನೆಯ ಆವೇಗವು ಕಡಿಮೆ ಯಾಗಿ ಅದು ಅಡ್ಡ ಹಾದಿಯನ್ನು ಹಿಡಿಯಲಾರದೆಂತಲೂ ಅಭಿಪ್ರಾಯ ವನ್ನು ತಾಳಿದವರೂ ಇದ್ದಾರೆ. ಏನೆ ಇರಲಿ, **ಸಹಶಿಕ್ಷಣದ ಪ್ರಯೋಜನ ವನ್ನು ಕೆಲವು ಅಂಶಗಳಿಂದ ಒಪ್ಪಿಕೊಂಡರೂ, ಅದರ ಪ್ರತ್ಯಕ್ಷವಾದ ಪ್ರಯೋಗದಲ್ಲಿ ಬಹಳೇ ದಕ್ಷತೆಯನ್ನು ವಹಿಸಬೇಕಾಗುವದೆಂಬುದು ನಿರ್ವಿವಾದವಾಗಿದೆ.**

## ಪರಿಶಿಷ್ಟ ೩

### ‘ ಧಾರ್ಮಿಕ ಶಿಕ್ಷಣ ’

ಜನತೆಯ ಜೀವನದ ಗುರಿಯೇ ಶಿಕ್ಷಣದ ಗುರಿಯಾಗುವದು. ಮೊದ ಲನೆಯ ಪರಿಚ್ಛೇದದಲ್ಲಿ ಹೇಳಿದಂತೆ ‘ ವಿಮುಕ್ತಿ ’ಯೇ ನಮ್ಮ ಪೂರ್ವಜರ ಜೀವನ ಸರ್ವಸ್ವವಾಗಿತ್ತು. ಅಂತೆಯೇ ‘ ಸಾ ವಿದ್ಯಾ ಯಾ ವಿಮುಕ್ತಯೆ ’ ಎಂದು ಅವರು ಸಾರಿದರು. ಜೀವನದ ಈ ಧಾರ್ಮಿಕ ದೃಷ್ಟಿಯು ಹೆಚ್ಚಾಗಿ

ಅಂದಿನ ಶಿಕ್ಷಣದಲ್ಲಿ ಹಾಗೂ ಜೀವನದ ಉಳಿದ ಅಂಗಗಳಲ್ಲಿಯೂ ಕೂಡ ಒಡಮೂಡಿರುವದನ್ನು ನಾವು ನೋಡುವೆವು. ಆಶ್ರಮದ ಆದಿಶಿಕ್ಷಣದಿಂದ, ಗುರುಕುಲಗಳಲ್ಲಿ, ನಲಂದ ತಕ್ಷಶಿಲೆಗಳಂತಹ ವಿದ್ಯಾಪೀಠಗಳಲ್ಲಿ, **ಜನತೆಯ ಶಿಕ್ಷಣದ ತಳಹದಿಯು ಧಾರ್ಮಿಕವಾಗಿತ್ತು.** ಬ್ರಿಟಿಷರ ಆಳಿಕೆಯಲ್ಲಿ ಮಾತ್ರ ಶಿಕ್ಷಣದ ಸ್ವರೂಪವು ಬದಲಿಸಿತು. ಧಾರ್ಮಿಕ ಶಿಕ್ಷಣಕ್ಕೆ ಶಿಕ್ಷಣ ಸಂಸ್ಥೆಗಳಲ್ಲಿ ಸ್ಥಾನಮಾನಗಳಿಲ್ಲದೆ ಅದು ಮನೆಯನ್ನು ಸೇರಬೇಕಾಯಿತು. ಪರದೇಶದ ಪಾದ್ರಿಗಳು ಕ್ರಿಸ್ತಧರ್ಮಪ್ರಸಾರಕ್ಕೆ 'ತಮ್ಮ ರಾಜ್ಯದಲ್ಲಿ ಶಿಕ್ಷಣವು ಸಹಾಯವಾಗುವಂತೆ ಮಾಡಲು ಸಾಹಸಬಟ್ಟರು. ಆದರೆ ಬ್ರಿಟಿಷ ಮುತ್ಸದ್ದಿಗಳು ಮಾತ್ರ ಭಾರತದಲ್ಲಿ ತಾವು ಮೊದಲಿನಿಂದಲೂ ವಹಿಸುತ್ತ ಬಂದಿರುವ ಧಾರ್ಮಿಕ 'ತಟಸ್ಥ' ಧೋರಣಕ್ಕೆ ತಪ್ಪಲಿಲ್ಲ. ಹೀಗೆ ಮಾಡುವದರಲ್ಲಿ ಸದುದ್ದೇಶಕ್ಕಿಂತಲೂ ಒಂದು ಬಗೆಯ ಸ್ವಾರ್ಥವೇ ಕಾರಣವೆಂದು ಹೇಳಬಹುದು. ಪರದೇಶದಲ್ಲಿಯ ತಮ್ಮ ಪ್ರಭುತ್ವಕ್ಕೆ, ಅಲ್ಲಿಯ ಜನತೆಯ ಧರ್ಮಗಳಲ್ಲಿ ಕೈಹಾಕುವದು ಆತಂಕವನ್ನುಂಟುಮಾಡಬಹುದೆಂಬ ಅಂಜಿಕೆಯು ಅವರಿಗಿತ್ತು. ಅಂತೆಯೇ 'ಕಂಪನಿ' ಸರಕಾರದ ಅಧಿಕಾರಿಗಳೂ ಹಾಗೂ ತನ್ನ ಪ್ರಸಿದ್ಧವಾದ ಜಾಹೀರನಾಮೆಯಲ್ಲಿ ವ್ಹಿಕ್ಟೋರಿಯಾ ರಾಣಿಯೂ ಈ ದೇಶದ ಜನತೆಯ **ಧರ್ಮಗಳಲ್ಲಿ ಕೈಹಾಕುವದಿಲ್ಲ**ವೆಂಬ ಆಶ್ವಾಸನವನ್ನು ಆಗಾಗ್ಗೆ ಕೊಡುತ್ತ ಬಂದರು. ಸರಕಾರೀ ಶಾಲೆಗಳಲ್ಲಿ ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಯಾವದೇ ಧರ್ಮದ ಪ್ರಚಾರಕ್ಕೆ, ಶಿಕ್ಷಣಕ್ಕೆ, ಅವರು ಪ್ರತಿಬಂಧ ಮಾಡಿದರು. ಖಾನಗೀ ಹಾಗೂ ಸರಕಾರದ ಸಹಾಯಧನವನ್ನು ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳು ಮಾತ್ರ ತಮಗೆ ಬೇಕಾದ ಧಾರ್ಮಿಕ ಶಿಕ್ಷಣವನ್ನು ಕೊಡಲು ಆತಂಕವಿರಲಿಲ್ಲ.

ಆದರೆ **ಜನತೆಯ ಶಿಕ್ಷಣದಿಂದ ಧರ್ಮವನ್ನು ಈ ರೀತಿಯಾಗಿ ಬೇರ್ಪಡಿಸುವದು ಅನೇಕರಿಗೆ ಸರಿದೋರಲಿಲ್ಲ.** ಕ್ರಿಸ್ತಪಾದ್ರಿಗಳು ತಮ್ಮ ಧರ್ಮಪ್ರಸಾರಕ್ಕೆ ಎಡೆಯಿಲ್ಲವೆಂದು ಮುನಿಸುಗೊಂಡರು. ಇಂಗ್ಲೀಷ ಶಿಕ್ಷಣದ ಪ್ರಸಾರದಿಂದ ಇಲ್ಲಿಯ ಜನರಲ್ಲಿ ತಮ್ಮ ಧರ್ಮ ಹಾಗೂ ಸಂಸ್ಕೃತಿಗಳ ಬಗ್ಗೆ

ಆದರಾಭಿಮಾನಗಳು ಅಳಿದುಹೋಗಿ ಕ್ರಿಸ್ತಧರ್ಮಪ್ರಸಾರಕ್ಕೆ ಅವರು ಸುಲಭವಾಗಿ ಪಾದ್ರಿಗಳ ಒಲೆಯಲ್ಲಿ ಬೀಳುವರೆಂದು ಮೆಕಾಲೆ ಪ್ರಭೃತಿಗಳು ಅವರಿಗೆ ಆಶೆ–ಆಶ್ವಾಸನಗಳನ್ನು ಕೊಟ್ಟರು. ಇತ್ತ ನಮ್ಮಲ್ಲಿಯ ಅನೇಕ ಬುದ್ಧಿವಂತರಿಗೂ ಧರ್ಮರಹಿತವಾದ ಈ ಶಿಕ್ಷಣವು ಮನಸ್ಸಿಗೆ ಬರಲಿಲ್ಲ. ಈ ಬಗೆಯ ಶಿಕ್ಷಣವನ್ನು ಪಡೆದವರಲ್ಲಿ **ಅಧಾರ್ಮಿಕತೆಯೂ, ಒಂದು ಬಗೆಯ ಸ್ವೇಚ್ಛಾಪ್ರವೃತ್ತಿಯೂ ಉಂಟಾಗುವವೆಂದು** ಅವರು ಭಾವಿಸಿದರು.

ಮೂಲಶಿಕ್ಷಣದ ವಿಷಯದಲ್ಲಿ ಈ ಪಕ್ಷೆಯ ವಾದವೇ ಮತ್ತೆ ಎದ್ದು ಬಂದಿದೆ. ಮೂಲ( ಜೀವನ )ಶಿಕ್ಷಣವು ಶಿಕ್ಷಣದ **ಪುನರುದ್ಧಾರವಾಗಿದೆ. ಜೀವನದ ಜೀರ್ಣೋದ್ಧಾರವಾಗಬೇಕಿದೆ.** ಜೀವನವನ್ನೇ ಹೊಸ ಹಾದಿಗೆ ಹಚ್ಚುವ ಈ ಯೋಜನೆಯಲ್ಲಿ ಧಾರ್ಮಿಕ ಶಿಕ್ಷಣವನ್ನು ಕಡೆಗಣಿಸುವದು ಅನುಚಿತವೆಂದು ಈ ಯೋಜನೆಗೆ ಕೆಲವರು ಆಕ್ಷೇಪಿಸಿದ್ದಾರೆ. ಈ ಯೋಜನೆಯ ಬಗ್ಗೆ ಮುಸ್ಲೀಮರು ಎತ್ತಿದ ಕೆಲವು ಆಕ್ಷೇಪಗಳಲ್ಲಿ ಇದುವೇ ಮುಖ್ಯವಾಗಿದೆ. ಭಾರತವು ಅನೇಕ ಧರ್ಮಗಳ, ಪಂಥಗಳ ಅನುಯಾಯಿಗಳಿಗೆ ಆಸರವನ್ನಿತ್ತಿದೆ. ಶಿಕ್ಷಣಸಂಸ್ಥೆಗಳು ಇವುಗಳಲ್ಲಿ ಯಾವ ಪಂಥವನ್ನು ಎತ್ತಿಹಿಡಿಯಬೇಕು? ಯಾವ ಧರ್ಮದ ಬೋಧೆಯನ್ನು ಶಿಕ್ಷಣದ ಅಂಗವಾಗಿ ಮಾಡಬೇಕು? ಯಾವ ಧಾರ್ಮಿಕ ಪರಂಪರೆ ಸಂಪ್ರದಾಯಗಳನ್ನು ಸಮರ್ಥಿಸಬೇಕು? ಎಲ್ಲ ಧರ್ಮಗಳ ಶಿಕ್ಷಣವನ್ನು ಕೊಡುವದು ಶಿಕ್ಷಣಕ್ರಮದಲ್ಲಿ ಸಾಧ್ಯವಾಗಬಹುದೆ? ಹಾಗಾದರೆ ವಿವಿಧ ಧರ್ಮಗಳ ಅನುಯಾಯಿಗಳನ್ನು ಹೇಗೆ ಸಾಂತ್ವನಗೊಳಿಸಬೇಕು? ಒಂದನ್ನೇ ಎತ್ತಿಕೊಂಡರೆ ಉಳಿದವರಿಗೆಲ್ಲ ಅಸಹನೆ–ಅಸಮಾಧಾನ. ಇದಕ್ಕಾಗಿಯೇ **ಜನತೆಯ ಸಾರ್ವತ್ರಿಕ ಶಿಕ್ಷಣಕ್ರಮದಲ್ಲಿ ಧಾರ್ಮಿಕಶಿಕ್ಷಣವನ್ನೂ ಬೆರೆಸುವದು ಒಂದು ಬಿಡಿಸಲುಬಾರದ ತೊಡಕಾಗುವದು.** ಇದೇ ಆಶಯದಿಂದಲೇ ಬ್ರಿಟಿಷರು ಶಿಕ್ಷಣ ಸಂಸ್ಥೆಗಳಲ್ಲಿ ಧರ್ಮಕ್ಕೆ ಎಡೆಗೊಡಲಿಲ್ಲ. ಭಾರತವು ಇಂದು 'ಧರ್ಮಾತೀತ'ವಾದ ಜನತಾರಾಜ್ಯವು. '**ಧರ್ಮಾತೀತ'ವೆಂದರೆ ಧರ್ಮರಹಿತವಾದುದು, ಧರ್ಮವನ್ನೇ ಬಿಟ್ಟುಕೊಡುವದು ಎಂಬ**

ಅರ್ಥವಲ್ಲ. ಭಾರತದ ಧರ್ಮಾತೀತತೆಯು 'ಧರ್ಮಸಹಿಷ್ಣುತೆ' ಯಲ್ಲಿದೆ. ಸಮದೃಷ್ಟಿಯಿಂದ ಪ್ರೇರಿತವಾದ ಸರ್ವಧರ್ಮಗಳನ್ನೆಲ್ಲ ಸಮತೆ ಗೌರವಗಳಿಂದ ಕಾಣುವದರಲ್ಲಿದೆ. ಧಾರ್ಮಿಕ ಶಿಕ್ಷಣದ ಬಗ್ಗೆ ಮೂಲಶಿಕ್ಷಣ ವಾದರೂ ಇದೇ ದೃಷ್ಟಿಯನ್ನೇ ಇಟ್ಟುಕೊಂಡಿದೆ. 'ಧಾರ್ಮಿಕ ಶಿಕ್ಷಣಕ್ಕೆ ನೀವು ವಿಶೇಷ ಮಹತ್ವವನ್ನೇಕೆ ಕೊಡುವದಿಲ್ಲ?' ಎಂದು ಗಾಂಧೀಜಿಯವರಿಗೆ ಒಬ್ಬರು ಕೇಳಿದಾಗ್ಗೆ ಅವರು ಹೇಳಿದರು, "ನಾನು ಕಲಿಸುವದು ವ್ಯಾವಹಾರಿಕ ಜೀವನ ಧರ್ಮ. ಅದುವೇ ಸ್ವಾವಲಂಬನ ಧರ್ಮ." ಆದರೆ ಈ ಉತ್ತರದಿಂದ ಆಕ್ಷೇಪಕರಿಗೆ ಸಮಾಧಾನವೆನಿಸಲಿಲ್ಲ. ನಮ್ಮ ನಾಡು ಧರ್ಮಗಳ ನೆಲೆವೀಡು, ತತ್ವಗಳ ತವರುಮನೆ ಎಂದು ಹೆಸರಾಗಿದೆ. **ಧರ್ಮವು ಜೀವನದ ಉಸಿರು.** ತತ್ವಗಳು ಸತ್ಯಶೋಧಕರಿಗೆ ದೇವರು ಹೇಳಿದ ಕಿವಿಮಾತುಗಳು. ಈ ನಾಡಿನಲ್ಲಿ ಮಕ್ಕಳು ಧರ್ಮದ ಉಸಿರಿನಿಂದ ಬೆಳೆಯಬೇಕು. ತಮ್ಮ ತಮ್ಮ ಧರ್ಮದ ತತ್ವಗಳನ್ನೂ ಪರಂಪರೆಗಳನ್ನೂ ತಿಳಿದುಕೊಳ್ಳಬೇಕು. ಇದಕ್ಕಾಗಿ ಶಿಕ್ಷಣ ಕ್ರಮದಲ್ಲಿ ಧಾರ್ಮಿಕಶಿಕ್ಷಣವು ಅಗತ್ಯವೆಂದು ಅವರು ಪ್ರತಿಪಾದಿಸುವರು.

ಗಾಂಧೀಜಿಯವರು ತುಂಬಾ ಆಸ್ತಿಕರು, ಭಾವಿಕರು. ಹಿಂದೂ ಧರ್ಮದ ಬಗ್ಗೆ ಅವರಲ್ಲಿ ಅಚಲವಾದ ಆದರ–ಅಭಿಮಾನಗಳು. ಹೀಗಿದ್ದರೂ ಮೂಲ ಶಿಕ್ಷಣದಲ್ಲಿ ಧಾರ್ಮಿಕಶಿಕ್ಷಣಕ್ಕೆ ಅವರು ಸ್ಥಾನಕೊಟ್ಟಿಲ್ಲ. ಅವರು ಹೀಗೆ ಮಾಡುವುದಕ್ಕೆ ಸಬಲವಾದ ಕಾರಣಗಳಿವೆ. ವ್ಯಾವಹಾರಿಕವಾದ ಆತಂಕಗಳಿವೆ. ನಮ್ಮ ನಾಡಿನಲ್ಲಿ ನೆಲೆಸಿರುವ ಅನೇಕ ಧರ್ಮಗಳಲ್ಲಿ ಯಾವುದನ್ನು ಎತ್ತಿಕೊಳ್ಳಬೇಕೆಂಬುವದು ಎಲ್ಲಕ್ಕೂ ಹೆಚ್ಚಿನ ತೊಂದರೆ. ವಿವಿಧ ಜಾತಿಪಂಥಗಳ ಮಕ್ಕಳಿಗೆ ಒಂದೇ ವಿಧವಾದ ಬೌದ್ಧಿಕ ಶಿಕ್ಷಣವನ್ನು ಕೊಡಬಹುದು. ಆದರೆ ಒಂದೇ ವಿಧವಾದ ಧಾರ್ಮಿಕ ಶಿಕ್ಷಣವನ್ನು ಕೊಡುವದು ಸಾಧ್ಯವೂ ಆಗದು, ಇಷ್ಟವೂ ಆಗದು. ಇದೇ ಮೇರೆಗೆ ಪ್ರತಿಯೊಂದು ಧರ್ಮಪ್ರಪಂಥದ ಮಕ್ಕಳಿಗೆ ಪ್ರತ್ಯೇಕವಾದ ಶಾಲೆಗಳನ್ನು ಏರ್ಪಡಿಸುವದೂ ಶಕ್ಯವಿಲ್ಲ. ಮೇಲಾಗಿ ಇದು ಅನರ್ಥಕಾರಿಯಾದುದು. ಇಂದು ಐಕ್ಯಕ್ಕಾಗಿ ಹೆಣಗುತ್ತಿರುವಾಗ್ಗೆ **ಇಂಥ ಶಾಲೆಗಳು ಪ್ರತ್ಯೇಕತೆಯ ಭಾವನೆಯನ್ನು ಬೆಳೆಸುವವು.**

ಅಂಥ ಶ್ರದ್ಧೆಯನ್ನು ಹುಟ್ಟಿಸುವವು. **'ತನ್ನ ಧರ್ಮವೇ ಮೇಲು-ಉಳಿದವುಗಳೆಲ್ಲ ಕೀಳು' ಎಂಬ ದುರಭಿಮಾನವು ಈಗಾಗಲೇ ಸಾಕಷ್ಟು ದುರಂತಕ್ಕೆ ಕಾರಣವಾಗಿದೆ.** ಧಾರ್ಮಿಕ ಶಿಕ್ಷಣವು ಇಂಥ ದುರ್ಭಾವನೆಯನ್ನು ಹುಟ್ಟಿಸುವಂತಿದ್ದರೆ ಅದು ಸರ್ವಥಾ ತ್ಯಾಜ್ಯವೆಂದೇ ಹೇಳಬೇಕಾಗುವದು. ಆದರೆ ನಿಜವಾದ ಧಾರ್ಮಿಕ ಶಿಕ್ಷಣಕ್ಕೆ ಗಾಂಧೀಜಿಯವರಾಗಲೀ ಮೂಲಶಿಕ್ಷಣವಾಗಲೀ ವಿರೋಧಿಗಳಾಗಿಲ್ಲ. ಧಾರ್ಮಿಕ ಗ್ರಂಥಗಳಲ್ಲಿ ಬರೆದುದನ್ನು ಅಕ್ಷರಶಃ ನಂಬುವದೇ, ಆಚರಿಸುವದೇ, ಧಾರ್ಮಿಕ ಜೀವನವೆಂದು ಗಾಂಧೀಜಿಯವರು ಭಾವಿಸುವದಿಲ್ಲ. ಅಲ್ಲಿರುವ ಪ್ರತಿಯೊಂದು ಸಂಗತಿಯನ್ನೂ ಶೋಧಿಸಿ ನೋಡಬೇಕು, ವಿವೇಕದ ಒರೆಗೆ ಹಚ್ಚಿ ನೋಡಬೇಕು, ವಿರೋಧ ಕಂಡುಬಂದಲ್ಲಿ ಅಂತರಾತ್ಮನ ಆದೇಶದಂತೆ ನಡೆಯಬೇಕು ಎಂದು ಅವರು ಹೇಳುವರು. ಮೂಲಶಿಕ್ಷಣದ ಶಿಕ್ಷಕರಲ್ಲಿಯೂ ಈ ಬಗೆಯ ಶೋಧಕ ಹಾಗೂ ಪ್ರಾಯೋಗಿಕ ಮನೋವೃತ್ತಿಯು ಇರಬೇಕೆಂದು ಅದರ ಯೋಜಕರ ನಿರ್ದೇಶವಾಗಿದೆ.

ಧಾರ್ಮಿಕ ದೃಷ್ಟಿಯಲ್ಲಿ ಸಹಿಷ್ಣುತೆ ಸಮಾನತೆಗಳನ್ನೂ, ಸರ್ವಧರ್ಮಗಳ ಬಗ್ಗೆ ಪೂಜ್ಯ ಭಾವನೆಯನ್ನೂ ಹಾಗೂ ಅವುಗಳ ಸಮನ್ವಯವನ್ನೂ ಸಾಧಿಸುವದೇ ಮೂಲಶಿಕ್ಷಣದ ಗುರಿಯಾಗಿದೆ. **ನೀತಿಯು ಧರ್ಮದ ಬೆನ್ನೆಲುಬೆಂದು ಹೇಳುವದುಂಟು. ಉದಾತ್ತವಾದ ನೀತಿ ತತ್ವಗಳು ಸಕಲ ಧರ್ಮಗಳಿಗೂ ಸಮಾನವಾಗಿರುವವು.** ವಿಶ್ವದ ಎಲ್ಲ ಧರ್ಮಗಳೂ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,...........,' 'ವಿಷವೆಂದು ಕಾಮಕ್ರೋಧಗಳನೀಡಾಡು' ಎಂದು ಮುಂತಾಗಿ ಸಮಾನವಾದ ನೀತಿತತ್ವಗಳನ್ನೇ ಬೋಧಿಸುವವು. ಇಂಥ ನೀತಿ ತತ್ವಗಳನ್ನೇ ತಳಹದಿಯಾಗಿಟ್ಟುಕೊಂಡ **ವಿಶುದ್ಧವಾದ ಜೀವನವನ್ನು ಮಕ್ಕಳಲ್ಲಿ ಕಟ್ಟುವದೇ ಮೂಲಶಿಕ್ಷಣದಲ್ಲಿ ಧಾರ್ಮಿಕ ಶಿಕ್ಷಣ**ವಾಗಿದೆ. ಮೇಲಾಗಿ 'ಆಚಾರ ಪ್ರಭವೋ ಧರ್ಮಃ' ಎಂಬಂತೆ **ಆಚಾರವೇ ಕೃತಿಯೇ ಧರ್ಮದ ಮೂಲವಾಗಿದೆ.** ಆದುದರಿಂದ ಧಾರ್ಮಿಕ ಗ್ರಂಥಗಳ ಕೇವಲ ಗಿಳಿಯೋದಿಗೆ

ಧಾರ್ಮಿಕ ಶಿಕ್ಷಣವೆಂದು ಕರೆಯಲಾಗದು. **ಧರ್ಮವು ನಿತ್ಯಜೀವನದ ಎಲ್ಲ ಕೃತಿಗಳಲ್ಲಿ ಒಡಮೂಡಬೇಕು.** ಶಿಕ್ಷಕನು ಧರ್ಮದ, ನೀತಿಯ ತತ್ವಗಳನ್ನು ತನ್ನ ಜೀವನದಲ್ಲಿ ಅರಗಿಸಿಕೊಂಡು ಮಕ್ಕಳಿಗೆ ಈ ವಿಷಯದಲ್ಲಿ ಮಾರ್ಗದರ್ಶಕನಾಗಬೇಕು. ಸ್ಫೂರ್ತಿಯ ನೆಲೆಯಾಗಬೇಕು. ಮೂಲಶಿಕ್ಷಣದ ಅಂಗವಾದ ಸಾಂಘಿಕ ಜೀವನದಲ್ಲಿ ಮಕ್ಕಳ ನೈತಿಕಜೀವನವು ಅವರಿಗೆ ತಿಳಿಯದಲೆ ರೂಪುಗೊಳ್ಳುವದು. ಮೇಲಾಗಿ ಮೂಲಶಿಕ್ಷಣದ ಅಭ್ಯಾಸಪತ್ರಿಕೆಯಲ್ಲಿ ಸರಿಯಾದ ಧಾರ್ಮಿಕ ತಿಳುವಳಿಕೆಯನ್ನುಂಟುಮಾಡಲು ಸಹಾಯಕವಾದ ಅನೇಕ ವಿಷಯಗಳಿರುವವು. ಪ್ರಾಚೀನ ಭಾರತದ ಕಥಾನಕಗಳು ಅದರಲ್ಲಿವೆ. ಜೀನವ ಚರಿತ್ರೆ, ಕ್ರಿಸ್ತಧರ್ಮದ ಪೂರ್ವೇತಿಹಾಸ, ಇಸ್ಲಾಮದ ಮೂಲತತ್ವಗಳು ಹೀಗೆ ವ್ಯಾಪಕವಾದ, ವಿಶ್ವಬಂಧುತ್ವಕ್ಕೆ ಪೋಷಕವಾದ ವಿಷಯ ಜ್ಞಾನವು ಅಭ್ಯಾಸಪತ್ರಿಕೆಯಲ್ಲಿ ಅಡಕವಾಗಿದೆ. **ಸಮಾಜದ ಸ್ಥೈರ್ಯ ಸುಸ್ಥಿತಿಗಳಿಗೆ ಸಹಾಯಕವಾಗುವದು ಧರ್ಮದ ಕಾರ್ಯ.** ಹಿಂದೂ ಧರ್ಮವು ಬರಿಯ ವಿಚಾರವಾಗಿರದೆ ಅದೊಂದು ಜೀವನದ ರೀತಿಯಾಗಿದೆ. ಸರಿಯಾದ ನೈತಿಕ ಜೀವನವನ್ನು ನಡೆಸಿಯೇ ಈ ಪ್ರಪಂಚದಲ್ಲಿ ನಾವು ಅಧ್ಯಾತ್ಮವನ್ನು ಸಾಧಿಸಬಹುದೆಂದು ತಿಳಿದವರು ಹೇಳುವ ಮಾತಿನ ಮರ್ಮವಾದರೂ ಇದೇ ಆಗಿದೆ. ಸತ್ಯ, ನ್ಯಾಯ ಅಹಿಂಸೆ ಇವು ಸಮಾಜದ ಸ್ಥಿರತೆ ಸುಸ್ಥಿತಿಗಳಿಗೆ ಅವಶ್ಯವಾದ 'ಧರ್ಮ' ವಾಗಿರುವವು. ಇವುಗಳ ಆಚರಣೆಯೇ ಧಾರ್ಮಿಕ ಶಿಕ್ಷಣ. ಮೂಲಶಿಕ್ಷಣವು ಈ ಬಗೆಯ ಧಾರ್ಮಿಕ ಶಿಕ್ಷಣಕ್ಕೆ ಸಹಾಯಕವಾದ ಸನ್ನಿವೇಶಗಳನ್ನು ಯಾವಾಗಲೂ ಒದಗಿಸುವದು.

## ಪರಿಶಿಷ್ಟ ೪

### ಮೂಲಶಿಕ್ಷಣದಲ್ಲಿ

### (೧) ಸಾಂಘಿಕ ಜೀವನ

ಶಿಕ್ಷಣದ ಮೂಲೋದ್ದೇಶಗದಲ್ಲಿ ವ್ಯಕ್ತಿಯು ಹೇಗೆ ಬಾಳಬೇಕು ಎಂಬುವದು ಮಾತ್ರವಲ್ಲದೆ, **ಎಲ್ಲರೊಡನೆ ಕೂಡಿಕೊಂಡು ಹೇಗೆ ಬಾಳಬೇಕು**

ಎಂಬುವದನ್ನು ಕಲಿಸುವದು ಶಿಕ್ಷಣದ ಉದ್ದೇಶವಾಗಿದೆ. ಮಾನವನು ಸಾಮಾಜಿಕ ಪ್ರಾಣಿ. ಮಗುವು ಸಮಾಜದಲ್ಲಿಯೇ ಹುಟ್ಟುವದು. ಸಮಾಜ ದಲ್ಲಿಯೆ ಬೆಳೆಯುವದು, ಕೆಲಸಮಾಡುವದು. ಈ ಬಗೆಯ ಸಾಂಘಿಕ ಸಾಮಾ ಜಿಕ ಜೀವನಕ್ಕಾಗಿ ನಿಸರ್ಗವು ಮಗುವಿಗೆ ಅನೇಕ ಶಕ್ತಿಗಳನ್ನು ದಯಪಾಲಿ ಸಿದೆ, ಭಾವಶಕ್ತಿಗಳನ್ನು ಒದಗಿಸಿದೆ. ಈ ಶಕ್ತಿಗಳೆಲ್ಲ ಸಾಂಘಿಕ ಜೀವನದ ಲ್ಲಿಯೆ ಪ್ರಕಟವಾಗುವವು, ಹಾಗೂ ವಿಕಾಸಗೊಳ್ಳುವವು. **ಮಗುವು ಒಂಟಿಗ ನಾಗಿ ಬಾಳಲಾರನು,** ಬಾಳಬಾರದು. ಸರಿಯಾದ ಸಾಂಘಿಕ ಜೀವನದ ಸಂಸ್ಕಾರವಿಲ್ಲದಿದ್ದರೆ ಜೀವನವು ಸ್ವಾರ್ಥದಲ್ಲಿಯೆ ನಿಂತು ಬಿಡುವದು. ಅದರ ಪ್ರಗತಿಯು ಕಟ್ಟಾಗುವದು. ಅದು '**ಪಶುಜೀವನ**'ವಾಗುವದು.

ಪರಕೀಯ ಶಿಕ್ಷಣದಲ್ಲಿ ಸಾಂಘಿಕ ಜೀವನದ ಕಲ್ಪನೆ–ಉದ್ದೇಶಗಳೇ ಇರ ಲಿಲ್ಲ. ಶಾಲೆಯ ಜೀವನದಲ್ಲಿ ಅದಕ್ಕಾಗಿ ಯಾವ ಕ್ರಮವನ್ನೂ ಕೈಕೊಳ್ಳು ತ್ತಿರಲಿಲ್ಲ. ಜೀವನವೇ ಶಿಕ್ಷಣದಿಂದ ದೂರವಾಗುತ್ತ ಸಿಡಿದು ನಿಂತಿತ್ತು. **'ತಾನು – ತನ್ನ ಓದು – ತನ್ನ ಪರೀಕ್ಷೆ'** ಇವುಗಳನ್ನುಳಿದು ಹೊರಗಿನ ಜೀವನದೊಡನೆ ವಿದ್ಯಾರ್ಥಿಗಳಿಗೆ ಯಾವ ಸಂಪರ್ಕವೂ ಬರುತ್ತಿರಲಿಲ್ಲ. ಅದರ ಅವಶ್ಯಕತೆಯೂ ಅನಿಸುತ್ತಿರಲಿಲ್ಲ. ಈ ಬಗೆಯ ಏಕಾಂಗಿಯಾದ ಶಿಕ್ಷಣ ದಿಂದ ವ್ಯಕ್ತಿವಿಕಾಸವೂ ಸರಿಯಾಗಿ, ಸಮನ್ವಯವಾಗಿ ಸಾಗುತ್ತಿರಲಿಲ್ಲ. ಸಾಂಘಿಕ ಜೀವನಕ್ಕೆ ಪ್ರತಿಕೂಲವಾದ ಸ್ವಾರ್ಥ–ಸ್ಪರ್ಧೆಗಳಿಗೆ ಉಚಿತವಾದ ಕಟ್ಟು ನಿಟ್ಟುಗಳನ್ನು ಹಾಕುವ ಭಾವಸಂಸ್ಕರಣಕ್ಕಂತೂ ಅದರಲ್ಲಿ ಎಳ್ಳಷ್ಟಾ ದರೂ ಎಡೆಯಿರಲಿಲ್ಲ. ಇಂಥ ಶಿಕ್ಷಣವನ್ನು ಪಡೆದ ವ್ಯಕ್ತಿಗಳು ಒಳ್ಳೆಯ ಸಮಾಜ ವನ್ನು ಹೇಗೆ ಕಟ್ಟಬಲ್ಲರು ? ಹೀಗಾಗಿ ಸಮಾಜದಲ್ಲಿ ಸ್ವಾರ್ಥ, ಸ್ಪರ್ಧೆ ಹಾಗೂ ಹಿಂಸೆಗಳು ಹೆಚ್ಚಾಗಿ ತಲೆಯೆತ್ತಿದವು. **ಶಿಕ್ಷಣದ ಪ್ರಭಾವವು ಸಮಾಜದಮೇಲೆ ಬೀಳುವದು. ಸಮಾಜದ ಗೊತ್ತುಗುರಿಗಳು ಶಿಕ್ಷಣದಲ್ಲಿ ಕಾಣಿಸಿಕೊಳ್ಳುವವು.** ಶಿಕ್ಷಣವು ಸಮಾಜವನ್ನು ನಿರ್ಮಿಸು ವದಾದರೆ, ಸಮಾಜವು ತನ್ನ ಆಶೆ ಆಕಾಂಕ್ಷೆಗಳಿಗೆ ಶಿಕ್ಷಣದಲ್ಲಿ ಮೂರ್ತ ಸ್ವರೂಪವನ್ನು ಕೊಡುವದು. ಒಂದರ ವಿಶುದ್ಧಿಯೇ, ಮತ್ತೊಂದರ ವಿಶುದ್ಧಿಗೆ

ಕಾರಣವಾಗುವದು. **ಶಿಕ್ಷಣವು ಸತ್ವಶಾಲಿಯಾದರೆ ಸಮಾಜವು ಪ್ರಭಾವಯುತವಾಗುವದು.**

ಪ್ರಭಾವಶಾಲಿಯಾದ ನೂತನ ಸಮಾಜವನ್ನು ನಿರ್ಮಿಸುವದೇ ಮೂಲ ಶಿಕ್ಷಣದ ಗುರಿಯಾಗಿದೆ. ಸತ್ಯ, ಸಹಕಾರ, ಉದ್ಯೋಗ, ಅಹಿಂಸೆ ಹಾಗೂ ಸ್ವಾವಲಂಬನಗಳು **ನೂತನ ಸಮಾಜದ ಪಂಚಪ್ರಾಣಗಳು.** ಮೂಲ ಶಿಕ್ಷಣದ ಶಾಲೆಗಳು ಈ ಬಗೆಯ ಸಾಮಾಜಿಕ ಜೀವನಕ್ಕೆ 'ರಂಗಭೂಮಿ' ಯಾಗಬೇಕು. **ಶಿಕ್ಷಣವು ಇಂಥ ಜೀವನದ 'ರಂಗತಾಲೀಮು' ಎನ್ನುವಂತಿರಬೇಕು.** ಮೂಲಶಿಕ್ಷಣವು ಉದ್ಯೋಗ ತತ್ಪರತೆಯನ್ನು ತಂದು ಕೊಡುವದು. ತನಗಾಗಿ ಉಳಿದವರು ಎಷ್ಟೊಂದು ಕೆಲಸಮಾಡುತ್ತಿರುವರೆಂಬ ಅರಿವು ಮಗುವಿಗೆ ಮೂಲಶಿಕ್ಷಣದಲ್ಲಿ ಆಗುವದು. ತಾನೂ ಉಳಿದವರಿಗಾಗಿ ಏನಾದರೂ ಮಾಡಬೇಕು, ಸಮಾಜಕ್ಕೆ ತನ್ನ ಕೃತಿರೂಪವಾದ ಕಾಣಿಕೆಯನ್ನು ಸಲ್ಲಿಸಬೇಕು, ಎನ್ನುವ ಸಾಮಾಜಿಕ ಜೀವನದ ಹೊಣೆಗಾರಿಕೆಯು ಆತನಿಗೆ ಹೊಳೆಯುವದು. **ಎಲ್ಲರ ಹಿತದಲ್ಲಿ ತನ್ನ ಹಿತವನ್ನು ಕಾಣುವ ಸಹಕಾರ ಸಹಾನುಭೂತಿಗಳು** ಆತನಲ್ಲಿ ಉದಯಿಸುವವು. ನೌಕರಿಯ ಬಿಸಿಲುಗುದುರೆಯನ್ನೇರಿ ಕೊನೆಗೆ ನಿರಾಶೆಗೊಂಡು ಹಿಂತಿರುಗುವ ನಿರುದ್ಯೋಗಿಗಳು ರಾಷ್ಟ್ರದ ಬಲವನ್ನು ಕುಗ್ಗಿಸುವರು. ಹೊಟ್ಟೆಯ ಪಾಡಿಗಾಗಿ ಸ್ವಾಭಿಮಾನ ನೀತಿಮತ್ತೆಗಳನ್ನು ಮಾರಿಕೊಳ್ಳುವರು. ವ್ಯಕ್ತಿಗಳ ನೀತಿಮತ್ತೆಯು ಶಿಥಿಲವಾದರೆ ಸಮಾಜದ ನೈತಿಕ ತಳಹದಿಯು ಸಡಿಲಾಗುವದು. ಮೂಲ ಶಿಕ್ಷಣವು ಸ್ವಾವಲಂಬನವನ್ನು ಗುರಿಯಾಗಿಟ್ಟುಕೊಂಡಿದೆ. ಸ್ವಾವಲಂಬಿಗಳಾದ ವ್ಯಕ್ತಿಗಳು ಸ್ವಾಭಿಮಾನಿಗಳಾಗುವರು, ಧ್ಯೇಯನಿಷ್ಠರಾಗುವರು, ಪಾಪಭೀರುಗಳಾಗುವರು. ಅದರಿಂದ ಸಮಾಜದಲ್ಲಿ ಸ್ವಾಸ್ಥ್ಯವು, ಶಾಂತಿಯು ನೆಲಿಸುವಂತಾಗುವದು. ಕೂಡಿ ಕೆಲಸಮಾಡುವದರಿಂದ ಒಕ್ಕಟ್ಟು ಬಂಧು ಭಾವಗಳು ಮಕ್ಕಳಲ್ಲಿ ಬೆಳೆದುಬರುವವು. ಆ ಜಾತಿ ಈ ಜಾತಿ, ಬಡವ ಸಿರಿವಂತ, ಮೇಲು ಕೀಳೆಂಬ ಸಾಂಘಿಕ ಜೀವನಕ್ಕೆ ವಿರೋಧಿಗಳಾದ ಭಾವನೆಗಳು ಒಂದೇ ಉದ್ಯೋಗದಲ್ಲಿ ಕೂಡಿ ಕೆಲಸಮಾಡುವ ಮಕ್ಕಳಲ್ಲಿ ಇಲ್ಲದಂತಾಗುವವು.

ಕೂಡಿ ಬಾಳುವದು—ಸಾಂಘಿಕ ಜೀವನವು ಒಂದು ಶಾಸ್ತ್ರವಲ್ಲ. ಅದು ಒಂದು ಕೃತಿರೂಪವಾದ ಕಲೆ. **ಜೀವನಕಲೆಯನ್ನು ಓದಿ ತಿಳಿದು ಕೊಳ್ಳುವಂತಿಲ್ಲ. ಆ ಜೀವನವನ್ನು ಪ್ರತ್ಯಕ್ಷವಾಗಿ ಆಚರಿಸಿ ಅನು ಭವಿಸಿ ನಮ್ಮದಾಗಿ ಮಾಡಿಕೊಳ್ಳಬೇಕು.** 'ನೀರಲ್ಲಿ ಬಿದ್ದ ಹೊರತು ಈಸು ಬರುವದಿಲ್ಲ' ಎಂದು ಹಿರಿಯರು ಹೇಳುವ ಮಾತಿನ ಮರ್ಮವಾದರೂ ಇದೇ ಆಗಿದೆ. ಶಾಸ್ತ್ರ ಓದಿ ಯಾರೂ ಈಸುವದನ್ನು ಕಲಿಯಲಾರರು. ಈಸಿಯೇ ಈಸು ಕಲಿಯಬೇಕು. ಅದೇ ರೀತಿಯಾಗಿ ಸರಿಯಾದ ಸಾಂಘಿಕ ಜೀವನವನ್ನು ಪೊತ್ತಿಗೆಗಳಿಂದ ಉಪದೇಶದಿಂದ, ಮಕ್ಕಳು ಕಲಿಯಲಾರರು. ಆ ರೀತಿಯ ಜೀವನವನ್ನು ಶಿಕ್ಷಣದ ಆರಂಭದಿಂದಲೇ ಅವರು ಆಚರಿಸಬೇಕು. 'ಮಾಡುತ್ತ ಕಲಿ' ಯೆನ್ನುವ ಶಿಕ್ಷಣ ತತ್ವವು ಸಾಂಘಿಕ ಜೀವನಕ್ಕೂ ಅನ್ವ ಯಿಸುವದು. ಸಹೇತುಕವಾದ, ಉತ್ಪಾದಕವಾದ ಉದ್ಯೋಗವನ್ನೇ ಮೂಲ ವಾಗಿಟ್ಟುಕೊಂಡ ಶಿಕ್ಷಣದಲ್ಲಿ ಇಂಥ ಜೀವನಕ್ಕೆ ಎಲ್ಲ ಬಗೆಯ ಆಸ್ಪದ ಗಳುಂಟು. ಅಂತೆಯೇ ಅದಕ್ಕೆ ಜೀವನ ಶಿಕ್ಷಣವೆಂದು ಹೇಳುವರು. ಮೂಲ ಶಿಕ್ಷಣದ ಶಾಲೆಗಳಲ್ಲಿ ಸಾಂಘಿಕ ಜೀವನದ ದೃಷ್ಟಿಯಿಂದಲೇ ವಿವಿಧವಾದ ಚಟುವಟಿಕೆಗಳನ್ನೂ ಕಾರ್ಯಕ್ರಮಗಳನ್ನೂ ಏರ್ಪಡಿಸುವರು. ಶಾಲೆಯ ವಿವಿಧ ಸಮಾರಂಭಗಳಲ್ಲಿ **ಮಕ್ಕಳ ದಿನ, ಸ್ನೇಹಸಮ್ಮೇಲನ** ಮೊದಲಾದ ವುಗಳಲ್ಲಿ ಬಾಲಕರು ಕೂಡಿಕೊಂಡು ಕೆಲಸ ಮಾಡುವರು. ಇದೇ ಮೇರೆಗೆ ಶಾಲೆಯ ಸ್ವಚ್ಛತೆ, ಗ್ರಾಮಸ್ವಚ್ಛತೆಗಳಲ್ಲಿ ಅವರು ಎಲ್ಲರೊಡನೆ ಭಾಗ ವಹಿಸು ವರು. **'ಸಮಾಜಕ್ಕೆ ನಾನು ಋಣಿಯಾಗಿರುವೆ, ನಾನೂ ಸಮಾಜಕ್ಕೆ ನನ್ನ ಅಳಿಲುಸೇವೆ ಸಲ್ಲಿಸಬೇಕು' ಎನ್ನುವ ಸೇವಾಬುದ್ಧಿಯೂ ಅವರಲ್ಲಿ ಮೂಡುವದು.** ಅನೇಕ ಜಯಂತಿಗಳನ್ನೂ ಉತ್ಸವಗಳನ್ನೂ ಅವರು ಆಚರಿಸುವರು. ಹಿಂದೆ, ಹಬ್ಬಗಳೆಂದರೆ 'ಹೋಳಿಗೆಯ ಹಾಗೂ ನಿರುದ್ಯೋಗ'ದ ದಿನಗಳಾಗಿದ್ದವು. ಇಂದು ಹಬ್ಬಗಳು ಮಕ್ಕಳಿಗೆ ಸಾಂಘಿಕ ಜೀವನದ ಹಾಗೂ 'ಜ್ಞಾನ ಸಾಧನದ ಸುಪ್ರಸಂಗಗಳು' ಆಗುವವು. ವರ್ಗದ ಕೋಣೆಗಳನ್ನು ಅಲಂಕರಿಸುವರು. ವಿವಿಧ ಪೂಜಾಸಾಮಗ್ರಿಗಳನ್ನು ಸಂಗ್ರ

ಹಿಸುವರು. ಅತಿಥಿಗಳನ್ನು ಆಮಂತ್ರಿಸುವರು. ಇವೆಲ್ಲ ಕಾರ್ಯಗಳು **ರಚ** **ನಾತ್ಮಕ** ಕ್ರಿಯೆಗಳು. ಇಂಥ ಕೆಲಸಗಳಲ್ಲಿ ತೊಡಗಿದಾಗ್ಗೆ ಮಕ್ಕಳಲ್ಲಿ **ಸ್ವಯಂ ಪ್ರೇರಿತವಾದ ಶಿಸ್ತು-ಸಂಘಟನೆಗಳು** ತಾವಾಗಿಯೇ ತಲೆದೋರುವವು. ಸಂಘಟನೆಯಲ್ಲಿ **ಶ್ರಮವಿಭಾಗವು** ಬರುವದು. ಅವರಲ್ಲಿ ಕೆಲವರು ಹಿರಿ ಮಣಿಗಳು-ಮುಂದಾಳುಗಳು, ಕೆಲವರು ಅನುಯಾಯಿಗಳು. ಆಜ್ಞಾಪಾಲನ ವಿಧೇಯತೆಗಳ ಪಾಠವು ಇಂಥ ಜೀವನದಲ್ಲಿ ಅವರಿಗೆ ತಿಳಿಯದೆಯೆ ಪ್ರಾರಂಭ ವಾಗುವದು. ಮಹಾಪುರುಷರ ಜಯಂತಿ ಪುಣ್ಯದಿನಗಳಲ್ಲಿ ಅವರ **ಚರಿತ್ರೆ** ಯನ್ನೂ, ತತ್ವಗಳನ್ನೂ, ಕೃತಿಗಳನ್ನೂ ಬಾಲಕರು ತಿಳಿದುಕೊಳ್ಳುವರು. **ಇದ** ರಿಂದ ಜೀವನದೊಡನೆ ಜ್ಞಾನವೂ ಸಮರಸವಾಗಿ ಬೆರೆತುಕೊಂಡು ಬೆಳೆಯುವ ಮಕ್ಕಳಲ್ಲಿ ದೇಶಾಭಿಮಾನವನ್ನೂ ಧರ್ಮಬುದ್ಧಿಯನ್ನೂ ತಂದು ಕೊಡಲು ತುಂಬಾ ಸಹಾಯಕವಾಗುವದು.

ಶಾಲೆಯ ಸಾಂಘಿಕ ಜೀವನದಲ್ಲಿ ತಮ್ಮ ಹೊಣೆಯನ್ನರಿತು ಕೆಲಸ ಮಾಡುವದನ್ನೂ ಮಕ್ಕಳು ಕಲಿಯುವರು. **ವಸತಿಗೃಹವಿದ್ದರೆ** ಕೊಳ್ಳುವ ದನ್ನೂ ಕೊಡುವದನ್ನೂ ಅವರೆ ಮಾಡುವರು. ಎಲ್ಲ ಲೆಕ್ಕಪತ್ರಗಳನ್ನು ಅವರೇ ಇಡುವರು. **ಶಾಲೆಯ ತೋಟದ, ಸಹಕಾರೀ ಅಂಗಡಿಯ, ಪ್ರವಾಸಗಳ** ಲೆಕ್ಕಪತ್ರಗಳನ್ನೂ ಅವರೇ ಇಡುವರು. ಶಿಕ್ಷಕನು ಕೇವಲ ಸೂಕ್ತವಾದ ಸಲಹೆಗಳನ್ನು ಕೊಡುವವನು, ಮಾರ್ಗದರ್ಶಕನು ಮಾತ್ರ '**ಇದು ಸಾರ್ವಜನಿಕ ಹಣ,**' ಇದರ ವಿನಿಯೋಗದಲ್ಲಿ ಪ್ರಾಮಾಣಿಕತೆಯೂ, ಮಿತವ್ಯಯವೂ ಇರಬೇಕೆಂಬ ಹೊಣೆಗಾರಿಕೆಯು ಅವರಲ್ಲಿ ಬರುವದು. ಇದಲ್ಲದೆ, **ಶಾಲೆಯೂ ಒಂದು 'ಚಿಕ್ಕರಾಷ್ಟ್ರ,' ಅದರ ಆಡಳಿತದ ಹೊಣೆಯೆಲ್ಲವೂ ವಿದ್ಯಾರ್ಥಿಗಳ ಮೇಲೆ.** ಅವರು ತಮ್ಮ **ಮಂತ್ರಿ ಮಂಡಲ**ಗಳನ್ನು ತಾವೇ ನಿರ್ಮಿಸುವರು; **ನ್ಯಾಯಸಭೆ**ಯನ್ನು ರಚಿಸುವರು. ಈ ನ್ಯಾಯ ಮಂಡಲಗಳ ಕಾರ್ಯವು ತಪ್ಪು ಮಾಡಿದವರನ್ನು ದಂಡಿ ಸುವದೊಂದೇ ಆಗಿರದು. ತಪ್ಪು ಮಾಡಿದವರನ್ನು ತಿದ್ದುವದೂ, ಮುಂದೆ ತಪ್ಪಾಗದಂತೆ ನೋಡಿಕೊಳ್ಳುವದೂ ಅದರ ಕಾರ್ಯವಾಗಿದೆ. ಮಕ್ಕಳು ತಮ್ಮ

**ಮನರಂಜನೆಯ ಕಾರ್ಯಕ್ರಮವನ್ನು** ತಾವೇ ಗೊತ್ತುಪಡಿಸುವರು. ನೃತ್ಯ, ಸಂಗೀತ, ಪ್ರವಾಸಗಳಲ್ಲಿ ಮನರಂಜನೆ ಮಾತ್ರವಲ್ಲದೆ, ಸಮಾಜದೊಡನೆ ಸಂಪರ್ಕವನ್ನೂ, ಸಾಂಘಿಕ ಜೀವನದ ವಿಶಾಲವಾದ ಅನುಭವವನ್ನೂ ಅವರು ಪಡೆಯುವರು.

ಈ ರೀತಿಯಾಗಿ ಸಾಂಘಿಕ ಜೀವನವು ಮೂಲ ಶಿಕ್ಷಣದ ಒಂದು ಮಹತ್ವದ ಅಂಗವಾಗಿದೆ. ಮಕ್ಕಳಲ್ಲಿ ಹುದುಗಿದ ಆತ್ಮಶಕ್ತಿಗಳನ್ನು ಹೊರಗೆ ತರಲು ಸಬಲವಾದ ಸಾಧನವಾಗಿದೆ. ಅವರ ಕೃತಿಪ್ರೇಮವನ್ನು ಸಾಮಾಜಿಕ ಜೀವನಕ್ಕೆ ಹೊಂದಿಸಿಕೊಂಡು ಅವರನ್ನು ಕರ್ತವ್ಯತತ್ಪರರನ್ನಾಗಿ, ರಚನಾತ್ಮಕ ಕೆಲಸಗಳಲ್ಲಿ ನಿರತರನ್ನಾಗಿ ಅದು ಮಾಡುವದು. ಎಲ್ಲಕ್ಕೂ ಹೆಚ್ಚಾಗಿ, **ಪರಸ್ಪರ ಸಹಕಾರದಿಂದ ಕೂಡಿ ಬಾಳುವ ಜೀವನಕಲೆಯನ್ನು** ಪ್ರತ್ಯಕ್ಷವಾಗಿ ಆಚರಿಸಿ ಸಾಂಘಿಕ ಜೀವನದಲ್ಲಿ ಮಕ್ಕಳು ಪರಿಣತಿಯನ್ನು ಪಡೆಯುವರು.

**(೨) ಸಫಾಯಿ ಸ್ವಚ್ಛತೆ :—**

ಸಫಾಯಿ, ಸ್ವಚ್ಛತೆಗಳಿಗೂ ಮೂಲ ಶಿಕ್ಷಣದಲ್ಲಿ ಮಹತ್ವದ ಸ್ಥಾನವಿದೆ. ಸಫಾಯಿ ಸ್ವಚ್ಛತೆಗಳು ಸಾಂಘಿಕ ಜೀವನದ ಬೇರೊಂದು ಸ್ವರೂಪವೆಂದೇ ಹೇಳಬಹುದು. ಜೀವನ ಕಲೆಗೆ ಅವು ಬೆನ್ನೆಲುಬಿನಂತೆ ಇರುವವು. ಸಹಜ ಪ್ರವೃತ್ತಿಗಳಲ್ಲಿ ಒಂದಾಗಿರುವ ಹೇಯ—ಜುಗುಪ್ಸಾ--ಪ್ರವೃತ್ತಿಯು ಸ್ವಚ್ಛತೆಗೆ ಮಾನಸಿಕ ಹಿನ್ನೆಲೆಯಾಗಿರುವದು. ಹೊಲಸು—ಹೇಸಿಕೆಗಳನ್ನು ಕಂಡರೆ ನಮ್ಮ ಮನಸ್ಸು ತಾನಾಗಿಯೇ ಮುದುಡುವದು. ಸ್ವಚ್ಛತೆಯು ಮನಸ್ಸಿಗೆ ಸಂತೋಷವನ್ನುಂಟುಮಾಡುವದು. ಮೂಲಶಿಕ್ಷಣವು ಸಫಾಯಿ ಸ್ವಚ್ಛತೆಯ ಕೆಲಸದಿಂದಲೇ ಪ್ರಾರಂಭವಾಗುವದೆಂದು ಮಹಾತ್ಮಾಜಿಯವರು ಹೇಳುವರು. **ಆರೋಗ್ಯದ ಮೂಲಸೂತ್ರವೇ ಸ್ವಚ್ಛತೆ ಆಗಿರುವದು.** ಧೂಳಿ-ಹೊಲಸು ಮಾನವಜಾತಿಯ ಮೊದಲನೆಯ ಶತ್ರುವೆಂದು ತಿಳಿದವರೊಬ್ಬರು ಹೇಳಿರುವರು. ಅನೇಕ ರೋಗಗಳು, ವಿಶೇಷತಃ ಸಾಂಸರ್ಗಿಕ ರೋಗಗಳು, ಅಸ್ವಚ್ಛತೆಯಿಂದಲೇ ಉತ್ಪನ್ನವಾಗುವವು. ಇದಲ್ಲದೆ ಶಿಕ್ಷಣ ಸಂಸ್ಥೆಗಳಲ್ಲಿ ಸ್ವಚ್ಛತೆಯು

ಕಲಿಯುವ ಮಕ್ಕಳಲ್ಲಿ **ಮನಸ್ಸಿನ ಪ್ರಸನ್ನತೆಯನ್ನೂ ಏಕಾಗ್ರತೆಯನ್ನೂ** ತಂದುಕೊಡುವದು. ಧೂಳುಮುಚ್ಚಿದ ನೆಲ, ತೇವು ಏರಿದ ಗೋಡೆಗಳು, ಮಂದಪ್ರಕಾಶ, ಗಾಳಿ ಬೆಳಕುಗಳಿಗೆ ಪ್ರತಿಬಂಧ—ಇಂಥ ಸ್ಥಳದಲ್ಲಿ ಯಾರ ಮನಸ್ಸೂ ಓದಿನಲ್ಲಿ ತೊಡಗಲಾರದು.

ಸ್ವಚ್ಛತೆಯು ಎರಡು ಬಗೆಯಾಗಿದೆ. (೧) **ವೈಯಕ್ತಿಕವಾದುದು;** (೨) **ಸಾಮೂಹಿಕವಾದುದು**. ಮೂಲಶಿಕ್ಷಣದ ಅಂಗವಾದ 'ಸಫಾಯಿ' ಎರಡು ಬಗೆಯ ಸ್ವಚ್ಛತೆಗಳನ್ನೂ ಒಳಗೊಂಡಿರುವದು. ಶಾಲೆಗೆ ಬರುವ ಮಗುವಿನ ಶಾರೀರಿಕ ಸ್ವಚ್ಛತೆಯನ್ನು ಶಿಕ್ಷಕನು ಗಮನಿಸಬೇಕು. ಆತನು ಮುಖ ತೊಳೆದುಕೊಂಡಿರುವನೆ? ಹಲ್ಲು ಉಜ್ಜಿಕೊಂಡಿರುವನೆ? ಉಗುರು ಬೆಳೆದಿರುವವೆ? ಒಗೆದ ಬಟ್ಟೆಗಳನ್ನು ಹಾಕಿಕೊಂಡಿರುವನೆ? ಹುಡುಗೆಯರು ಹಿಕ್ಕಿ ಹೆಣಿಲು ಹಾಕಿಕೊಂಡಿರುವರೆ? ಇವೆಲ್ಲ ಸಂಗತಿಗಳನ್ನು ಶಿಕ್ಷಕನು ಲಕ್ಷಿಸಬೇಕು. ಮಕ್ಕಳಿಂದ ಮಾಡಿಸಬೇಕು, ಇಲ್ಲವೆ ತಾನೇ ಮುಂದಾಗಿ ಮಾಡಬೇಕು. **ಓರಣ—ಅಚ್ಚುಕಟ್ಟುತನ**ಗಳೂ ಸ್ವಚ್ಛತೆಯ ಭಿನ್ನಸ್ವರೂಪಗಳೇ. ಬಾಲಕರು ತಮ್ಮ ಪಾಟಿ—ಪುಸ್ತಕಗಳನ್ನೂ, ಮೂಲೋದ್ಯೋಗದ ಉಪಕರಣಗಳನ್ನೂ ಓರಣವಾಗಿ ಇಟ್ಟುಕೊಳ್ಳುವಂತೆ ಶಿಕ್ಷಕನು ನೋಡಿಕೊಳ್ಳಬೇಕು. ಎಳೆಯ ವಯಸ್ಸಿನ ಮಿದುವಾದ ಮನಸ್ಸಿನಲ್ಲಿ ಸ್ವಚ್ಛತೆಯ—ಅಚ್ಚುಕಟ್ಟುತನದ ಪ್ರೇಮವನ್ನು ಶಿಕ್ಷಕನು ಮೊದಲಿನಿಂದಲೇ ಮೂಡಿಸಬೇಕು. ಅಂದರೆ ಅದು ಅವರಲ್ಲಿ ಸ್ಥಿರವಾಗಿ ನೆಲೆಸುವದು. **ಸ್ವಚ್ಛತೆಯು ಆರೋಗ್ಯದ ಪ್ರಥಮ ಪಾಠವು,** ಶರೀರರಕ್ಷಣೆಯ ಏಕಮೇವ ಸಾಧನವು. ಶರೀರವನ್ನು ಸುಸ್ಥಿತಿಯಲ್ಲಿ—ನಿರೋಗಿಯಾಗಿ—ಇಟ್ಟುಕೊಳ್ಳುವದೂ ಧರ್ಮದ ಒಂದು ಸಾಧನವೆಂದು ಹಿರಿಯರು ಹೇಳಿರುವರು. 'ದೇಹವೇ ದೇಗುಲವಯ್ಯಾ' ಎಂದು ಶರಣರೂ ಸಾರಿರುವರು. **ಸ್ವಚ್ಛತೆ ದೇವತ್ವಕ್ಕೆ ಸರಿಸಮಾನವೆಂದು** ಅದರ ಮಹತಿಯನ್ನು ಮತ್ತೊಬ್ಬರು ವರ್ಣಿಸಿರುವರು. 'ಬಾಹ್ಯಶುದ್ಧಿಯಿದ್ದರೆ ಅಂತಃಕರಣ ಶುದ್ಧಿಯು ತಾನಾಗಿಯೇ ಲಭಿಸುವದು. ಅಂತರಂಗದ ಶುದ್ಧಿಗಾಗಿ ಬಾಹ್ಯಶುದ್ಧಿಯನ್ನು ಬಹಿಷ್ಕರಿಸುವವರು ಎರಡನ್ನೂ ಕಳೆದುಕೊಳ್ಳುವರು' ಎಂದು

ಗಾಂಧೀಜಿಯವರು ಹೇಳಿರುವರು. 'ಕಳಬೇಡ ಕೊಲಬೇಡ....**ಇದೇ ಅಂತ ರಂಗಶುದ್ಧಿ, ಇದೇ ಬಹಿರಂಗಶುದ್ಧಿ**' ಯೆಂದು ಶರಣಶ್ರೇಷ್ಠರಾದ ಬಸ ವಣ್ಣನವರೂ ಹೇಳಿರುವರು.

**ಸಾಮೂಹಿಕ ಸ್ವಚ್ಛತೆಯೂ** ಇಷ್ಟೇ ಮಹತ್ವದ್ದಾಗಿದೆ. ಮನೆಯ ಸ್ವಚ್ಛತೆಯಿಂದ ಸಾರ್ವಜನಿಕ ಶೌಚಕೂಪಗಳ ಸ್ವಚ್ಛತೆಯವರೆಗೆ—ಸಾಮೂ ಹಿಕ ಸಫಾಯಿಯು ವ್ಯಾಪಕವಾಗಿರುವದು. ಮೇಲು ಕೀಳೆನ್ನದೆ '**ಭಂಗಿ' ಯ ಕೆಲಸವನ್ನೂ ಗೌರವದಿಂದ ಕಾಣಬೇಕು**, ಆಸ್ಥೆಯಿಂದ ಮಾಡಬೇಕು. **ಸಫಾಯಿಯೆಂದರೆ ನಮ್ಮ ಮನೆಯ ಹೊಲಸನ್ನು ಮುಂದಿನ ಮನೆ ಯೆದುರಿಗೆ ಹಾಕುವದಲ್ಲ.** ಹೊಲಸನ್ನೇ ತೆಗೆದು ಹಾಕುವದು—ಹೊಲಸು ಬೀಳದಂತೆ ನೋಡಿಕೊಳ್ಳುವದು. ವಿದೇಶಗಳಲ್ಲಿ ಸಾಮೂಹಿಕ ಸ್ವಚ್ಛತೆಯ ಅರಿವೂ, ಹೊಣೆಗಾರಿಕೆಯೂ ಹೆಚ್ಚಾಗಿ ಕಂಡುಬರುವದು. ನಮ್ಮ ದೇಶದಲ್ಲಿ ಮಲಮೂತ್ರ ವಿಸರ್ಜನೆಗೆ ಸ್ಥಳದ ನಿರ್ಬಂಧವಿಲ್ಲ, ಮರ್ಯಾದೆಯಿಲ್ಲ, ಔಚಿತ್ಯ ವಿಲ್ಲ. ಉಗುಳುವದಕ್ಕಂತೂ ಯಾವ ನಿಯಂತ್ರಣವೂ ಇಲ್ಲ. ಇದರಿಂದ ರೋಗಗಳ ಉತ್ಪತ್ತಿಗೆ, ಪ್ರಸಾರಕ್ಕೆ ತುಂಬಾ ಸಂಧಿಯು ದೊರೆಯುವದು. ಸಾಮೂಹಿಕ ಸಫಾಯಿಯ ಮಹತಿಯನ್ನೂ ಮಕ್ಕಳಿಗೆ ತಿಳಿಸಿಕೊಡಬೇಕು. ಆಬಗ್ಗೆ ಅವರಲ್ಲಿ ಒಲವು—ಆಸ್ಥೆಗಳನ್ನು ಹುಟ್ಟಿಸಬೇಕು. ಹೊಲಸು ಹೇಸಿಗೆ ಗಳು ಎಲ್ಲಿಯೇ ಕಾಣಲಿ—ಅವುಗಳನ್ನು ತೆಗೆದುಹಾಕಲು ಅವರ ಕೈಗಳು ಯಾವಾ ಗಲೂ ಆತುರವಾಗಿರಬೇಕು. ಅವ್ಯವಸ್ಥೆಯಲ್ಲಿ ಅಚ್ಚುಕಟ್ಟುತನವನ್ನು ಕೂಡಲೇ ತರಲು ಅವರು ಮುಂದಾಗಬೇಕು.

**'ಸಫಾಯಿ'ಯು ಒಂದು ವಿಜ್ಞಾನವಾಗಿದೆ.** ಜೀವನೋಪ ಯೋಗಿಯಾದ ಅನೇಕ ವಿಷಯುಗಳನ್ನೂ ಕೃತಿಗಳನ್ನೂ ಮಕ್ಕಳು ಅದರಲ್ಲಿ ಕಂಡುಕೊಳ್ಳುವರು, ಕಲಿತುಕೊಳ್ಳುವರು. ರೋಗನಿವಾರಣೆಯೊಂದೇ ಅದರ ಉದ್ದೇಶವಾಗಿಲ್ಲ. **ಸೌಂದರ್ಯ ಪ್ರೀತಿಯು ಮಕ್ಕಳಲ್ಲಿ** ಉಂಟಾಗಬೇಕು. ಸೌಂದರ್ಯದೃಷ್ಟಿಯು ಅವರಲ್ಲಿ ಒಡಮೂಡಬೇಕು. ಇಷ್ಟು ಮಾತ್ರವಲ್ಲದೆ **ಸೌಂದರ್ಯ ನಿರ್ಮಿತಿಯನ್ನೂ** ಅವರು ಕೈಕೊಳ್ಳಬೇಕು. ತಮ್ಮ ಸ್ವಂತದ

ಜೀವನವನ್ನೂ ಸಮಾಜದ ಜೀವನವನ್ನೂ ನಿರ್ಮಲವಾಗಿ, ಸುಂದರವಾಗಿ, ಸುಖಮಯವಾಗಿ ಮಾಡುವದೇ ಮೂಲಶಿಕ್ಷಣದಲ್ಲಿ ಸಫಾಯಿ–ಸ್ವಚ್ಛತೆಗಳ ಮಹೋದ್ದೇಶವಾಗಿದೆ.

(೩) **ಪ್ರಾರ್ಥನೆ :—**

ಮೂಲಶಿಕ್ಷಣದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪ್ರಾರ್ಥನೆಯೂ ಒಂದಾಗಿದೆ. ದಿನದ ಕಾರ್ಯವನ್ನು ಪ್ರಾರ್ಥನೆಯಿಂದ ಪ್ರಾರಂಭಿಸಬೇಕು, ಪ್ರಾರ್ಥನೆಯಿಂದ ಮುಕ್ತಾಯಗೊಳಿಸಬೇಕು. ಪ್ರಾರ್ಥನೆ ಜೀವನಹೋರಾಟದಲ್ಲಿ ಒಂದು ಪ್ರಬಲವಾದ ಸಾಧನ. ಪ್ರಾರ್ಥನೆಯೆಂದರೆ, **ಭಿಕ್ಷೆಬೇಡುವದಲ್ಲ;** ಹೇಡಿತನದ ಕೆಲಸವಲ್ಲ. ಇಲ್ಲವೇ, 'ಸಂಕಟ ಬಂದಾಗ ವೆಂಕಟರಮಣ' ಎನ್ನುವ ಕೇವಲ **ಆಪತ್ಕಾಲದ ಆರ್ತಸ್ವರವಲ್ಲ.** ಪ್ರಾರ್ಥನೆ ದುರ್ಬಲರಿಗೂ ಬಲಿಷ್ಠರಿಗೂ ಅಷ್ಟೇ ಅವಶ್ಯಕವಾದುದು. ಜೀವನದಲ್ಲಿ ಒದಗುವ ಆಪತ್ತುಗಳಿಗೆ, ಎಡರುತೊಡರುಗಳಿಗೆ ಮಿತಿಯಿಲ್ಲ, ಇಂಥ ಸಮಯಗಳಲ್ಲಿ ಬುದ್ಧಿ ಹತಾಶವಾಗುವದು, ಶಕ್ತಿಗಳು ಕುಗ್ಗುವವು. ಯಾವ ಮಾರ್ಗವೂ ಉಪಾಯವೂ ಕಣ್ಣಿಗೆ ಕಾಣದಂತಾಗುವದು. ಪ್ರಾರ್ಥನೆಯು ಈ ಸಮಯದಲ್ಲಿ ನಮಗೆ ದೇವಲೋಕದ ಬೆಳಕನ್ನು ತಂದುಕೊಡುವದು, **ದೇವನ ಕೃಪೆಯನ್ನು ಸಂಪಾದಿಸುವದು, ನಮ್ಮ ಅಲ್ಪಶಕ್ತಿಗೆ ದೇವನ ಅನಂತ ಶಕ್ತಿಯ ಬಲವನ್ನು ತಂದುಕೊಡುವದು.**

ಪ್ರಾರ್ಥನೆ ವ್ಯಕ್ತಿಗತವಾಗಿರುವಂತೆ ಸಾಮೂಹಿಕವೂ ಆಗಿರುವದು. **ಸಾಮೂಹಿಕ ಪ್ರಾರ್ಥನೆಯ** ಮಹತಿಯನ್ನೂ ಪ್ರಯೋಜನವನ್ನೂ ನಮ್ಮ ಪೂರ್ವಜರು ಚನ್ನಾಗಿ ಅರಿತಿರುವರು. ಧಾರ್ಮಿಕ ಸಮಾರಂಭಗಳಲ್ಲಿ **ಭಜನ ಮಂತ್ರಪುಷ್ಪ** ಮೊದಲಾದವುಗಳಿಗೆ ಅವರು ಮಹತ್ವದ ಸ್ಥಾನವನ್ನು ಕೊಟ್ಟಿರುವರು. **ಸಾಮೂಹಿಕ ಪ್ರಾರ್ಥನೆಯಲ್ಲಿ ಸ್ಫೂರ್ತಿಯಿದೆ,** ಒಂದು ಬಗೆಯ ಆತ್ಮವಿಸ್ಮರಣವಿದೆ. ಪಾಂಡುರಂಗನ ಸನ್ನಿಧಿಯಲ್ಲಿ 'ವಾರಕರಿ' ಪಂಥದವರು ಮೈಮರೆತು ಕುಣಿಯುವದನ್ನು ನಾವು ನೋಡಬಹುದು. ಕ್ರಿಸ್ತ ಹಾಗೂ ಇಸ್ಲಾಮ ಧರ್ಮಗಳಲ್ಲಿಯೂ ಇಂಥ ಸಾಮೂಹಿಕ ಪ್ರಾರ್ಥನೆಗೆ

ಒಳ್ಳೇ ಪ್ರಾಶಸ್ತ್ಯವಿದೆ. ಸಾಮೂಹಿಕ ಪ್ರಾರ್ಥನೆಗೆ ತಾಳಮೇಳಗಳ ಜೋಡು ದೊರೆತರೆ ಮತ್ತಿಷ್ಟು ಕಳೆಯೇರುವದು. ಶಾಲೆಯ ಕಾರ್ಯವು ಪ್ರಾರಂಭ ವಾಗುವ ಮೊದಲು ಸಾಮೂಹಿಕ ಪ್ರಾರ್ಥನೆಯನ್ನು ನಡೆಸುವದುಂಟು. ಎಲ್ಲ ಮತ–ಪಂಥದವರಿಗೂ ಅಭಿಮತವಾಗುವಂತಿರುವ ಭಕ್ತಿಗೀತಗಳನ್ನೂ ಶ್ಲೋಕ ಗಳನ್ನೂ ಸಾಮೂಹಿಕ ಪ್ರಾರ್ಥನೆಯಲ್ಲಿ ಉಪಯೋಗಿಸಬಹುದು. ಪ್ರಾರ್ಥನೆ ಯಲ್ಲಿ ಹೇಳಿದುದು ಬಾಲಕರಿಗೆ ಕೇವಲ ಶಬ್ದಗಳಾಗಿ ಉಳಿಯದಂತೆ, ಅವರಿಗೆ ಅದರ ಅರ್ಥಭಾವಗಳನ್ನು ತಿಳಿಸಿ ಹೇಳುವದು ಒಳ್ಳೆಯದು. ಪ್ರಾರ್ಥನೆಯನ್ನು ಬಾಲಕರು ಹೇಗೋ ನಿಂತು ಹೇಗೋ ಅನ್ನುವಂತಾಗಬಾರದು. ಅದರಲ್ಲಿ **ತನ್ಮಯತೆಯೂ ಗಾಂಭೀರ್ಯವೂ** ಉಂಟಾಗುವಂತೆ ಶಿಕ್ಷಕರು ಯತ್ನಿಸ ಬೇಕು.

ಪ್ರಾರ್ಥನೆಗೆ ಗಾಂಧೀಜಿಯವರು ವಿಶೇಷವಾದ ಮಹತ್ವವನ್ನು ಕೊಡು ತ್ತಿದ್ದರು. **ಅದು ಅವರ ಜೀವನದ ಉಸಿರಾಗಿತ್ತು**. ಪ್ರಾರ್ಥನೆಯ ಬಗ್ಗೆ ಗಾಂಧೀಜಿಯವರು ಹೇಳಿದ ಮಾತನ್ನು ಈ ಸಂದರ್ಭದಲ್ಲಿ ಸ್ಮರಿಸುವದು ಉಪಯುಕ್ತವಾಗಬಹುದು :—

"ಪ್ರಾರ್ಥನೆ ನನ್ನ ಜೀವನವನ್ನು ಕಾಪಾಡಿದೆ. ಪ್ರಾರ್ಥನೆಯಿಲ್ಲದಿದ್ದರೆ ನಾನು ಹುಚ್ಚನಾಗಿ ಬಿಡಬಹುದಾಗಿತ್ತು. ಪ್ರಾರ್ಥನೆ ನನಗೇ ಕೇವಲ ಅಗತ್ಯವೆನಿಸಿ ಬಂದಿತು. ಪ್ರಾರ್ಥನೆಯಿಲ್ಲದೆ ನಾನು ಸುಖಿಯಾಗಿರಲಾರೆನೆಂಬ ಪರಿಸ್ಥಿತಿಯು ನನಗೆ ಒದಗಿತು. ದೇವನಲ್ಲಿ ನನ್ನ ನಂಬಿಕೆಯು ಹೆಚ್ಚಾದಂತೆ ಪ್ರಾರ್ಥನೆಯ ಬಗ್ಗೆ ನನ್ನ ಹಂಬಲವೂ ಅನಿವಾರ್ಯವಾಯಿತು. ಪ್ರಾರ್ಥನೆ ಯಿಲ್ಲದೆ ಜೀವನವು ನೀರಸವೂ, ನಿರರ್ಥಕವೂ ಎಂದೆನಿಸಿತು" 'ಪ್ರಾರ್ಥನೆ ಐಕ್ಯಾನುಸಂಧಾನ, ದೇವರ ಅನುಗ್ರಹ ಯಾಚನೆ.' ಪ್ರಾರ್ಥನೆಗೆ 'ಮಾತೇ ಬೇಡ, ಯಾವ ಇಂದ್ರಿಯ ಸಾಧನೆಯೂ ಬೇಡ.' 'ನಮ್ಮ ಬಾಳಿನಲ್ಲಿ ಪ್ರಾರ್ಥ ನೆಯ ಗಳಿಗೆಗಳು ಬೆಲೆಕಟ್ಟಲಾರದ ಗಳಿಗೆಗಳು.' 'ಪ್ರಾರ್ಥನೆ ದಿನ ದಿನದ ಆತ್ಮನಿವೇದನ.' '**ಮಕ್ಕಳಿಗೆ ಎಳೆತನದಲ್ಲಿಯೇ ಪ್ರಾರ್ಥನೆಯ ಪದ್ಧತಿ ಯನ್ನು ಕಲಿಸಬೇಕು. ಅವರು ಬೆಳೆದು ಬಾಳಿನಲ್ಲಿ ವಿಪತ್ತಿಗೆ ಗುರಿ**

**ಯಾದಾಗ ಅದು ಅವರನ್ನು ಕಾಯುವ ಕೈಯಾದೀತು.** ' ಗಾಂಧೀಜಿಗೆ ' ಪ್ರಾರ್ಥನೆಯೇ ಸತ್ಯ, ಉಳಿದುದೆಲ್ಲವೂ ಅಸತ್ಯ. ಸ್ತುತಿ-ಪ್ರಾರ್ಥನೆ-ಧ್ಯಾನ ಇವು ಕುರುಡು ನಂಬಿಗೆಯಲ್ಲ. ಅನ್ನ ನೀರುಗಳಿಗಿಂತ ಅದು ಹೆಚ್ಚಿನ ಸತ್ಯ.' ' ಪ್ರಾರ್ಥನೆ ಬಿಕ್ಕೆ ಬೇಡುವದಲ್ಲ. ಅದು ಆತ್ಮದ ಕಾಮನೆ. ನಮ್ಮ ದೌರ್ಬಲ್ಯ ಅಸಹಾಯತೆಗಳ ನೆನಪು.' ' ಪ್ರಾರ್ಥನೆಯ ಹುಟ್ಟು ನಾಲಿಗೆಯಲ್ಲಿಲ್ಲ. ಹೃದಯಾಂತರಾಳದಲ್ಲಿ....ಕಾಮಕ್ರೋಧಾದಿ ವಿಕಾರಗಳನ್ನು ಹೃದಯದಿಂದ ತೊಳೆಯಲು ಪ್ರಾರ್ಥನೆ ಸೋಲುಗಾಣದ ಉತ್ತಮ ಸಾಧನೆ.'

## ಪರಿಶಿಷ್ಟ ೫

### ಶಿಕ್ಷಣದಲ್ಲಿ ತಂದೆ-ತಾಯಿಗಳ ಸಹಕಾರ

ತಮ್ಮ ಮಕ್ಕಳನ್ನು ಸಾಲೆಗೆ ಕಳಿಸಿದರಾಯಿತು; ಅವರ ಬಗ್ಗೆ ತಾವು ಮಾಡಬೇಕಾದ ಕರ್ತವ್ಯ ತೀರಿತೆಂದು ಭಾವಿಸುವ ತಾಯಿ-ತಂದೆಗಳೇ ಹೆಚ್ಚು. ಇಂದಿನ ಜೀವನಕಲಹಕ್ಕೆ ತಮ್ಮ ಶಕ್ತಿ ಸಮಯಗಳನ್ನು ಹೆಚ್ಚಾಗಿ ನಿವೇದಿಸುವ ತಾಯಿ-ತಂದೆಗಳೂ, ಪಾಲಕರೂ ಹೀಗೆ ಭಾವಿಸಿದರೆ ಅಷ್ಟೇನು ತಪ್ಪಾಗದು. ಆದರೆ ತಮ್ಮ ಮಕ್ಕಳ ಬಗ್ಗೆ ತಮ್ಮ ಹೊಣೆಗಾರಿಕೆಯನ್ನು ಪೂರ್ಣವಾಗಿ ಅಲ್ಲಗಳೆಯುವದು ಮಾತ್ರ ತಪ್ಪಾಗುವದು. ಹಳ್ಳಿಯ ಅಜ್ಞಜನರು ಈ ರೀತಿಯಾಗಿ ಹೇಳಬಹುದು; ಆದರೆ ಸುಶಿಕ್ಷಿತರಾದ ಪಾಲಕರೂ ಈ ಬಗೆಯಾಗಿ ವರ್ತಿಸುವದು ಶೋಚನೀಯವಾಗಿದೆ. ತಮ್ಮ ಮಕ್ಕಳು ' ಯಾವ ವರ್ಗದಲ್ಲಿ ಓದುವರು ? ' ಎಂಬುದುರ ಅರಿವು ಕೂಡ ಕೆಲವು ಪಾಲಕರಿಗೆ ಇರುವದಿಲ್ಲ. ಮಕ್ಕಳು ಕಲಿಯುವ ವಿಷಯಗಳೇನು ? ಅವರ ಪ್ರಗತಿಯು ಹೇಗೆ ಸಾಗಿದೆ ? ಅವರ ಶೀಲದ ವಿಕಾಸವು ಸರಿಯಾಗಿ ನಡೆದಿರುವದೇ ? ಅವರ ಜೊತೆಗಾರರು ಯಾರು ? ಅವರ ಶರೀರದ ಬೆಳವಣಿಗೆಯು ಚೆನ್ನಾಗಿ ಆಗುತ್ತಿರುವದೇ ? ಇತ್ಯಾದಿ ಪ್ರಶ್ನೆಗಳು ತಾಯಿ-ತಂದೆಗಳ ಹಾಗೂ ಪಾಲಕರ ಕರ್ತವ್ಯಕ್ಕೆ ಸಂಬಂಧಿಸಿದವುಗಳು. ಇವೆಲ್ಲ ಸಂಗತಿಗಳ ಬಗ್ಗೆ ಅವರು ಅತೀವ ದಕ್ಷತೆ

ಯನ್ನು ವಹಿಸಬೇಕಾಗುವದು. ಶಿಕ್ಷಕನೊಬ್ಬನೇ ಈ ಕೆಲಸವನ್ನು ನಿರ್ವಹಿಸಲು ಸಾಧ್ಯವಾಗದು. ತನಗೆ ಶಕ್ಯವಾದಷ್ಟು ಶಿಕ್ಷಕನು ತನ್ನ ವಿದ್ಯಾರ್ಥಿಗಳ ಹಿತದ ಬಗ್ಗೆ ಎಲ್ಲ ದೃಷ್ಟಿಯಿಂದಲೂ ಲಕ್ಷ್ಯಕೊಡಬಹುದು. ಆದರೆ ತಮ್ಮ ಮಕ್ಕಳ ನಿಜವಾದ ಹಿತವನ್ನು ಬಯಸುವ ತಾಯಿ–ತಂದೆಗಳೂ, ಪಾಲಕರೂ ಈ ವಿಷಯಗಳ ಬಗ್ಗೆ ಮನಸ್ಸು ಹಾಕಬೇಕಾಗುವದು. ಶಿಕ್ಷಕನೊಡನೆ ಸಹಕರಿಸಬೇಕಾಗುವದು. ಈ ಬಗೆಯ ಸಹಕಾರವಿಲ್ಲದ ಶಿಕ್ಷಣವು ಒಂದು ಬಗೆಯ ಸಜೀವತೆಯನ್ನೇ ಕಳೆದುಕೊಂಡಂತಾಗುವದು.

ಇನ್ನೊಂದು ದೃಷ್ಟಿಯಿಂದಲೂ ಶಿಕ್ಷಣದಲ್ಲಿ ತಾಯಿ–ತಂದೆಗಳ ಹಾಗೂ ಪಾಲಕರ ಸಹಕಾರವು ಅತ್ಯವಶ್ಯವಾಗಿದೆ. ವಿದ್ಯಾರ್ಥಿಗಳ ಬೌದ್ಧಿಕ ಶಿಕ್ಷಣದ ಭಾರವನ್ನು ಶಿಕ್ಷಕರು ಹೇಗಾದರೂ ವಹಿಸಬಹುದು. ನಿಯಮಿಸಿದ ವಿಷಯಗಳನ್ನು ತಿಳಿಸಿಹೇಳಬಹುದು, ಪಾಠಮಾಡಿಸಬಹುದು. ಪರೀಕ್ಷೆಗಳಲ್ಲಿ ಅವರು ಉತ್ತೀರ್ಣರಾಗುವಂತೆ ಯತ್ನಿಸಬಹುದು. ಈ ಬೌದ್ಧಿಕ ಶಿಕ್ಷಣವಾದರೂ ತಂದೆ–ತಾಯಿಗಳ ಸಹಕಾರದಿಂದ ಹೆಚ್ಚು ಯಶಸ್ವಿಯಾಗಬಹುದೆಂಬುದರಲ್ಲಿ ಸಂದೇಹವಿಲ್ಲ. ಶಿಕ್ಷಣದ ಉದ್ದೇಶವು, ಹಿಂದೆ ಅನೇಕ ಸಲ ಹೇಳಿದಂತೆ, ಇದಕ್ಕಿಂತಲೂ ಹೆಚ್ಚು ವ್ಯಾಪಕವಾಗಿದೆ. ಶೀಲಸಂವರ್ಧನೆಯು ಶಿಕ್ಷಣದ ಹೆಗ್ಗುರಿಯಾಗಿದೆ. ಶಿಕ್ಷಕನೊಬ್ಬನೇ ಗುರಿಯನ್ನು ಸಾಧಿಸಲಾರನು. ಶಾಲೆಯಲ್ಲಿ ನಾಲ್ಕಾರು ತಾಸುಗಳನ್ನು ಕಳೆದರೆ, ದಿನದ ಉಳಿದ ಭಾಗವನ್ನೆಲ್ಲ ಮಕ್ಕಳು ಮನೆಯಲ್ಲಿಯೇ ಕಳೆಯುವರು. ಮನೆಯ ಪರಿಸರಣವೂ, ಪರಿಸ್ಥಿತಿಯೂ ಸಾಧುವಾಗಿದ್ದರೆ ಶೀಲದ ವಿಕಾಸವು ಸರಿಯಾಗಿ ಸಾಗುವದು. ಮನೆಯ ಒಟ್ಟು ವಾತಾವರಣವು ಅನಿಷ್ಟವಾಗಿದ್ದರೆ ಶೀಲದ ಬೆಳವಣಿಗೆಯು ಚೆನ್ನಾಗಿ ಸಾಗಲಾರದು. ಮನೆಯಲ್ಲಿ ನೂರಾರು ಒಡಕುಗಳೂ, ನಿತ್ಯಕಲಹಗಳೂ, ಸ್ವಚ್ಛತೆಯ ಅಭಾವವೂ, ಮಾತಿನ ಅಶ್ಲೀಲತೆಯೂ, ದುರಾಚಾರ–ದುರ್ವಿಚಾರಗಳೂ ತುಂಬಿಕೊಂಡಿದ್ದರೆ ಅವುಗಳ ಅನಿಷ್ಟವಾದ ಪರಿಣಾಮವು ಬೆಳೆಯುವ ಮಕ್ಕಳ ಮನಸ್ಸಿನ ಮೇಲೆ ಆಗದೇ ತೀರದು. ಬಾಲ್ಯವು ಶೀಲನಿರ್ಮಾಣದ ಸಂಧಿಕಾಲವಾಗಿದೆ. ಈ ಸಮಯದಲ್ಲಿ ಬೆಳೆಯುವ ಮಕ್ಕಳಿಗೆ ಅಹಿತವಾದುದೆಲ್ಲವೂ ದೂರ

ವಾಗಿರಬೇಕು. ತಾಯಿ-ತಂದೆಗಳು ನೆರವಾಗದಿದ್ದರೆ ಶಿಕ್ಷಕನು ತಾನೊಬ್ಬನೇ ಏನನ್ನೂ ಮಾಡಲಾರನು. ತಮ್ಮ ಮಕ್ಕಳ ರೀತಿನೀತಿಗಳ ಬಗ್ಗೆಯೂ ಆಚಾರ ವಿಚಾರಗಳ ಬಗ್ಗೆಯೂ ತಂದೆ-ತಾಯಿಗಳು ಹಾಗೂ ಪಾಲಕರು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿರಬೇಕು. ಶಿಕ್ಷಕನೊಡನೆ ಈ ಬಗ್ಗೆ ವಿಚಾರವಿನಿಮಯಮಾಡುತ್ತಿರಬೇಕು. ಮಕ್ಕಳಲ್ಲಿ ಹೇಗೋ ಬೆಳೆಯುತ್ತಿರುವ ದೋಷದ ಮೂಲಗಳನ್ನು ಕಂಡುಹಿಡಿದು, ಇಬ್ಬರೂ ಕೂಡಿಯೇ ಅವುಗಳನ್ನು ಕಿತ್ತಿಹಾಕಲು ಯತ್ನಿಸಬೇಕು.

ಶಿಕ್ಷಣದಲ್ಲಿ ತಂದೆ-ತಾಯಿಗಳ ಅವಶ್ಯಕತೆಯು ಇನ್ನೊಂದು ಮಹತ್ವದ ಕಾರಣಕ್ಕಾಗಿಯೂ ಅವಶ್ಯವಿರುವದು. ಇಂದು ಶಾಲೆ-ಮನೆಗಳ ನಡುವೆ ಅಂತರವು ಉಂಟಾಗಿದೆ, ಎರಡಕ್ಕೂ ಇರಲೆಬೇಕಾದ ಪರಸ್ಪರ ಸಂಬಂಧವು ತಪ್ಪಿದಂತಾಗಿದೆ. ಈ ಸಂಗತಿಯು ಅನಿಷ್ಟವಾದುದು. ಶಾಲೆಯಲ್ಲಿ ನಡೆದುದು ತಂದೆ-ತಾಯಿಗಳಿಗೆ ಗೊತ್ತಾಗುವದಿಲ್ಲ. ಮನೆಯಲ್ಲಿ ಮಕ್ಕಳು ಹೇಗೆ ವರ್ತಿಸುವರೆಂಬುದು ಶಿಕ್ಷಕರಿಗೆ ತಿಳಿಯುವದಿಲ್ಲ. ಶಾಲೆಯ ಪ್ರಪಂಚವೇ ಬೇರೆ, ಮನೆಯ ಪ್ರಪಂಚವೇ ಬೇರೆ ಆಗಿಬಿಟ್ಟಿದೆ. ಇದರಿಂದ ಶಿಕ್ಷಣದ ಏಕಸೂತ್ರತೆಯೂ ತಪ್ಪುವದು. ಮಕ್ಕಳ ಜೀವನದ ಏಕರೂಪತೆಗೂ ಬಾಧೆ ತಟ್ಟುವದು. ಶಾಲೆ ಮನೆಗಳೆರಡೂ ಮಕ್ಕಳ ಬೆಳೆಯುವ ಜೀವನಕ್ಕೆ ಉಚಿತವಾದ ಸಂಸ್ಕಾರಗಳನ್ನು ಕೊಡುವ ಸಂಸ್ಥೆಗಳಾಗಿರಬೇಕು. ಶಾಲೆ ಮನೆಗಳ ಸಂಬಂಧವು ತಪ್ಪಿದರೆ ಈ ಕಾರ್ಯ ಸರಿಯಾಗಿ ಸಾಗದೆಂಬುದು ಸ್ಪಷ್ಟವಾಗಿದೆ. ಶಾಲೆ ಮನೆಗಳ ಸನ್ನಿವೇಶಗಳು ಆದಷ್ಟು ಸದೃಶವಾಗಿರಬೇಕು, ಪರಸ್ಪರ ಪೋಷಕವಾಗಿರಬೇಕು. ಪಾಲಕರ ಸಹಕಾರವಿಲ್ಲದೆ ಈ ಸಂಗತಿಯು ಸಾಧಿಸಲಾರದು.

ಶಿಕ್ಷಣದಲ್ಲಿ ತಾಯಿ-ತಂದೆಗಳ ಹಾಗೂ ಪಾಲಕರ ಸಹಕಾರವನ್ನು ತಂದುಕೊಡುವ ವಿವಿಧವಾದ ಪ್ರಸಂಗಗಳಿವೆ. ಶಾಲೆಯ ಸಮಾರಂಭಗಳಿಗೆ ತಾಯಿ-ತಂದೆಗಳನ್ನು ಆಮಂತ್ರಿಸಬೇಕು. ವಾರ್ಷಿಕೋತ್ಸವಗಳಿಗೆ ಅವರನ್ನು ಬರಮಾಡಿಕೊಳ್ಳಬೇಕು. ಶಾಲೆಯಲ್ಲಿ ನಿತ್ಯವೂ ನಡೆಯುವ ಸುವ್ಯವಸ್ಥಿತವಾದ ಕಾರ್ಯವನ್ನು ಅವರು ಪ್ರತ್ಯಕ್ಷವಾಗಿ ನೋಡುವಂತೆ ಮಾಡಬೇಕು.

ಮಕ್ಕಳ ಆಟಪಾಟಗಳನ್ನು ನೋಡಿ ಅವರು ನಲಿಯುವಂತೆ ಮಾಡಬೇಕು. ಇದಲ್ಲದೆ ಮಕ್ಕಳ ಶಿಕ್ಷಣದ ಪ್ರಗತಿಯನ್ನು ತೋರಿಸುವ '**ಪ್ರಗತಿಪತ್ರಿಕೆ**'ಗಳ ಮುಖಾಂತರವಾಗಿಯೂ ಪಾಲಕರ ಸಹಕಾರವನ್ನು ಸಂಪಾದಿಸಬಹುದು. ಮುಖ್ಯಾಧ್ಯಾಪಕನಾಗಲೀ, ಇಲ್ಲವೇ ಉಳಿದ ಶಿಕ್ಷಕರಾಗಲೀ ಪಾಲಕರೊಡನೆ ಸೌಜನ್ಯ ಸಹಾನುಭೂತಿಗಳಿಂದ ನಡೆದುಕೊಳ್ಳಬೇಕು. ಅವರ ದೂರುಗಳನ್ನು ಕೇಳಿಕೊಳ್ಳಬೇಕು. ಅವರ ಅನಾನುಕೂಲತೆಗಳನ್ನು ತಿಳಿದುಕೊಳ್ಳಬೇಕು. ಒಟ್ಟಿನಲ್ಲಿ ಶಾಲೆಯ ಬಗ್ಗೆ ಅವರಲ್ಲಿ ಅಭಿಮಾನವೂ, ಆದರವೂಜನಿಸುವಂತೆ ಮಾಡಬೇಕು. ಹೀಗೆ ಮಾಡುವದರಿಂದ ಶಿಕ್ಷಕರಿಗೆ ತಮ್ಮ ಕಾರ್ಯದಲ್ಲಿ ತಾಯಿ ತಂದೆಗಳಿಂದಲೂ, ಪಾಲಕರಿಂದಲೂ ಸಹಕಾರ ಸಹಾನುಭೂತಿಗಳು ಅನಾಯಾಸವಾಗಿ ದೊರೆಯುವವು.

## ಪರಿಶಿಷ್ಟ ೬

### ಮಕ್ಕಳ ದಿನ

ನಾಳಿನ ಭಾರತವಾಳುವ ಶೂರರು
ಕೇಳಿ! **ನಿರಂಕುಶ ಬಾಲರು** ನಾವು ॥
ಭಾವದ ಗರಿಗಳ ಮೇಲೇರಿ ಹಾರುತ
ಭಾವಿ ಪ್ರಪಂಚದಲಿರುವೆವು ನಾವು ।
ಸಾವು ನೋವೆಂಬುದರರ್ಥವನರಿಯೆವು
**ನಾವು ನಿರಂಕುಶ ನಿರ್ಜರರು** ॥

(ಹೊಯ್ಸಳರು)

ಶಿಶುಪ್ರಧಾನವಾದ ಇಂದಿನ ಶಿಕ್ಷಣಯುಗದಲ್ಲಿ ಮಕ್ಕಳ ದಿನವು ಒಂದು ವಿಶೇಷವಾದ ಸಮಾರಂಭವಾಗಿದೆ. ಚಿಕ್ಕಮಕ್ಕಳು ರಾಷ್ಟ್ರದ ಸಜೀವವಾದ ಸಂಪತ್ತು. ರಾಷ್ಟ್ರದ ಏಳಿಗೆಯು ಚಿಕ್ಕಮಕ್ಕಳ ಸರಿಯಾದ ಬೆಳವಣಿಗೆಯನ್ನೇ ಅವಲಂಬಿಸಿರುವದು. ಇಂದಿನ ಶಿಕ್ಷಣವೂ, ಅದಕ್ಕೆ ಆಧಾರವಾದ ಮಾನಸ

ಶಾಸ್ತ್ರವೂ ಈ ಮಾತನ್ನು ಜನತೆಯ ನಿದರ್ಶನಕ್ಕೆ ತಂದು ಕೊಡುತ್ತಲಿವೆ. **ಚಿಕ್ಕಮಕ್ಕಳಿಗೆ ನಿಸರ್ಗದತ್ತವಾದ ಕೆಲವು ಒಲವು ಶಕ್ತಿಗಳಿರುವಂತೆ ಕೆಲವು ಹಕ್ಕು ಬಾಧ್ಯತೆಗಳಿರುವವು.** ಮಕ್ಕಳೊಡನೆ ವ್ಯವಹರಿಸುವಾಗ್ಗೆ ಹಿಂದಿನ ಅಧಿಕಾರದ ಯುಗವು ಇಂದು ಕಳೆದು ಹೋಗಿದೆ. ಪ್ರೇಮಾದರಗಳು ಅಧಿಕಾರ ಸ್ಥಾನವನ್ನು ವಹಿಸಿಕೊಂಡಿವೆ. ತಾಯಿತಂದೆಗಳಿಗೆ, ಪಾಲಕರಿಗೆ, ಮಕ್ಕಳ ಈ ಹಕ್ಕು ಬಾಧ್ಯತೆಗಳು ತಿಳಿಯುವಂತೆ ಮಾಡುವದೇ ಮಕ್ಕಳ ದಿನದ ಮುಖ್ಯ ಉದ್ದೇಶವಾಗಿದೆ.

ಮಕ್ಕಳು ಉತ್ಸವ ಪ್ರಿಯರು. ಸಮಾರಂಭಗಳೆಂದರೆ ಅವರಿಗೆ ಸಂತೋಷ. ಮಕ್ಕಳ ದಿನವು ಇಂಥದೊಂದು ಸಂತೋಷದ ಸಮಾರಂಭದಂತೆ ಜರುಗಬೇಕು. ಮನೆಯಲ್ಲಿ ಮಕ್ಕಳ ಜನ್ಮದಿನವನ್ನು ಸಂತೋಷದಿಂದ ಜರುಗಿಸುವದುಂಟು. ಸಾರ್ವತ್ರಿಕವಾಗಿ ಜರುಗುವ ಮಕ್ಕಳ ದಿನವನ್ನು ನಾಂಘಿಕ ಹುಟ್ಟು ಹಬ್ಬದಂತೆ ಪಾಲಕರು ಭಾವಿಸಬೇಕು. ಅಂದು ಮಕ್ಕಳಿಗೆ ಮನೆಯಲ್ಲಿ ಎರೆಯಬೇಕು. ತಿನ್ನಲಿಕ್ಕೆ ಸವಿಯಾದ ತಿನಸುಗಳನ್ನು ಕೊಡಬೇಕು. ಹಬ್ಬದ ಅಡುಗೆಯನ್ನು ಮಾಡಬೇಕು. ಮಕ್ಕಳಿಗೆ ಅಂದವಾದ ಹೊಸಬಟ್ಟೆಗಳನ್ನು ತೊಡಿಸಬೇಕು. ಮರೆತಾದರೂ ಬಿರುಸು ನುಡಿಗಳನ್ನು ಆಡಕೂಡದು. ಒಟ್ಟಿನಲ್ಲಿ ಮಕ್ಕಳಿಗೆ ಅಂದು ನೋಡಿದಲ್ಲೆಲ್ಲ ನಗೆ, ನಲಿವು, ಉಲ್ಲಾಸವು ಒಡೆದು ತೋರುವಂತಿರಬೇಕು.

ಇತ್ತೀಚೆಗೆ ಕನ್ನಡ ನಾಡಿದಲ್ಲಿಯೂ ಮಕ್ಕಳ ದಿನವನ್ನು ಆಚರಿಸುವದು ಅಲ್ಲಲ್ಲಿ ಕಂಡುಬರುತ್ತಿದೆ. ಆ ದಿನದ ಕಾರ್ಯಕ್ರಮದ ರೂಪರೇಷೆಯು ಹೀಗಿರಬಹುದು:— ಮೇಲೆ ಹೇಳಿದಂತೆ ಆ ದಿನವನ್ನು ಮಕ್ಕಳ ಹಬ್ಬದಂತೆ ಭಾವಿಸಲು ತಾಯಿ ತಂದೆಗಳಿಗೆ ಮೊದಲೇ ಬಿನ್ನವಿಸಿಕೊಳ್ಳಬೇಕು. ಆ ಊರಿನ ಶಾಲೆಗಳ ಮಕ್ಕಳನ್ನೆಲ್ಲ ಒಂದೆಡೆ ತಮ್ಮ ಶಿಕ್ಷಕರೊಡನೆ, ಸೂರ್ಯೋದಯಕ್ಕೆ ಸರಿಯಾಗಿ ಬರುವಂತೆ ಏರ್ಪಾಟು ಮಾಡಿರಬೇಕು. ಎಲ್ಲರೂ ಕೂಡಿ ಒಂದು ಸಾಮೂಹಿಕವಾದ ಪ್ರಾರ್ಥನೆಯಿಂದ ಮಕ್ಕಳ ದಿನವನ್ನು ಪ್ರಾರಂಭಿಸಬೇಕು. ಧ್ವಜ ಪತಾಕೆ ಮೊದಲಾದ ವೈಭವದೊಂದಿಗೆ ನಾಡದೇವಿಯ ಸ್ತವನವನ್ನು

ಹೇಳಿಸಬೇಕು. ಆ ಮೇಲೆ ತಜ್ಞರಾದ ವ್ಯಾಯಾಮದ ಶಿಕ್ಷಕರು ಎಲ್ಲ ಮಕ್ಕಳ ಸಾಂಘಿಕ ಡ್ರಿಲ್‌ನ್ನು ಕೈಕೊಳ್ಳಬೇಕು. ಈ ಡ್ರಿಲ್ಲಿನ ಕಾರ್ಯವು ಯಶಸ್ವಿಯಾಗಬೇಕಾದರೆ ಮೊದಲೇ ಅದಕ್ಕಾಗಿ ಯತ್ನ ಮಾಡಿರಬೇಕಾಗುವದು. ಈ ಕಾರ್ಯಕ್ರಮಕ್ಕೆ ಪಾಲಕರನ್ನೆಲ್ಲ ಆಮಂತ್ರಿಸಬೇಕು. ಈ ಕಾರ್ಯಕ್ರಮವು ಮುಗಿದಮೇಲೆ ಮಕ್ಕಳದೊಂದು ಮೆರೆವಣಿಗೆಯನ್ನು ಹೊರಡಿಸಬೇಕು. ಮಕ್ಕಳ ಹಕ್ಕು ಬಾಧ್ಯತೆಗಳನ್ನು ಸೂಚಿಸುವ ವಾಕ್ಯಗಳನ್ನು ದೊಡ್ಡ ಅಕ್ಷರಗಳಿಂದ ಬರೆದು ಮೆರೆವಣಿಗೆಯಲ್ಲಿ ತೆಗೆದುಕೊಂಡು ಹೋಗಬಹುದು. ಮೆರೆವಣಿಗೆಯಲ್ಲಿ ಮಕ್ಕಳು ಸದ್ದು ಮಾಡದೇ ನಡೆಯಬಹುದು. ಇಲ್ಲವೇ ಉಚಿತವಾದ 'ಗತಿಗೀತ'ವನ್ನು ಅನ್ನುತ್ತ ಹೋಗಬಹುದು. ಶಾಲೆಯ ಬ್ಯಾಂಡನ್ನಾಗಲಿ ಊರಲ್ಲಿಯ ಬಜಂತ್ರಿಯ ಮೇಳವನ್ನಾಗಲಿ ಮೆರೆವಣಿಗೆಗಾಗಿ ತೆಗೆದುಕೊಳ್ಳುವದು ಇಷ್ಟವಾಗಿದೆ. ಮೆರೆವಣಿಗೆಯಲ್ಲಿ ಉಳಿದವರಿಗೆ ತೊಂದರೆಯಾಗದಂತೆಯೂ, ಚಿಕ್ಕಮಕ್ಕಳಿಗೆ ಸಣ್ಣ ಪುಟ್ಟ ಅಪಾಯಗಳಾಗದಂತೆಯೂ ಶಿಕ್ಷಕರು ಶಿಸ್ತನ್ನು ದಕ್ಷತೆಯಿಂದ ಕಾಯಬೇಕಾಗುವದು. ಈ ಮೆರೆವಣಿಗೆಯ ಕಾಲವೂ ದೀರ್ಘವಾಗಿರಕೂಡದು; ಅಂತರವೂ ದೂರವಾಗಿರಬಾರದು. ಮೆರೆವಣಿಗೆಯು ಮುಗಿದಮೇಲೆ ಶಕ್ಯವಿದ್ದರೆ ಮಕ್ಕಳಿಗೆ ಅಲ್ಪ ಉಪಹಾರವನ್ನು ಕೊಡಬಹುದು. ಇಲ್ಲವೇ ಮಿಠಾಯಿ ಹಂಚಬಹುದು. ಇದಕ್ಕಾಗಿ ತಗಲುವ ವೆಚ್ಚವನ್ನು ಊರಿನ ಮಹಾಜನರಿಂದ ಕೂಡಿಸಬಹುದು. ಮಧ್ಯಾಹ್ನದಲ್ಲಿ ಮಕ್ಕಳಿಗೆ ಮನರಂಜಕವಾದ ಕಾರ್ಯಕ್ರಮಗಳನ್ನಿಡಬೇಕು. ಕಥೆ ಹೇಳಿಸುವದು, ಕವಿತೆ ಓದುವದು, ನಕಲಿ ಮಾಡುವದು, ನಾಟ್ಯ ಘಟಗಳನ್ನು ಮಾಡಿ ತೋರಿಸುವದು, ವಿಚಿತ್ರ ವೇಷಗಳನ್ನು ಹಾಕಿಕೊಳ್ಳುವದು ಇತ್ಯಾದಿಯಾಗಿ ಅನುಕೂಲವಿರುವ ಮನರಂಜನೆಯ ಕಾರ್ಯಕ್ರಮವನ್ನು ಇಟ್ಟುಕೊಳ್ಳಬಹುದು. ಇದರ ಜೊತೆಗೆ ಮಕ್ಕಳ ಮಹಾಸಭೆಯೊಂದನ್ನು ನೆರವೇರಿಸಬೇಕು. ಈ ಸಭೆಗೆ ಬೇರೆ ಬೇರೆ ಶಾಲೆಗಳ ಪ್ರತಿನಿಧಿಗಳನ್ನು ಆರಿಸಬೇಕು. ಮಕ್ಕಳಲ್ಲಿಯೇ ಒಬ್ಬ ವಿದ್ಯಾರ್ಥಿ ಇಲ್ಲವೆ ವಿದ್ಯಾರ್ಥಿನಿಯನ್ನು ಅಧ್ಯಕ್ಷರನ್ನಾಗಿ ಮಾಡಬೇಕು. ಮಕ್ಕಳ ಹಿತಕ್ಕೆ ಸಂಬಂಧಿಸಿದ ಕೆಲವು ಗೊತ್ತುವಳಿಗಳನ್ನು ಮಕ್ಕಳೇ ತಂದು

ನಿರ್ಣಯಿಸಿಕೊಳ್ಳಬೇಕು. ಈ ಕೆಲಸದ ಪರಿಚಯವಾಗುವವರೆಗೆ ಮೊದಲಿನ ಒಂದೆರಡು ವರ್ಷಗಳಲ್ಲಿ ಶಿಕ್ಷಕರೇ ಮಕ್ಕಳಿಗೆ ನೆರವಾಗಿ ನಿಂತು ಈ ಕೆಲಸವನ್ನು ಮಾಡಬಹುದು. ಮುಂದೆ ಮಕ್ಕಳೇ ಈ ಕೆಲಸವನ್ನು ಕೈಕೊಳ್ಳುವಂತೆ ಮಾಡಬೇಕು. ಶಿಕ್ಷಕರು ಹಿಂದೆ ನಿಂತು ಮಕ್ಕಳಿಗೆ **ಮಾರ್ಗದರ್ಶಕರಾಗಬೇಕು.** ಒಟ್ಟಿನಲ್ಲಿ ಈ ಮಕ್ಕಳ ದಿನವು ಚಿಕ್ಕಮಕ್ಕಳಿಗೆ ಒಳ್ಳೇ ಚಿತ್ತಾಕರ್ಷಕವಾಗುವಂತೆ ಮಾಡಬೇಕು. ವರುಷ ವರುಷವೂ ಅವರು ಈ ದಿನವನ್ನು ಆತುರತೆಯಿಂದ ಹಾರೈಸುವಂತೆ ಆಗಬೇಕು.

## ಪರಿಶಿಷ್ಟ ೭

### ಸರ್ವೋದಯಸಮಾಜ

ಇಂದು 'ಸರ್ವೋದಯ'ವೆಂಬ ಶಬ್ದವು ಎಲ್ಲರ ಬಾಯಿಯಲ್ಲಿಯೂ ಕೇಳಬರುತ್ತಿದೆ. ಸರ್ವೋದಯವೆಂದರೆ, ಜಾತಿ, ಮತ, ಪಂಥಗಳ ಭೇದಭಾವ ವಿಲ್ಲದೆ **ಎಲ್ಲರ 'ಉದಯ,' 'ಉತ್ಕರ್ಷ.'** ಇಂದು ಸಮಾಜದಲ್ಲಿ ಹೊಂದಿಕೆ, ಒಕ್ಕಟ್ಟು ಇಲ್ಲದಾಗಿದೆ. ಮೊದಲಿನ ವರ್ಣಾಶ್ರಮಗಳು ಅಳಿದುಹೋಗಿ ಬೇರೊಂದು ಪ್ರಕಾರದ 'ವರ್ಗ'ಗಳು ಸಮಾಜದಲ್ಲಿ ತಲೆಯೆತ್ತಿವೆ. ಈ ವರ್ಗ ಗಳಲ್ಲಿ ಪರಸ್ಪರ ಕಲಹ ಶೋಷಣೆಗಳು ತಿಳಿದು ತಿಳಿಯದೆಯೇ ನಡೆಯುತ್ತಿವೆ. ಒಬ್ಬರ ಉತ್ಕರ್ಷ ಮತ್ತೊಬ್ಬರ ಅಪಕರ್ಷಕ್ಕೆ ಕಾರಣವಾಗುತ್ತಿದೆ. ಒಬ್ಬರ 'ಹಿತ' ಮತ್ತೊಬ್ಬರ 'ಅಹಿತ' ವೆನಿಸುತ್ತಿದೆ. **ನೂರು ಮನೆಗಳಲ್ಲಿಯ ದೀಪ ನಂದಿಸಿ ಒಬ್ಬ ತನ್ನ ಮನೆಯನ್ನು ನೂರು ದೀಪಗಳಿಂದ ಬೆಳ ಗಿಸುತ್ತಾನೆ. ನೂರು ಜನಗಳ ಅನ್ನ ಕಸಿದುಕೊಂಡು ಮತ್ತೊಬ್ಬ ಹೊಟ್ಟೆಬಾಕ ತಿಂದು ತೇಗುತ್ತಾನೆ.** ಈ ಸ್ವಾರ್ಥದ ಸ್ಪರ್ಧೆಯಲ್ಲಿ ದಯೆ ಮಾಯೆ, ಪ್ರೇಮ ಪ್ರೀತಿಗಳು ಎತ್ತಲೋ ಹಾರಿಹೋಗಿವೆ; ಹೃದಯ ಬತ್ತಿ ಹೋಗಿದೆ. ಈ ಅನರ್ಥವು ಅಳಿದುಹೋಗಬೇಕು. **ಎಲ್ಲರ ಹಿತದಲ್ಲಿ ತನ್ನ ಹಿತವನ್ನು ಕಾಣುವ ಮನೋವೃತ್ತಿಯು** ಬೆಳೆದುಬರಬೇಕು. ಪ್ರತಿ

ಯೊಬ್ಬನು ಎಲ್ಲರ ಹಿತವನ್ನು ಚಿಂತಿಸುವಂತಾಗಬೇಕು, ಅದಕ್ಕಾಗಿ ದುಡಿಯು ವಂತಾಗಬೇಕು. ಇದೇ ಸರ್ವೋದಯವು. ಪ್ರತಿಯೊಬ್ಬನೂ ತನ್ನ ಗಳಿಕೆ ಯಿಂದಲೇ ಉಪಜೀವಿಸಬೇಕು. ತನ್ನ ಚರಿತಾರ್ಥ ಭಾರವನ್ನು ಇನ್ನೊಬ್ಬರ ಮೇಲೆ ಹಾಕಕೂಡದು. 'ಗಳಿಕೆ' ಯೆಂಬುದು ತಗಲು ಮೋಸಗಳಿಂದ ಮತ್ತೊ ಬ್ಬರ ವಸ್ತುವನ್ನು ಅಪಹರಿಸುವದಲ್ಲ. **'ಗಳಿಕೆ' ಯೆಂದರೆ 'ಉತ್ಪತ್ತಿ.' ಎಲ್ಲರ ಹಿತಚಿಂತನವನ್ನು ಮಾಡುವದು ಹಾಗೂ ಪ್ರತ್ಯಕ್ಷವಾಗಿ ಉತ್ಪಾದಿಸುವದು ಇವು ಸರ್ವೋದಯದ ಎರಡು ಸೂತ್ರಗಳು.**

ಸರ್ವೋದಯ ಸಮಾಜದಲ್ಲಿಯ ವ್ಯಕ್ತಿಯು ಶುದ್ಧವಾದ ನೀತಿ ಸತ್ಯ ಗಳಿಗೆ ಅಂಟಿಕೊಳ್ಳಬೇಕು. 'ಪರಿಣಾಮದಲ್ಲಿ ಒಳ್ಳೇ ಕಾರ್ಯವಾದರಾಯಿತು, ಸತ್ಯನೀತಿಗಳೇ ಸಾಧನಗಳಾಗಿರಬೇಕೆಂಬ ನಿರ್ಬಂಧವೇಕೆ?' ಎಂದು ಕೆಲವರು ಕೇಳಬಹುದು. **ಸಾಧನ ಶುದ್ಧಿಯೇ ಧ್ಯೇಯಶುದ್ಧಿಯು.** 'ಯೇನಕೇನ ಪ್ರಕಾರೇಣ' ಹಿತವನ್ನು ಸಾಧಿಸುವೆನೆಂಬದು ಉಸುಬಿನ ಮೇಲೆ ಮನೆ ಕಟ್ಟಿ ದಂತೆ. **'ಬೀಜದಂತೆ ಫಲವಲ್ಲವೆ?** ಉಳಿದವರೆಲ್ಲರೂ ವಾಮಮಾರ್ಗದಿಂದ ನಡೆಯುತ್ತಿರಲು, ನಾನೊಬ್ಬನೆ ಸತ್ಯ ನೀತಿತತ್ವಗಳನ್ನು ಅನುಸರಿಸುವದ ರಿಂದೇನು ಪ್ರಯೋಜನ?' ಎಂತಲೂ ಕೇಳುವದುಂಟು. ಆದರೆ ಹೀಗೆ ಕೇಳು ವವರು ಉಳಿದವರು ಹಸಿವೆಯಿಂದ ಬಳಲುತ್ತಿರಲು ನಾನೇಕೆ ಉಣ್ಣಬೇಕು? ಎಂದು ಮಾತ್ರ ಕೇಳುವದಿಲ್ಲ. ಸತ್ಯ ನೀತಿಗಳ ಆಚರಣೆಯಲ್ಲಿ ಮಾತ್ರ ಈ ಪಕ್ಷಪಾತವನ್ನು ಅವರು ತೋರಿಸುವರು. **'ಎಲ್ಲರಲ್ಲಿ ನಾನು ನನ್ನಲ್ಲಿ ಎಲ್ಲರೂ'** ಎಂಬ ನಂಬಿಕೆಯು ದೃಢವಾದರೆ ವ್ಯಾಪಾರ ಉದ್ಯೋಗಗಳಲ್ಲಿ ಸಾಮಾಜಿಕ ವ್ಯವಹಾರಗಳಲ್ಲಿ ಅಸತ್ಯಕ್ಕೆ, ಅಪಹಾರಕ್ಕೆ, ಶೋಷಣೆಗೆ ಆಸ್ಪದವು ದೊರೆಯದಂತಾಗುವದು. ಸರ್ವರ ಹಿತಚಿಂತನೆಯು **ಸರ್ವೋದಯದ ತತ್ವಜ್ಞಾನ;** ರಚನಾತ್ಮಕ ಕಾರ್ಯದಿಂದ ಸರ್ವಸಮಾಜದ ಸೇವೆ ಮಾಡು ವದು **ಸರ್ವೋದಯದ ಕರ್ಮಯೋಗ;** ಈಶ್ವರ ಚಿಂತನೆಯಿಂದ ಅಹಿಂಸಾದಿ ವ್ರತಗಳನ್ನು ಆಚರಿಸುವದು **ಸರ್ವೋದಯದ ವ್ರತನಿಷ್ಠೆ.** ಇವು ಸರ್ವೋದಯದರ್ಶನದ ಮೂರು ಸ್ವರೂಪಗಳಾಗಿವೆ.

ಸರ್ವೋದಯವು 'ವಿಶ್ವಮಂಗಲ'ವನ್ನು ಸಾಧಿಸುವುದು. 'ಸರ್ವ ಮಾನವಹಿತ'ವೆನ್ನುವುದು ಸಂಕುಚಿತವೆನಿಸಬಹುದು. '**ಸರ್ವಭೂತಹಿತ**' ವೆಂಬುದು ಹೆಚ್ಚು ವಿಶಾಲವಾದುದು; ಹೆಚ್ಚು ಉದಾತ್ತವಾದುದು. ಈ ಧ್ಯೇಯವು ಅತ್ಯಂತ ಸ್ಫೂರ್ತಿಪ್ರದವಾಗಿದೆ; ಎಲ್ಲ ತರುಣರಿಗೂ ಹುಮ್ಮಸ ಹುಟ್ಟಿಸುವಂತಿದೆ. ಪರಕೀಯ ರಾಜ್ಯಸತ್ತೆಯ ನಿವಾರಣೆಗಾಗಿ ತರುಣರ ಉತ್ಸಾಹ ಶಕ್ತಿಯು ಇದುವರೆಗೆ ನಿಷೇಧಾತ್ಮಕವಾಗಿ ವಿನಿಯೋಗವಾಯಿತು. ಇಂದು ಸರ್ವೋದಯ ಸಿದ್ಧಿಗಾಗಿ ಅವರು ಅದನ್ನು ವಿಧಾಯಕವಾಗಿ ಉಪ ಯೋಗಿಸಬೇಕು. 'ಸರ್ವೋದಯ'ವೆನ್ನುವ ಶಬ್ದವೂ ತೀರ ನೂತನವಾದು ದಲ್ಲ. ಈ ಮೊದಲೇ ಗಾಂಧೀಜಿಯವರು ಅದನ್ನು ಉಪಯೋಗಿಸಿರುವರು. ಸ್ವರಾಜ್ಯಸಿದ್ಧಿಯು ಇದುವರೆಗೆ ಜನತೆಗೆ ಪ್ರೇರಕವಾದ ಧ್ಯೇಯವಾಗಿತ್ತು. ಸ್ವರಾಜ್ಯಪ್ರಾಪ್ತಿಯ ನಂತರ ಜನತೆ ಇಂದು ಧ್ಯೇಯರಹಿತವಾಗಿದೆ. **ಸರ್ವೋ ದಯ ಸಿದ್ಧಿಯೇ ಜನತೆಯ ಧ್ಯೇಯವಾಗಬೇಕು.** 'ಸರ್ವೇ ಜನಾಃ ಸುಖಿನಃ ಸಂತು' ಎಂದು ಪ್ರಾಚೀನ ಋಷಿಗಳು ಹಾಕಿಕೊಟ್ಟ ಮಾರ್ಗವನ್ನೆ ಮತ್ತೆ ನಾವು ಹಿಡಿಯಬೇಕು. ಸರ್ವೋದಯ ಸಮಾಜದಲ್ಲಿ ಮೇಲುಕೀಳೆಂಬ **ಸಾಮಾಜಿಕ ವಿಷಮತೆಯು** ಇಲ್ಲದಂತಾಗಬೇಕು. ರಾಷ್ಟ್ರದ ಸಂಪತ್ತು ಕೆಲವರ ಕೈಸೇರಿ ಉಳಿದವರೆಲ್ಲ ಊಳಿಗದ ಆಳಾಗಿ ಬಡತನದಲ್ಲಿ ಕೊಳೆಯುವ **ಆರ್ಥಿಕ ವಿಷಮತೆಯೂ** ಅಳಿದುಹೋಗಬೇಕು. ಜಾತಿಗಳು ಮಾನವ ಸಮಾಜವನ್ನು ಒಡೆದು ಚೂರುಗಳಾಗಿ ಮಾಡಬಾರದು. ಜಾತಿಗಳ ಗೋಡೆಯ ಮರೆಯಲ್ಲಿ ಸಾಮಾಜಿಕ ವಿಷಮತೆಯೂ ದ್ವೇಷಭಾವನೆಯೂ ಅವಿತುಕೊಳ್ಳು ವವು. ಸರ್ವೋದಯ ಸಮಾಜದಲ್ಲಿ **ಜಾತಿಗಳ ಈ ಭೇದಭಾವವೂ** ತೊಲಗ ಬೇಕು. ಒಟ್ಟಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಸರ್ವರ ಕಲ್ಯಾಣಕ್ಕಾಗಿ ಸ್ವಹಿತ ವನ್ನು ತ್ಯಾಗಮಾಡುವ ಬುದ್ಧಿಯುಳ್ಳವನಾಗಿರಬೇಕು. '**ಉಳಿದವರಿಗೆ ಮೊದಲು, ಕೊನೆಗೆ ನನಗಾಗಿ**' ಎಂದು ಹೇಳುವ ಮನೋವೃತ್ತಿಯು ಆತನಲ್ಲಿ ಉಂಟಾಗಬೇಕು.

**ಸರ್ವೋದಯ ದೀಕ್ಷೆ :—**

೧) ನೇಮದಿಂದ ನೂಲುವದು; ೨) ತಾನೇ ಇಲ್ಲವೇ ತನ್ನ ಕುಟುಂಬದವರು ನೂತ ನೂಲಿನಿಂದ ತಯಾರಾದ ಖಾದಿಯನ್ನು, ತೀರ ಅಗತ್ಯವೆನಿಸಿದರೆ ಪ್ರಮಾಣಿತ ಖಾದಿಯನ್ನು ಉಡಿಗೆತೊಡಿಗೆಗಾಗಿ ಉಪಯೋಗಿಸಬೇಕು; ೩) ಶಕ್ಯವಿದ್ದಷ್ಟು ಗ್ರಾಮೋದ್ಯೋಗಗಳಿಂದ ಸಿದ್ಧವಾದ ವಸ್ತುಗಳನ್ನೇ ಉಪಯೋಗಿಸಬೇಕು; ೪) ಆಕಳ ಹೈನವನ್ನು ಉಪಯೋಗಿಸಬೇಕು; ೫) ತಿಂಗಳಲ್ಲಿ ಒಂದು ದಿನವಾದರೂ ಭಂಗಿಯ ಕೆಲಸ ಅಥವಾ ಗ್ರಾಮಸಫಾಯಿಯನ್ನು ಮಾಡಬೇಕು; ೬) ನಾಗರೀ, ದ್ರಾವಿಡ ಅಥವಾ ಉರ್ದು ಲಿಪಿಯನ್ನು ಕಲಿತುಕೊಳ್ಳಬೇಕು.

**ಜೀವನ ಶುದ್ಧಿಗಾಗಿ** ಇವೆಲ್ಲ ಕಾರ್ಯಕ್ರಮಗಳಿವೆ. ಇವುಗಳನ್ನು ಸರ್ವೋದಯ ದೀಕ್ಷೆಯನ್ನು ಪಡೆದವರಷ್ಟೇ ಆಚರಿಸಬೇಕೆಂದು ಭಾವಿಸ ಕೂಡದು. ಜೀವನದ ಉನ್ನತಿಯನ್ನೂ, ಜನತೆಯ ಸರ್ವತೋಮುಖವಾದ ಹಿತವನ್ನೂ ಬಯಸುವವರೆಲ್ಲರೂ ಈ ನಿಯಮಗಳನ್ನು ಅಂಗೀಕರಿಸಬಹುದು. ಗಾಂಧೀಜಿಯವರು **ಜಾನೇವರಿ ೩೦ ನೇ ತಾರೀಖಿಗೆ** ನಮ್ಮಿಂದ ಅಗಲಿದರು. ಆದಿನದ ಪುಣ್ಯಸ್ಮರಣಕ್ಕಾಗಿ ಅಂದೇ **ಸರ್ವೋದಯ ದಿನವನ್ನು** ಆಚರಿಸುವರು. ಆದಿನ ವಿಧಾಯಕಕಾರ್ಯಕ್ರಮದಲ್ಲಿ ಎಲ್ಲರೂ ತೊಡಗಬೇಕು. ಸಾರ್ವಜನಿಕ ಸಫಾಯಿಯ ಕೆಲಸವನ್ನು ಅಂದು ಕೈಕೊಳ್ಳಬೇಕು. ಸೂತ್ರಯಜ್ಞವನ್ನು ನಡೆಸಬೇಕು. ರಾಟಿಯ ನೂಲು ಹಳ್ಳಿಗರನ್ನೂ ನಗರವಾಸಿಗಳನ್ನೂ ಬಂಧುಭಾವದಿಂದ ಕೂಡಿಸುವದು. ಚಿತ್ತಶುದ್ಧಿಗಾಗಿ ಸಾಮುದಾಯಿಕ ಪ್ರಾರ್ಥನೆಯನ್ನು ನಡೆಸಬೇಕು. ಒಟ್ಟಿನಲ್ಲಿ ಆದಿನ ಸರ್ವೋದಯ ತತ್ತ್ವದ ಚಿಂತನವೂ, ಸರ್ವೋದಯ ಕಾರ್ಯಕ್ರಮದ ಆಚರಣೆಯೂ ಶ್ರದ್ಧೆಯಿಂದ ನಡೆಯಬೇಕು. **ಅಮರ ಕೀರ್ತಿಯ ಬಾಪೂಜಿಗೆ ಇದಕ್ಕಿಂತಲೂ ಹೆಚ್ಚಿನ ಆತ್ಮತರ್ಪಣೆಯು ಏತರಲ್ಲಿದೆ ?**

ಮೂಲಶಿಕ್ಷಣವು ಕಟ್ಟಬಯಸುವ ನೂತನ ಸಮಾಜವೂ ಸರ್ವೋದಯ ಸಮಾಜವೂ ಆದರ್ಶ–ಆಕಾಂಕ್ಷೆಗಳಲ್ಲಿ, ರಚನಾತ್ಮಕ ಕಾರ್ಯಕ್ರಮದಲ್ಲಿ

ಸಮಾನವಾಗಿರುವವು. ಮೂಲಶಿಕ್ಷಣದ ಶಿಕ್ಷಕರು ಸರ್ವೋದಯ ಸಮಾಜದ ಸ್ವರೂಪ-ವಿಧಾನಗಳನ್ನು ಅರಿತುಕೊಳ್ಳಬೇಕು. ಅವುಗಳನ್ನು ಆಚರಣೆಯಲ್ಲಿ ತರಲು ಯಥಾಶಕ್ತಿ ಯತ್ನಿಸಬೇಕು. ಹಳ್ಳಿಗಳಲ್ಲಿ **ಪ್ರತಿಯೊಂದು ಮೂಲ ಶಿಕ್ಷಣದ ಶಾಲೆಯು ಸರ್ವೋದಯದ ಕೇಂದ್ರವಾಗಬೇಕು.** ಪ್ರತಿಯೊಬ್ಬ ಶಿಕ್ಷಕನೂ ಗಾಂಧೀಜಿಯವರಿಗೆ ಅತ್ಯಂತ ಪ್ರಿಯಕರವಾದ ಸರ್ವೋದಯದ ವಿಧಾಯಕವಾದ '**ಸರ್ವಸೇವೆ**'ಯನ್ನು ಸಲ್ಲಿಸಬೇಕು. **ಹೀಗಾದರೆ ಮಾತ್ರ ಮೂಲಶಿಕ್ಷಣವು ಕೃತಾರ್ಥವಾದಂತಾಗುವದು.**

## ಪರಿಶಿಷ್ಟ ೮

### ಕಥೆ ಹೇಳುವದು

ಆಧುನಿಕ ಶಿಕ್ಷಣದಲ್ಲಿ ಮಕ್ಕಳು 'ಕಣ್ಣೀರು ಸುರಿಸದೆ' ಕಲಿಯುವರು. ಕಲಿಯುವದು ಮಕ್ಕಳಿಗೆ ನೀರಸವಾಗಬಾರದು. ಅದು ಅವರ ಮನಸ್ಸನ್ನು ಸೆರೆ ಹಿಡಿಯಬೇಕು, ಸೂರೆಗೊಳ್ಳಬೇಕು. ಹೀಗೆ ಮಾಡಲು '**ಕಥೆ ಹೇಳುವದು**' ಒಂದು ಅದ್ವಿತೀಯವಾದ ಸಾಧನವಾಗಿದೆ. ಚಿಕ್ಕಮಕ್ಕಳಿಗೆ ಒಂದು ರೀತಿಯಲ್ಲಿ ಹಿರಿಯರಿಗೂ ಕೂಡ **ಕಥೆಯು ಅತ್ಯಂತ ಪ್ರೀತ್ಯಾಸ್ಪದವಾದ ವಿಷಯು.** 'ಅಡ್ಡಕಥೆ' ಹೇಳುವ ಕೀರ್ತನಕಾರನು ಕೂಡಲೇ ಲೋಕಪ್ರಿಯನಾಗುವಂತೆ, ಕಥೆ ಚನ್ನಾಗಿ ಹೇಳಬಲ್ಲ ಶಿಕ್ಷಕನೂ ಮಕ್ಕಳ ಮೆಚ್ಚುಗೆಗೆ ಪಾತ್ರನಾಗುವನು. ಕಥೆಯೆಂದರೆ ಮಕ್ಕಳಿಗೆ ಬೇಸರವಾಗುವದಿಲ್ಲ. ಹಸಿವೆ ನೀರಡಿಕೆಯನ್ನೂ ಕೂಡ ಮರೆತುಬಿಡುವರು. **ಕಥಾಪ್ರೇಮವು ಚಿಕ್ಕಮಕ್ಕಳ ಸ್ವಾಭಾವಿಕ ಒಲವುಗಳಲ್ಲಿ ಒಂದಾಗಿದೆ.**

**ಕಥೆಯಲ್ಲಿ ಸ್ಫೂರ್ತಿಯಿದೆ, ಪ್ರೇರಕಶಕ್ತಿಯಿದೆ, ಬೋಧನವಿದೆ, ಮನರಂಜನವಿದೆ.** ಈ ರೀತಿಯಾಗಿ ಪ್ರಭಾವಶಾಲಿಯಾದ ಕಥೆಯನ್ನು ಹಿಂದಿನಿಂದ ಇಂದಿನ ವರೆಗೆ ಎಲ್ಲರೂ ಬಳಸುತ್ತಲಿರುವರು. ವೇದೋಪನಿಷತ್ತುಗಳಲ್ಲಿ, ಪುರಾಣೇತಿಹಾಸಗಳಲ್ಲಿ ವಿವಿಧ ಜನಾಂಗಗಳ ಧಾರ್ಮಿಕ ವಾಙ್ಮಯ

ವಲ್ಲಿ **ಕಥೆಯು ವಿಷಯ ವಿವರಣೆಯ ಸಾಧನವಾಗಿದೆ.** ಕವಿತೆಯ ಬಗ್ಗೆ ಹೇಳುವಂತೆ 'ಕಾಂತಾಸಮ್ಮಿತ್ರಯಾ ..........' ಕಥೆಯಾದರೂ ಮಡದಿಯ ಮಾತಿನಂತೆ, ಕೇಳುವವರ ಮನಸ್ಸನ್ನು ಒಲಿಸಿ, ರಮಿಸಿ ತಿದ್ದುವದು. ಅಂತೆಯೇ ಉಂಡಾಡಿಗರೂ, ವಿದ್ಯಾದ್ವೇಷಿಗಳೂ ಆದ ಅರಸುಮಕ್ಕಳನ್ನು ವಿಷ್ಣುಶರ್ಮರು ಪಂಚತಂತ್ರದ ಕಥೆಗಳ ಸಾಧನದಿಂದ ವಿದ್ಯಾವಂತರನ್ನಾಗಿ ಮಾಡಿದನು. ಸಕ್ಕರೆಯ ಹೊರಲೇಪದಿಂದ ಕಹಿಯನಾದ 'ಕ್ವಿನಿನ್ನು' ತಿಳಿಯದೆ ಹೊಟ್ಟೆ ಯೊಳಗೆ ಹೋಗುವಂತೆ ಜಟಿಲವಾದ ರಾಜನೀತಿಯನ್ನೂ ಪಶುಪಕ್ಷಿಗಳ ಕಥೆ ಗಳಲ್ಲಿ ಹೆಣೆದು ಅವರ ಮನಸ್ಸಿನಲ್ಲಿ 'ಇಂಗುವಂತೆ' ಮಾಡಿದನು. ಶ್ರೀರಾಮ ಕೃಷ್ಣಪರಮಹಂಸರಂಥ ಧರ್ಮೋಪದೇಶಕರು ಕಥೆಯ ಸಹಾಯದಿಂದ ವೇದಾಂತದ ಗಹನವಾದ ವಿಷಯಗಳನ್ನು ಸಾಮಾನ್ಯರಿಗೂ ಕೂಡ ಸುಲಭ ವಾಗಿ ತಿಳಿಯುವಂತೆ ಮಾಡುತ್ತಿದ್ದರು.

**ಕಥೆಗೆ ಶಿಕ್ಷಣದಲ್ಲಿ, ಹೆಚ್ಚಾಗಿ ಚಿಕ್ಕಮಕ್ಕಳ ಶಿಕ್ಷಣದಲ್ಲಿ ಮಹ ತ್ವದ ಸ್ಥಾನವಿದೆ;** ಮಾನಸ ಶಾಸ್ತ್ರದ ಬೆಂಬಲವಿದೆ. ಕಥನ ಕೌಸಲ್ಯವು ಕೆಲವ ರಲ್ಲಿ ಹುಟ್ಟುಗುಣವೆಂದು ಹೇಳಬಹುದಾದರೂ, ಎಲ್ಲ ಶಿಕ್ಷಕರೂ ಪ್ರಯತ್ನ ದಿಂದ ಕಥನಕಲೆಯನ್ನು ಪಡೆಯಬಹುದಾಗಿದೆ. ಕಥಾನಿರೂಪಣೆಯಲ್ಲಿ ಕೆಲವು ಸಂಗತಿಗಳನ್ನು ಶಿಕ್ಷಕರು ಲಕ್ಷದಲ್ಲಿಡಬಹುದಾಗಿದೆ:—

೧) **ಕಥೆಯು ಮಕ್ಕಳ ವಯೋಮಾನಕ್ಕೆ ತಕ್ಕುದಾಗಿರಬೇಕು.** ಅಂದಿನ ಅವರ ಜೀವನವನ್ನೂ ಅನುಭವವನ್ನೂ ಮೀರುವಂತಿರಬಾರದು. ೫ ರಿಂದ ೮ ವರುಷದ ಮಕ್ಕಳಿಗೆ ಪಶುಪಕ್ಷಿಗಳ ಕಥೆಗಳೂ, ಇಂಗ್ಲೀಷಭಾಷೆ ಯಲ್ಲಿ ವಿಪುಲವಾಗಿ ದೊರೆಯುವ ಯಕ್ಷ ಯಕ್ಷಿಣಿಯರ ಕಥೆಗಳೂ ಹೆಚ್ಚಾಗಿ ಸೇರುವವು. ಏಸಬ್‌ನ ನೀತಿ ಕಥೆಗಳೂ, ಪಂಚತಂತ್ರದ ಕಥೆಗಳೂ ಈ ಅವಧಿ ಯಲ್ಲಿ ಅವರಿಗೆ ಒಳ್ಳೆ ಉಪಯುಕ್ತವೆನಿಸುವವು.

೨) **ಚಿಕ್ಕಮಕ್ಕಳಿಗೆ ಹೇಳುವ ಕಥೆಯಲ್ಲಿ ವರ್ಣನೆಗಿಂತಲೂ ಘಟನೆಗಳೇ ಹೆಚ್ಚಾಗಿರಬೇಕು.** ಕೃತಿಪ್ರಿಯ, ಕ್ರಿಯಾಶೀಲರಾದ ಅವರಿಗೆ ಕಥೆಯಲ್ಲಿ ನಡೆಯುವ ಕೃತಿಗಳೇ ಹೆಚ್ಚಾಗಿ ಸೇರುವವು.

೩) ಹಿಂದಿನ ಕಥೆಗಳನ್ನು ಇದ್ದಕಿದ್ದಂತೆ ಹೇಳುವ ಅಗತ್ಯವಿಲ್ಲ. ಮಕ್ಕಳ ಒಲವು ಶಕ್ತಿಗಳಿಗೆ ಅನುರೂಪವಾಗುವಂತೆ ಅವುಗಳಲ್ಲಿ ಶಿಕ್ಷಕನು **ಹೆಚ್ಚು ಕಡಿಮೆ ಮಾಡಿಕೊಳ್ಳಬಹುದು.** ಭಾಷೆಯನ್ನು ತಿಳಿಯಾಗಿ ಮಾಡಬೇಕು. ಕಥೆಯ ಉದ್ದೇಶವನ್ನು ಕಣ್ಮುಂದಿಟ್ಟುಕೊಂಡು ಅಪೇಕ್ಷಿತವಾದ ಭಾಗವನ್ನು ಹೆಚ್ಚು ವಿಶದವಾಗಿ ಮಾಡಬೇಕು.

೪) **ಕಥೆ ಹೇಳುವಾಗ್ಗೆ ಅನುರೂಪವಾದ 'ಅಭಿನಯ'ವನ್ನು ಕೈಕೊಳ್ಳಬಹುದು.** ಆದರೆ ಅಭಿನಯದ ಅತಿರೇಕವಾಗದಂತೆ ಮಾತ್ರ ನೋಡಿಕೊಳ್ಳಬೇಕು. ಭಾವದ ಏರಿಳಿತವನ್ನು ಧ್ವನಿಯ ಏರಿಳಿತವೂ ಅನುಸರಿಸಬೇಕು.

೫) **ಶಿಕ್ಷಕನು ಕಥೆಯೊಡನೆ ಮೊದಲು ತಾನು ತನ್ಮಯನಾಗಬೇಕು,** ಸಮರಸನಾಗಬೇಕು. ಶಿಕ್ಷಕನ ಈ ಭಾವತಾದಾತ್ಮ್ಯವನ್ನೇ ಮಕ್ಕಳು ತಮ್ಮದನ್ನಾಗಿ ಮಾಡಿಕೊಳ್ಳುವರು. ಭಾವಾನುಕರಣವು ಅವರಲ್ಲಿ ನೈಸರ್ಗಿಕವಾದ ಗುಣವಾಗಿದೆ.

೬) **ಕಥಾನಿರೂಪಣೆಯಲ್ಲಿ ಯಾವುದೇ ಕಾರಣಕ್ಕಾಗಿ ನಡುವೆ ವ್ಯತ್ಯಯ, ತಡೆಯಾಗಬಾರದು.** 'ಆ ಶಬ್ದದ ವ್ಯಾಕರಣವೇನು?' 'ಈ ಶಬ್ದದ ಪ್ರಯೋಗವೇನು?' ಎಂದು ನಡುವೆ ಪ್ರಸ್ತಾಪಿಸುವದರಿಂದ ರಸಭಂಗವಾಗುವದು, ಮಕ್ಕಳ ಮನೋಭಂಗವಾಗುವದು. ಕಥೆಯನ್ನು ಪೂರ್ತಿಗೊಳಿಸಿ ಬೇಕಾದ ವಿಷಯಾಂತರವನ್ನು ಮಾಡಬಹುದು. ಆದರೆ ನಡುನಡುವೆ ದೃಢೀಕರಣಕ್ಕಾಗಿ, **ಕಥೆಯ ಎಳೆಗಳನ್ನು ಹೊಂದಿಸಿಕೊಳ್ಳುವದಕ್ಕಾಗಿ ಆಗಾಗ್ಗೆ ಒಂದೊಂದು ಪ್ರಶ್ನೆ ಕೇಳುವದು** ಸಹಾಯಕವೆನಿಸುವದು.

೭) **ಕಥೆಗೆ ಹೊಂದಿಕೆಯಾಗುವ ಚಿತ್ರಗಳನ್ನು ಉಪಯೋಗಿಸಬಹುದು.** ನಿರೂಪಣೆಯು ನಾಗಿದಂತೆ ಇವುಗಳನ್ನು '**ಸಕಾಲಕ್ಕೆ**' ಒಂದೊಂದಾಗಿ ಮಕ್ಕಳೆದುರು ಇಡಬೇಕು. ಕಥೆಗೆ ಪೂರ್ವಪೀಠಿಕೆಯಾಗಿ 'ಪ್ರಸ್ತಾವನೆ'ಯಾಗಿ ಚಿತ್ರಗಳು ಉಪಯುಕ್ತವಾಗುವವು. ಇಲ್ಲವೇ ಉಜ

ಳಿಣಿಸು ಕಾಲದಲ್ಲಿ ಮಕ್ಕಳ 'ಆತ್ಮಪ್ರಕಾಶನ'ಕ್ಕೆ, ಪ್ರಬಂಧರಚನೆಗೆ ಸಹಾಯಕವಾಗುವವು.

೮) ಕೇಳಿದ್ದನ್ನೇ ಕೇಳುವದು ದೊಡ್ಡವರಿಗೆ ತಲೆಬೇನೆಯನ್ನುಂಟು ಮಾಡಬಹುದು. **ಆದರೆ ಮಕ್ಕಳ ಮನೋಭೂಮಿಕೆಯಲ್ಲಿ 'ಪುನರಪಿ' ತತ್ವವು ಒಳ್ಳೇ ಪ್ರಬಲವಾಗಿರುವದು.** ಪುನರುಕ್ತಿಯ ಬಗ್ಗೆ ಅವರಲ್ಲಿ ಪ್ರೀತಿಯಿರುವದು. ಆದುದರಿಂದ ಕಥೆಯಲ್ಲಿಯ ಮನೋವೇಧಕವಾದ ಕೆಲವು ಮಾತುಗಳನ್ನೂ ವಾಕ್ಯಗಳನ್ನೂ ಬದಲಿಸದೆ ಮತ್ತೆ ಮತ್ತೆ ಹೇಳಬೇಕು.

೯) **ಕಾವ್ಯದಂತೆ ಕಥೆಯೂ 'ಶ್ರಾವ್ಯ'ವಾಗಿದೆ.** ಕೇಳುವದರಿಂದಲೇ ಅವರ ಸ್ವಾರಸ್ಯವು ಸ್ಫುಟವಾಗುವದು, ಮನೋಗತವಾಗುವದು. ಶಿಕ್ಷಕನು ಕಥೆಯನ್ನು ಓದಕೂಡದು, ಇಲ್ಲವೇ ಕಥಾನಿರೂಪಣದಲ್ಲಿ ಆಗಾಗ್ಗೆ ಟಿಪ್ಪಣಿಯನ್ನು ಅಥವಾ ಪುಸ್ತಕವನ್ನು ನೋಡಿ ನೋಡಿ ಹೇಳಬಾರದು. ಕಥೆಯ ಮುಖ್ಯ ಘಟಕಗಳನ್ನು ಮನದಲ್ಲಿಟ್ಟುಕೊಂಡು ಮಕ್ಕಳಿಗೆ ಆಕರ್ಷಕವಾಗುವಂತೆ ಶಬ್ದಚಿತ್ರವನ್ನು ಕಟ್ಟಬೇಕು.

೧೦) ಕಥಾನಿರೂಪಣದಲ್ಲಿ ಹಿತವಾದ, ಮಿತವಾದ, ಸಂದರ್ಭೋಚಿತವಾದ ಹಾಗೂ **ಸಾತ್ವಿಕವಾದ ಹಾಸ್ಯವನ್ನು ಅವಶ್ಯವಾಗಿ ಉಪಯೋಗಿಸಬೇಕು.** ಇದರಿಂದ ಕಥೆಗೆ ಸಜೀವತೆ ಬರುವದು; ಸ್ವಾರಸ್ಯವೂ ಹೆಚ್ಚುವದು.

**ಕಥೆಯ ಶೈಕ್ಷಣಿಕವಾದ ಉಪಯೋಗವು ವಿವಿಧವಾಗಿದೆ.** ಕಥೆಯು ಮಕ್ಕಳ ಕುತೂಹಲವನ್ನು ಕೆರಳಿಸುವದು. ಕಲ್ಪನಾಶಕ್ತಿಯ ವಿಕಾಸಕ್ಕೆ ಆಸ್ಪದವನ್ನೀಯುವದು. ಕಥೆಯಲ್ಲಿ ಹಾಸು ಹೊಕ್ಕಾಗಿ ಹೆಣೆದು ಬಂದ ವಿವಿಧ ವಿಷಯಗಳ ಜ್ಞಾನವು ಅವರ ಬುದ್ಧಿಸಂಪತ್ತಿಯನ್ನು ಹೆಚ್ಚಿಸುವದು. ಕಥೆಯಲ್ಲಿರುವ ಮನರಂಜನೆಯಿಂದ ಕಲಿಯುವದರಲ್ಲಿ ಸ್ವಯಂಪ್ರೇರಣೆಯೂ ಸಂತೋಷವೂ ಉಂಟಾಗುವವು. ಕಥೆಯ ಸಹಾಯದಿಂದ ಮಕ್ಕಳ ಮನಸ್ಸಿನ ಏಕಾಗ್ರತೆಯನ್ನು ಸುಲಭವಾಗಿ ಸಾಧಿಸಬಹುದು. ಕಥೆಗೆ ಹಿನ್ನೆಲೆಯಾಗಿರುವ ನೀತಿತತ್ವವು ಮಕ್ಕಳ ಮನಸ್ಸಿನಲ್ಲಿ ಮೂಡುವದು. ಆದರೆ ಈ ಬಗ್ಗೆ ಒಂದು ಮಾತನ್ನು ಶಿಕ್ಷಕರು ನೆನಪಿನಲ್ಲಿಡಬೇಕು. **ನೀತಿಯನ್ನು ಪ್ರತ್ಯಕ್ಷವಾಗಿ**

**ಮಾತಿನಲ್ಲಿ ಹೇಳಕೂಡದು.** ಕಥನ ಕೌಶಲ್ಯದಿಂದ, ಮಕ್ಕಳಿಗೆ ನೀತಿಯು ತಾನಾಗಿಯೇ ಹೊಳೆಯುವಂತಾಗಬೇಕು. ಕಥೆಯಲ್ಲಿಯ ಉದಾತ್ತವಾದ ಭಾವಗಳೊಡನೆ ಮಕ್ಕಳು ಸಮರಸವಾಗುವದರಿಂದ ಕಥೆಯು ಅವರ ಹೃದಯ ವಿಕಾಸಕ್ಕೂ, ಒಳ್ಳೇ ಭಾವಗಳ ಸಂಸ್ಕರಣಕ್ಕೂ ಉತ್ತಮವಾದ ಸಾಧನವಾಗಿರುವದು. ಕಥಾನಿರೂಪಣವನ್ನು ಮಕ್ಕಳಿಂದಲೂ ಮಾಡಿಸುವದರಿಂದ ಅವರ ಶಬ್ದಸಂಪತ್ತಿಯು ಹೆಚ್ಚುವದು. ಕಥೆಯು ಪ್ರಬಂಧರಚನೆಯಲ್ಲಿ ಅತ್ಯಂತ ಪ್ರಯೋಜನಕಾರಿಯಾಗಿರುವದು. **ಮೂಲಶಿಕ್ಷಣದಲ್ಲಿ ಕಥಾನಿರೂಪಣೆಗೆ ಮಹತ್ವದ ಸ್ಥಾನವಿದೆ.** ವಿವಿಧ ಜನಾಂಗಗಳ ಕಥೆಗಳನ್ನು ಮೂಲೋದ್ಯೋಗಕ್ಕೆ ಹೊಂದಿಸಿಕೊಳ್ಳಲು ಬರುವದು. ಇತಿಹಾಸ–ಭೂಗೋಲ ವಿಷಯಗಳ ಸಮವಾಯಕ್ಕೆ ಕಥೆಯು ಉತ್ತಮವಾದ ಸಾಧನವಾಗಿರುವದು.

## ಪರಿಶಿಷ್ಟ ೯

### ಕೈಗಾರಿಕೆಯ ಶಿಕ್ಷಣ

ವರ್ಧಾಯೋಜನೆಯು ಶಾಲೆಗಳಲ್ಲಿ ಕೈಗಾರಿಕೆಯ ಶಿಕ್ಷಣದ ಅವಶ್ಯಕತೆಯ ಕಡೆಗೆ ಜನತೆಯ ಲಕ್ಷ್ಯವನ್ನು ಮತ್ತೆ ಆಕರ್ಷಿಸಿದೆ. ಚಿಕ್ಕಮಕ್ಕಳ ಸ್ವಾಭಾವಿಕವಾಗಿರುವ ಕ್ರಿಯಾಶಕ್ತಿಯನ್ನು ಶೈಕ್ಷಣಿಕವಾದ ವಿಧಾನಗಳಲ್ಲಿ ತೊಡಗಿಸುವದೇ ಶಾಲೆಯಲ್ಲಿಯ ಕೈಗಾರಿಕೆಯ ಶಿಕ್ಷಣದ ಮೂಲೋದ್ದೇಶವಾಗಿದೆ. ಕ್ರೀಡಾಂಗ ಪದ್ಧತಿಯೂ ಇದೇ ತತ್ವವನ್ನು ಅವಲಂಬಿಸಿದೆ. ವರ್ಧಾಯೋಜನೆಯು ಒಂದು ಹೆಜ್ಜೆ ಮುಂದೆ ಹೋಗಿದೆ. ಚಿಕ್ಕಮಕ್ಕಳು ಸಿದ್ಧಗೊಳಿಸುವ ಕೈಗಾರಿಕೆಯ ಒಡವೆಗಳು ಆವರಿಗೆ ಪ್ರಾಪ್ತಿಕರವಾಗುವಂತೆ ಮಾಡುವದು ಈ ಯೋಜನೆಯ ಉದ್ದೇಶವಾಗಿದೆ. ಇವೆಲ್ಲ ಹೊಸಪದ್ಧತಿಗಳು ಸಾರ್ವತ್ರಿಕ ಶಿಕ್ಷಣದಲ್ಲಿ ಬಳಕೆಯಲ್ಲಿ ಬರಲು ಇನ್ನೂ ಅವಕಾಶವಿದೆ. ಆದರೆ ಈ ಪದ್ಧತಿಗಳಿಗೆ ಆಧಾರವಾಗಿರುವ ತತ್ವವನ್ನು ಮಾತ್ರ ನಿತ್ಯ ಶಿಕ್ಷಣದಲ್ಲಿ ನಾವು ತೆಗೆದುಕೊಳ್ಳುವಂತೆ ಇದೆ.

ಇಂದಿನ ಶಿಕ್ಷಣವು ಏಕಾಂಗಿಯಾಗಿದೆ, ಕೇವಲ ಬುದ್ಧಿ ಪ್ರಧಾನವಾಗಿದೆ. ವ್ಯಕ್ತಿಯ ಸರ್ವತೋಮುಖವಾದ ವಿಕಾಸವು ಇದರಿಂದ ಸಾಧಿಸುವದಿಲ್ಲ. ಕರ್ಮೇಂದ್ರಿಯಗಳಲ್ಲಿ ಹಿರಿದಾದ ಕೈಗೆ ಉಚಿತವಾದ ಶಿಕ್ಷಣವು ದೊರೆಯುವದಿಲ್ಲ. ಕೈಗೆಲಸವೇ ಶಿಕ್ಷಣವಾಗಿದೆ. ಜ್ಞಾನತಂತುವಿಗೂ, ಕೈಗಳ ಕೇಂದ್ರಕ್ಕೂ ಇರುವ ನಿಕಟವಾದ ಸಂಬಂಧವನ್ನು ಇಂದಿನ ಮಾನಸಶಾಸ್ತ್ರವು ತೋರಿಸಿ ಕೊಟ್ಟಿದೆ. ಕೈಗೆಲಸದಲ್ಲಿ ಮನಸ್ಸಿನ ಏಕಾಗ್ರತೆಯು ಸುಲಭವಾಗಿ ಸಾಧಿಸುವದು. ದುರ್ಬಲವಾದ ವಿದುಳುಳ್ಳ ಎಷ್ಟೋ ಮಕ್ಕಳು ವರ್ಗದ ಶಿಕ್ಷಣದಲ್ಲಿ ಹಿಂದೆ ಬೀಳುವರು. ಇಂಥವರನ್ನು ಕೈಗೆಲಸದಲ್ಲಿ ತೊಡಗಿಸಿದರೆ ವಿಶೇಷವಾದ ಪ್ರಗತಿಯನ್ನು ತೋರಿಸುವದುಂಟು. ಸ್ವಾಭಾವಿಕವಾದ ಬದ್ಧಿ ಕಾರ್ಯಕ್ಕೆ ತಡೆ ಹಾಕಿದ ಆತಂಕವನ್ನು ಕೈಗೆಲಸವು ತೆಗೆದು ಹಾಕಿದ ಎಷ್ಟೋ ಉದಾಹರಣೆಗಳು ಕಂಡುಬರುವವು. ಕೈಗೆಲಸವು ಇಂದ್ರಿಯಗಳ ಚಲನವಲನದಲ್ಲಿ ಚಪಲತೆಯನ್ನು ತಂದು ಕೊಡುವದು. ಅನೇಕ ಇಂದ್ರಿಯಗಳನ್ನು ಏಕಕಾಲಕ್ಕೆ ಒಂದು ಕಾರ್ಯದಲ್ಲಿ ಸಹಕರಿಸುವಂತೆ ಮಾಡಲು ಕೈಗೆಲಸಕ್ಕೆ ಮಾತ್ರ ಸಾಧ್ಯವಿದೆ. ಇದಲ್ಲದೆ ಕೈಗೆಲಸಕ್ಕೆ ಭಾವಶಕ್ತಿಯ ಪೂರ್ಣ ಬೆಂಬಲವು ದೊರೆಯುವದು. ತಾನು ಬೆಳಸಿದ ಗಿಡದ ಹೂವನ್ನು ನೋಡುವದರಲ್ಲಿ, ತನ್ನ ನೂಲಿನ ಬಟ್ಟೆಯನ್ನು ಹಾಕಿಕೊಳ್ಳುವದರಲ್ಲಿ, ತಾನು ಮಾಡಿದ ಪಟವನ್ನು ಹಾರಿಸುವದರಲ್ಲಿ, ಹಿರಿಯರಿಗೂ, ಚಿಕ್ಕವರಿಗೂ ಸಂತೋಷವೆನಿಸುವದು, ಅಭಿಮಾನವೆನಿಸುವದು. ಕೇವಲ ಬುದ್ಧಿಪ್ರಧಾನವಾದ ಶಿಕ್ಷಣವು ಈ ಭಾವಶಕ್ತಿಗೆ ಎರವಾಗಿದೆ. ಇವೆರಡನ್ನು ಸಹಕರಿಸುವಂತೆ ಮಾಡುವದು ಸದ್ಯದ ಪರಿಸ್ಥಿತಿಯಲ್ಲಿ ಶಿಕ್ಷಕರ ಕರ್ತವ್ಯವಾಗಿದೆ. ಇದರಿಂದ ಕೈಗೆಲಸವು ಕೀಳೆಂಬ ಭಾವನೆಯು ಅಳಿದುಹೋಗುವದು. ಉದ್ಯೋಗಪ್ರೀತಿಯು ಜನಿಸುವದು. ಸ್ವಾವಲಂಬನದ ಹಾದಿಯನ್ನು ಹಾಕಿ ಕೊಟ್ಟಂತಾಯಿತು.

ಹೆಣ್ಣುಮಕ್ಕಳ ಶಾಲೆಗಳಲ್ಲಿ ಕೈಗೆಲಸಕ್ಕೆ ಇನ್ನೂ ಹೆಚ್ಚಾಗಿ ಮನ್ನಣೆಯಿದೆ. ಹೊಲಿಯುವದು, ಕಸೂತಿಹಾಕುವದು, ಹೆಣೆಯುವದು, ಇತ್ಯಾದಿಯಾಗಿ ಕೈಗೆಲಸದ ಅನೇಕಪ್ರಕಾರಗಳು ಆ ಶಾಲೆಗಳಲ್ಲಿ ಸಾಂಗವಾಗಿ ನಡೆಯು

ವವು. ಆದರೆ ಗಂಡುಮಕ್ಕಳ ಶಾಲೆಗಳಲ್ಲಿ ಶಿಕ್ಷಕರೇ ಆ ಕೊರತೆಯನ್ನು ತುಂಬಿ ಕೊಳ್ಳಬೇಕಾಗಿದೆ. ಈ ವಿಷಯವು ಹೆಚ್ಚಾಗಿ ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿರುವದು. ಕೈಗೆಲಸಕ್ಕೆ ಬೇಕಾಗುವ ಕರ್ಮೇಂದ್ರಿಯಗಳ ವಿಕಾಸವು ವಯಸ್ಸಿನ ಹದಿನಾಲ್ಕನೆಯ ವರ್ಷಕ್ಕೆ ನಿಲ್ಲುವದೆಂದು ಮಾನಸಶಾಸ್ತ್ರವು ಹೇಳು ವದು. ಈ ಅವಧಿಯು ಪ್ರಾಥಮಿಕ ಶಿಕ್ಷಣದ ಅವಧಿಯಾಗಿದೆ. ವರ್ಧಾ ಯೋಜನೆಯಾದರೂ ಹದಿನಾಲ್ಕನೇ ವರ್ಷವನ್ನೇ ಸಾರ್ವತ್ರಿಕ ವೃತ್ತಿಶಿಕ್ಷಣದ ಕೊನೆಯ ವರ್ಷವನ್ನಾಗಿ ಕಲ್ಪಿಸಿದೆ.

ಕೈಗಾರಿಕೆಯಲ್ಲಿ ಹಲವು ಪ್ರಕಾರಗಳುಂಟು. ಹೆಣ್ಣುಮಕ್ಕಳಿಗಾಗಿ ಹೆಣೆ ಯುವದು, ಕಸೂತಿಹಾಕುವದು, ಹುಲ್ಲು ಬೆತ್ತಗಳಿಂದ ವಿವಿಧ ವಸ್ತುಗಳನ್ನು ರಚಿಸುವದು–ಇತ್ಯಾದಿ ಉಪಯುಕ್ತವಾದ ಕೈಗೆಲಸಗಳಾಗಿವೆ. ಗಂಡುಮಕ್ಕಳಿ ಗಾಗಿ ಇನ್ನು ಬೇರೆ ಕೈಗೆಲಸಗಳುಂಟು. ನೂಲುವದು, ನೇಯುವದು, ಮಣ್ಣಿ ನಿಂದ ಪಾತ್ರೆ ಮೊದಲಾದವುಗಳನ್ನು ಮಾಡುವದು, ತೆಳುವಾದ ಕಟ್ಟಿಗೆಯಲ್ಲಿ ಆಕೃತಿಗಳನ್ನು ಕತ್ತರಿಸುವದು, ತೋಟದ ಕೆಲಸವನ್ನು ಮಾಡುವದು–ಇತ್ಯಾದಿ ಉಪಯುಕ್ತವಾದ ಕೈಗೆಲಸದ ವಿವಿಧ ವಿಧಾನಗಳಿವೆ. ಇವೆಲ್ಲ ಕೈಗೆಲಸಗಳ ಬಗ್ಗೆ ಕೆಲವು ಸಂಗತಿಗಳನ್ನು ನೆನಪಿನಲ್ಲಿಡುವದು ಅವಶ್ಯವಾಗಿದೆ. ಕೈಗೆಲಸ ಗಳಿಗಾಗಿ ಉಪಯೋಗಿಸುವ ಸಾಮುಗ್ರಿಯು ದೇಶೀಯವಾಗಿರಬೇಕು; ಅಲ್ಪ ಬೆಲೆಯುಳ್ಳದ್ದಾಗಿರಬೇಕು; ಸುಲಭವಾಗಿ ದೊರೆಯುವಂತಿರಬೇಕು. ಅಪಾಯ ಕರವಾಗಿರಕೂಡದು. ಉಪಕರಣಗಳೂ ಕೂಡ ಇದೇ ರೀತಿಯವುಗಳಾಗಿರ ಬೇಕು. ವಿದ್ಯಾರ್ಥಿಗಳ ವಯೋಮಾನಕ್ಕೆ ಇವುಗಳೆರಡೂ ಅನುರೂಪವಾಗಿರ ಬೇಕು.

ಕೊನೆಯ ಮುಖ್ಯ ಮಾತೆಂದರೆ ಕೈಗೆಲಸವು ನಿಜವಾಗಿ ಶೈಕ್ಷಣಿಕವಾಗ ಬೇಕು. ವಿಶೇಷ ಪ್ರಸಂಗಗಳಲ್ಲಿ ಅಧಿಕಾರಿಗಳ ಮೆಚ್ಚುಗೆಗಳನ್ನು ಪಡೆಯುವ ಆತುರದಿಂದ ಹತ್ತೆಂಟು ವಸ್ತುಗಳನ್ನು ನಿರ್ಮಿಸಿ ಪ್ರದರ್ಶಿಸುವದು, ಶಿಕ್ಷಕ ವಿದ್ಯಾರ್ಥಿಗಳಿಬ್ಬರಿಗೂ ಹಿತವಾದುದಲ್ಲ. ಕೈಗೆಲಸವು ಎಲ್ಲ ವಿಷಯಗಳ ಶಿಕ್ಷಣ ದಲ್ಲಿಯೂ ನೆರವಾಗುವಂತೆ ಮಾಡಬೇಕು. ಭೂಗೋಲದಲ್ಲಿ ಮಣ್ಣಿನಲ್ಲಿ ಮಾಡಿದ

ಪ್ರಾಕೃತಿಕ ನಕಾಶವು, ವಿಜ್ಞಾನಶಾಸ್ತ್ರಗಳಲ್ಲಿ ಪ್ರಯೋಗಗಳಿಗಾಗಿ ಉಪಯೋಗಿಸುವ ಚಿಕ್ಕ ಪುಟ್ಟ ಉಪಕರಣಗಳು—ಈರೀತಿಯಾಗಿ ವಿವಿಧ ವಿಷಯಗಳಲ್ಲಿ ಶಿಕ್ಷಣೋಪಯೋಗಿಗಳಾದ ಅನೇಕ ವಸ್ತುಗಳನ್ನು ವಿದ್ಯಾರ್ಥಿಗಳಿಂದಲೇ ಮಾಡಿಸಲು ಬರುವಂತಿದೆ. ಹೀಗೆ ಮಾಡುವದರಲ್ಲಿ ವಿದ್ಯಾರ್ಥಿಗಳಿಗೆ ಕೈಗಾರಿಕೆಗಳ ಬಗ್ಗೆ ಆದರವೂ ಜನಿಸುವದು. ಕಲಿತ ವಿಷಯವೂ ಕೂಡ ಮನಸ್ಸಿನಲ್ಲಿ ದೃಢವಾಗಿ ಬಿಂಬಿಸುವದು.



# ಅಭ್ಯಾಸ ಕ್ರಮ

ಪ್ರಾಥಮಿಕ ಟ್ರೇನಿಂಗ ಕಾಲೇಜುಗಳಿಗಾಗಿ ಗೊತ್ತುಪಡಿಸಿದ ನೂತನ ಅಭ್ಯಾಸ ಪತ್ರಿಕೆಯಲ್ಲಿರುವ ವಿಷಯುಗಳ ವಿವೇಚನೆಯು ಈ ಪುಸ್ತಕದಲ್ಲಿ ಕೆಳಗೆ ತೋರಿಸಿದಂತೆ ಇರುವದು:—(ಕನ್ನಡದಲ್ಲಿ ಅನುವಾದಿಸಿ ಕೊಟ್ಟಿದೆ)

ಸೂಚನೆ:—ಪರಿ. = ಪರಿಚ್ಛೇದ;—ಹಾಗೂ—ಪರಿಶಿಷ್ಟ. ಪು. = ಪುಟ.

—: ೧ ನೇ ವರುಷ : —


ವ್ಯಕ್ತಿಗೂ ಸಮಾಜಕ್ಕೂ ಶಿಕ್ಷಣದ ಮಹತಿಯು—ಪರಿ. ೧, ಪು. ೧ ರಿಂದ
ಮೂಲ ಶಿಕ್ಷಣವೆಂದರೇನು? ಪರಿ. ೨೪, ಪು. ೨೫೫ ರಿಂದ

( ಕಲಿಸುವ ಸಾಮಾನ್ಯ ಪದ್ಧತಿಗಳು )

ಕಥೆ ಹೇಳುವದು — ಪರಿಶಿಷ್ಟ ೮.
ಪ್ರಶ್ನೆಗಳೂ ಉತ್ತರಗಳೂ — ಪರಿ. ೧೭, ಪು. ೧೩೬; ೧೩೯.
ಕರಿಹಲಿಗೆಯ ಕೆಲಸ — ಪರಿ. ೧೭, ಪು. ೧೪೬.
ದೃಷ್ಟಾಂತಗಳು-ಶೈಕ್ಷಣಿಕಸಾಧನಗಳು. ಪರಿ. ೧೭, ಪು. ೧೪೨ ರಿಂದ
ಮಗುವಿನ ಸ್ವಯಂಪ್ರೇರಿತ ಚಟುವಟಿಕೆ - ಪರಿ. ೮ ಪು. ೫೮, ಹಾಗೂ ಪರಿ. ೨೪.
ನಾಟ್ಯ ಅಭಿನಯ — ಪರಿ. ೧೯, ಪು. ೧೭೧.
ಕೈಗೆಲಸ - ಪರಿಶಿಷ್ಟ ೯.
ಆಟಗಳು — ಪರಿ. ೮, ಪು. ೫೪. ಸಂಗೀತ — ಪರಿ. ೨೩, ಪು. ೨೪೨.
ಪಾಠದ ಸಿದ್ಧತೆ- ಪಾಠದ ಟಿಪ್ಪಣಿ — ಪರಿ. ೧೭, ಪು. ೧೨೫ ರಿಂದ
ವಿವಿಧವಿಷಯುಗಳನ್ನು ಕಲಿಸುವ ಪದ್ಧತಿಗಳು. — ಪರಿ. ೨೩, ಪು ೨೧೭ ರಿಂದ

ಶಾಲೆಯ ವಿಷಯುಗಳ ಪರಸ್ಪರ ಹಾಗೂ ಮೂಲೋದ್ಯೋಗದೊಡನೆ, ಮಗುವಿನ ನಿಸರ್ಗ ಮತ್ತು ಸಮಾಜಗಳೆಂಬ ಪರಿಸರಣಗಳೊಡನೆ ಸಂಬಂಧೀಕರಣ — ಪರಿ. ೨೪, ಪು. ೩೦೦ ರಿಂದ




(ಪೂರ್ವ ಪ್ರಾಥಮಿಕ ಶಿಕ್ಷಣದ ಪದ್ಧತಿಗಳು).

ಕಿಂಡರಗಾರ್ಟನ್ — ಪರಿ. ೨೦, ಪು ೧೮೭; ಮಾಂಟೆಸೋರಿ — ಪರಿ. ೨೦, ಪು ೧೯೦ ರಿಂದ

ನಿರಕ್ಷರಿಗಳಿಗೆ ಕಲಿಸುವ ಪದ್ಧತಿಗಳು — ಪರಿಶಿಷ್ಟ ೧

## —: ೨ ನೆಯ ವರುಷ :—

(ಶೈಕ್ಷಣಿಕ ಮಾನಸಶಾಸ್ತ್ರ) :--

ಶೈಕ್ಷಣಿಕ ವಯೋವಿಭಾಗಗಳು— ಪರಿ. ೩, ಪು. ೭ ರಿಂದ

ವ್ಯಕ್ತಿ ವ್ಯಕ್ತಿಗಳಲ್ಲಿರುವ ವಿವಿಧ ವ್ಯತ್ಯಾಸಗಳು. ಇತ್ಯಾದಿ:— ಪರಿ. ೧೧, ಪು ೭೫ ರಿಂದ

| | |
|---|---|
| ಕ್ರಿಯಾತ್ಮಕ ಹಾಗೂ ಚಟುವಟಿಕೆಯ ಮುಖಾಂತರವಾಗಿ ಕೊಡುವ ಶಿಕ್ಷಣಕ್ಕೆ ಮಾನಸ ಶಾಸ್ತ್ರದ ಹಿನ್ನೆಲೆ | ಪರಿ. ೮, ಪು. ೫೭; ಪರಿ. ೪, ಪು. ೨೩; ಪರಿ. ೨೪, ಪು. ೨೫೬, ೨೬೬, ೨೭೫; ಪರಿ. ೫, ಪು. ೨೭, ೩೦; ಪರಿ. ೧೧, ಪು. ೭೭; ಪರಿ. ೪, ಪು. ೨೨ ರಿಂದ |

ಕ್ರಿಯಾತ್ಮಕವಾದ ಶಿಕ್ಷಣವು-ಪೂರ್ಣ ಜೀವನದ (ವ್ಯಕ್ತಿತ್ವದ) ಸಾಧನ ಪರಿಶಿಷ್ಟ. ೨೪, ಪುಟ ೨೯೩ ರಿಂದ

| | |
|---|---|
| ಮಗುವು ಹೇಗೆ ಕಲಿಯುವದು ?<br>ಪ್ರಯೋಜನದ ಪ್ರಭಾವ | ಪರಿ. ೯, ಪು. ೬೩; ಪರಿ. ೧೦, ಪು. ೨೦೩; ಪರಿ. ೨೪, ಪು. ೨೭೩, ೨೭೫ರಿಂದ ಪು. ೨೮೭. |

| | |
|---|---|
| ಸುಳ್ಳು ಹೇಳುವದು, ಕಳವು ಮಾಡುವದು, ದುರ್ಬಲರನ್ನು ಪೀಡಿಸುವದು, ಚಂಚಲತೆ, ಮುಖೀನತೆ— ಇವುಗಳಿಗಾಗಿ ಮಾನಸಶಾಸ್ತ್ರದ ಕಾರಣಗಳು; ಇವುಗಳನ್ನು ಹೇಗೆ ಎದುರಿಸಬೇಕು? | ಪರಿ. ೧೮, ಪು. ೧೬೪—೧೬೭ |

ಮೂಲಶಿಕ್ಷಣದ ತತ್ವಗಳು—ಉದ್ಯೋಗವು ಶಿಕ್ಷಣದ ಮಾಧ್ಯಮ ಹಾಗೂ ಕೇಂದ್ರ.... ಪರಿ. ೨೪, ಪು. ೨೫೫ ರಿಂದ

| | |
|---|---|
| ವಿಷಯುಗಳನ್ನು ಬಿಡಿಯಾಗಿ ಕಲಿಸುವದಕ್ಕೆ ಪ್ರತಿಯಾಗಿ ಇಡಿಯಾಗಿ ಕಲಿಸುವದು—ಅಖಂಡಶಿಕ್ಷಣದ ಅವಶ್ಯಕತೆ | ಪರಿ. ೪, ಪು. ೨೦ ರಿಂದ<br>ಪರಿ. ೨೪ ಪು ೩೦೦ ರಿಂದ |